# ಕೆಳದಿ ಆಳ್ವಿಕೆಯ ತುಳುನಾಡಿನ ಸಮಾಜೋ ಆರ್ಥಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ
ಸಂಶೋಧನ ಮಹಾಪ್ರಬಂಧ)

ಸಂಶೋಧಕರು
ಪ್ರಭಾತ. ಬಿ.

ಮಾರ್ಗದರ್ಶಕರು
ಡಾ. ಗಣಪತಿಗೌಡ. ಎಸ್
ಸಹ ಪ್ರಾಧ್ಯಾಪಕರು, ವಿಶ್ವವಿದ್ಯಾನಿಲಯ ಕಾಲೇಜು, ಮಂಗಳೂರು



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ-೫೮೩ ೨೭೬

೨೦೧೫

ಮಾನ್ಯತಾ ಸಂಸ್ಥೆ
ಹಾಮಾನಾ ಸಂಶೋಧನ ಕೇಂದ್ರ
ರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ
ದಕ್ಷಿಣ ಕನ್ನಡ ಜಿಲ್ಲೆ - ೫೭೪೨೪೦

# ಕೆಳದಿ ಆಳ್ವಿಕೆಯ ತುಳುನಾಡಿನ ಸಮಾಜೋ ಆರ್ಥಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಸಂಶೋಧನ ಮಹಾಪ್ರಬಂಧ)

ಸಂಶೋಧಕರು

**ಪ್ರಭಾತ. ಬಿ.**

ಮಾರ್ಗದರ್ಶಕರು

**ಡಾ. ಗಣಪತಿಗೌಡ. ಎಸ್**

ಸಹಪ್ರಾಧ್ಯಾಪಕರು, ಮಂಗಳೂರು ವಿಶ್ವವಿದ್ಯಾನಿಲಯ ಕಾಲೇಜು, ಮಂಗಳೂರು



**ಚರಿತ್ರೆ ವಿಭಾಗ**

**ಸಮಾಜ ವಿಜ್ಞಾನಗಳ ನಿಕಾಯ**

ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ-೫೮೩೨೭೬

**೨೦೧೯**

ಮಾನ್ಯತಾ ಸಂಸ್ಥೆ

**ಡಾ. ಹಾಮಾನಾ ಸಂಶೋಧನ ಕೇಂದ್ರ**

ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ

ದಕ್ಷಿಣ ಕನ್ನಡ ಜಿಲ್ಲೆ – ೫೭೪೨೪೦

# ಮಾರ್ಗದರ್ಶಕರ ದೃಢೀಕರಣ

**ಕೆಳದಿ ಆಳ್ವಿಕೆಯ ತುಳುನಾಡಿನ ಸಮಾಜೋ ಆರ್ಥಿಕ ಅಧ್ಯಯನ** ಎಂಬ ಶೀರ್ಷಿಕೆಯ ಸಂಶೋಧನ ಮಹಾಪ್ರಬಂಧವನ್ನು ಚರಿತ್ರೆ ವಿಭಾಗದ ಪಿಎಚ್.ಡಿ ಪದವಿಗಾಗಿ **ಪ್ರಭಾತ. ಬಿ** ರವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸಲಾಗಿದೆ.

ದಿನಾಂಕ : 20–11–2019
ಸ್ಥಳ : ಉಜಿರೆ

ಮಾರ್ಗದರ್ಶಕರು

**ಡಾ. ಗಣಪತಿ ಗೌಡ. ಎಸ್**
ಸಹಪ್ರಾಧ್ಯಾಪಕರು
ವಿಶ್ವವಿದ್ಯಾನಿಲಯ ಕಾಲೇಜು
ಮಂಗಳೂರು

Dr. GANAPATHI GOWDA
Associate Professor
Dept. of History
University College, Mangalore

# ಸಂಶೋಧಕರ ಪ್ರಮಾಣಪತ್ರ

**ಕೆಳದಿ ಆಳ್ವಿಕೆಯ ತುಳುನಾಡಿನ ಸಮಾಜೋ ಆರ್ಥಿಕ ಅಧ್ಯಯನ** ಎಂಬ ಶೀರ್ಷಿಕೆಯ ಸಂಶೋಧನ ಮಹಾಪ್ರಬಂಧವನ್ನು **ಡಾ. ಗಣಪತಿಗೌಡ ಎಸ್**.ರವರ ಮಾರ್ಗದರ್ಶನದಲ್ಲಿ ಚರಿತ್ರೆ ವಿಭಾಗದ ಪಿಎಚ್.ಡಿ ಪದವಿಗಾಗಿ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

**ಸಂಶೋಧಕರು**

**ಪ್ರಭಾತ. ಬಿ**
ಚರಿತ್ರೆ ವಿಭಾಗ

ದಿನಾಂಕ : 20-11-2019
ಸ್ಥಳ : ಉಜಿರೆ

# ಪರಿವಿಡಿ

## ಅಧ್ಯಾಯ – 1

## ಪ್ರಸ್ತಾವನೆ

### 1.1 ಪೀಠಿಕೆ

ಭಾರತದ ಇತಿಹಾಸವು ಹಲವಾರು ರಾಜ್ಯಗಳ, ಪ್ರದೇಶಗಳ, ಪ್ರಾಂತ್ಯಗಳ, ಸಂಸ್ಥೆಗಳ ಹಾಗೂ ಜನಾಂಗಗಳ ಕಥೆಯಾಗಿದೆ. ವಿವಿಧ ಪ್ರದೇಶಗಳ ಜನರ ಜೀವನ ವಿಧಾನ, ಭಿನ್ನ ಭಿನ್ನವಾದ ಧರ್ಮ, ಗುಂಪು, ಸಮುದಾಯಗಳು ಇವುಗಳಿಂದ ಕೂಡಿ ನಾಡಿನ ಇತಿಹಾಸ ಬೆಳೆದಿದೆ. ವಿವಿಧ ಪ್ರದೇಶಗಳ ವೈವಿಧ್ಯಪೂರ್ಣವಾದ ಆಧಾರಗಳನ್ನು ಸಂಗ್ರಹಿಸಿ, ಶೋಧಿಸಿ, ಜೋಡಿಸಿದಾಗ ಚರಿತ್ರೆಯ ಚಿತ್ರ ಸ್ಪಷ್ಟವಾಗಿ ಮೂಡಲು ಸಾಧ್ಯವಿದೆ. ಪ್ರಾದೇಶಿಕ ಸಂಗತಿಗಳು ರಾಷ್ಟ್ರೀಯ ಇತಿಹಾಸಕ್ಕೆ ಅರ್ಹವಾಗದೆ ದಾಖಲಾಗದೇ ಉಳಿದಿರಬಹುದು. ಆದರೆ ಆ ಪ್ರಾದೇಶಿಕ ಇತಿಹಾಸ ಒಂದು ಪ್ರಾಂತ್ಯದ ಅಥವಾ ಒಂದು ರಾಜ್ಯದ ಇತಿಹಾಸವಾಗಿ ಜನರ ಕುತೂಹಲವನ್ನು ತಣಿಸುವ ಕೆಲಸವನ್ನು ನಿರ್ವಹಿಸುತ್ತದೆ. ಇತ್ತೀಚೆಗಿನ ದಿನಗಳಲ್ಲಿ ಸ್ಥಳೀಯ ಮತ್ತು ಪ್ರಾದೇಶಿಕ ಚರಿತ್ರೆಗಳ ಅಧ್ಯಯನ ಹೆಚ್ಚುತ್ತಿದೆ. ಸ್ಥಳೀಯ ಚಾರಿತ್ರಿಕ ಸಂಗತಿಗಳನ್ನು ಜನಸಮುದಾಯಗಳ ಸಾಂಸ್ಕೃತಿಕ ಲಕ್ಷಣಗಳನ್ನು ಸ್ಥಳೀಯ ದೃಷ್ಟಿಕೋನದಲ್ಲಿ ಅಥವಾ ಅನೇಕ ಬಗೆಯ ತತ್ವ ಸಿದ್ಧಾಂತದ ಮೂಲಕವೂ ಅಧ್ಯಯನ ಮಾಡಲಾಗುತ್ತಿದೆ. ಭಾರತದಲ್ಲಿ ಸ್ವಾತಂತ್ರ್ಯಾ ನಂತರ ಈ ಮಾದರಿಯ ಅಧ್ಯಯನಗಳು ಹೆಚ್ಚಾಗಿ ನಡೆದಿದೆ. ಆಧುನಿಕೋತ್ತರ ಸಂದರ್ಭದ ಸ್ಥಳೀಯ ಚರಿತ್ರೆ ಅಧ್ಯಯನವು ಭಾರತದ ಮಟ್ಟಿಗೆ ತೀರಾ ಅವಶ್ಯಕವೆಂದು ಚರಿತ್ರೆಕಾರರ ಅಭಿಪ್ರಾಯ. ಒಂದು ಪ್ರದೇಶ, ಪ್ರಾಂತ್ಯ, ರಾಜ್ಯ, ಸಂಘ, ಸಂಸ್ಥೆ, ಹಾಗೂ ಜನಾಂಗಗಳ ದೇಶೀಯ ಚರಿತ್ರೆಯ ನಿರ್ಮಾಣ ಇಂದಿನ ಅಗತ್ಯವಾಗಿದೆ. ಈ ಹಿನ್ನೆಲೆಯಲ್ಲಿ ಕೆಳದಿ ಆಳ್ವಿಕೆಯ ತುಳುನಾಡಿನ ಸಮಾಜೋ ಆರ್ಥಿಕ ಇತಿಹಾಸವನ್ನು ಕಟ್ಟುವ ಪ್ರಯತ್ನ ಮಾಡಲಾಗಿದೆ.

ತುಳುನಾಡಿನಲ್ಲಿ ಕೆಳದಿ ಅರಸರ ಆಳ್ವಿಕೆಯನ್ನು ಆಧುನಿಕ ಯುಗ ಪ್ರವೇಶದ ಆರಂಭದ ಘಟ್ಟ ಎಂದು ಪರಿಗಣಿಸಬಹುದು. ಕ್ರಿ.ಶ.16ನೇ ಶತಮಾನದ ಮಧ್ಯಭಾಗದಿಂದ 18ನೇ ಶತಮಾನದ ಮಧ್ಯಭಾಗದವರೆಗೆ ಸುಮಾರು 2 ಶತಮಾನಗಳಿಗೂ ಹೆಚ್ಚು ಕಾಲ ತುಳುನಾಡು ಕೆಳದಿ ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಈ ಕಾಲದಲ್ಲಿ ತುಳುನಾಡಿನ ವಿವಿಧ ಪ್ರದೇಶಗಳನ್ನು ಆಳುತ್ತಿದ್ದ ಬಂಗ, ಅಜಿಲ, ಚೌಟ, ಭೈರರಸರು ಮೊದಲಾದ ಸ್ಥಳೀಯ ಅರಸು ಮನೆತನಗಳ ಪ್ರಾಬಲ್ಯವನ್ನು ಬಗ್ಗುಬಡಿದ ಕೆಳದಿ ಅರಸರು ಈ ಪ್ರದೇಶದಲ್ಲಿ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಗಮನಾರ್ಹವಾದ ಬದಲಾವಣೆಗಳುಂಟಾಗಲು ಕಾರಣರಾದರು. ಇದೇ ಕಾಲದಲ್ಲಿ ಭಾರತಕ್ಕೆ ಆಗಮಿಸಿದ ಪೋರ್ಚುಗೀಸ್, ಡಚ್, ಫ್ರೆಂಚ್, ಇಂಗ್ಲೀಷ್

ಮೊದಲಾದ ಯುರೋಪಿಯನ್ ಸಮುದಾಯದವರ ಆರ್ಥಿಕ ಮತ್ತು ರಾಜಕೀಯ ಮೇಲಾಟಗಳಿಂದ ಈ ಪ್ರದೇಶದ ಚಾರಿತ್ರಿಕ ಸನ್ನಿವೇಶ ಬದಲಾಗಲು ಕಾರಣವಾಯ್ತು. ಈ ಎಲ್ಲಾ ವಿಚಾರಗಳ ಹಿನ್ನೆಲೆಯಲ್ಲಿ ಕೆಳದಿ ಆಳ್ವಿಕೆಯ ತುಳುನಾಡಿನ ಸಾಮಾಜಿಕ ಮತ್ತು ಆರ್ಥಿಕ ಅಧ್ಯಯನವು ವಿಶಿಷ್ಟ ಎನಿಸುತ್ತದೆ.

ಕ್ರಿ.ಶ.1499ರ ಸುಮಾರಿಗೆ ಚೌಡಪ್ಪ ನಾಯಕನಿಂದ ಸ್ಥಾಪಿಸಲ್ಪಟ್ಟು ಕ್ರಿ.ಶ.1763 ರವರೆಗೆ ಆಳಲ್ಪಟ್ಟ ಕೆಳದಿ ಸಾಮ್ರಾಜ್ಯದ ರಾಜರುಗಳಲ್ಲಿ ಪ್ರಮುಖರಾದವರು ಸದಾಶಿವ ನಾಯಕ, ವೆಂಕಟಪ್ಪ ನಾಯಕ, ಶಿವಪ್ಪ ನಾಯಕ ಮತ್ತು ಚೆನ್ನಮ್ಮಾಜಿ. ಕೆಳದಿ ವಂಶದ ದೊರೆ ಸದಾಶಿವನಾಯಕನ ಕಾಲದಲ್ಲಿ ತುಳುನಾಡು ಕೆಳದಿ ಸಂಸ್ಥಾನದ ಅಧೀನಕ್ಕೆ ಬಂತು. ಅಲ್ಲಿಯವರೆಗೆ ತುಳುನಾಡು ವಿಜಯನಗರದ ಅರಸರ ಅಧೀನದಲ್ಲಿದ್ದು, ಅವರಿಂದ ನೇಮಿಸಲ್ಪಟ್ಟ ಮಂಗಳೂರು ಮತ್ತು ಬಾರ್ಕೂರಿನ ರಾಜ್ಯಪಾಲರು ಹಾಗೂ ಸ್ಥಳೀಯ ಸಾಮಂತರಸರು ಇಲ್ಲಿಯ ಆಡಳಿತದಾರರಾಗಿದ್ದರು. ಬಸ್ರೂರು ಶಾಸನದ ಪ್ರಕಾರ ಕ್ರಿ.ಶ.1554ರಲ್ಲಿ ವಿಜಯನಗರದ ಸಾಮ್ರಾಟ ಸದಾಶಿವರಾಯ, ಕೆಳದಿ ಸದಾಶಿವನಾಯಕನ ಸೇವೆಯನ್ನು ಗುರುತಿಸಿ ತನ್ನ ಸಾಮ್ರಾಜ್ಯದ ತುಳುನಾಡಿನ ಈ ಭಾಗವನ್ನು ಬಿಟ್ಟುಕೊಟ್ಟನೆಂದು ಉಲ್ಲೇಖವಿದೆ. ಆ ನಂತರ ಇಡೀ ತುಳುನಾಡು ಮುಂದಿನ ಸುಮಾರು 209 ವರ್ಷಗಳ ಕಾಲ ಕೆಳದಿ ಆಳ್ವಿಕೆಗೆ ಒಳಪಟ್ಟಿತ್ತು. ಆದರೆ ಕ್ರಿ.ಶ.1565ರ ತಾಳಿಕೋಟೆ ಯುದ್ಧದ ನಂತರ ತುಳುನಾಡಿನ ಸ್ಥಳೀಯ ರಾಜಮನೆತನಗಳು ಕೆಳದಿ ಆಳ್ವಿಕೆಯ ವಿರುದ್ಧ ದಂಗೆಯೆದ್ದವು. ದಂಗೆಯಡಗಿಸಲು ಕೆಳದಿ ರಾಜರುಗಳು ಪ್ರಯತ್ನಿಸಿದರಾದರೂ ಅದು ನಿರಂತರ ಸಂಘರ್ಷಕ್ಕೆ ನಾಂದಿ ಹಾಡಿತು. ಇದು ತುಳುನಾಡಿನ ಆಡಳಿತ ವ್ಯವಸ್ಥೆಯ ಮೇಲೂ ಪರಿಣಾಮವನ್ನು ಬೀರಿತು. ತುಳುನಾಡನ್ನು ಆಳುತ್ತಿದ್ದ ಚೌಟರು, ಬಂಗರು, ಭೈರರಸರು, ಅಜಿಲರು ಮೊದಲಾದ ರಾಜಮನೆತನಗಳು ಕೆಳದಿಯರಸರ ಪ್ರಭಾವದಿಂದ ತಮ್ಮ ಪ್ರಾಬಲ್ಯವನ್ನು ಕಳೆದುಕೊಂಡರು. ಕೆ.ವಿ.ರಮೇಶರ ಮಾತಿನಂತೆ, "ಬಂಗರೇ ಮೊದಲಾದ ತುಳುನಾಡಿನ ಮಾಂಡಲಿಕ ಅರಸರಿಗೆ ಸಹಾಯಕರಾಗಿ ಅನೇಕ ಸ್ಥಳೀಯ ಬಲ್ಲಾಳರಿದ್ದರು. ಕೆಳದಿಯರಸರ ಸಂದರ್ಭದ ತುಳುನಾಡಿನಲ್ಲಿ ಈ ಬಲ್ಲಾಳರು ನಾಶವಾದರು". ಇಂದು ಸಂಪೂರ್ಣ ಕಣ್ಮರೆಯಾಗಿರುವ ಮತ್ತು ಈವರೆಗೆ ಹೆಚ್ಚು ಅಧ್ಯಯನಗೊಳಪಡದ ತುಳುನಾಡಿನ ಪೂರ್ವ ಭಾಗದ ಬೀಡು, ಬಲ್ಲಾಳರುಗಳು, ಬಸದಿಗಳು, ಇವುಗಳನ್ನು ಈ ಮಹಾಪ್ರಬಂಧದಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಈ ಕಾಲಘಟ್ಟದಲ್ಲಿ ಕರಾವಳಿ ಭಾಗದಲ್ಲಿ ವ್ಯಾಪಾರದ ಮೂಲಕ ಗಟ್ಟಿಯಾಗಿ ನೆಲೆಯೂರಲು ಪ್ರಯತ್ನ ಪಟ್ಟ ಪೋರ್ಚುಗೀಸರು, ಡಚ್ಚರು, ಫ್ರೆಂಚರು ಮತ್ತು ಆ ನಂತರ ಬ್ರಿಟೀಷರ ಚಟುವಟಿಕೆಗಳನ್ನು ಗಮನಿಸಬಹುದು. ಕೆಳದಿ ಅರಸರ ಆಳ್ವಿಕೆಯ ಉದ್ದಕ್ಕೂ ಇವರು ಕರಾವಳಿಯಲ್ಲಿ ಪೋರ್ಚುಗೀಸರೊಡನೆ ಯುದ್ಧದಲ್ಲಿ ತೊಡಗಿದ್ದರು. ವಿಜಯನಗರದ ಪತನದ ನಂತರ ಪೋರ್ಚುಗೀಸರು ಕ್ರಿ.ಶ.1568ರಲ್ಲಿ ಮಂಗಳೂರಿನಲ್ಲೂ, ಕ್ರಿ.ಶ.1569ರಲ್ಲಿ ಹೊನ್ನಾವರ, ಕುಂದಾಪುರಗಳಲ್ಲಿಯೂ, ಕ್ರಿ.ಶ.1630–33ರಲ್ಲಿ ಗಂಗೊಳ್ಳಿಯಲ್ಲಿಯೂ, ಕ್ರಿ.ಶ.1682ರಲ್ಲಿ ಅಂಜಿದ್ವೀಪದಲ್ಲೂ ಕೋಟೆಯನ್ನು ಕಟ್ಟಿದ್ದರು. ಕೆಳದಿ ಪೋರ್ಚುಗೀಸರ

ಯುದ್ಧದಿಂದಾಗಿ ಸ್ಥಳೀಯ ಗೇರುಸೊಪ್ಪೆ, ಹಾಡುವಳ್ಳಿ, ಭಟ್ಕಳದ ದೊರೆಗಳೂ ತೋಳಹರ, ಬಂಗ, ಅಜಿಲ, ಚೌಟ ಮತ್ತು ಕಾರ್ಕಳದ ಭೈರರಸರು ತೀವ್ರವಾದ ಕಷ್ಟ ನಷ್ಟಗಳಿಗೆ ಗುರಿಯಾಗಬೇಕಾಯಿತು. ತಾಳಿಕೋಟೆ ಯುದ್ಧದ ನಂತರ ಈ ಅರಸರೆಲ್ಲ ಅತಂತ್ರರಾದರು. ಉದಾಹರಣೆಗೆ, ಗೇರುಸೊಪ್ಪೆಯ ಅರಸರು ಪೋರ್ಚುಗೀಸರಿಗೆ ಕಪ್ಪ ಕೊಡಬೇಕಾಗಿ ಬಂತು. ಜೊತೆಗೆ ದೂರದ ವಿಜಾಪುರದ ಆದಿಲ್ ಶಹನಿಗೂ ಇವರು ಕಪ್ಪಕಾಣಿಕೆಯನ್ನು ನೀಡಬೇಕಾಯಿತು. ಕ್ರಿ.ಶ.1571ರಲ್ಲಿ ಪಟ್ಟಕ್ಕೆ ಬಂದ ಸಂಕಣ್ಣ ನಾಯಕನೂ ಅನಂತರ ಅಧಿಕಾರಕ್ಕೆ ಬಂದ ಚಿಕ್ಕ ಸಂಕಣ್ಣ ನಾಯಕನೂ ಕರಾವಳಿಯ ಮೇಲೆ ದಂಡೆತ್ತಿ ಬಂದಿದ್ದರು. ಕಾರ್ಕಳದ ಭೈರರಸನಿಂದ ಕಪ್ಪಕಾಣಿಕೆಯನ್ನು ಪಡೆದರಲ್ಲದೇ ಗೇರುಸೊಪ್ಪೆಯ ಭೈರಾದೇವಿಯನ್ನೂ, ಸೋದೆಯ ಅರಸಪ್ಪ ನಾಯಕನನ್ನೂ ಸೋಲಿಸಿ ಸಾಕಷ್ಟು ಸಂಪತ್ತನ್ನು ಸೂರೆಗೈದರು. ಒಂದನೇ ವೆಂಕಟಪ್ಪ ನಾಯಕನ ಕಾಲದಲ್ಲಿ, (ಕ್ರಿ.ಶ. 1583–1630) ಸ್ಥಳೀಯ ಅರಸರು, ಕೆಳದಿಯರಸರು ಮತ್ತು ಪೋರ್ಚುಗೀಸರ ನಿರಂತರ ಸಂಘರ್ಷಗಳನ್ನು ಗಮನಿಸಬಹುದು. ಶಿವಪ್ಪ ನಾಯಕನಂತೂ ಸ್ಥಳೀಯರಸರು ಮತ್ತು ಇತರ ಯುರೋಪಿಯನ್ನರ ಪ್ರಾಬಲ್ಯವನ್ನು ತಗ್ಗಿಸಿ ವಿಶಾಲ ಸಾಮ್ರಾಜ್ಯವನ್ನು ನಿರ್ಮಿಸಿದ. ಈ ಸಂಘರ್ಷಗಳಿಗೆ ಆರ್ಥಿಕ ಕಾರಣವೇ ಮೂಲವಾಗಿದ್ದು, ಈ ಕಾಲದಲ್ಲಿ ಪ್ರಾಬಲ್ಯವನ್ನು ಮೆರೆದ ಪೋರ್ಚುಗೀಸರು, ಫ್ರೆಂಚರು, ಬ್ರಿಟೀಷರು, ಮತ್ತು ಕೆಳದಿ ಅರಸರ ಸಂಬಂಧ ಈ ದೃಷ್ಟಿಯಿಂದ ಅಧ್ಯಯನ ಯೋಗ್ಯವಾಗಿದೆ.

ಈ ಕಾಲದಲ್ಲಿ ವೀರಶೈವ ಪಂಥ ತುಳುನಾಡಿನಲ್ಲಿ ರಾಜಾಶ್ರಯವನ್ನು ಪಡೆಯಿತು. ಸುಮಾರು 64 ರಷ್ಟು ವೀರಶೈವ ಮಠಗಳು ಇಲ್ಲಿ ಸ್ಥಾಪಿಸಲ್ಪಟ್ಟವು ಮತ್ತು ಅವು ಶಿಕ್ಷಣದ ಕೇಂದ್ರಗಳಾಗಿದ್ದವು. ತುಳುನಾಡಿನ ಶಿವ ದೇವಾಲಯಗಳು ಕೆಳದಿಯರಸರ ಪ್ರಭಾವದಿಂದ ಮಹಾಲಿಂಗೇಶ್ವರ ದೇವಾಲಯಗಳಾಗಿ ಪರಿವರ್ತಿತವಾಯಿತೆಂದು ಹೇಳಲಾಗಿದೆ. ಆದರೆ ಇಂದು ಈ ಪಂಥ ಇಲ್ಲಿ ಅಕ್ಷರಶಃ ಕಣ್ಮರೆಯಾಗಿದೆ. ವೀರಶೈವ ಧರ್ಮದ ಪ್ರವೇಶ, ಪ್ರಭಾವ, ಸ್ಥಳೀಯ ಧರ್ಮಗಳ ಪ್ರತಿರೋಧ ಮತ್ತು ಅದು ಅವನತಿಯಾದ ಬಗೆ, ಇವುಗಳ ಕುರಿತು ಹೆಚ್ಚಿನ ಅಧ್ಯಯನ ಮಾಡಲಾಗಿದೆ.

ಕೆಳದಿ ರಾಜರು ತುಳುನಾಡಿನ ಜನಸಾಮಾನ್ಯರ ನಡುವೆ ಜನಪ್ರಿಯರಾದಂತೆ ಕಂಡುಬರುತ್ತದೆ. ಅದಕ್ಕೆ ಈ ಅರಸರ ಧಾರ್ಮಿಕ ನೀತಿ ಕಾರಣವಾಗಿರಬಹುದು. ಹಿಂದುಗಳು, ಕ್ರೈಸ್ತರು ಮತ್ತು ಮುಸ್ಲಿಂರನ್ನು ಈ ರಾಜರುಗಳು ಸಮಾನವಾಗಿ ಕಂಡರು. ಕೊಲ್ಲೂರು, ಶಂಕರನಾರಾಯಣ, ಬಸ್ರೂರು, ಕೋಟೇಶ್ವರ, ಸುಬ್ರಹ್ಮಣ್ಯ ಮತ್ತು ಉಡುಪಿಯ ದೇವಾಲಯಗಳಿಗೆ ಕೆಳದಿಯ ಬೇರೆ ಬೇರೆ ಅರಸರು ದಾನ ದತ್ತಿಯನ್ನು ನೀಡಿದ್ದಾರೆ. ಈ ಎಲ್ಲಾ ವಿಚಾರಗಳನ್ನು ಅಧ್ಯಯನದಲ್ಲಿ ಅಳವಡಿಸಲಾಗಿದೆ. ಇನ್ನು ಕೆಲವು ಉಲ್ಲೇಖಗಳು ಕೆಳದಿಯರಸರು ಜೈನ ಧರ್ಮ ಮತ್ತು ಜೈನ ಬಸದಿಗಳ ಅವನತಿಗೆ ಕಾರಣರಾದರೆಂದು ಹೇಳಿವೆ. ಉದಾಹರಣೆಗೆ ಬಾರ್ಕೂರು ಹಾಗೂ ಗೇರುಸೊಪ್ಪೆಯ ಬಸದಿಗಳು. ಆದರೆ ಕೆಲವು ಕೆಳದಿ ಅರಸರು ಮೂಡಬಿದಿರೆಯ ಬಸದಿ ಜೀರ್ಣೋದ್ಧಾರಕ್ಕೆ, ಕಾರ್ಕಳದ ಮಹಾಮಸ್ತಕಾಭಿಷೇಕ ಇವುಗಳಿಗೆ ಉದಾರವಾದ

ದಾನ ನೀಡಿದ ಉದಾಹರಣೆಗಳಿವೆ. ಹಾಗಾಗಿ ಅದು ಜೈನ ಧರ್ಮದ ದ್ವೇಷವಾಗಿರದೆ ರಾಜಕೀಯ ಸಂಘರ್ಷ ಎನ್ನುವ ಅಭಿಪ್ರಾಯವೂ ಇದೆ. ಈ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ. ಹಾಗೆಯೇ ಕೆಳದಿಯ ರಾಜರುಗಳು ತುಳುನಾಡಿನಲ್ಲಿ ಕೃಷಿ ಮತ್ತು ವ್ಯಾಪಾರದ ಉತ್ತೇಜನಕ್ಕೆ ಬಹಳಷ್ಟು ಪ್ರಾಮುಖ್ಯತೆಯನ್ನು ನೀಡಿದರು. ಕ್ರೈಸ್ತ ರೈತರು ಗೋವಾದಿಂದ ತುಳುನಾಡಿಗೆ ವಲಸೆ ಬರಲು ಕೆಳದಿಯರಸರ ಪ್ರೋತ್ಸಾಹ ಕಾರಣವಾಯಿತು. ಕೆಳದಿ ಅರಸರು ಕ್ರೈಸ್ತ ಧರ್ಮ ಪ್ರಚಾರಕ್ಕೂ ಅವಕಾಶ ಮಾಡಿಕೊಟ್ಟ ಬಗ್ಗೆ ಉಲ್ಲೇಖವಿದೆ. ಗೌಡ ಸಾರಸ್ವತ ಬ್ರಾಹ್ಮಣರು ಈ ಕಾಲದಲ್ಲಿ ರಾಜಾಶ್ರಯವನ್ನು ಪಡೆದರು. ಮಾತ್ರವಲ್ಲದೇ ದೇವಾಲಯಗಳಿಗೆ ದಾನ ದತ್ತಿಯನ್ನು ಸ್ವೀಕರಿಸಿದರು.

ಕೋಟೆಗಳು ಕೆಳದಿ ಆಳ್ವಿಕೆಯ ಕಾಲದಲ್ಲಿ ಸೈನಿಕ ವ್ಯವಸ್ಥೆಯಲ್ಲಿ ಪ್ರಧಾನ ಪಾತ್ರವನ್ನು ವಹಿಸಿದವು. ಈ ಭಾಗದ ಮೇಲೆ ಅವರ ನಿಯಂತ್ರಣದ ದ್ಯೋತಕವಾಗಿ, ತುಳುನಾಡಿನಲ್ಲಿ ಅನೇಕ ಕೋಟೆಗಳನ್ನು ಅವರು ಕಟ್ಟಿಸಿದರು. ಕರಾವಳಿ ತೀರದಲ್ಲಿ ಕೋಟೆಗಳ ನಿರ್ಮಾಣ ಸದಾಶಿವನಾಯಕನ ಕಾಲದಲ್ಲಿ ಪ್ರಾರಂಭವಾಯಿತು. ವೆಂಕಟಪ್ಪ ನಾಯಕ ಮತ್ತು ಶಿವಪ್ಪ ನಾಯಕ ಮುಂತಾದ ಕೆಳದಿ ರಾಜರುಗಳು ತುಳುನಾಡಿನುದ್ದಕ್ಕೂ ನಿರಂತರ ಕೋಟೆ ನಿರ್ಮಾಣ ಕಾರ್ಯದಲ್ಲಿ ತೊಡಗಿದ್ದರು. ಈ ಹಿನ್ನೆಲೆಯಲ್ಲಿ ಇವುಗಳ ಅಧ್ಯಯನ ಮಹತ್ವದ್ದಾಗಿದೆ. ಈ ಕೋಟೆಗಳ ಉಸ್ತುವಾರಿಯನ್ನು ನೋಡಿಕೊಳ್ಳಲು ಕೋಟೆ ಕ್ಷತ್ರಿಯರು ಎನ್ನುವ ಒಂದು ವರ್ಗವನ್ನು ತುಳುನಾಡಿಗೆ ಕಳುಹಿಸಿದ ಕುರಿತು ಮಾಹಿತಿಗಳು ಇದ್ದು ಈ ಕುರಿತು ಅಧ್ಯಯನ ನಡೆಸಲಾಗಿದೆ.

### 1.2 ಅಧ್ಯಯನದ ಉದ್ದೇಶ ಮತ್ತು ಪ್ರಾಮುಖ್ಯತೆ

ಕೆಳದಿ ಅರಸರು ವಿಜಯನಗರ ಸಾಮ್ರಾಟರ ಪ್ರಮುಖ ಸಾಮಂತರಾಗಿದ್ದರು ಮತ್ತು ವಿಜಯನಗರ ಪತನಾನಂತರ ದೊಡ್ಡ ಸಾಮ್ರಾಜ್ಯವನ್ನು ಕಟ್ಟಿ ಆಳಿದ ಸಮರ್ಥ ರಾಜರಾಗಿದ್ದರು. ಹಾಗಾಗಿ ಸಹಜವಾಗಿಯೇ ಕೆಳದಿ ರಾಜರುಗಳ ಇತಿಹಾಸದ ಕುರಿತು ಬೆಳಕು ಚೆಲ್ಲುವ ಹಲವು ಅಧ್ಯಯನಗಳಾಗಿವೆ. ಹಾಗೆಯೇ ತುಳುನಾಡಿನ ಕುರಿತು ಹಲವಾರು ಅಧ್ಯಯನಗಳು ನಡೆದಿವೆ. ಆದರೆ ಕೆಳದಿ ಅರಸರ ಮತ್ತು ತುಳುನಾಡಿನ ರಾಜಕೀಯ ಸಂಬಂಧದ ಕುರಿತಾಗಿ ಅಧ್ಯಯನಗಳಾಗಿವೆಯೇ ಹೊರತು ಈ ವಿಚಾರವಾಗಿ ಸಮಗ್ರವಾದ ಅಧ್ಯಯನಗಳಾಗಿಲ್ಲ. ಇಲ್ಲಿಯ ವರೆಗಿನ ಹೆಚ್ಚಿನ ಅಧ್ಯಯನಗಳು ಕೆಳದಿ ಅರಸರ ಕಾಲದ ರಾಜಕೀಯ ವಿಚಾರಗಳಿಗೆ ಸಂಬಂಧಿಸಿದ್ದಾಗಿದೆ ಅಥವಾ ಇತರ ವಿಚಾರಗಳ ಭಾಗಶಃ ಅಧ್ಯಯನಗಳಾಗಿವೆ. ಉದಾಹರಣೆಗೆ ಶೀನಪ್ಪ ಹೆಗ್ಡೆ ನಂದೊಳ್ಗಿಯವರು ಬರೆದ, ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳ ಪಾಂಡ್ಯರಾಯನ ಅಳಿಯಕಟ್ಟು(1919) ಗಣಪತಿ ರಾವ್ ಐಗಳ್ ಅವರ, ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ(1923) ದಿಂದ ಪ್ರಾರಂಭಿಸಿ, ಎನ್. ಚಿನ್ನಸ್ವಾಮಿ ಸೋಸಲೆ ಅವರ ಸಂಪಾದನೆಯ ಕರಾವಳಿ ಕರ್ನಾಟಕದ ಜೈನ

ಅರಸು ಮನೆತನಗಳು–ಸಾಂಸ್ಕೃತಿಕ ಅಧ್ಯಯನ(2014)ದವರೆಗೆ ಹತ್ತಾರು ಅಧ್ಯಯನಗಳಾಗಿವೆ. ಈ ಎಲ್ಲಾ ಅಧ್ಯಯನಗಳಲ್ಲಿ ಮೇಲಿನ ಶೀರ್ಷಿಕೆಗೆ ಸಂಬಂಧಿಸಿದ ರಾಜಕೀಯ ಇತಿಹಾಸ ಅಥವಾ ಸಾಂದರ್ಭಿಕವಾಗಿ ಕೆಲವು ನಿರ್ದಿಷ್ಟ ಘಟನೆಗಳನ್ನು ಭಾಗಶಃ ಅಧ್ಯಯನ ಮಾಡಲಾಗಿದೆ. ಹಾಗಾಗಿ ಕೆಳದಿ ಅರಸರ ಕಾಲದ ಸ್ಥಳೀಯ ರಾಜ ಮನೆತನಗಳು, ಯುರೋಪಿಯನ್ನರ ಸಂಪರ್ಕ, ಸಹಕಾರ ಮತ್ತು ಸಂಘರ್ಷಗಳು, ಆರ್ಥಿಕ ನೀತಿಗಳು ಮತ್ತು ತುಳುನಾಡಿನ ಮೇಲೆ ಅದರ ಪ್ರಭಾವ ಹಾಗೂ ಆ ಕಾಲದ ಸಾಮಾಜಿಕ ವಿಚಾರಗಳ ಆಳವಾದ ಅಧ್ಯಯನ ಅತ್ಯಂತ ಮಹತ್ವದ್ದಾಗಿದೆ.

ಹಾಗೆಯೇ, ಈ ಕಾಲದಲ್ಲಿ ತುಳುನಾಡಿನಲ್ಲಿ ರಚನೆಯಾದ ಜೈನ ಕಾವ್ಯಗಳಲ್ಲಿರುವ ಚಾರಿತ್ರಿಕ ಅಂಶಗಳು ಹೆಚ್ಚು ಅಧ್ಯಯನಗಳಾಗಿಲ್ಲ. ಅದೇ ರೀತಿ ಮೌಖಿಕ ಪರಂಪರೆಗಳಲ್ಲಿ ಈ ಕಾಲಘಟ್ಟದ ಸಾಮಾಜಿಕ, ಆರ್ಥಿಕ ಧಾರ್ಮಿಕ ವಿಚಾರಗಳ ಉಲ್ಲೇಖಗಳಿದ್ದು ಅವುಗಳನ್ನು ಇಲ್ಲಿಯವರೆಗೆನ ಇತಿಹಾಸದ ಅಧ್ಯಯನಗಳಲ್ಲಿ ವಿಶೇಷವಾಗಿ ಬಳಸಿರುವುದಿಲ್ಲ. ಇತಿಹಾಸಕಾರರಾದ ಬಿ.ಎ.ಸಾಲೆತ್ತೂರ್ ಅವರು ಇವುಗಳನ್ನು ಉಪಯೋಗಿಸಿಕೊಂಡರಾದರೂ, ಅವರ ಅಧ್ಯಯನ ವಿಜಯನಗರದ ಕಾಲ ಘಟ್ಟದವರೆಗೆ ಸೀಮಿತವಾಗಿದೆ. ಭೂತಾರಾಧನೆಗೆ ಸಂಬಂಧಿಸಿದ ಹೆಚ್ಚಿನ ಪಾಡ್ದನಗಳ ರಚನೆಯ ಕಾಲ ಕ್ರಿ.ಶ. 16 ಮತ್ತು 17ನೇ ಶತಮಾನ ಎಂಬುದಾಗಿ ವಿದ್ವಾಂಸರು ನಿರ್ಣಯಿಸಿದ್ದಾರೆ. ಹಾಗಾಗಿ ಪಾಡ್ದನಗಳು ವ್ಯಕ್ತಪಡಿಸುವ ಸಾಮಾಜಿಕ ಅಂಶಗಳು ಕೆಳದಿಯರಸರ ಆಳ್ವಿಕೆಯ ಕಾಲದ್ದಾಗಿದೆ. ಅವುಗಳ ಮೂಲಕ ಆ ಕಾಲದ ಜನಸಾಮಾನ್ಯರ ಸ್ಥಿತಿಗತಿಗಳ ಅಧ್ಯಯನ ಅಗತ್ಯವಾಗಿದೆ. ಒಟ್ಟಿನಲ್ಲಿ ಈ ಕಾಲದ ಆರ್ಥಿಕ ಮತ್ತು ಸಾಮಾಜಿಕ ವಿಚಾರಗಳ ಸ್ವತಂತ್ರ ಮತ್ತು ಸಮಗ್ರರೂಪದ ಅಧ್ಯಯನಗಳು ಇಲ್ಲಿಯವರೆಗೆ ಆಗಿಲ್ಲ. ಈಗ ಸಿದ್ಧಪಡಿಸಲಾಗಿರುವ ಸಂಶೋಧನಾ ಗ್ರಂಥವು ಈ ಮೇಲಿನ ಎಲ್ಲಾ ವಿಚಾರಗಳನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಿದೆ.

ಕ್ರಿ.ಶ. 16, 17 ಮತ್ತು 18ನೇ ಶತಮಾನದ ತುಳುನಾಡು ವಿವಿಧ ದೃಷ್ಟಿಯಲ್ಲಿ ಪ್ರಾಮುಖ್ಯವಾಗಿದ್ದರೂ ಈ ಕಾಲದ ಸಮಾಜೋ ಆರ್ಥಿಕ ಅಧ್ಯಯನ ದೊಡ್ಡ ಮಟ್ಟದಲ್ಲಿ ನಡೆದಿಲ್ಲ. ಪೋರ್ಚುಗೀಸ್ ದಾಖಲೆಗಳ ಮೂಲಕ ನಡೆಸಿದ ಕೆಲವು ಅಧ್ಯಯನಗಳು ಅಥವಾ ಇತರ ನಿರ್ದಿಷ್ಟ ವಿಷಯಕ್ಕೆ ಸಂಬಂಧಿಸಿದ ಭಾಗಶಃ ಅಧ್ಯಯನಗಳನ್ನು ಬಿಟ್ಟರೆ ಪ್ರಾದೇಶಿಕ ಅಥವಾ ಸ್ಥಳೀಯ ಚರಿತ್ರೆಗಳ ಮಾದರಿಯಲ್ಲಿ ಸಮಗ್ರ ಸಮಾಜೋ ಆರ್ಥಿಕ ಚಟುವಟಿಕೆಗಳನ್ನು ವಿಸ್ತಾರವಾಗಿ ಚರ್ಚಿಸಿದ ಸಂಶೋಧನ ಕೃತಿಗಳು ವಿರಳ. ಈ ಕಾಲಘಟ್ಟದ ಸಮಾಜವನ್ನು ಚಿತ್ರಿಸುವ ಅಥವಾ ಸಾಮಾಜಿಕ ಸ್ಥಿತಿಗತಿಯನ್ನು ಬಿಂಬಿಸುವ ಅಧ್ಯಯನಗಳು ನಿರೀಕ್ಷಿತ ಮಟ್ಟದಲ್ಲಿಲ್ಲ. ತುಳುನಾಡಿಗೆ ಈ ಕಾಲದಲ್ಲಿ ವಲಸೆ ಬಂದ ಸಮುದಾಯಗಳು ಅವರ ಸಮಾಜೋ ಆರ್ಥಿಕ ಹಿನ್ನೆಲೆ, ವಿವಿಧ ಧರ್ಮ, ಪಂಥಗಳ ಕುರಿತಾಗಿರುವ ಹಲವು ಪ್ರಶ್ನೆಗಳು ಇವುಗಳ ಅಧ್ಯಯನವನ್ನು ವಿಶ್ಲೇಷಣಾತ್ಮಕ ದೃಷ್ಟಿಯಿಂದ ನೋಡದೆ ಸ್ಥಳೀಯ ಇತಿಹಾಸ ದೃಷ್ಟಿಯಿಂದ ನೋಡುವ ಅನಿವಾರ್ಯತೆಯಿದ್ದು

ಈ ಎಲ್ಲಾ ಕಾರಣಗಳಿಂದ ಕೆಳದಿ ಆಳ್ವಿಕೆಯ ತುಳುನಾಡಿನ ಸಮಾಜೋ ಆರ್ಥಿಕ ಅಧ್ಯಯನ ಅತ್ಯಂತ ಮಹತ್ವದ್ದಾಗಿದೆ.

ಒಟ್ಟಿನಲ್ಲಿ ಈ ಅಧ್ಯಯನದ ಪ್ರಮುಖ ಉದ್ದೇಶಗಳೆಂದರೆ,

1. ಕ್ರಿ.ಶ. 16ನೇ ಶತಮಾನದಿಂದ 18ನೇ ಶತಮಾನದ ಮಧ್ಯಭಾಗದವರೆಗೆ ತುಳುನಾಡಿನಲ್ಲಿ ಕೆಳದಿಯರಸರು ಪ್ರಮುಖ ರಾಜಕೀಯ ಶಕ್ತಿಯಾಗಿದ್ದು, ಇವರು ತುಳುನಾಡಿನಲ್ಲಿ ಪ್ರಾರಂಭದಲ್ಲಿ ವಿಜಯನಗರದ ರಾಜ್ಯಪಾಲರ ನೆಲೆಯಲ್ಲಿ, ಸಾಮಂತರ ನೆಲೆಯಲ್ಲಿ, ಮುಂದೆ ಸ್ವತಂತ್ರ ಸಾರ್ವಭೌಮರ ನೆಲೆಯಲ್ಲಿ ಗುರುತಿಸಿಕೊಂಡರು. ಈ ಎಲ್ಲಾ ಸಂದರ್ಭದ ಅವರ ರಾಜಕೀಯ ಪ್ರಭಾವ, ಯುರೋಪಿಯನ್ನರೊಂದಿಗಿನ ಸಂಪರ್ಕ ಮತ್ತು ಕೆಳದಿ–ತುಳುನಾಡಿನ ಆಡಳಿತ ನಿಯಂತ್ರಣದ ಸ್ವರೂಪವನ್ನು ಗುರುತಿಸುವುದು.
2. ತುಳುನಾಡಿನಲ್ಲಿ ಆ ಕಾಲದಲ್ಲಿದ್ದ ಭೂ ನಿಯಂತ್ರಣ ವ್ಯವಸ್ಥೆ, ಭೂ ವರ್ಗೀಕರಣಗಳು, ಭೂ ಗೇಣಿ ವ್ಯವಸ್ಥೆ, ತೆರಿಗೆಯ ಸ್ವರೂಪ ಇತ್ಯಾದಿ ಭೂ ಸಂಬಂಧಿತ ವಿಚಾರಗಳ ಅಧ್ಯಯನ ಮತ್ತು ಇವುಗಳ ಹಿನ್ನೆಲೆಯಲ್ಲಿ ಆದ ಸಾಮಾಜಿಕ ಆರ್ಥಿಕ ಬದಲಾವಣೆಯನ್ನು ಗುರುತಿಸುವುದು.
3. ಈ ಕಾಲದಲ್ಲಿ ಆರ್ಥಿಕತೆಯಲ್ಲಿ ಪ್ರಧಾನ ಪಾತ್ರವಹಿಸಿದ ಕೃಷಿ ವ್ಯಾಪಾರ, ಇದಕ್ಕೆ ಸಂಬಂಧಿಸಿದ ಸ್ಥಳೀಯ ವ್ಯಾಪಾರ, ವಿದೇಶೀ ವ್ಯಾಪಾರ, ನಾಣ್ಯ ವ್ಯವಸ್ಥೆಯ ಸ್ವರೂಪ, ಕೆಳದಿಯರಸರು ಪೋರ್ಚುಗೀಸರು ಮತ್ತು ಸ್ಥಳೀಯ ಅರಸರ ಆರ್ಥಿಕ ಸಂಘರ್ಷದ ಹಿನ್ನೆಲೆಗಳ ಅಧ್ಯಯನ ನಡೆಸುವುದು.
4. ತುಳುನಾಡಿನ ಹಲವು ಕೋಟೆಗಳು ಕೆಳದಿ ಕಾಲದ ವಿಶೇಷ ರಚನೆಗಳಾಗಿವೆ. ಬಹುಶಃ ತುಳುನಾಡಿನಲ್ಲಿ ಕೆಳದಿಯರಸರು ನಿರ್ಮಿಸಿದಷ್ಟು ಸಂಖ್ಯೆಯ ಕೋಟೆಗಳನ್ನು ಇತರ ಯಾವುದೇ ರಾಜವಂಶಗಳು ನಿರ್ಮಿಸಿಲ್ಲ. ಅದೇ ರೀತಿ ಪೋರ್ಚುಗೀಸರೂ ಕರಾವಳಿಯಲ್ಲಿ ಕೋಟೆಗಳ ನಿರ್ಮಾಪಕರಾಗಿದ್ದರು. ಈ ಕೋಟೆಗಳ ರಚನೆಯ ಹಿಂದಿನ ಉದ್ದೇಶ, ಅವುಗಳ ಆರ್ಥಿಕ ಹಿನ್ನೆಲೆ ಇವುಗಳನ್ನು ಸಮಗ್ರವಾಗಿ ಅಧ್ಯಯನ ನಡೆಸುವುದು.
5. ಈ ಕಾಲದ ತುಳುನಾಡಿನ ವಿವಿಧ ಸಮುದಾಯಗಳ ಸಾಮಾಜಿಕ ಸ್ಥಿತಿಗತಿಯನ್ನು ಅವಲೋಕಿಸುವುದು ಈ ಅಧ್ಯಯನದ ಉದ್ದೇಶವಾಗಿದೆ. ಜೈನರು ಮತ್ತು ಬಂಟರು ಈ ಕಾಲದ ಎರಡು ಪ್ರಬಲ ಸಮುದಾಯಗಳಾಗಿದ್ದವು. ಆದರೆ ಇವರ ಉಪನಾಮದ ಸಾಮ್ಯತೆಯಿಂದಾಗಿ ದಾಖಲೆಗಳು ಹೆಸರಿಸುವ ಸೆಟ್ಟಿ, ಬಲ್ಲಾಳ ಮುಂತಾದ ಈ ಕಾಲದ ಪ್ರಬಲ ಸಮುದಾಯಗಳು ಯಾರು ಎನ್ನುವ ವಿಚಾರವನ್ನು ನಿರ್ಣಯಿಸಲು ಸಾಧ್ಯವಾಗುತ್ತಿಲ್ಲ. ಈ ಹಿನ್ನೆಲೆಯಲ್ಲಿ ಈ ಸಮುದಾಯಗಳ ಚಟುವಟಿಕೆಗಳನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡುವುದು.

6. ತುಳುನಾಡಿನ ತಳ ಸಮುದಾಯಗಳ ಸಾಮಾಜಿಕ ಆರ್ಥಿಕ ಹಿನ್ನೆಲೆಗಳು ಶಾಸನಗಳಲ್ಲಿ ಹೆಚ್ಚಾಗಿ ಉಲ್ಲೇಖಿಸಲ್ಪಟ್ಟಿಲ್ಲ. ಆದರೆ ಪ್ರವಾಸಿಗರ ವರದಿಗಳು ಮತ್ತು ಮೌಖಿಕ ಆಕರಗಳು ಸ್ವಲ್ಪಮಟ್ಟಿಗೆ ಈ ವಿಚಾರದಲ್ಲಿ ಸಹಕಾರಿಯಾಗಿವೆ. ಅವುಗಳ ಆಧಾರದಲ್ಲಿ ಈ ಸಮುದಾಯಗಳ ಸ್ಥಿತಿಗತಿಯನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡುವುದು.

7. ಕೆಳದಿಯರಸರ ಆಳ್ವಿಕೆಯಲ್ಲಿ ಹಲವು ಸಮುದಾಯಗಳು ತುಳುನಾಡಿಗೆ ಹೊಸದಾಗಿ ಆಗಮಿಸಿದವು. ಅವರಲ್ಲಿ ವೀರಶೈವರು, ಸಾರಸ್ವತರು, ಕ್ರೈಸ್ತರು, ಕೋಟೆಕ್ಷತ್ರಿಯರು, ಒಕ್ಕಲಿಗರು ಅಥವಾ ಗೌಡರು ಪ್ರಮುಖರಾಗಿದ್ದಾರೆ. ಈ ಸಮುದಾಯಗಳ ವಲಸೆಯ ಹಿನ್ನೆಲೆ, ಈ ವಲಸೆಯಲ್ಲಿ ಕೆಳದಿಯರಸರ ಪಾತ್ರ, ಈ ಸಮುದಾಯಗಳಿಂದ ತುಳುನಾಡಿನ ಸಮಾಜೋ ಆರ್ಥಿಕ ಜೀವನದ ಮೇಲಾದ ಪರಿಣಾಮವನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡುವುದು.

8. ಧರ್ಮಕ್ಕೆ ಕೆಳದಿ ರಾಜರು ಬಹಳಷ್ಟು ಮಹತ್ವವನ್ನು ನೀಡಿದ್ದರು ಎಂಬುದಾಗಿ ಅಭಿಪ್ರಾಯ ಪಡಲಾಗಿದೆ. ಈ ಕಾಲದಲ್ಲಿ ಹಲವು ಮಠಗಳು, ದೇವಾಲಯಗಳು, ಬಸದಿಗಳು, ಚರ್ಚುಗಳು, ಮಸೀದಿಗಳು ನಿರ್ಮಾಣವಾದವು ಅಥವಾ ರಾಜಾಶ್ರಯವನ್ನು ಪಡೆದವು. ಅದೇ ರೀತಿ ಈ ಹಿಂದೆ ನಿರ್ಮಾಣವಾದ ಹಲವು ದೇವಾಲಯಗಳು ಬಸದಿಗಳು ಸಾಕಷ್ಟು ದಾನ ದತ್ತಿಗಳನ್ನು ಪಡೆದವು. ಸಮಾಜದ ಅಧ್ಯಯನ ಎಂದಾಗ ಧರ್ಮಗಳ ಸ್ಥಿತಿಗತಿಗಳನ್ನು ತಿಳಿಯುವುದು ಅಗತ್ಯವಾಗಿದೆ. ಏಕೆಂದರೆ, ಸಮಾಜದ ಸಾಮಾಜಿಕ ಮತ್ತು ಆರ್ಥಿಕ ವಿಚಾರಗಳು ಧಾರ್ಮಿಕ ಹಿನ್ನೆಲೆಯನ್ನೂ ಹೊಂದಿದೆ. ಧರ್ಮವನ್ನು ಸಮಾಜದ ಅಥವಾ ಆರ್ಥಿಕ ಹಿನ್ನೆಲೆಯಿಂದ ನೋಡಬೇಕಾಗುತ್ತದೆ. ಅಂದು ಪ್ರಚಲಿತದಲ್ಲಿದ್ದ ವೀರಶೈವ, ಜೈನ, ಶೈವ, ವೈಷ್ಣವ, ಇಸ್ಲಾಂ ಹಾಗೂ ಕ್ರೈಸ್ತ ಧರ್ಮಗಳು ಹುಟ್ಟುಹಾಕಿದ ಧಾರ್ಮಿಕ ಪರಿಸರ ಹಾಗೂ ರಾಜಕಾರಣದ ಮೇಲೆ ಬೀರಿದ ಪರಿಣಾಮಗಳು ಅಧ್ಯಯನ ಯೋಗ್ಯ ವಿಷಯಗಳಾಗಿದ್ದು ಇವುಗಳಿಂದ ತುಳುನಾಡಿನ ಚರಿತ್ರೆಯ ವಿವಿಧ ಆಯಾಮಗಳನ್ನು ತಿಳಿಯಲು ಸಾಧ್ಯ.

9. ತುಳುನಾಡಿನಲ್ಲಿ ವಿಜಯನಗರ ಕಾಲದವರೆಗೆ ಜನಪ್ರಿಯವಾಗಿದ್ದ ಜೈನಧರ್ಮ ಕೆಳದಿ ಕಾಲದಲ್ಲಿ ಇಳಿಮುಖವಾಯಿತೆಂದು ಹೇಳಲಾಗಿದೆ. ಇದಕ್ಕೆ ಕೆಳದಿಯರಸರ ಧಾರ್ಮಿಕ ನೀತಿ ಮತ್ತು ವೀರಶೈವ ಪಂಥದ ಪ್ರಸರಣ ಕಾರಣವೆಂಬ ಅಭಿಪ್ರಾಯಗಳಿವೆ. ಈ ಕುರಿತಾಗಿ ವಿಸ್ತೃತ ಅಧ್ಯಯನಗಳಾಗಿಲ್ಲ. ಈ ನಿಟ್ಟಿನಲ್ಲಿ ಜೈನಧರ್ಮದ ಇಳಿಮುಖ, ವೀರಶೈವ ಜೈನ ಸಂಘರ್ಷಗಳ ನೈಜತೆಯನ್ನು ಈ ಅಧ್ಯಯನದಲ್ಲಿ ವಿಮರ್ಶಾತ್ಮಕವಾಗಿ ಚರ್ಚಿಸಿ ಈ ಕುರಿತಾಗಿ ನಿರ್ದಿಷ್ಟ ಫಲಿತಗಳನ್ನು ಪಡೆಯುವುದು.

10. ವೀರಶೈವ ಧರ್ಮ ಕೆಳದಿ ಆಡಳಿತದ ಪೂರ್ವದಲ್ಲೇ ತುಳುನಾಡಿಗೆ ಆಗಮಿಸಿದ್ದರೂ ಅದು ಪ್ರಬಲವಾಗಿ ಬೆಳೆದುದು ಕೆಳದಿ ಆಡಳಿತದ ಕಾಲದಲ್ಲಿಯೇ. ಈ ಹಿನ್ನೆಲೆಯಲ್ಲಿ ಇಲ್ಲಿರುವ ಮಠ

ಮತ್ತು ದೇವಾಲಯಗಳ ಚಾರಿತ್ರಿಕ ಅಧ್ಯಯನ ಪ್ರಾಮುಖ್ಯವಾಗಿದೆ. ಈ ಮತಗಳು ತುಳುನಾಡಿನ ಸಾಮಾಜಿಕ ಆರ್ಥಿಕ ಜೀವನದ ಮೇಲೆ ಬೀರಿದ ಪ್ರಭಾವ ಮತ್ತು ಈ ಧರ್ಮದ ಮೇಲೆ ತುಳುನಾಡಿನ ಸಮಾಜ ಬೀರಿದ ಪ್ರಭಾವದ ಅಧ್ಯಯನ ನಡೆಸುವುದು.

ಒಟ್ಟಿನಲ್ಲಿ ತುಳುನಾಡಿನ ಇತಿಹಾಸವನ್ನು ಕೇವಲ ಸ್ಥಳೀಯ ಅರಸರು, ಬೀಡು ಬಲ್ಲಾಳರು ಮತ್ತು ಕೆಳದಿಯ ಸಾರ್ವಭೌಮತ್ವದ ರಾಜಕೀಯ ಹಿನ್ನೆಲೆಯಲ್ಲಿ ಮಾತ್ರ ಅಧ್ಯಯನ ನಡೆಸಲು ಸಾಧ್ಯವಿಲ್ಲ. ಈ ಹಿನ್ನೆಲೆಯಲ್ಲಿ ಈ ಕಾಲದ ತುಳುನಾಡಿನ ಸಮಾಜೋ ಆರ್ಥಿಕ ಅಧ್ಯಯನ ಮಹತ್ವದ್ದಾಗಿದೆ.

### 1.3 ಅಧ್ಯಯನದ ವ್ಯಾಪ್ತಿ

ತುಳುನಾಡು, ತುಳುದೇಶ, ತುಳು ವಿಷಯವೆಂದು ಕರೆಯಲ್ಪಡುವ ಈ ಪ್ರದೇಶದ ವ್ಯಾಪ್ತಿಯನ್ನು ಗುರುತಿಸಲು ದೊಡ್ಡ ಮಟ್ಟದ ಚರ್ಚೆಯನ್ನು ವಿದ್ವಾಂಸರು ನಡೆಸಿದ್ದಾರೆ. ತುಳುನಾಡು ಎನ್ನುವ ಹೆಸರು ಭೌಗೋಳಿಕ ಹಿನ್ನೆಲೆಯಲ್ಲಿ, ಭಾಷಾ ಹಿನ್ನೆಲೆಯಲ್ಲಿ, ಜನಾಂಗದ ಹಿನ್ನೆಲೆಯಲ್ಲಿ ಬಂದಿದೆ ಎನ್ನುವ ವಿಚಾರದಲ್ಲಿ ಬಹಳಷ್ಟು ಚರ್ಚೆಗಳಿವೆ. ಇತಿಹಾಸ ಆರಂಭಕಾಲದಿಂದ ಟಿಪ್ಪು ಸುಲ್ತಾನನ ಆಡಳಿತದ ಕಾಲದವರೆಗೂ ಇದು ಅವಿಭಜಿತ ದ.ಕ.ಜಿಲ್ಲೆ, ಕಾಸರಗೋಡು ಹಾಗೂ ಉತ್ತರ ಕನ್ನಡ ಜಿಲ್ಲೆಯ ಕೆಲವು ಭಾಗ ಸೇರಿದಂತೆ ವಿಶಾಲ ವ್ಯಾಪ್ತಿಯನ್ನು ಹೊಂದಿತ್ತು. ತುಳುನಾಡಿನ ವ್ಯಾಪ್ತಿ ಮೂರು ಪ್ರಮುಖ ಅಂಶಗಳ ಹಿನ್ನೆಲೆಯಲ್ಲಿ ಗುರುತಿಸಲ್ಪಟ್ಟಿದೆ. ಅವುಗಳೆಂದರೆ, ರಾಜಕೀಯ ತುಳುನಾಡು, ಭಾಷಿಕ ತುಳುನಾಡು ಮತ್ತು ಸಾಂಸ್ಕೃತಿಕ ತುಳುನಾಡು. ರಾಜಕೀಯ ತುಳುನಾಡಿನ ಎಲ್ಲೆಗಳು ಉತ್ತರ ಕನ್ನಡ ಜಿಲ್ಲೆ, ಶಿವಮೊಗ್ಗ ಜಿಲ್ಲೆಯವರೆಗೂ ವಿಸ್ತರಿಸಿದ್ದವು. ಹಾಗೆಯೇ ರಾಜಕೀಯ ತುಳುನಾಡಿನ ಗಡಿಗಳು ಪದೇ ಪದೇ ಬದಲಾಗುತ್ತಿದ್ದವು. ಭಾಷಿಕ ತುಳುನಾಡು ಕೇವಲ ತುಳು ಮಾತಾಡುವ ಪ್ರದೇಶವಾಗಿದೆ. ಇದು ಇಂದಿನ ಕಾಸರಗೋಡು ಸಮೀಪದ ಚಂದ್ರಗಿರಿ ನದಿಯಿಂದ ಸುವರ್ಣಾ ನದಿ (ಕಲ್ಯಾಣಪುರ)ವರೆಗೆ ವಿಸ್ತರಿಸಿದೆ.

ಆದರೆ ಇತಿಹಾಸ ಕಾಲದಲ್ಲಿ, ಅದು ಇಂದಿನ ಗೇರುಸೊಪ್ಪದ(ಉ.ಕ.ಜಿಲ್ಲೆ) ಆಸುಪಾಸಿನವರೆಗೆ ವ್ಯಾಪಿಸಿರಬಹುದೆಂದು ಅಂದಾಜಿಸಲು ಕುರುಹುಗಳಿವೆ. ಆದರೆ ತುಳುಭಾಷೆ ಇಂದಿಗೂ ಅಂದಿಗೂ ಗಟ್ಟಿಯಾಗಿ ನೆಲೆಯೂರಿದ್ದು ಇಂದಿನ ಭಾಷಿಕ ತುಳುನಾಡಿನಲ್ಲಿ ಎನ್ನುವುದು ಸ್ಪಷ್ಟ. ಇನ್ನು ಸಾಂಸ್ಕೃತಿಕ ತುಳುನಾಡಿನ ವ್ಯಾಪ್ತಿ ಹೆಚ್ಚು ಕಡಿಮೆ ಇಂದಿಗೂ ತುಳು ಭಾಷೆ ಗಟ್ಟಿಯಾಗಿರುವ ಅವಿಭಜಿತ ದಕ್ಷಿಣ ಕನ್ನಡ ಹಾಗೂ ಕಾಸರಗೋಡು ಜಿಲ್ಲೆಗೆ ಸೀಮಿತವಾಗಿದೆ. ಈ ಸಾಂಸ್ಕೃತಿಕ ತುಳುನಾಡು ತುಳುಭಾಷೆಯನ್ನು ಒಳಗೊಂಡು ಒಂದು ನಿರ್ದಿಷ್ಟ ಪಡಿಸಿದ ಘಟಕದಂತೆ ತೋರುತ್ತದೆ. ಈ ಕಾರಣಕ್ಕೆ ಈ ವ್ಯಾಪ್ತಿ ತುಳುನಾಡಿನ ತಿರುಳಾಗಿದ್ದು, ಗೇರುಸೊಪ್ಪೆ, ಹೊನ್ನಾವರ, ಮತ್ತಿತರ ಉತ್ತರದ ಪ್ರದೇಶಗಳು ತುಳುನಾಡಿನ ಹೊರ ಅಪರೂಪವಾಗಿ ಗೋಚರಿಸುತ್ತವೆ. ಈ ಸಾಂಸ್ಕೃತಿಕ ತುಳುನಾಡಿಗೆ ಪ್ರಸ್ತುತ ಅಧ್ಯಯನದಲ್ಲಿ ಮಹತ್ವ ನೀಡಲಾಗಿದೆ.

ಕ್ರಿ.ಶ.16 ರಿಂದ 18ನೇ ಶತಮಾನದವರೆಗಿನ ತುಳುನಾಡು ಈ ಅಧ್ಯಯನಕ್ಕೆ ಒಳಪಟ್ಟಿದೆ. ತುಳುನಾಡಿನಲ್ಲಿ ಕೆಳದಿಯರಸರ ಉಲ್ಲೇಖಗಳು ತಾಳಿಕೋಟೆ ಯುದ್ಧದ ಮೊದಲು ರಾಜ್ಯಪಾಲರ ಮತ್ತು ಸಾಮಂತರ ನೆಲೆಯಲ್ಲಿ ಕಾಣಿಸಿಕೊಂಡರೆ, ಆ ನಂತರ ಸಾರ್ವಭೌಮರ ನೆಲೆಯಲ್ಲಿ ಕಾಣಿಸಿಕೊಳ್ಳುತ್ತಾರೆ. ಈ ಅಧ್ಯಯನದಲ್ಲಿ ಸಾಂದರ್ಭಿಕವಾಗಿ ಕೆಲವು ಬಾರಿ ಕ್ರಿ.ಶ. 1500 ರಿಂದ ಕ್ರಿ.ಶ.1800 ರವರೆಗಿನ ವಿಚಾರಗಳನ್ನೂ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಕೆಲವು ಬಾರಿ ಉತ್ತರ ಕನ್ನಡ ಜಿಲ್ಲೆಯ ಗೇರುಸೊಪ್ಪೆ, ಭಟ್ಕಳ, ಹೊನ್ನಾವರ ಹಾಗೂ ಕೊಲ್ಲೂರು, ಶೃಂಗೇರಿ ಮುಂತಾದ ಸ್ಥಳಗಳನ್ನೂ ಸಂದರ್ಭೋಚಿತವಾಗಿ ಸೇರಿಸಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿ ತುಳುನಾಡಿನ ಚಾರಿತ್ರಿಕ ಹಿನ್ನೆಲೆ, ಮುಖ್ಯವಾಗಿ ಕೆಳದಿ ಆಳ್ವಿಕೆಯಲ್ಲಿ ತುಳುನಾಡಿನ ಸಾಮಂತರು, ಕೆಳದಿ ಕಾಲದ ತುಳುನಾಡಿನ ಆಡಳಿತ ನಿಯಂತ್ರಣ ಸ್ವರೂಪ, ಕೆಳದಿ ಅರಸರು ಮತ್ತು ಯುರೋಪಿಯನ್ನರ ಸಂಬಂಧಗಳನ್ನು ವಿಶ್ಲೇಷಿಸಲಾಗಿದೆ. ಈ ಕಾಲಘಟ್ಟದ ತುಳುನಾಡಿನ ಭೂ ನಿಯಂತ್ರಣ ವ್ಯವಸ್ಥೆ, ಭೂ ವಿಂಗಡಣೆಗಳು, ಭೂಗೇಣಿ ಪದ್ಧತಿ, ಭೂ ವ್ಯವಹಾರಗಳು, ರೈತ ವರ್ಗ ಮತ್ತು ರೈತ ಸಂಘರ್ಷಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಕಾಲದ ದೇಶೀಯ ಮತ್ತು ವಿದೇಶೀಯ ವ್ಯಾಪಾರ, ತೆರಿಗೆ ಪದ್ಧತಿ, ಕೆಳದಿಯರಸರ ಮತ್ತು ಪೋರ್ಚುಗೀಸರ ಆರ್ಥಿಕ ಸಂಘರ್ಷಗಳನ್ನು ಅಧ್ಯಯನ ವ್ಯಾಪ್ತಿಯಲ್ಲಿ ಸೇರಿಸಲಾಗಿದೆ.

ಈ ಕಾಲದ ತುಳುನಾಡಿನ ಸಾಮಾಜಿಕ ಅಧ್ಯಯನದಲ್ಲಿ, ವಿವಿಧ ಸಮುದಾಯಗಳು, ವಿಶೇಷವಾಗಿ ಹಿಂದೂ, ಜೈನ, ಕ್ರೈಸ್ತ, ಮತ್ತು ಇಸ್ಲಾಂ ಧರ್ಮಗಳನ್ನು ಅನುಸರಿಸುತ್ತಿದ್ದ ಜನರ ಸಾಮಾಜಿಕ ಸ್ಥಿತಿಗತಿಗಳಲ್ಲದೆ, ವೀರಶೈವರು, ಸಾರಸ್ವತರು, ಕೋಟಕ್ಷತ್ರಿಯರು ಹಾಗೂ ಗೌಡ ಸಮುದಾಯದ ವಲಸೆಯ ಹಿನ್ನೆಲೆಗಳನ್ನು ಅಧ್ಯಯನಕ್ಕೊಳಪಡಿಸಿದೆ. ಹಾಗೆಯೇ ಈ ಕಾಲದಲ್ಲಿ ರಚನೆಯಾದ ಸಾಹಿತ್ಯಗಳಲ್ಲಿ ಮತ್ತು ಈ ಕಾಲದಲ್ಲಿ ಕರಾವಳಿಗೆ ಭೇಟಿನೀಡಿದ ವಿದೇಶೀ ಯಾತ್ರಿಕರ ಬರವಣಿಗೆಯಲ್ಲಿ ವ್ಯಕ್ತವಾದ ತುಳುನಾಡಿನ ಚಿತ್ರಣವನ್ನು ಈ ಅಧ್ಯಯನದ ವ್ಯಾಪ್ತಿಗೊಳಪಡಿಸಲಾಗಿದೆ. ಒಟ್ಟನಲ್ಲಿ ಪ್ರಸ್ತುತ ಅಧ್ಯಯನವು ಕ್ರಿ.ಶ.16ನೇ ಶತಮಾನದಿಂದ 18ನೇ ಶತಮಾನದ ಮಧ್ಯಭಾಗದವರೆಗಿನ ತುಳುನಾಡಿನ ಸಾಮಾಜಿಕ ಆರ್ಥಿಕ ವಿಚಾರಗಳನ್ನು ಒಳಗೊಂಡಿದೆ.

### 1.4 ಅಧ್ಯಯನ ಸಮೀಕ್ಷೆ ಮತ್ತು ಆಧಾರಗಳು

ಕೆಳದಿಯರಸರ ಆಳ್ವಿಕೆಯ ಕಾಲದ ತುಳುನಾಡಿನ ಅಧ್ಯಯನಕ್ಕೆ ಸಾಕಷ್ಟು ಮೂಲಾಧಾರಗಳು ದೊರೆತಿದೆ. ಈ ಕಾಲಘಟ್ಟ ಮಧ್ಯಕಾಲ ಮತ್ತು ಆಧುನಿಕ ಕಾಲಘಟ್ಟದೊಂದಿಗೆ ನಂಟು ಹೊಂದಿರುವುದರಿಂದ ವಿಭಿನ್ನ ಸ್ವರೂಪದ ಆಧಾರಗಳನ್ನು ಗುರುತಿಸಬಹುದು. ಪುರಾತತ್ವ, ದೇಶೀಯ ಮತ್ತು ವಿದೇಶೀಯ ಸಾಹಿತ್ಯಿಕ ಆಧಾರಗಳೊಂದಿಗೆ ತಾಳೆಪತ್ರಗಳು, ಕಡತಗಳು, ಪತ್ರ ವ್ಯವಹಾರಗಳಂತಹ ದಾಖಲೆಗಳೂ ಲಭ್ಯವಿರುವುದು. ಅಂತೆಯೇ ಪಾಡ್ದನದಂತಹ ಮೌಖಿಕ ಆಕರಗಳೂ ದೊರೆಯುವುದು ಈ ಕಾಲಾವಧಿಯ

ವೈಶಿಷ್ಟ್ಯತೆಯಾಗಿದೆ.

**ಶಾಸನಗಳು:** ವಿಜಯನಗರದ ನಂತರ ಅತ್ಯಂತ ಹೆಚ್ಚಿನ ಸಂಖ್ಯೆಯ ಶಾಸನಗಳನ್ನು ಕೆಳದಿಯರಸರು ನೀಡಿದ್ದಾರೆ. ತಮ್ಮ ಆಳ್ವಿಕೆಯ ಸಂದರ್ಭದಲ್ಲಿ ಆ ವಂಶದವರು ಸುಮಾರು 480ಕ್ಕೂ ಹೆಚ್ಚು ಶಾಸನಗಳನ್ನು ನೀಡಿದ್ದರೆ, ಇವುಗಳಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 39 ಶಾಸನಗಳಿವೆ. ಅವುಗಳ ಜೊತೆಯಲ್ಲಿ ಸ್ಥಳೀಯ ರಾಜರುಗಳು, ವಿವಿಧ ವ್ಯಕ್ತಿಗಳು ಬರೆಸಿದ ಈ ಕಾಲದ ನೂರಾರು ಕಲ್ಲಿನ, ತಾಮ್ರದ ಶಾಸನಗಳೂ ಲಭ್ಯವಾಗಿದೆ. ಸಾಮಾನ್ಯವಾಗಿ ಕಲ್ಲಿನ ಶಾಸನಗಳು ವಿವಿಧ ಬಗೆಯ ದಾನದತ್ತಿಗಳ ವಿವರವನ್ನು ನೀಡುತ್ತವೆ. ಹಾಗೆಯೇ ಕೆಳದಿ ಅರಸರ ಅಳ್ವಿಕೆಯ ನೀತಿ, ನಾಣ್ಯ ಚಲಾವಣೆ, ಆಡಳಿತ ಪದ್ಧತಿ, ಧಾರ್ಮಿಕ ನೀತಿ ಮತ್ತು ಆರ್ಥಿಕ ಚಟುವಟಿಕೆಗಳ ಕುರಿತಾಗಿ ತಿಳಿಸುತ್ತದೆ.

ಈ ಕಾಲಘಟ್ಟಕ್ಕೆ ಸಂಬಂಧಿಸಿದ ಹೆಚ್ಚಿನ ಶಾಸನಗಳು ಎಫಿಗ್ರಾಫಿಯ ಇಂಡಿಕಾ, ಕರ್ನಾಟಕ ಶಾಸನ ಸರಣಿ, ದಕ್ಷಿಣ ಭಾರತದ ಶಾಸನ ಸರಣಿಗಳಲ್ಲಿ ಪ್ರಕಟಗೊಂಡಿವೆ. ಕೆಲವು ಮಾಹಿತಿಗಳನ್ನು ಎಫಿಗ್ರಾಫಿಯಾ ಕರ್ನಾಟಿಕದ 5, 6, 7 ಮತ್ತು 8ನೇ ಸಂಪುಟಗಳಲ್ಲಿ ಪಡೆಯಬಹುದು. ದಕ್ಷಿಣ ಭಾರತದ ಶಾಸನ ಸರಣಿಗಳಲ್ಲಿ ಸಂಪುಟ 7 ಮತ್ತು 9ರಲ್ಲಿ 1ನೇ ಭಾಗ, 2ನೆಯ ಭಾಗ ಮತ್ತು 27ನೇ ಸಂಪುಟಗಳಲ್ಲಿ ಹಲವು ಶಾಸನಗಳು ಪ್ರಕಟಗೊಂಡಿವೆ. ಮೈಸೂರು ಪುರಾತತ್ವ ಇಲಾಖೆಯ ವಾರ್ಷಿಕ ವರದಿಗಳಲ್ಲಿ ಹಾಗೂ ಎಫಿಗ್ರಾಫಿಕ್ ಸೊಸೈಟಿ ಆಫ್ ಇಂಡಿಯಾದ ಜರ್ನಲ್‌ಗಳಿಂದ ಇನ್ನು ಕೆಲವು ಶಾಸನಗಳ ಮಾಹಿತಿಯನ್ನು ಪಡೆಯಲಾಗಿದೆ. ಅನೇಕ ಶಾಸನಗಳ ಪಠ್ಯಗಳ ಸಾರಾಂಶ ಸೌತ್ ಇಂಡಿಯನ್ ಎಫಿಗ್ರಫಿಯ ವಾರ್ಷಿಕ ವರದಿಗಳಲ್ಲಿ ಮತ್ತು ಇಂಡಿಯನ್ ಎಫಿಗ್ರಪಿಯ ವಾರ್ಷಿಕ ವರದಿಗಳಲ್ಲಿ ಲಭ್ಯವಿದೆ.

**ಸಾಹಿತ್ಯದ ಆಧಾರಗಳು:** ತುಳುನಾಡಿನ ಕಂದಾಯ ವ್ಯವಸ್ಥೆ, ಕೃಷಿ ಸಂಬಂಧಿತ ವಿಚಾರಗಳು, ಹಿಂದೂ ಮತ್ತು ಜೈನ ಧರ್ಮದ ವಿವಿಧ ಪಂಗಡಗಳು ಧಾರ್ಮಿಕ ಸಂಸ್ಥೆಗಳು ಆಚಾರ ವಿಚಾರದ ಸ್ವರೂಪವನ್ನು ತಿಳಿಯಲು ಹಲವಾರು ಸಾಹಿತ್ಯದ ಆಧಾರಗಳಿವೆ. ರತ್ನಾಕರವರ್ಣಿಯ ಭರತೇಶ ವೈಭವ ಮತ್ತು ರತ್ನಾಕರಾಧೀಶ್ವರ ಶತಕ(ಕ್ರಿ.ಶ ಸು.1517) ಚದುರ ಚಂದ್ರಮನ(ಕ್ರಿ.ಶ. 1646) ಕಾರ್ಕಳದ ಗೊಮ್ಮಟೇಶ್ವರ ಚರಿತೆ, ಮೂಲ್ಕಿಯ ಪದ್ಮನಾಭ ಕವಿಯ(ಕ್ರಿ.ಶ.1680 ) ಜಿನದತ್ತರಾಯನ ಚರಿತೆ, ಇನ್ನೊಬ್ಬ ಕವಿ ಪದ್ಮನಾಭನ ವೇಣೂರು ಭುಜಬಲಿ ಚರಿತೆ(ಕ್ರಿ.ಶ.1700) ಮತ್ತು ರಾಮಚಂದ್ರಚರಿತೆ(ಕ್ರಿ.ಶ.1750) ಕೃತಿಗಳು ಕಾರ್ಕಳ, ವೇಣೂರು ಮತ್ತು ಮೂಲ್ಕಿ ಪರಿಸರದ ಈ ಕಾಲದ ಐತಿಹಾಸಿಕ ಮಾಹಿತಿಗಳನ್ನು ಹೊಂದಿದೆ. ಲಿಂಗಣ್ಣನ ಕೆಳದಿ ನೃಪವಿಜಯವು ಕ್ರಿ.ಶ. 17 ಮತ್ತು 18ನೇ ಶತಮಾನದಲ್ಲಿ ಕೆನರಾ ಪ್ರದೇಶದ ಧಾರ್ಮಿಕ ಸ್ಥಿತಿಗತಿಯನ್ನು ತಿಳಿಯಲು ಉಪಯುಕ್ತ ಕೃತಿಯಾಗಿದೆ. ಕೆಳದಿ ನೃಪವಿಜಯ ಕೆಳದಿ ಅರಸರ ತುಳುನಾಡಿನ ನಂಟಿನ ಬಹಳಷ್ಟು ಮಾಹಿತಿಯನ್ನು ನೀಡುತ್ತವೆ. ಕೆಳದಿ ನಾಯಕರು ಮತ್ತು ತುಳುನಾಡಿನ ಅರಸರ ಸಂಬಂಧ, ಕೃಷಿ ನೀತಿಗಳು, ವೆಂಕಟಪ್ಪ ನಾಯಕನ, ಶಿವಪ್ಪ ನಾಯಕನ ಕೋಟೆ ಕೊತ್ತಲಗಳ ಮಾಹಿತಿ, ವೈಷ್ಣವ,

ಶೈವ, ಮತ್ತು ವೀರಶೈವ ಪಂಥದ ಪ್ರಸರಣವನ್ನು ತಿಳಿಯಲು ಉಪಯುಕ್ತವಾಗಿದೆ. ಈ ಮಾಹಿತಿಯನ್ನು ಶಾಸನಗಳು ಪುಷ್ಟೀಕರಿಸುತ್ತವೆ. ಬಸವರಾಜನ ಶಿವತತ್ವ ರತ್ನಾಕರವೂ ಸಮಾಜದ ಹಾಗೂ ಆರ್ಥಿಕ ವಿಚಾರಗಳ ಮಾಹಿತಿ ನೀಡುತ್ತದೆ.

**ದೇಶೀಯ ದಾಖಲೆಗಳು:** ವಿಜಯನಗರ ಕಾಲದ ಕೊನೆಯ ಕಾಲಘಟ್ಟದಲ್ಲಿ ಅಂದರೆ ಕ್ರಿ.ಶ.16ನೇ ಶತಮಾನದ ಮಧ್ಯಭಾಗ ಮತ್ತು ಆ ನಂತರದ ದಿನಗಳಲ್ಲಿ ತಾಳೆಪತ್ರಗಳು ಕಾಣಿಸಿಕೊಂಡವು. ಕ್ರಿ.ಶ.17ನೇ ಶತಮಾನದ ಉತ್ತರಾರ್ಧದ ನಂತರ, ಶಾಸನಗಳು ತಮ್ಮ ಪ್ರಾಮುಖ್ಯತೆಯನ್ನು ಕಳೆದುಕೊಂಡು ಇತರ ಆಧಾರಗಳಾದ ದೇಶೀಯ ದಾಖಲೆಗಳು, ಸಾಹಿತ್ಯದ ಕೃತಿಗಳು, ವಿದೇಶೀ ಆಕರಗಳು ಪೂರಕ ಮಾಹಿತಿಗಳಾಗಿ ಸಹಕರಿಸುತ್ತವೆ. ಅಧಿಕೃತ ಮತ್ತು ಅನಧಿಕೃತ ದಾಖಲೆಗಳು ಉದಾಹರಣೆಗೆ ಖಾಸಗಿ ದಾಖಲೆಗಳು, ದಿನಚರಿ, ಅಧಿಕೃತ ಪತ್ರ ವ್ಯವಹಾರಗಳು ಈ ಕಾಲದ ಅಧ್ಯಯನಕ್ಕೆ ಸಹಕಾರಿಯಾಗಿವೆ. ಕಾಗದದ ದಾಖಲೆಗಳು, ಕಡತಗಳು, ರಾಜರುಗಳ ಮತ್ತು ಯುರೋಪಿಯನ್ ವ್ಯಾಪಾರಿಗಳ ಹಾಗೂ ಧರ್ಮಪ್ರಚಾರಕರ ಪತ್ರ ವ್ಯವಹಾರಗಳೂ ಈ ನಿಟ್ಟಿನಲ್ಲಿ ಸಹಾಯಕವಾಗಿವೆ. ಈ ಅಧ್ಯಯನ ಕಾಲಕ್ಕೆ ಸಂಬಂಧಿಸಿದಂತೆ ಶೃಂಗೇರಿ, ಮಂಜೇಶ್ವರ, ಕಲ್ಯಾಣಪುರ, ಹಲಸನಾಡು, ಮೊಗರ್ನಾಡು ಮತ್ತು ಕೋಟೇಶ್ವರ ಮುಂತಾದ ದೇವಾಲಯಕ್ಕೆ ಸಂಬಂಧಿಸಿದ ಕಡತಗಳಿವೆ. ಕೆ.ಜಿ. ವಸಂತ ಮಾಧವರು ಹಲಸನಾಡು, ಕಲ್ಯಾಣಪುರ ಮತ್ತು ಕೋಟೇಶ್ವರ ದೇವಳಗಳ ಕಡತಗಳನ್ನು ಸಂಶೋಧಿಸಿದ್ದಾರೆ ಮತ್ತು ಅವುಗಳ ಪ್ರಾಮುಖ್ಯತೆಯನ್ನು ವಿವರಿಸಿದ್ದಾರೆ. ಆದರೆ ಈ ಎಲ್ಲಾ ಕಡತಗಳು ಪ್ರತಿಗಳಾಗಿರುವ ಕಾರಣ ಇವುಗಳನ್ನು ಮೂಲ ದಾಖಲೆಗಳಂತೆ ನಂಬುವ ಹಾಗಿಲ್ಲ. ಆದರೂ ಇವುಗಳು ಆ ಕಾಲದ ಧಾರ್ಮಿಕ ಸಂಸ್ಥೆಗಳ ನಿರ್ವಹಣೆ ಮತ್ತು ಕೆನರಾ ಪ್ರದೇಶದ ರಾಜರುಗಳ ಧಾರ್ಮಿಕ ನೀತಿಗಳ ಕುರಿತು ಮಾಹಿತಿ ನೀಡುತ್ತವೆ. ಗಣಪತಿ ರಾವ್ ಐಗಳ್ ಸಂಶೋಧಿಸಿರುವ ಮಂಜೇಶ್ವರ ದೇವಳದ ಕೆಲವು ಕಡತಗಳು ಕೆಳದಿ ಅರಸರಿಗೂ ಇಲ್ಲಿಯ ಅನಂತೇಶ್ವರ ದೇವಳಕ್ಕೂ ಇರುವ ಸಂಬಂಧವನ್ನು ವಿವರಿಸುತ್ತವೆ. ಹಾಗೆಯೇ ಇತರ ಪ್ರಾದೇಶಿಕ ಮುಖ್ಯಸ್ಥರು ಮತ್ತು ಕೆನರಾ ಭಾಗದ ವ್ಯಾಪಾರಿಗಳ ಸಂಬಂಧವನ್ನು ವಿವರಿಸುತ್ತದೆ. ಎ.ಕೆ. ಶಾಸ್ತ್ರಿಯವರು ಸಂಗ್ರಹಿಸಿರುವ ಶೃಂಗೇರಿ ಮಠದ ಕಡತಗಳಲ್ಲಿ ಕೆನರಾದ ದೇವಾಲಯಗಳು ಮತ್ತು ಶೃಂಗೇರಿ ಮಠದ ಸಂಬಂಧವನ್ನು ನಿರೂಪಿಸುತ್ತವೆ. ಹಾಗೆಯೇ ಕಡತಗಳಲ್ಲಿ ಬರೆದ ಜಿನ್ನವತ್ತಳೆ ಮತ್ತು ನಿರೂಪಗಳು ಕರಾವಳಿ ಭಾಗದ ಜನರ ಸಾಮಾಜಿಕ ಜೀವನವನ್ನು ತಿಳಿಯಲೂ ಸಹಕಾರಿಯಾಗಿವೆ. ಅದೇ ರೀತಿ ಕೆಲವು ಕಾಗದದ ದಾಖಲೆಗಳು ಈ ಕಾಲದ ಅಧ್ಯಯನಕ್ಕೆ ಸಹಕಾರಿಯಾಗಿದೆ. ಅವುಗಳು ಕೆಲವು ಖಾಸಗಿ ವ್ಯಕ್ತಿಗಳ ಸ್ವಾಧೀನವಿದ್ದರೆ ಇನ್ನು ಕೆಲವು ರಾಜ್ಯ ಪತ್ರಾಗಾರದಲ್ಲಿವೆ.

**ಸಾಂಪ್ರದಾಯಿಕ ದಾಖಲೆಗಳು:** ಇತರ ಪ್ರಮುಖ ದಾಖಲೆಗಳನ್ನು ಸಮೀಕರಿಸಿ ನೋಡಿದಾಗ ಕೆಲವು ಸಾಂಪ್ರದಾಯಿಕ ದಾಖಲೆಗಳೂ ಕೆಲವು ಮಹತ್ವದ ಮಾಹಿತಿಗಳನ್ನು ನೀಡುತ್ತವೆ. ಬೇರೆ ದಾಖಲೆಗಳು ಇವುಗಳನ್ನು ಪುಷ್ಟೀಕರಿಸದಿದ್ದರೆ ಈ ದಾಖಲೆಗಳು ದಂತ ಕಥೆಗಳಾಗಿಯೇ ಉಳಿದು ಬಿಡುತ್ತವೆ. ಇವುಗಳಲ್ಲಿ

ದೇವಾಲಯಗಳ ಸ್ಥಳ ಪುರಾಣಗಳು, ಪಾಡ್ದನಗಳು ಪ್ರಮುಖವಾಗುತ್ತವೆ. ಕೆಲವು ಸ್ಥಳಪುರಾಣಗಳನ್ನು ಮೆಕೆಂಜಿ ಸಂಗ್ರಹದಲ್ಲಿ ನೋಡಬಹುದಾದರೆ ಇನ್ನು ಕೆಲವು ಆಯಾ ದೇವಾಲಯಗಳ ಕುರಿತ ಮಾಹಿತಿ ಪುಸ್ತಕಗಳು ಅಥವಾ ಸ್ಮರಣ ಸಂಚಿಕೆಗಳಲ್ಲಿವೆ. ಸ್ಥಳ ಪುರಾಣಗಳು ಹೆಚ್ಚಾಗಿ ಸ್ಥಳದ ವೈಭವೀಕರಣಕ್ಕೆ ಮೀಸಲಾಗಿವೆ. ಆದರೂ ಕೆಲವೊಂದು ಸಂದರ್ಭದಲ್ಲಿ ಕೆಲವು ವಿಶಿಷ್ಟ ಆಚರಣೆಗಳ ಕುರಿತು ಅವು ಮಾಹಿತಿ ನೀಡುತ್ತವೆ. ತುಳು ಪಾಡ್ದನಗಳು ಈ ಕಾಲಘಟ್ಟದ ಭೂತಾರಾಧನೆಯ ವಿವಿಧ ಮಜಲುಗಳನ್ನು ತಿಳಿಯಲು ಸಹಾಯ ಮಾಡುತ್ತವೆ. ಈ ಹಿನ್ನೆಲೆಯಲ್ಲಿ ದೈವ ಪಾತ್ರಿಗಳನ್ನು ಭೇಟಿ ಮಾಡಿ ಅವರಿಂದ ಪಾಡ್ದನದ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಸಾಲೆತ್ತೂರ್ ಬಿ.ಎ, ವಾದಿರಾಜ ಭಟ್, ವಿವೇಕ ರೈ ಚಿನ್ನಪ್ಪ ಗೌಡ, ಅಮೃತ ಸೋಮೇಶ್ವರ ಮೊದಲಾದವರು ಸಂಗ್ರಹಿಸಿದ ಪಾಡ್ದನಗಳು ಮತ್ತು ಅವುಗಳ ಮಾಹಿತಿಗಳನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಇವುಗಳಲ್ಲಿ ತುಳುನಾಡಿನ ಜನಜೀವನದ ಅನೇಕ ವಿಚಾರಗಳಿವೆ. ಆದರೆ ಇವುಗಳಲ್ಲಿರುವ ಎಲ್ಲಾ ಮಾಹಿತಿಗಳು ಚಾರಿತ್ರಿಕವಲ್ಲ. ಹಾಗಾಗಿ ಕೇವಲ ಶಾಸನ ಮತ್ತು ಇತರ ದಾಖಲೆಗಳ ಬೆಳಕಿನಲ್ಲಿಯೇ ಅವುಗಳನ್ನು ನೋಡಬೇಕಾದ ಅನಿವಾರ್ಯತೆ ಇದೆ. ಹೆಚ್ಚಿನ ಪಾಡ್ದನಗಳ ರಚನೆಯ ಕಾಲ ಕ್ರಿ.ಶ. 16 ಮತ್ತು 17ನೇ ಶತಮಾನ ಎಂದು ವಿದ್ವಾಂಸರು ಗುರುತಿಸಿರುವುದರಿಂದ ಇವುಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

**ವಿದೇಶೀ ಆಧಾರಗಳು:** ಇವುಗಳನ್ನು 2 ರೀತಿಯಲ್ಲಿ ನೋಡಬಹುದಾಗಿದೆ. 1)ದಾಖಲೆಗಳು (records) 2) ಪ್ರವಾಸಿಗರ ಬರವಣಿಗೆಗಳು (travellers accounts).

**ದಾಖಲೆಗಳು:** ಈ ವಿಭಾಗದಲ್ಲಿ ಪ್ರಕಟಿತ ಮತ್ತು ಅಪ್ರಕಟಿತ ಪೋರ್ಚುಗೀಸ್ ದಾಖಲೆಗಳನ್ನು ಉಲ್ಲೇಖಿಸಬಹುದು. ಈ ದಾಖಲೆಗಳು ಪೋರ್ಚುಗಲ್ ಸರಕಾರ ಮತ್ತು ಭಾರತದಲ್ಲಿರುವ ಅವರ ಅಧಿಕಾರಿಗಳ ನಡುವಿನ ಪತ್ರ ವ್ಯವಹಾರವಾಗಿದೆ. ಅಥವಾ ಚರ್ಚುಗಳ ಬಿಷಪರ ಪ್ರತಿನಿಧಿಗಳು ಗೋವಾ ಅಥವಾ ಇನ್ನಿತರ ಕಡೆ ಇರುವ ಉನ್ನತ ಚರ್ಚಿನ ಅಧಿಕಾರಿಗಳ ನಡುವಿನ ಪತ್ರ ವ್ಯವಹಾರವಾಗಿದೆ. ಪಿ.ಎಸ್.ಎಸ್. ಪಿಸ್ಸುರ್‌ಲೆನ್ಸರ್, ಬಿ.ಎಸ್.ಶಾಸ್ತ್ರಿ, ಎ.ಆರ್.ಡಿಸ್ಸಿ, ಎಂ.ಎಸ್.ಪಿಯರ್ಸನ್, ಡ್ಯಾನವರ್ಸ್, ಕೆ.ಜಿ. ವಸಂತಮಾಧವ ಮೊದಲಾದ ವಿದ್ವಾಂಸರು ಇವುಗಳನ್ನು ಬಳಸಿಕೊಂಡಿರುತ್ತಾರೆ. ಅವರ ಕೃತಿಗಳ ಮೂಲಕ  ಇವುಗಳನ್ನು ಪರಿಶೀಲಿಸಬಹುದಾಗಿದೆ. ಪಿ.ಎಸ್.ಎಸ್. ಪಿಸ್ಸುರ್‌ಲೆನ್ಸರ್ ಅವರ ಅಸೆಂಟೋಸ್ ಸಂಪುಟಗಳು ಮತ್ತಿತರ ಸಂಗ್ರಹವೂ ಅತ್ಯಮೂಲ್ಯ ಆಕರಗಳಾಗಿವೆ. ಈ ಎಲ್ಲಾ ದಾಖಲೆಗಳನ್ನು ಗೋವಾ ಪತ್ರಾಗಾರ ಇಲಾಖೆಯ ಸಹಕಾರದೊಂದಿಗೆ ಪರಿಶೀಲಿಸಿ, ಅದರ ನೈಜತೆಯನ್ನು ಖಾತ್ರಿಪಡಿಸಲಾಗಿದೆ.

ಕ್ರಿ.ಶ.17ನೇ ಶತಮಾನದಲ್ಲಿ ಇಂಗ್ಲೀಷರು, ಮಂಗಳೂರು, ಭಟ್ಕಳ, ಹೊನ್ನಾವರದಲ್ಲಿ ನಡೆಸಿದ ವ್ಯಾಪಾರ ಇತ್ಯಾದಿ ವಿವರಗಳು ಫೋಸ್ಟರ್ ಮತ್ತು ಫೈಸೆಟ್ ಸಂಪಾದಿಸಿದ ಇಂಗ್ಲೀಷ್ ಫ್ಯಾಕ್ಟರೀಸ್ ಇನ್ ಇಂಡಿಯಾ ಸಂಚಿಕೆಯಲ್ಲಿದೆ. ಕ್ರಿ.ಶ.18ನೇ ಶತಮಾನದ ದಕ್ಷಿಣ ಕನ್ನಡದ ರಾಜಕೀಯ ಮತ್ತು ಆರ್ಥಿಕ

ವಿವರಗಳು ಆಂಗ್ಲ ಭಾಷೆಯ ಅಪ್ರಕಟಿತ ದಾಖಲೆಗಳಾದ ಸೆಕ್ರಟರಿಯೇಟ್ ಇನ್ವಾರ್ಡ್ ಲೆಟರ್ ಬುಕ್ಸ್, ಪಬ್ಲಿಕ್ ಡಿಪಾರ್ಟ್‌ಮೆಂಟ್ ಡೈರಿ, ಮದ್ರಾಸ್ ಸೀಕ್ರೆಟ್ ಪ್ರೊಸೀಡಿಂಗ್ಸ್‌ನಲ್ಲಿವೆ. ಇವಲ್ಲದೆ ಹಲವಾರು ವಿದ್ವಾಂಸರು ಪೋರ್ಚುಗೀಸ್, ಡಚ್, ಫ್ರೆಂಚ್, ಇಂಗ್ಲೀಷರ ದಾಖಲೆಗಳನ್ನು ಬಳಸಿಕೊಂಡಿದ್ದು ಅವುಗಳು ಪ್ರಸ್ತುತ ಅಧ್ಯಯನಕ್ಕೆ ಸಹಕಾರಿಯಾಗಿವೆ.

**ಪ್ರವಾಸಿಗರ ಬರವಣಿಗೆ:** ಕೆಳದಿಯರಸರ ಆಳ್ವಿಕೆಯ ಕಾಲದ ತುಳುನಾಡಿನ ಕುರಿತು ಅನೇಕ ವಿದೇಶೀ ಯಾತ್ರಿಕರ ಬರವಣಿಗೆಗಳು ಸಾಕಷ್ಟು ಮಾಹಿತಿಯನ್ನು ನೀಡುತ್ತವೆ. ಈ ಕಾಲದಲ್ಲಿ ಇಲ್ಲಿಗೆ ಆಗಮಿಸಿದ ವಿದೇಶಿ ಯಾತ್ರಿಕರ ಬರಹಗಳು ತುಳುನಾಡಿನ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಇತಿಹಾಸ ತಿಳಿಯಲು ಸಹಕಾರಿಯಾಗಿದೆ. ಈ ಕಾಲದ ಪ್ರಮುಖ ಪ್ರವಾಸಿಗರೆಂದರೆ, ಬಾರ್ಬೋಸ(1510–1516) ಸೀಜರ್ ಫ್ರೆಡರಿಕ್(1565) ಪ್ಯಾರಾಡ(1600) ಲಿನ್‌ಕೊಸ್ಟನ್(1590) ಪಿಯತ್ರೋ ಡೆಲ್ಲಾ ವಲ್ಲೆ(1623) ಪೀಟರ್ ಮಂಡಿ(1636–37) ಲಿಯನಾರ್ಡೊ ಪಾಯಸ್(1758) ಜಾನ್ ಪ್ರೇಯರ್(1674) ಗೇಮಿಲಿ ಕೆರಿ(1669) ಹ್ಯಾಮಿಲ್ಟನ್(1718) ಜೆಕೊಬ ಕ್ಯಾಂಟರ್(1750) ಮುಂತಾದವರು. ಬಾರ್ಬೋಸನ ದಾಖಲೆಗಳನ್ನು ಡೇಮ್ಸ್(1918). ಡೆಲ್ಲಾ ವಲ್ಲೆಯ ದಾಖಲೆಗಳನ್ನು ಎಡ್ವರ್ಡ್ ಗ್ರೇ(1892) ಯವರು ಇಂಗ್ಲೀಷ್‌ಗೆ ಭಾಷಾಂತರಿಸಿ ಪ್ರಕಟಿಸಿದ್ದಾರೆ. ತುಳುನಾಡಿನ ಈ ಕಾಲದ ಇತಿಹಾಸದ ದೃಷ್ಟಿಯಿಂದ ಇಟಲಿಯ ಯಾತ್ರಿಕ ಪಿಯತ್ರೋ ಡೆಲ್ಲಾ ವಲ್ಲೆಯ ಕೊಡುಗೆ ಮಹತ್ವವಾದದ್ದು. ಇವನ ವರದಿಯು ವಿಷಯಗಳನ್ನು ಕಾಲಕ್ರಮದಲ್ಲಿ ತಿಳಿಸಿದೆ. ತುಳುನಾಡಿನ ಇತಿಹಾಸ ತಿಳಿಯುವ ಆಸಕ್ತರಿಗೆ ಈ ವರದಿಯು ವಿಪುಲ ಆಕರಗಳನ್ನು ಕೊಡುತ್ತದೆ. ಈ ಎಲ್ಲಾ ವಿದೇಶೀಯರ ಮಾಹಿತಿಗಳನ್ನು ಬೇರೆ ಬೇರೆ ಸಂಪುಟಗಳಲ್ಲಿ ಹೆಚ್.ಎಲ್.ನಾಗೇಗೌಡ, ಪ್ರವಾಸಿ ಕಂಡ ಇಂಡಿಯಾ ಕೃತಿಗಳಲ್ಲಿ ನೀಡಿದ್ದಾರೆ. ಬ್ರಿಟೀಷ್ ಪ್ರವಾಸಿಗರಾದ ಪೀಟರ್ ಮಂಡಿ ಮತ್ತು ಹ್ಯಾಮಿಲ್ಟನ್ ಅವರ ದಾಖಲೆಗಳನ್ನು ಕ್ರಿ.ಶ.1919ರಲ್ಲಿ ಮತ್ತು 1930ರಲ್ಲಿ ಹಾಕ್ಲುಟ್ ಸೊಸೈಟಿಯವರು ಪ್ರಕಟಿಸಿದ್ದಾರೆ. ಜಾನ್ ಪ್ರೇಯರ್‌ರವರ ಬರಹಗಳು, ಡಾ. ಜಾನ್ ಫ್ರೇಯರ್ ಎಕೌಂಟ್ ಆಫ್ ಇಂಡಿಯಾ ಹೆಸರಿನಲ್ಲಿ ಪ್ರಕಟವಾಗಿವೆ. ಫ್ರಾನ್ಸಿಸ್ ಬುಕಾನನ್ ಕೆಳದಿ ರಾಜ್ಯದ ಅವನತಿಯಾದ ಸುಮಾರು 40 ವರ್ಷಗಳ ನಂತರ ತುಳುನಾಡಿಗೆ ಭೇಟಿ ನೀಡಿದ್ದಾದರೂ, ಅವನ ಮಾಹಿತಿಗಳು ಅಮೂಲ್ಯವಾಗಿದ್ದು ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಹೀಗೆ ವೈವಿಧ್ಯಮಯ ಆಕರಗಳು ಈ ಕಾಲದ ಇತಿಹಾಸ ರಚನೆಯಲ್ಲಿ ಸಹಕಾರಿಯಾಗಿವೆ.

ಭಾರತ ಇತಿಹಾಸ ರಚನಾಶಾಸ್ತ್ರವನ್ನು ಅವಲೋಕಿಸಿದಾಗ ಹಲವು ರೀತಿಯ ಸೈದ್ಧಾಂತಿಕ ಚರ್ಚೆಗಳು ಮತ್ತು ಹಲವು ಸೈದ್ಧಾಂತಿಕ ವಿಧಾನಗಳಲ್ಲಿ ಇತಿಹಾಸ ರಚನಾ ಕಾರ್ಯ ನಡೆದದ್ದನ್ನು ಗಮನಿಸಬಹುದು. ರಾಷ್ಟ್ರೀಯವಾದಿ ಇತಿಹಾಸ ರಚನಾ ವಿಧಾನಕ್ಕೆ ದೇಶೀಯ ಮಟ್ಟದಲ್ಲಿ ಸಿಕ್ಕಿದ ಬೆಂಬಲ ರಾಜ್ಯ ಅಥವಾ ಪ್ರಾದೇಶಿಕ ಅಥವಾ ಸ್ಥಳೀಯ ಇತಿಹಾಸ ರಚನಾ ವಲಯದಲ್ಲಿ ಸಿಗಲು ಸಾಧ್ಯವಿಲ್ಲ ಎಂಬ ಅಭಿಪ್ರಾಯಗಳಿವೆ. ಏಕೆಂದರೆ ದೇಶೀಯ ಮಟ್ಟದಲ್ಲಿ ದೇಶವನ್ನು ಸ್ವತಂತ್ರಗೊಳಿಸುವ ಪ್ರಕ್ರಿಯೆಯ ಸುತ್ತಲಿನ ಸಮಸ್ಯೆಗಳು

ರಾಷ್ಟ್ರೀಯವಾದಿ ಚಿಂತನೆ ಬೆಳೆಯಲು ಕಾರಣವಾಯಿತು. ಆದರೆ ಪ್ರಾದೇಶಿಕ ಇತಿಹಾಸದಲ್ಲಿ ಆ ರೀತಿಯ ಸಮಸ್ಯೆಗಳನ್ನು ಅಥವಾ ಅಂತಹ ಅಪಾಯಗಳನ್ನು ಗುರುತಿಸಲು ಸಾಧ್ಯವಿಲ್ಲ. ಆ ಕಾರಣಕ್ಕೆ ತುಳುನಾಡಿನ ಇತಿಹಾಸ ರಚನಾ ಪರಂಪರೆಯಲ್ಲಿ ರಾಷ್ಟ್ರೀಯವಾದಿ ಇತಿಹಾಸ ರಚನಾ ಕಾರ್ಯಕ್ಕೆ ಅವಕಾಶವಿಲ್ಲ. ಹಾಗಾಗಿ ಪ್ರಾರಂಭದಿಂದ ಇಲ್ಲಿಯವರೆಗೆ ತುಳುನಾಡಿನ ಇತಿಹಾಸ ರಚನೆಯಲ್ಲಿ ಪಾರಂಪರಿಕ ರೀತಿಯ ಇತಿಹಾಸ ರಚನಾ ಕಾರ್ಯವನ್ನು ಗಮನಿಸಬಹುದಲ್ಲದೇ ಯಾವುದೇ ಸೈದ್ಧಾಂತಿಕ ನಿಲುವುಗಳನ್ನು ಸಂಪೂರ್ಣವಾಗಿ ಅಳವಡಿಸಿಕೊಂಡ ಬರವಣಿಗೆಗಳಿಲ್ಲ ಎಂದು ಅಭಿಪ್ರಾಯಪಡಲಾಗಿದೆ.

ಆದರೆ ಕರಾವಳಿ ಕರ್ನಾಟಕ ಅಥವಾ ತುಳುನಾಡಿನ ಇತಿಹಾಸ ರಚನಾ ಪರಂಪರೆಯು ನಮ್ಮ ದೇಶದ ಇತಿಹಾಸ ಕಥನಕ್ಕಿಂತ ಭಿನ್ನವಾಗಿ ಏನೂ ಇಲ್ಲ. ಇದು ಎಲ್ಲಾ ಪ್ರದೇಶಗಳಿಗೂ ಅನ್ವಯವಾಗುತ್ತದೆ ಎನ್ನುವ ಅಭಿಪ್ರಾಯವನ್ನು ಬಾರ್ಕೂರು ಉದಯ ಅವರು ವ್ಯಕ್ತಪಡಿಸುತ್ತಾರೆ. ಈ ನಿಟ್ಟಿನಲ್ಲಿ ತುಳುನಾಡಿನಲ್ಲಿ ವಸಾಹತುಶಾಹಿ ಬರಹಗಳೇ ಪ್ರಾರಂಭದ ಪ್ರಯತ್ನವಾಗಿದೆ. ಕ್ರಿ.ಶ.18ನೇ ಶತಮಾನದ ಕೊನೆಯಲ್ಲಿ ಬ್ರಿಟೀಷ್ ಈಸ್ಟ್ ಇಂಡಿಯಾ ಕಂಪೆನಿಯ ಪ್ರವೇಶ, ತುಳುನಾಡಿನ ಇತಿಹಾಸದ ಬರವಣಿಗೆಗೆ ಒಂದು ಹೊಸ ತಿರುವನ್ನು ಹಾಕಿಕೊಡುತ್ತದೆ. ಕಂಪೆನಿಯ ಅಧಿಕಾರಿಗಳು, ಕಲೆಕ್ಟರ್‌ಗಳು, ಇಲ್ಲಿಯ ಸಮಗ್ರ ಮಾಹಿತಿಯನ್ನು ಕಲೆ ಹಾಕಲು ಪ್ರಾರಂಭಿಸಿದರು. ಸ್ಥಳೀಯ ಆಡಳಿತದ ದೃಷ್ಟಿಯಲ್ಲಿ ಅದು ಅವರಿಗೆ ಅನಿವಾರ್ಯವೂ ಆಗಿತ್ತು. ಕ್ರಿ.ಶ.19ನೇ ಶತಮಾನದಲ್ಲಿ ಬಾಸೆಲ್ ಮಿಶನ್ ತುಳುನಾಡಿನ ಸಂಸ್ಕೃತಿಯನ್ನು ಅನಾವರಣಗೊಳಿಸುವಲ್ಲಿ ವಿಶೇಷ ಪಾತ್ರವನ್ನು ವಹಿಸಿತು. ರೆವರೆಂಡ್ ಮ್ಯಾನರ್, ವಾಲ್ ಹೌಸ್, ಎ.ಸಿ. ಬರ್ನೆಲ್ ಇತ್ಯಾದಿ ವಿದ್ವಾಂಸರು ತುಳುನಾಡಿನ ಸಾಂಸ್ಕೃತಿಕ ಸ್ವರೂಪದ ಆಚರಣೆಯಾದ ಭೂತಾರಾಧನೆಯ ಕುರಿತು ಇದ್ದ ತುಳು ಪಾಡ್ದನಗಳನ್ನು ಸಂಗ್ರಹಿಸಿ ಪ್ರಕಟಿಸಿದರು. ಸೌತ್ ಕೆನರಾದಲ್ಲಿ ಕಲೆಕ್ಟರ್ ಆಗಿ ಕಾರ್ಯನಿರ್ವಹಿಸಿದ ಜಾನ್ ಸ್ಟರಕ್ ಮತ್ತು ಸ್ಟುವರ್ಟ್ ರಚಿಸಿರುವ ಮದ್ರಾಸ್ ಡಿಸ್ಟ್ರಿಕ್ಟ್ ಮ್ಯಾನ್ವಲ್ಸ್ ಎಂಬ ಶೀರ್ಷಿಕೆಯ ಗ್ರಂಥ ಎರಡು ಸಂಪುಟದಲ್ಲಿ 1894ರಲ್ಲಿ ಪ್ರಕಟವಾಯಿತು. ಈ ಎರಡೂ ಸಂಪುಟಗಳಲ್ಲಿ ತುಳುನಾಡಿನ ಇತಿಹಾಸ, ಪುರಾತತ್ವ, ಕಂದಾಯ ವ್ಯವಸ್ಥೆ, ಸಮುದಾಯಗಳು, ಭೂ ಒಡೆತನದ ಇತಿಹಾಸ, ಅರಣ್ಯ ಸಂಪತ್ತು ಇತ್ಯಾದಿ ವಿಚಾರಗಳು ಅಂಕಿ ಅಂಶಗಳೊಂದಿಗೆ ದಾಖಲಾಗಿವೆ. ಅವರ ಡಿಸ್ಟ್ರಿಕ್ಟ್ ಮ್ಯಾನುವೆಲ್ ಆಫ್ ಸೌತ್ ಕೆನರಾ ವಾಲ್ಯೂಮ್ 1 ಮತ್ತು 2 ಕೆಳದಿ ಕಾಲದ ತುಳುನಾಡಿನ ಮಾಹಿತಿಯನ್ನು ಒಳಗೊಂಡಿದೆ. ಸರ್ ಥಾಮಸ್ ಮುನ್ರೋ ಸಂಗ್ರಹಿಸಿದ್ದ ಮಾಹಿತಿಗಳ ಆಧಾರದಲ್ಲಿ ಬರೆಯಲ್ಪಟ್ಟ ಈ ಕೃತಿ ವಸಾಹತುಶಾಹಿ ಹಿನ್ನೆಲೆಯಿಂದ ಬಂದಿದೆ.

ಬಿ.ಎಲ್. ರೈಸ್, ಜೆ.ಎಫ್. ಫ್ಲೀಟ್ ಪ್ರಸಿದ್ಧ ಪುರಾತತ್ವ ಶಾಸ್ತ್ರಜ್ಞರಾಗಿದ್ದು, ಪುರಾತತ್ವ ವಿಭಾಗದಲ್ಲಿ ದುಡಿದು ತುಳುನಾಡಿನ ಹಲವು ಶಾಸನಗಳ ಪಠ್ಯಗಳನ್ನು ಪ್ರಕಟಿಸಿದ್ದರು. ಇವರ ಜೊತೆಗೆ ಎಡ್ಗರ್ ಥರ್ಸ್ಟನ್ ಕೂಡ ದಕ್ಷಿಣ ಭಾರತದಲ್ಲಿ ಗುರುತಿಸಲ್ಪಟ್ಟ ಅನೇಕ ಸಮುದಾಯಗಳ ವಿವರಣೆಗಳನ್ನು ತಮ್ಮ

ಕಾಸ್ಟ್ಸ್ ಎಂಡ್ ಟ್ರೈಬ್ಸ್ ಆಫ್ ಸದರ್ನ್ ಇಂಡಿಯಾ ಎಂಬ ಕೃತಿಯಲ್ಲಿ ನೀಡಿದ್ದಾರೆ. ತುಳುನಾಡಿನಲ್ಲಿಯೂ ಇರುವ ಬಹುತೇಕ ಎಲ್ಲಾ ಸಮುದಾಯಗಳ ಕುರಿತು ವಾಸ್ತವಿಕ ಮಾಹಿತಿಯನ್ನು ಸಂಗ್ರಹಿಸಿದ್ದು ಈ ಭಾಗದ ಸಾಮಾಜಿಕ ಇತಿಹಾಸದ ಕುರಿತು ಅಪಾರ ಜ್ಞಾನವನ್ನು ಒದಗಿಸಿದ್ದಾರೆ. ತುಳುನಾಡಿನ ಕೈಫಿಯತ್ತುಗಳ ಶೋಧನೆ, ಅಧ್ಯಯನ ಹಾಗೂ ಐತಿಹಾಸಿಕ ಪ್ರಾಮುಖ್ಯತೆಯ ಬಗೆಗೆ ಮೊಟ್ಟಮೊದಲಿಗೆ ತಿಳಿಯಪಡಿಸಿದವರು ಕರ್ನಲ್ ಮೆಕೆಂಜಿಯವರು.

ದೇಶೀಯ ಜನರಿಗೆ ಐತಿಹಾಸಿಕ ಪ್ರಜ್ಞೆ ಇಲ್ಲ ಎಂಬ ವಿದೇಶಿಯರ ವಾದವನ್ನು ಅಲ್ಲಗಳೆಯುವ ರೀತಿಯಲ್ಲಿ ಇತಿಹಾಸ ಕಥನವನ್ನು ರಚಿಸಿ ನಮಗೂ ಪ್ರಾಚೀನ ಕಾಲದಿಂದಲೂ ಚಾರಿತ್ರಿಕ ಪ್ರಜ್ಞೆ ಇತ್ತೆಂಬುದನ್ನು ದೃಢೀಕರಿಸುವ ಪ್ರಯತ್ನ ತುಳುನಾಡಿನ ಕೆಲವು ವಿದ್ವಾಂಸರು ಮಾಡುತ್ತಾರೆ. ಪೊಳಲಿ ಶೀನಪ್ಪ ಹೆಗ್ಡೆಯವರ ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳ ಪಾಂಡ್ಯರಾಯನ ಅಳಿಯಕಟ್ಟು, ತುಳುನಾಡಿನ ಇತಿಹಾಸಕ್ಕೆ ಸಂಬಂಧಿಸಿ ಸ್ಥಳೀಯ ವಿದ್ವಾಂಸರು ರಚಿಸಿದ ಮೊದಲ ಕೃತಿ. ಅಂತೆಯೇ, ಗಣಪತಿರಾವ್ ಐಗಳ್‌ರವರ ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, ಬಾಬುರವರ ಬಾರಕೂರಿನ ಗತವೈಭವ ಇವುಗಳಲ್ಲಿ ಪ್ರಮುಖವಾದದ್ದು. ಇವುಗಳಲ್ಲಿ ವಿಶೇಷವಾಗಿ ಗಣಪತಿ ರಾವ್ ಐಗಳ್ ಅವರು ತಮ್ಮ ಕೃತಿಯಲ್ಲಿ ಆಯಾ ಸ್ಥಳಗಳಿಗೆ ಭೇಟಿ ನೀಡಿ ಅಂದಿನ ಕಾಲದಲ್ಲಿ ಅಳಿದು ಉಳಿದಿದ್ದ ಪಳೆಯುಳಿಕೆಯನ್ನು ದಾಖಲಿಸಿರುವುದು ಇಂದಿನ ಮಟ್ಟಿಗೆ ಅದೊಂದು ದಾಖಲೆಯೇ ಸರಿ. ಉದಾಹರಣೆಗೆ ಸುಳ್ಯ ತಾಲೂಕಿನ ಪರಿಸರದ ಬಲ್ಲಾಳರ ಕುರಿತಾದ ಮಾಹಿತಿಗಳು, ತೊಕ್ಕೊಟ್ಟು ಎಂಬಲ್ಲಿ ತಾವು ನೋಡಿದ್ದಾಗಿ ಹೇಳುವ ಅಬ್ಬಕ್ಕನ ಅರಮನೆಯ ಕುರುಹುಗಳನ್ನು ನಾವಿಂದು ನೋಡಲು ಸಾಧ್ಯವಿಲ್ಲ. ಅಂದು ಅವರು ಮಾಡಿದ್ದ ಸಂದರ್ಶನಗಳು ಮತ್ತು ಅವುಗಳ ಮೂಲಕ ಅವರು ಪಡೆದ ಮಾಹಿತಿಗಳನ್ನು ಇಂದು ನಾವು ಪಡೆಯಲು ಸಾಧ್ಯವಿಲ್ಲ. ಅಲ್ಲದೇ ಸ್ಥಳೀಯ ಅರಸು ಮನೆಗಳ ಕುರಿತಾದ ವಿವರಗಳನ್ನು ಬಹುತೇಕ ಕ್ಷೇತ್ರಕಾರ್ಯಗಳ ಮೂಲಕವೇ ಅವರು ಸಂಗ್ರಹಿಸಿರುವುದು ಗಮನಾರ್ಹ. ಪ್ರಸ್ತುತ ಅಧ್ಯಯನದ ಕಾಲಕ್ಕೆ ಸಂಬಂಧಿಸಿದ ಬಹಳಷ್ಟು ಮಾಹಿತಿಗಳು ಈ ಗ್ರಂಥದಲ್ಲಿದೆ. ಕೆಳದಿಯರಸರ ರಾಜಕೀಯ ಇತಿಹಾಸ, ತುಳುನಾಡಿನ ಅರಸರೊಂದಿಗಿನ ಸಂಬಂಧಗಳು, ಸ್ಥಳೀಯ ಬೀಡು ಬಲ್ಲಾಳರ ಕುರಿತಾದ ಮಾಹಿತಿಗಳು ಪ್ರಸ್ತುತ ಅಧ್ಯಯನಕ್ಕೊಳಪಟ್ಟ ಕಾಲದ್ದಾಗಿದ್ದು ಸಂಶೋಧಕರಿಗೆ ಸಹಕಾರಿಯಾಗಿದೆ. ಐಗಳ್ ಬರೆದ ಸ್ಥಳೀಯ ರಾಜರ ಇತಿಹಾಸದಲ್ಲಿ ಕಾಲವಿಚಾರ ಮೊದಲಾದ ವಿಷಯಗಳಲ್ಲಿ ಸಂದೇಹಗಳಿವೆ. ಅವರು ಪರಿಶೀಲಿಸಿದ ಹಲವು ದಾಖಲೆಗಳು ಇಂದಿಗೆ ಉಪಲಬ್ಧವಿಲ್ಲ ಎನ್ನುವ ಕೆಲವು ಸಣ್ಣ ಪುಟ್ಟ ಸಮಸ್ಯೆಗಳನ್ನು ಬಿಟ್ಟರೆ ಈ ಕೃತಿ ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿದೆ. ಬಾಬು ಅವರು ತಮ್ಮ ಕೃತಿಯ ಪ್ರಸ್ತಾವನೆಯಲ್ಲಿ ಹೇಳುವಂತೆ, ಪಾಠಶಾಲೆಗಳಲ್ಲಿ ಓದುವ ಬಾಲ ಬಾಲಕಿಯರು ದೇಶದ ಮತ್ತು ಇತರ ದೇಶಗಳ ಚರಿತ್ರೆಗಳನ್ನು ಕಲಿಯುವ ಮೊದಲು ಅವರು ಹುಟ್ಟಿ ಬೆಳೆದ ಜಿಲ್ಲೆಗಳ ಚರಿತ್ರೆಗಳನ್ನು ತಿಳಿದುಕೊಳ್ಳುವ ಅಗತ್ಯವಿದೆ ಎಂಬ ಮಾತು ಪ್ರಾದೇಶಿಕ ಅಥವಾ

ಸ್ಥಳೀಯ ಚರಿತ್ರೆಯ ಮುನ್ನುಡಿಯಂತೆ ಭಾಸವಾಗುತ್ತದೆ. ಇವುಗಳು ತುಳುನಾಡಿನ ಚರಿತ್ರೆಯ ಪರಿಪೂರ್ಣ ಕೃತಿಗಳಲ್ಲದಿದ್ದರೂ ಸುಮಾರು ನೂರು ವರ್ಷಗಳ ಹಿಂದಿನ ತುಳುನಾಡಿನ ಸಾಕ್ಷ್ಯಚಿತ್ರಗಳಾಗಿ ಈ ಕೃತಿಗಳು ಅಧ್ಯಯನ ನಿರತರಿಗೆ ಸಹಕಾರಿಯಾಗಿದೆ.

ಬಿ.ಎ. ಸಾಲೆತ್ತೂರು ಅವರ 'ಏನ್ಸಿಯಂಟ್ ಕರ್ನಾಟಕ ಹಿಸ್ಟರಿ ಆಫ್ ತುಳುವ'ದ ಆರು ಅಧ್ಯಾಯಗಳಲ್ಲಿ ಐತಿಹ್ಯಗಳ ಹಿನ್ನೆಲೆಯಲ್ಲಿ ಧಾರ್ಮಿಕ ಇತಿಹಾಸ ಮತ್ತು ಪಾಡ್ದನಗಳು ಬಿಂಬಿಸುವ ತುಳು ಜನಜೀವನದ ವಿಚಾರಗಳನ್ನು ನೀಡಲಾಗಿದೆ. ತುಳುವರ ಕೃಷಿ, ವ್ಯಾಪಾರ, ಉಡುಗೆ ತೊಡುಗೆಗಳು, ಯುದ್ಧ, ಮನರಂಜನೆ, ಶಿಕ್ಷಣ ಇತ್ಯಾದಿ ಎಲ್ಲಾ ವಿಚಾರಗಳು ಈ ಅಧ್ಯಯನದಲ್ಲಿದೆ. ಬಿ.ಎ.ಸಾಲೆತ್ತೂರ್‌ರವರು, ಅವರ ಗ್ರಂಥ ರಚನೆಯಾಗುವವರೆಗಿನ ಹೆಚ್ಚಿನ ಎಲ್ಲಾ ದಾಖಲೆಗಳನ್ನು ಬಳಸಿಕೊಂಡಿದ್ದರು. ತುಳು ಪಾಡ್ದನಗಳನ್ನು, ಪ್ರಕಟವಾಗಿರುವ ಎಲ್ಲಾ ಶಾಸನಗಳನ್ನು ಅಧ್ಯಯನ ಮಾಡಿ ಈ ಕೃತಿ ರಚನೆಯಾಗಿದೆ. ಪಾಡ್ದನಗಳನ್ನು ಅಧ್ಯಯನ ಮಾಡಿ ತುಳುನಾಡಿನ ಧಾರ್ಮಿಕ ಪರಂಪರೆಯನ್ನು ವಿಶ್ಲೇಷಿಸುವ ಮೂಲಕ ತುಳುನಾಡಿನ ಶ್ರೀಮಂತ ಸಂಸ್ಕೃತಿ ಕಥನಕ್ಕೆ ಹೊಸ ಮುನ್ನುಡಿ ಬರೆದಿದ್ದಾರೆ. ಆದರೆ ಹೆಚ್ಚಿನ ಪಾಡ್ದನಗಳ ರಚನೆಯ ಕಾಲವನ್ನು ಕ್ರಿ.ಶ. 15, 16 ಮತ್ತು 17ನೇ ಶತಮಾನದ್ದೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿರುವುದರಿಂದ ಇದು ಕೆಳದಿ ಕಾಲಕ್ಕೆ ಅನ್ವಯಿಸುತ್ತದೆ. ಕ್ರಿ.ಶ.1940ರ ದಶಕದಲ್ಲಿ ತುಳುಸಾಹಿತ್ಯ, ಕಲೆ, ಭಾಷೆ ಮತ್ತು ಸಂಸ್ಕೃತಿಯ ಕುರಿತು ಮತ್ತಷ್ಟು ಅಧ್ಯಯನ ಮಾಡಿದವರಲ್ಲಿ ಮಂಜೇಶ್ವರ ಗೋವಿಂದ ಪೈಯವರು, ಜೊತೆಗೆ ಕಯ್ಯಾಯಾರ ಕಿಞ್ಞಣ್ಣ ರೈ, ಪಿ.ಕೆ. ನಾರಾಯಣರು, ಕಾರ್ಕಳ ಕೇಶವ ಕೃಷ್ಣ ಕುಡ್ವರು ಪ್ರಮುಖರು.

ಸ್ವಾತಂತ್ರ್ಯಾ ನಂತರ ಇತಿಹಾಸ ರಚನಾ ಕ್ರಮದಲ್ಲಿ ಬಹಳಷ್ಟು ಬದಲಾವಣೆ ಕಂಡುಬಂತು. ಈ ಕಾಲದ ಇತಿಹಾಸಕಾರರು ತುಳುನಾಡು, ನುಡಿ, ಸಂಸ್ಕೃತಿ, ಭಾಷೆ, ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಇತಿಹಾಸ ಇತ್ಯಾದಿ ವಿಚಾರಗಳನ್ನು ಉದ್ದೇಶಿಸಿ ವಿಶೇಷ ಅಧ್ಯಯನಗಳನ್ನು ನಡೆಸಿ ತುಳುನಾಡಿನ ಇತಿಹಾಸ ಪರಂಪರೆಗೆ ಹೊಸ ದಾರಿಯನ್ನು ತೋರಿದ್ದಾರೆ. ಕ್ರಿ.ಶ. 1950ರ ದಶಕದ ನಂತರ ಇತಿಹಾಸಕಾರರಾದ ಕೆ.ವಿ. ರಮೇಶ್, ಪಿ. ಗುರುರಾಜ ಭಟ್ಟ, ಕೆ.ಜಿ. ವಸಂತಮಾಧವ ಮತ್ತು ಬಿ. ವಸಂತ ಶೆಟ್ಟಿ ಅವರ ಕೃತಿಗಳು ತುಳುನಾಡಿನ ಇತಿಹಾಸಕ್ಕೆ ಹೊಸಬೆಳಕು ನೀಡಿದವು. ಕೆ.ವಿ. ರಮೇಶ್ ಅವರ ಎ ಹಿಸ್ಟರಿ ಆಫ್ ಸೌತ್ ಕೆನರಾ, ತುಳುನಾಡಿಗೆ ಸಂಬಂಧಿಸಿದ ಮೊದಲ ಪಿಎಚ್.ಡಿ ಪ್ರಬಂಧವಾಗಿದೆ ಹಾಗೂ ಕನ್ನಡದಲ್ಲಿ ಪ್ರಕಟವಾದ, ತುಳುನಾಡಿನ ಶಾಸನಗಳನ್ನು ಆಧರಿಸಿದ ತುಳುನಾಡಿನ ಇತಿಹಾಸದ ಅಧಿಕೃತ ಗ್ರಂಥವಾಗಿದೆ. ಆದರೆ ಈ ಕೃತಿಗಳು ವಿಜಯನಗರದ ಕಾಲದವರೆಗಿನ ತುಳುನಾಡಿನ ಇತಿಹಾಸಕ್ಕೆ ಮೀಸಲಾಗಿವೆ. ಇದೇ ಲೇಖಕರ ತುಳುನಾಡಿನ ಇತಿಹಾಸ ಮತ್ತು ಎಂ.ಜೆ. ಶರ್ಮ ಇವರೊಂದಿಗೆ ರಚಿಸಿದ, ತುಳುನಾಡಿನ ಅರಸು ಮನೆತನಗಳು ಕೃತಿಗಳು ಕೂಡ ವಿಜಯನಗರದ ಅರಸರ ಕಾಲದವರೆಗಿನ ಇತಿಹಾಸಕ್ಕೆ ಮೀಸಲಾಗಿದೆ. ಪಿ. ಗುರುರಾಜ ಭಟ್ಟರ ಸ್ಟಡೀಸ್ ಇನ್ ತುಳುವ ಹಿಸ್ಟರಿ ಎಂಡ್ ಕಲ್ಚರ್, ಪ್ರಾಚೀನ ತುಳುನಾಡಿನ

ಭೌಗೋಳಿಕ ವಿಸ್ತಾರ, ವಿಜಯನಗರದ ಅರಸರ ಆಳ್ವಿಕೆಯ ಕಾಲದವರೆಗಿನ ತುಳುನಾಡಿನ ರಾಜಕೀಯ ಇತಿಹಾಸ, ಆಡಳಿತ, ಧರ್ಮ, ಸಮಾಜ, ಆರ್ಥಿಕ ಜೀವನ, ವಾಸ್ತುಶಿಲ್ಪ ಇತ್ಯಾದಿ ವಿವರಗಳನ್ನು ಒಳಗೊಂಡಿದೆ. ಕೆಳದಿ ರಾಜರ ತುಳುನಾಡಿನ ರಾಜಕೀಯ ನಂಟಿನ ಕುರಿತಾಗಿ ಈ ಕೃತಿಯಲ್ಲಿ ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

ಈ ಮೇಲೆ ಹೆಸರಿಸಿದ ಎಲ್ಲಾ ಗ್ರಂಥಗಳೂ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಕೆಲವೊಂದು ಪೂರಕ ಮಾಹಿತಿಯನ್ನು ನೀಡುತ್ತವೆಯೇ ಹೊರತು ಅವುಗಳು ಕೆಳದಿ ಆಳ್ವಿಕೆಯ ತುಳುನಾಡಿನ ಕುರಿತಾದ ಹೆಚ್ಚಿನ ಮಾಹಿತಿಯನ್ನೇನೂ ನೀಡುವುದಿಲ್ಲ. ಕೆಳದಿ ಆಳ್ವಿಕೆಯ ತುಳುನಾಡಿನ ಕುರಿತಾಗಿ ಇತಿಹಾಸದ ಶಾಸ್ತ್ರಗನುಗುಣವಾಗಿ ಅಧ್ಯಯನ ಮಾಡಿದವರು ಕೆ.ಜಿ. ವಸಂತಮಾಧವ ಅವರು. ಅವರ ಪೊಲಿಟಿಕಲ್ ಹಿಸ್ಟರಿ ಆಫ್ ಕೆನರಾ 1565–1763, ಒಂದು ಪ್ರೌಢ ಸಂಪ್ರಬಂಧವಾಗಿದ್ದು ನಿರ್ದಿಷ್ಟವಾಗಿ ಆ ಕಾಲಘಟ್ಟದ ತುಳುನಾಡಿನ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತದೆ. ತುಳುನಾಡಿನ ಸಮಗ್ರ ರಾಜಕೀಯ ವಿಚಾರಗಳನ್ನು ಚರ್ಚಿಸಿರುವ ಈ ಗ್ರಂಥದಲ್ಲಿ ತುಳುನಾಡಿನ ಪ್ರಸ್ತುತ ಅಧ್ಯಯನ ಕಾಲಘಟ್ಟದ ರಾಜಕೀಯ ಇತಿಹಾಸಕ್ಕೆ ಮಹತ್ವ ನೀಡಲಾಗಿದೆ. ಹಾಗೆಯೇ ಕೆಳದಿಯರಸರ ಮತ್ತು ಸ್ಥಳೀಯ ಸಾಮಂತರಸರ ರಾಜಕೀಯ ಹಿನ್ನೆಲೆಯ ಅಧ್ಯಯನಕ್ಕೆ ಈ ಕೃತಿ ಮೀಸಲಾಗಿದ್ದು ಇದರಲ್ಲಿ ಸಾಮಾಜಿಕ ಆರ್ಥಿಕ ವಿಚಾರಗಳಿಗೆ ಮಹತ್ವವನ್ನು ನೀಡಲಾಗಿಲ್ಲ.

ಕ್ರಿ.ಶ.1500 ರಿಂದ 1763ರ ಅವಧಿಯಲ್ಲಿ ತುಳುನಾಡಿನ ವಿವಿಧ ಧರ್ಮಗಳ ಸ್ಥಿತಿಗತಿಗಳನ್ನು ಕೆ. ಜಿ. ವಸಂತಮಾಧವ ಅವರು ರಿಲೀಜಿಯನ್ಸ್ ಇನ್ ಕೋಸ್ಟಲ್ ಕರ್ನಾಟಕ ಕೃತಿಯಲ್ಲಿ ವಿವರಿಸಿದ್ದಾರೆ. ಶಾಸನಗಳಲ್ಲದೆ ಸಾಹಿತ್ಯ ಕೃತಿಗಳು ಕಡತಗಳು ಹಾಗೂ ಪೋರ್ಚುಗೀಸ್ ಮತ್ತು ಇತರ ದಾಖಲೆಗಳನ್ನು ಬಳಸಿಕೊಂಡು ತುಳುನಾಡಿನ ಆ ಕಾಲದ ಧಾರ್ಮಿಕ ಇತಿಹಾಸವನ್ನು ಇಲ್ಲಿ ನಿರೂಪಿಸಲಾಗಿದೆ. ಪಿಯುಸ್ ಫಿಡೆಲಿಸ್ ಪಿಂಟೋ ಅವರ, ಕರಾವಳಿ ಕರ್ನಾಟಕದ ಕ್ರೈಸ್ತರ ಇತಿಹಾಸ, ತುಳುನಾಡಿನಲ್ಲಿ ಕ್ರೈಸ್ತ ಧರ್ಮದ ಇತಿಹಾಸ ಮತ್ತು ಬೆಳವಣಿಗೆಯನ್ನು ನಿರೂಪಿಸುವ ಕೃತಿಯಾಗಿದೆ. ಈ ಕೃತಿ ಪೋರ್ಚುಗೀಸರ ಮತ್ತು ಕೆಳದಿಯರಸರ ಪ್ರಭಾವದ ಹಿನ್ನೆಲೆಯಲ್ಲಿ ಕ್ರೈಸ್ತರ ಇತಿಹಾಸವನ್ನು ನಿರೂಪಿಸುತ್ತದೆ. ವಹಾಬ್ ದೊಡ್ಡಮನೆ ಅವರ ಮುಸ್ಲಿಂಸ್ ಇನ್ ದಕ್ಷಿಣ ಕನ್ನಡ, ಕೃತಿ ಬ್ರಿಟೀಷರ ಆಳ್ವಿಕೆಯ ಕೊನೆಯವರೆಗಿನ ಅವಧಿಯಲ್ಲಿ ಈ ಪ್ರದೇಶದಲ್ಲಿನ ಮುಸ್ಲಿಂರ ಚಟುವಟಿಕೆಯ ಚಿತ್ರಣ ನೀಡುತ್ತದೆ. ಈ ಎಲ್ಲ ಕೃತಿಗಳಲ್ಲಿ ಕೆಳದಿ ಕಾಲದ ಧರ್ಮಗಳ ಮಾಹಿತಿಗಳಿವೆ. ಪಿ.ಎನ್. ನರಸಿಂಹಮೂರ್ತಿಯವರ, ಜೈನಿಸಮ್ ಆನ್ ದ ಕೆನರಾ ಕೋಸ್ಟ್, ಎಸ್.ಡಿ. ಶೆಟ್ಟಿಯವರ, ತುಳುನಾಡಿನ ಜೈನ ಧರ್ಮ ಒಂದು ಸಾಂಸ್ಕೃತಿಕ ಅಧ್ಯಯನ ಕೃತಿಗಳು, ತುಳುನಾಡಿನ ಜೈನ ಧರ್ಮದ ಇತಿಹಾಸ, ಸಂಸ್ಕೃತಿಯನ್ನು ಅಧ್ಯಯನ ಮಾಡಿದ ಕೃತಿಯಾಗಿವೆ. ಈ ಕೃತಿಯಲ್ಲಿ ಕೆಳದಿಯರಸರ ಕಾಲದಲ್ಲಿ ಜೈನಧರ್ಮದ ಸ್ಥಿತಿಗಳನ್ನು ವಿಮರ್ಶಾತ್ಮಕ ದೃಷ್ಟಿಯಲ್ಲಿ ವಿಶ್ಲೇಷಿಸಲಾಗಿದೆ. ಎನ್. ಚಿನ್ನಸ್ವಾಮಿ ಸೋಸಲೆಯವರ ಸಂಪಾದನೆಯ ಕರಾವಳಿ ಕರ್ನಾಟಕದ ಜೈನ ಅರಸು ಮನೆತನಗಳು

ಸಾಂಸ್ಕೃತಿಕ ಅಧ್ಯಯನ ಕೃತಿಯಲ್ಲಿ ತುಳುನಾಡಿನ ಪ್ರಮುಖ ವಿದ್ವಾಂಸರ ಸಂಶೋಧನ ಲೇಖನಗಳಿದ್ದು ಅವು ತುಳುನಾಡಿನ ಇತಿಹಾಸ ರಚನೆಯಲ್ಲಿ ಇತ್ತೀಚಿನವರೆಗೆ ಆಗಿರುವ ಸಂಶೋಧನ ಕಾರ್ಯಗಳು, ಪ್ರಸ್ತುತ ಅಧ್ಯಯನಕ್ಕೆ ಪೂರಕವಾದ ತುಳುನಾಡಿನ ಅರಸುಮನೆತನಗಳು, ತುಳುನಾಡಿನ ಸಾಂಸ್ಕೃತಿಕ ಹಿನ್ನೆಲೆಗಳನ್ನು ಒಳಗೊಂಡ ಸಮಗ್ರ ಗ್ರಂಥವಾಗಿದೆ. ಈ ಕೃತಿಯಲ್ಲಿ ವಿವಿಧ ಲೇಖಕರು ಕೆಳದಿ ಕಾಲದ ತುಳುನಾಡಿನ ಬೇರೆ ಬೇರೆ ಹಿನ್ನೆಲೆಗಳನ್ನು ಚರ್ಚಿಸಿದ್ದಾರೆ.

ತುಳುನಾಡಿನ ಸಾಮಾಜಿಕ-ಆರ್ಥಿಕ ಇತಿಹಾಸದ ಕುರಿತಂತೆ ನಿರ್ದಿಷ್ಟವಾಗಿ ರಚಿತವಾದ ಕೃತಿಗಳು ಸಂಖ್ಯೆಯ ದೃಷ್ಟಿಯಲ್ಲಿ ಕಡಿಮೆ. ಎಚ್.ವಿ. ಕರುಣಾಕರ್ ಅವರ ಸೋಷಿಯೋ ಎಕನಾಮಿಕ್ ಕಂಡೀಷನ್ಸ್ ಇನ್ ಸೌತ್‌ಕೆನರಾ 1860-1956. ಬಿ. ಜಗದೀಶ್ ಶೆಟ್ಟಿಯವರ ದ ಆಗ್ರೋ ಎಕನಾಮಿಕ್ ರಿಲೇಷನ್ಸ್ ಏಂಡ್ ಸೋಷಿಯಲ್ ಸ್ಟ್ರಕ್ಚರ್ ಇನ್ ದಕ್ಷಿಣ ಕನ್ನಡ, 100-1600, ಕೆ.ಜಿ. ವಸಂತಮಾಧವ ಅವರ ವೆಸ್ಟರ್ನ್ ಕರ್ನಾಟಕ ಇಟ್ಸ್ ಅಗ್ರೇರಿಯನ್ ರಿಲೇಷನ್ಸ್, ಈ ದೃಷ್ಟಿಯಲ್ಲಿ ಪ್ರಮುಖವಾದುದು. ಇವುಗಳಲ್ಲಿ ಕೆ.ಜಿ.ವಸಂತ ಮಾಧವರ ಕೃತಿ ಮಾತ್ರ ಪ್ರಕಟಗೊಂಡಿದ್ದು ಉಳಿದ ಕೃತಿಗಳು ಪಿಎಚ್.ಡಿ ಗ್ರಂಥಗಳಾಗಿದ್ದು ಪ್ರಸ್ತುತ ಅಧ್ಯಯನದ ಕಾಲಘಟ್ಟಕ್ಕಿಂತ ಹೊರತಾಗಿದೆ. ಕೆ.ಜಿ. ವಸಂತ ಮಾಧವರ ಕೃತಿಯು ನೆರೆಯ ಜಿಲ್ಲೆಗಳಾದ ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ಉತ್ತರ ಕನ್ನಡದ ಮತ್ತು ದಕ್ಷಿಣ ಕನ್ನಡ ಜಿಲ್ಲೆಯನ್ನು ಕೇಂದ್ರೀಕರಿಸಿ ಕ್ರಿ.ಶ. 1500-1800ರ ವರೆಗಿನ ಅವಧಿಯ ಕೃಷಿ ಕೇಂದ್ರಿತ ಅರ್ಥವ್ಯವಸ್ಥೆಯ ಚಿತ್ರಣವನ್ನು ನೀಡುವ ಪ್ರಯತ್ನ ಮಾಡಿದೆ. ಕೃಷಿ ಭೂಮಿಯ ವಿಂಗಡಣೆ, ಭೂ ಒಡೆತನ, ಕೃಷಿ ವಿಧಾನಗಳು, ಉತ್ಪನ್ನಗಳು, ರೈತ ಸಮುದಾಯ, ನಾಣ್ಯ ಪರಂಪರೆ, ಭೂವ್ಯವಹಾರ, ಭೂ ಕಂದಾಯ ಮುಂತಾದ ವಿಚಾರಗಳನ್ನು ಇಲ್ಲಿ ಅಧ್ಯಯನಕ್ಕೊಳಪಡಿಸಲಾಗಿದೆ. ಶ್ರೀಧರ್ ನಾಯ್ಕ ಅವರ, ದ ಸೊಸೈಟಿ ಏಂಡ್ ಪೊಲಿಟಿಕ್ಸ್ ಇನ್ ಸೌತ್ ಕೆನರಾ, ಈ ಕಾಲಘಟ್ಟದ ಆಡಳಿತ, ಕೃಷಿ, ಯುರೋಪಿಯನ್ನರ ಅಧಿಕಾರಕ್ಕಾಗಿ ನಡೆದ ರಾಜಕೀಯ ಮತ್ತು ಸಮಾಜದ ಕುರಿತಾದ ಅಧ್ಯಯನವಾಗಿದೆ. ನಾಗೇಂದ್ರ ಎ ರಾವ್ ಅವರ ಕ್ರಾಫ್ಟ್ ಪ್ರೊಡಕ್ಷನ್ ಎಂಡ್ ಟ್ರೇಡ್ ಇನ್ ಸೌತ್ ಕೆನರಾ-1000-1763 ಈ ಕಾಲಘಟ್ಟದ ವ್ಯಾಪಾರ ಹಾಗೂ ಕರಕುಶಲ ಉದ್ಯೋಗಗಳ ಚಾರಿತ್ರಿಕ ಮಾಹಿತಿ ಒದಗಿಸುತ್ತದೆ. ಕೆ.ಜಿ.ವಸಂತ ಮಾಧವರ ಕರಾವಳಿ ಕರ್ನಾಟಕದ ರಾಜಕೀಯ ಇತಿಹಾಸ ಮತ್ತು ಸಂಶೋಧನೆ, ವಿಜಯ್ ಪೂಣಚ್ಚ ತಂಬಂಡ ಬರೆದಿರುವ ಪಳಮೆ-ಮೌಖಿಕ ಆಕರಗಳು ಕಟ್ಟಿಕೊಡುವ ಕನ್ನಡ-ಕೊಡಗು-ತುಳುನಾಡಿನ ಅಧ್ಯಯನ, ಕಲಬುರ್ಗಿ ಎಂ.ಎಂ. ಮತ್ತು ಇತರರ ಕೆಳದಿ ಸಂಸ್ಥಾನ ಸಮಗ್ರ ಅಧ್ಯಯನ, ಜಿ.ಎಸ್. ದೀಕ್ಷಿತ್ ಸಂಪಾದಿಸಿದ ಕೆಳದಿ ಐತಿಹಾಸಿಕ ನಿಬಂಧಗಳು ಮತ್ತು ಕೆಳದಿ ನಾಯಕರು ಕೃತಿಗಳು ಈ ಅಧ್ಯಯನಕ್ಕೆ ಸಹಕಾರಿಯಾಗಿವೆ. ಪೂವಪ್ಪ ಕಣಿಯೂರು ಅವರ ಮೌಖಿಕ ಸಂಕಥನ, ಸುಳ್ಯ ಪ್ರದೇಶದ ಗೌಡರ ಐತಿಹಾಸಿಕ ಅಧ್ಯಯನಕ್ಕೆ ಸಹಕಾರಿಯಾಗಿದೆ. ಈ ಕೃತಿಗಳಲ್ಲದೆ ದಕ್ಷಿಣ ಭಾರತ ಅಥವಾ ಕರ್ನಾಟಕದ ಸಾಮಾಜಿಕ ಆರ್ಥಿಕ

ಇತಿಹಾಸಕ್ಕೆ ಸಂಬಂಧಿಸಿದಂತೆ ಕೆಲವು ಆನುಷಂಗಿಕ ಕೃತಿಗಳಿವೆ. ಬಿ.ಎ. ಸಾಲೆತ್ತೂರು ಅವರ ಸೋಶಿಯಲ್ ಏಂಡ್ ಪೊಲಿಟಿಕಲ್ ಲೈಫ್ ಇನ್ ದ ವಿಜಯನಗರ ಎಂಪೈರ್, ಎರಡು ಸಂಪುಟಗಳಿದ್ದು ಇದರಲ್ಲಿ ವಿಜಯನಗರದ ಕಾಲದವರೆಗಿನ ಕಂದಾಯ ಆಡಳಿತದ ಮಾಹಿತಿ ಇದೆ. ಅಪ್ಪಾದೊರೈ ಅವರ ಎಕನಾಮಿಕ್ ಕಂಡೀಶನ್ಸ್ ಇನ್ ಸದರನ್ ಇಂಡಿಯಾ ಕೃತಿ, ದಕ್ಷಿಣ ಭಾರತದ ಆರ್ಥಿಕ ವಿಚಾರಗಳ ಅನೇಕ ಮಾಹಿತಿಯನ್ನು ನೀಡಿದರೂ, ತುಳುನಾಡಿಗೆ ಸಂಬಂಧಿಸಿದಂತೆ ನಿರ್ದಿಷ್ಟವಾಗಿ ಇದರಲ್ಲಿ ಅಧ್ಯಯನ ಮಾಡಲಾಗಿಲ್ಲ. ಹಾಗೆಯೇ ನೊಬೊರು ಕರಾಶಿಮರ, ಸೌತ್ ಇಂಡಿಯನ್ ಹಿಸ್ಟರಿ ಏಂಡ್ ಸೊಸೈಟಿ–ಸ್ಟಡೀಸ್ ಫ್ರಮ್ ಇನ್‌ಸ್ಕ್ರಿಪ್ಷನ್ಸ್ 850–1800 ಏಡಿ, ಎಸ್. ಗುರುರಾಜ್ ಆಚಾರ್, ಅವರ ಸಮ್ ಆಸ್ಪೆಕ್ಟ್ಸ್ ಆಫ್ ಎಕನಾಮಿಕ್ ಏಂಡ್ ಸೋಷಿಯಲ್ ಲೈಫ್ ಇನ್ ಕರ್ನಾಟಕ, ತುಳುನಾಡಿಗೆ ಸಂಬಂಧಿಸಿದ ಅಧ್ಯಯನದ ಕೃತಿಗಳಲ್ಲವಾದರೂ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಯ ಅಧ್ಯಯನಗಳು ಎನ್ನುವ ದೃಷ್ಟಿಯಲ್ಲಿ ಈ ಕೃತಿಗಳು ಪ್ರಮುಖವಾಗಿದೆ. ಕೆ.ಎಸ್. ಶಿವಣ್ಣ ತಮ್ಮ ಅಗ್ರೇರಿಯನ್ ಸಿಸ್ಟಮ್ ಆಫ್ ಕರ್ನಾಟಕ ಕ್ರಿ.ಶ.1336–1761 ಕೃತಿಯಲ್ಲಿ, ಮಧ್ಯಕಾಲದ ಕೃಷಿ ಆರ್ಥಿಕತೆ, ಭೂ ಕಂದಾಯ, ಕೃಷಿ ಉತ್ಪನ್ನಗಳ ವ್ಯಾಪಾರ ಇತ್ಯಾದಿ ವಿಚಾರಗಳನ್ನು ಚರ್ಚಿಸಿದ್ದಾರೆ. ಅರುಣ್ ಎಚ್.ಟಿ. ಅವರ, ಕೆಳದಿ ನಾಯಕರ ಕಾಲದ ತೆರಿಗೆ ಪದ್ಧತಿ, ಸಂಶೋಧನ ಗ್ರಂಥ, ಕೆಳದಿ ಸಾಮ್ರಾಜ್ಯದ ತೆರಿಗೆ ವ್ಯವಸ್ಥೆಯ ಅಧ್ಯಯನದ ಕೃತಿಯಾಗಿದೆ. ಆದರೆ ಈ ಕೃತಿ ವಿಶಾಲವಾದ ಕೆಳದಿ ಸಾಮ್ರಾಜ್ಯದ ತೆರಿಗೆ ಮತ್ತು ತೆರಿಗೆ ಸಂಬಂಧದ ಅಧ್ಯಯನವಾಗಿದ್ದು ತುಳುನಾಡನ್ನು ಕೇಂದ್ರೀಕರಿಸಿ ನಡೆಸಿದ ಅಧ್ಯಯನವಲ್ಲ. ಶೈಲಾ ಜೆ. ವರ್ಮ ಅವರ ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಕೃತಿ, ಶಾಸನಗಳ ಆಧಾರದಲ್ಲಿ ವಿಜಯನಗರದ ಕಾಲದವರೆಗಿನ ಈ ಭಾಗದ ಸಾಂಸ್ಕೃತಿಕ ರಾಜಕೀಯ ಇತಿಹಾಸ ರಚನೆಗೆ ಮೀಸಲಾಗಿದೆ. ಬಾರ್ಕೂರು ಉದಯ ಅವರ, ಇತಿಹಾಸದ ಶೋಧ ಗತದ ಹುಡುಕಾಟ ಕೃತಿ, ತುಳುನಾಡಿನ ಇತಿಹಾಸಕ್ಕೆ ಸಂಬಂಧಿಸಿದ ಹಲವು ಲೇಖನಗಳನ್ನೊಳಗೊಂಡಿದೆ.

ಕೆಳದಿ ವೆಂಕಟೇಶ ಜೋಯಿಸರ, ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಕೃತಿಯಲ್ಲಿ, ಶಾಸನಗಳ ಆಧಾರದಲ್ಲಿ ಕೆಳದಿ ಅರಸರ ತುಳುನಾಡಿನ ನಂಟಿನ ಹಲವು ವಿಚಾರ ತಿಳಿದು ಬರುತ್ತದೆ. ಕೆ.ಎನ್. ಚಿಟ್ನೀಸ್ ಅವರ ಕೆಳದಿ ಪೊಲಿಟಿ ಕೃತಿ, ಕೆಳದಿ ಅಡಳಿತ, ಪ್ರಾಂತ್ಯಗಳ ಆಡಳಿತ ನಿಯಂತ್ರಣ ಸ್ವರೂಪ, ತೆರಿಗೆ ಪದ್ಧತಿ ಇವುಗಳನ್ನು ತಿಳಿಸುವ ಮಹತ್ವಪೂರ್ಣ ಗ್ರಂಥವಾಗಿದೆ. ತುಳುನಾಡು ಕನ್ನಡ ನುಡಿ ಕೃತಿಯಲ್ಲಿ, ಕೆ. ಮೋಹನಕೃಷ್ಣ ರೈ ಅವರು ಸಾರ್ವಭೌಮ ಹಾಗೂ ಸಾಮಂತ ಸಂಬಂಧಗಳು, ಭಾಷಿಕ ಯಜಮಾನಿಕೆ, ತುಳು ಐಡೆಂಟಿಟಿ ಮುಂತಾದ ಮಹತ್ವದ ವಿಚಾರಗಳನ್ನು ಖಚಿತವಾದ ಸೈದ್ಧಾಂತಿಕತೆಯೊಂದಿಗೆ ಚರ್ಚಿಸಿದ್ದಾರೆ. ತುಳುನಾಡು ಕರ್ನಾಟಕದೊಂದಿಗೆ ಹಾಗೂ ತುಳು ಕನ್ನಡದೊಂದಿಗೆ ಹೊಂದಿರುವ ಆಡಳಿತಾತ್ಮಕ ಹಾಗೂ ಭಾಷಿಕ ಸಂಬಂಧಗಳನ್ನು ಅರ್ಥೈಸಿಕೊಳ್ಳುವ ಪ್ರಯತ್ನ ಈ ಕೃತಿಯಲ್ಲಿ ಮಾಡಲಾಗಿದೆ. ಕೆಳದಿ ನಾಯಕರ ತುಳುನಾಡಿನ ಸಂಬಂಧಗಳ ಕುರಿತಾಗಿಯೂ ಈ ಕೃತಿಯಲ್ಲಿ ಸಾಂದರ್ಭಿಕವಾಗಿ

ಚರ್ಚಿಸಲಾಗಿದೆ. ಮೋಹನ ಕೃಷ್ಣ ರೈಯವರ, ತುಳುನಾಡು – ಚತುರ್ಮುಖಿ ಅಧ್ಯಯನ ಕೃತಿ, ತುಳು ನಾಡು ನುಡಿ ಸಂಸ್ಕೃತಿ ಇತಿಹಾಸಗಳ ವಿಮರ್ಶಾತ್ಮಕ ಅಧ್ಯಯನವಾಗಿದೆ. ಬಿ. ಸುರೇಂದ್ರ ರಾವ್ ಅವರ ಕೃತಿಯ ಕನ್ನಡ ಅವತರಣಿಕೆ, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು (ಅನುವಾದ ವಿ.ಬಿ.ಅರ್ತಿಕಜೆ) ಕೃತಿ, ಮಧ್ಯಕಾಲದಿಂದ ತುಳುನಾಡಿನ ಸಮಾಜದಲ್ಲಿ ಪ್ರಬಲರಾಗಿದ್ದ ಬಂಟ ಸಮುದಾಯದ ಚಾರಿತ್ರಿಕ ಅಧ್ಯಯನವಾಗಿದೆ. ವಿವೇಕ ರೈಗಳ ತುಳು ಜಾನಪದ ಸಾಹಿತ್ಯ, ಚಿನ್ನಪ್ಪ ಗೌಡರ ಭೂತಾರಾಧನೆ – ಜಾನಪದೀಯ ಅಧ್ಯಯನ, ಅಮೃತ ಸೋಮೇಶ್ವರರ ತುಳು ಪಾಡ್ದನ ಸಂಪುಟ, ಭೂತಾರಾಧನೆಯ ಸಾಮಾಜಿಕ ಹಿನ್ನೆಲೆ ಮತ್ತು ಪಾಡ್ದನಗಳಲ್ಲಿ ಉಲ್ಲೇಖಿತ ಸಮಾಜದ ಸ್ಥಿತಿಗತಿಗಳನ್ನು ಅರಿಯಲು ಸಹಾಯಕವಾಗಿದೆ. ಎನ್. ಚಿನ್ನಸ್ವಾಮಿ ಸೋಸಲೆ ಅವರ ಸಾಮ್ರಾಜ್ಯ ಮತ್ತು ಸಂಸ್ಥಾನ ಕೃತಿಯಲ್ಲಿ, ಕೆಳದಿ ನಾಯಕರ ಸಂಸ್ಕೃತಿ ಚರಿತೆ, ಕೆಳದಿ ವಂಶದ ಮೂಲ ಮತ್ತು ಬೆಳವಣಿಗೆ, ಆಡಳಿತ, ಧಾರ್ಮಿಕ, ಸಾಮಾಜಿಕ, ಆರ್ಥಿಕ ಪದ್ಧತಿ ಮತ್ತು ಸಾಹಿತ್ಯದ ಕೊಡುಗೆಗಳನ್ನು ವಿಮರ್ಶಾತ್ಮಕವಾಗಿ ಚರ್ಚಿಸಲಾಗಿದೆ. ಇತಿಹಾಸ ದರ್ಶನದ ವಿವಿಧ ಸಂಪುಟಗಳು ಇಲ್ಲಿಯವರೆಗಿನ ಕೆಳದಿ ಚರಿತ್ರೆಗೆ ಸಂಬಂಧಿಸಿದ ಹಲವು ಸಂಶೋಧನ ಪ್ರಬಂಧಗಳನ್ನು ಒಳಗೊಂಡಿದೆ. ಕೆಳದಿ ಅಧ್ಯಯನದ ಇತ್ತೀಚಿನ ವಿಚಾರಗಳನ್ನು ಒಳಗೊಂಡಿರುವ ಈ ಸಂಪುಟಗಳು ತುಳುನಾಡಿಗೆ ಸಂಬಂಧಿಸಿದಂತೆ ಹಲವು ಪ್ರಬಂಧಗಳನ್ನು ಒಳಗೊಂಡಿದೆ.

ಇನ್ನು ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಪೋರ್ಚುಗೀಸರ ಚಟುವಟಿಕೆಗಳ ಕುರಿತು ಹಲವು ವಿದ್ವಾಂಸರು ಚರ್ಚಿಸಿದ್ದಾರೆ. ವಸಾಹತುಶಾಹಿ ಸಿದ್ಧಾಂತದಿಂದ ಪ್ರಭಾವಿತರಾದ ಆರ್.ಎಸ್. ವೈಟ್ ವೇ ಅವರು, ದಿ ರೈಸ್ ಆಫ್ ಪೋರ್ಚುಗೀಸ್ ಪವರ್ ಇನ್ ಇಂಡಿಯಾ, ಕೃತಿಯಲ್ಲಿ ಪೋರ್ಚುಗೀಸರ ಆಡಳಿತ ಮತ್ತು ವ್ಯವಹಾರ ಕ್ರಮಗಳನ್ನು ನೋಡಿದರೆ, ಕೆ.ಎಮ್. ಫಣಿಕ್ಕರ್ ಬಿ.ಎಸ್ ಶಾಸ್ತ್ರೀ ಮುಂತಾದ ವಿದ್ವಾಂಸರು ರಾಷ್ಟ್ರೀಯವಾದಿ ಚಿಂತನೆಯಿಂದ ಪ್ರಭಾವಿತರಾಗಿದ್ದಾರೆ. ಗೋವಾ ವಿಶ್ವವಿದ್ಯಾನಿಲಯದ ಇತಿಹಾಸ ವಿಭಾಗದ ಮುಖ್ಯಸ್ಥರಾಗಿದ್ದ ಬಿ.ಎಸ್. ಶಾಸ್ತ್ರಿಯವರ ಕೆಳದಿಯರಸರು ಮತ್ತು ಪೋರ್ಚುಗೀಸರು, ಗೋವಾ–ಕೆನರಾ ಪೋರ್ಚುಗೀಸ್ ರಿಲೇಶನ್ಸ್, ಕೋಸ್ಟಲ್ ಕರ್ನಾಟಕ ಆಂಡ್ ಪೋರ್ಚುಗೀಸ್ ರಿಲೇಶನ್ಸ್, ಪೋರ್ಚುಗೀಸ್ ಇನ್ ಕೆನರಾ ಕೃತಿಗಳು, ಕೆಳದಿಯರಸರ ಕಾಲದ ಪೋರ್ಚುಗೀಸ್ ಚಟುವಟಿಕೆಗಳನ್ನು ತಿಳಿಯಲು ಸಹಾಯಕವಾಗಿವೆ. ಪಣಜಿ ಪತ್ರಾಗಾರ ಇಲಾಖೆಯ ಸಂಶೋಧಕರಾದ, ಪಿ.ಎಸ್.ಎಸ್. ಪಿಸ್ಸುರ್‌ಲೆನ್ಸರ್ ಅವರ ಅಸಂಟೋಸ್ ಸಂಪುಟಗಳು ಹಾಗೂ ಇತರ ಪೋರ್ಚುಗೀಸ್ ದಾಖಲೆಗಳ ಸಂಗ್ರಹವೂ ಅತ್ಯಮೂಲ್ಯ ಆಕರಗಳಾಗಿವೆ. ಈ ಈರ್ವರೂ ಸಂಶೋಧಕರು ಪೋರ್ಚುಗೀಸರ ಪತ್ರ ವ್ಯವಹಾರಗಳನ್ನು ಮತ್ತು ಇತರ ದಾಖಲೆಗಳನ್ನು ಸ್ವತಃ ಪರಿಶೀಲಿಸಿ ಸಂಶೋಧನೆ ನಡೆಸಿರುವುದರಿಂದ ಮತ್ತು ಅವುಗಳ ವಿಶ್ವಾಸಾರ್ಹತೆಯನ್ನು ವಿದ್ವಾಂಸರು ಒಪ್ಪಿರುವುದರಿಂದ ಇವುಗಳು ಅಧಿಕೃತವೆನಿಸಿದೆ. ಬಿ.ಎಸ್. ಶಾಸ್ತ್ರಿಯವರ ಕೃತಿಗಳು ಸ್ಥಳೀಯ ರಾಜರ ಮತ್ತು ಪೋರ್ಚುಗೀಸರ ಸಂಬಂಧಗಳನ್ನು ವಿವರಿಸುತ್ತವೆ.

ಪೋರ್ಚುಗೀಸ್ ದಾಖಲೆಗಳನ್ನು ಆಧಾರವಾಗಿಟ್ಟುಕೊಂಡು ತುಳುನಾಡಿನ ಬಂದರುಗಳ ಕೇಂದ್ರೀಕೃತವಾದ ವಾಣಿಜ್ಯ ವ್ಯವಹಾರಗಳ ಅಧ್ಯಯನವನ್ನು ಇವುಗಳಲ್ಲಿ ಮಾಡಲಾಗಿದೆ. ಈ ಕೃತಿಗಳಲ್ಲಿ ತುಳುನಾಡಿಗೆ ಪೋರ್ಚುಗೀಸರ ಆಗಮನ, ತುಳುನಾಡಿನ ಅವರ ಕೋಟೆಗಳು, ಕೆಳದಿ ನಾಯಕರೊಂದಿಗಿನ ಸಂಬಂಧಗಳನ್ನು ಚರ್ಚಿಸಲಾಗಿದೆ. ಅವರ ಸಂಶೋಧನ ಕೃತಿಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಇನ್ನು ಸಂಜಯ್ ಸುಬ್ರಹ್ಮಣ್ಯಂರವರ ಪೊಲಿಟಿಕಲ್ ಇಕಾನಮಿ ಆಫ್ ಕಾಮರ್ಸ್ ಸದರನ್ ಇಂಡಿಯಾ ಕೃತಿ, ಮಾರ್ಕ್ಸ್‌ವಾದದ ಹಿನ್ನೆಲೆಯಲ್ಲಿ ಬಂದರು ಆರ್ಥಿಕತೆಯನ್ನು ವಿಶ್ಲೇಷಿಸಿದೆ. ಈ ಕೃತಿಯಲ್ಲಿ ಲೇಖಕರು, ಕ್ರಿ.ಶ.1500 ರಿಂದ 1650 ರವರೆಗಿನ ದಕ್ಷಿಣ ಭಾರತದ ವಿದೇಶಿ ವ್ಯಾಪಾರ ಮತ್ತು ಆರ್ಥಿಕ ರಾಜಕೀಯ ಸಂಬಂಧವನ್ನು ಚರ್ಚಿಸಿದ್ದಾರೆ. ಇದರಲ್ಲಿ ಇಕ್ಕೇರಿ ನಾಯಕರು ಮತ್ತು ಕೆನರಾ ಪ್ರದೇಶದ ವ್ಯಾಪಾರದ ಕುರಿತಾದ ವಿಚಾರಗಳಿವೆ. ಪಿಯರ್‌ಸನ್ ಎಂ.ಎಸ್ ಅವರ ಕೋಸ್ಟಲ್ ವೆಸ್ಟರ್ನ್ ಇಂಡಿಯಾ–ಸ್ಟಡೀಸ್ ಫ್ರಮ್‌ದ ಪೋರ್ಚುಗೀಸ್ ರೆಕಾರ್ಡ್ಸ್, ಡಿಸ್ನೀ. ಎ.ಆರ್. ಅವರ ಟ್ವಿ ಲೈಟ್ ಆಫ್‌ದ ಪೆಪ್ಪರ್ ಎಂಪೈರ್– ಪೋರ್ಚುಗೀಸ್ ಟ್ರೇಡ್ ಇನ್ ಸೌತ್ ವೆಸ್ಟ್ ಇಂಡಿಯಾ ಇನ್ ದ ಅರ್ಲಿ ಸೆವೆಂಟೀನ್ತ್ ಸೆಂಚುರೀ ಕೃತಿಗಳು, ತುಳುನಾಡಿನ ಬಂದರುಗಳಲ್ಲಿ ಪೋರ್ಚುಗೀಸರ ಚಟುವಟಿಕೆಗಳನ್ನು ತಿಳಿಯಲು ಸಹಕಾರಿಯಾಗಿದೆ. ಇವುಗಳಲ್ಲಿ ಪೋರ್ಚುಗೀಸರ ಸ್ಥಳೀಯ ಚಟುವಟಿಕೆಗಳ ಕುರಿತಾದ ವಿಮರ್ಶಾತ್ಮಕ ಬರವಣಿಗೆಗಳಿದ್ದು ಇದೂ ಕೂಡ ಮಾರ್ಕ್ಸ್‌ವಾದಿ ಸೈದ್ಧಾಂತಿಕ ಹಿನ್ನೆಲೆಯಲ್ಲಿ ಬಂದಿದೆ.

ತುಳುನಾಡಿನ ಇತಿಹಾಸ ರಚನೆಗೆ ಸಂಬಂಧಿಸಿದಂತೆ ಇತ್ತೀಚಿನ ಬೆಳವಣಿಗೆಗಳನ್ನು ಗಮನಿಸಿದರೆ ಬೇರೆ ಬೇರೆ ಜಾತಿ, ಜನಾಂಗದ ಅಸ್ಮಿತೆಯ ಪ್ರಶ್ನೆಯಾಗಿ ಇತಿಹಾಸವನ್ನು ಬಳಸಿಕೊಂಡಿರುವುದನ್ನು ಕಾಣುತ್ತೇವೆ. ಉದಾಹರಣೆಗೆ ಬಿಲ್ಲವ ವಿದ್ವಾಂಸರು, ಮುಸ್ಲಿಮರು, ಕ್ರೈಸ್ತರು, ಜೈನರು ಬಂಟರು ಹೀಗೆ ಪ್ರತಿಯೊಂದು ಪಂಗಡದವರು ತಮ್ಮ ತಮ್ಮ ಇತಿಹಾಸವನ್ನು ಬರೆಯುವ ಮತ್ತು ಅದನ್ನು ಊರ್ಜಿತಗೊಳಿಸುವ ಕಾರ್ಯದಲ್ಲಿ ನಿರತರಾಗಿದ್ದಾರೆ. ಈ ಸಂದರ್ಭದಲ್ಲಿ ತಮ್ಮ ಸಮುದಾಯವನ್ನು ಇತಿಹಾಸದ ಮೂಲಕ ಮುಂಚೂಣಿಗೆ ತರುವ ಕಾರ್ಯವನ್ನು ನಡೆಸಲಾಗುತ್ತಿದೆ. ಇದು ಸ್ಥಳೀಯ ಇತಿಹಾಸದ ರಚನೆಗೆ ಶಕ್ತಿ ನೀಡಿದೆ. ಹೀಗೆ ಹಲವು ವಿದ್ವಾಂಸರು ಕೆಳದಿ ಆಳ್ವಿಕೆಯ ತುಳುನಾಡನ್ನು ಆಂಶಿಕವಾಗಿ ಬೇರೆ ಬೇರೆ ಸೈದ್ಧಾಂತಿಕ ಚೌಕಟ್ಟಿನಲ್ಲಿ ಅಧ್ಯಯನ ನಡೆಸಿದ್ದಾರೆ. ಆದರೆ ಪ್ರಾದೇಶಿಕ, ಸ್ಥಳೀಯ ಇತಿಹಾಸ ಮಾದರಿಯಲ್ಲಿ ಕೆಳದಿ ಕಾಲದ ತುಳುನಾಡಿನ ಚರಿತ್ರೆಯನ್ನು ನೋಡುವಾಗ ವಿಭಿನ್ನ ಫಲಿತಗಳು ಮೂಡಿಬರಲು ಸಾಧ್ಯವಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಸ್ಥಳೀಯ, ಪ್ರಾದೇಶಿಕ ಇತಿಹಾಸ ರಚನಾ ಮಾದರಿಯಲ್ಲಿ ನಿರೂಪಿತಗೊಂಡಿದೆ.

### 1.5 ಅಧ್ಯಯನ ವಿಧಾನ

ಭೌಗೋಳಿಕವಾಗಿ ಕೆಳದಿ ಆಳ್ವಿಕೆಯ ಕಾಲದ ತುಳುನಾಡನ್ನು ಕೇಂದ್ರೀಕರಿಸಿ ಈ ಸಂಶೋಧನ

ಪ್ರಬಂಧಕ್ಕೆ ಮಾಹಿತಿ ಸಂಗ್ರಹಿಸಲಾಗಿದೆ. ಈ ಅಧ್ಯಯನದ ಸಂದರ್ಭದಲ್ಲಿ ಈಗಾಗಲೇ ಕೆಳದಿಯ ಇತಿಹಾಸ ಹಾಗೂ ತುಳುನಾಡಿನ ಚರಿತ್ರೆಯ ಅಧ್ಯಯನ ಮಾಡಿರುವ ಇತಿಹಾಸ ತಜ್ಞರನ್ನು ಭೇಟಿ ಮಾಡಿ ಚರ್ಚಿಸಲಾಗಿದೆ. ತುಳುನಾಡಿನಲ್ಲಿ ದೊರೆತಿರುವ ಕೆಳದಿಯ ಕಾಲದ ಶಾಸನಗಳ ವಿಮರ್ಶಾತ್ಮಕ ಅಧ್ಯಯನ ಮಾಡಲಾಗಿದೆ. ಈ ಕಾಲದಲ್ಲಿ ರಚನೆಯಾಗಿರುವ ಸಾಹಿತ್ಯದ ದಾಖಲೆಗಳನ್ನು ತುಲನಾತ್ಮಕವಾಗಿ ನೋಡುವ ಮತ್ತು ಈವರೆಗೆ ಬೆಳಕಿಗೆ ಬಂದಿರುವ ಮೌಖಿಕ ಪರಂಪರೆಗಳನ್ನು ಮತ್ತು ಇಲ್ಲಿಯವರೆಗೆ ಬೆಳಕಿಗೆ ಬಾರದ ಐತಿಹ್ಯಗಳು, ಮೌಖಿಕ ಪರಂಪರೆಗಳನ್ನು ಸಂಗ್ರಹಿಸಿ ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಿ ಅದರಲ್ಲಿರುವ ಚಾರಿತ್ರಿಕ ಅಂಶಗಳನ್ನು ಹೊರ ತೆಗೆಯುವ ಮತ್ತು ಆ ಮೂಲಕ ಆ ಕಾಲದ ಜನಜೀವನ, ಜನಸಾಮಾನ್ಯರ ಸ್ಥಿತಿಗತಿಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನವನ್ನು ಮಾಡಲಾಗಿದೆ. ವಿವಿಧ ವಿಶ್ವವಿದ್ಯಾನಿಲಯಗಳ ಹಾಗೂ ಇತರ ಗ್ರಂಥಾಲಯಗಳಿಗೆ ಭೇಟಿ ನೀಡಿ ಸಂಬಂಧಿಸಿದ ಕೃತಿಗಳನ್ನು ಪರಿಶೀಲಿಸಲಾಗಿದೆ.

ಈ ಕಾಲದಲ್ಲಿ ಪ್ರಬಲರಾಗಿದ್ದ ಪೋರ್ಚುಗೀಸರ ತುಳುನಾಡಿನ ಸಂಪರ್ಕವನ್ನು ವಿಶ್ಲೇಷಿಸುವ ದೃಷ್ಟಿಯಿಂದ ಪಣಜಿ ಪತ್ರಾಗಾರಕ್ಕೆ ಭೇಟಿ ನೀಡಿ ಮೂಲ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಕೋಟೆ ಕೊತ್ತಲಗಳು ಇರುವ ಪ್ರದೇಶಗಳಿಗೆ ಭೇಟಿ ನೀಡಿ ಕ್ಷೇತ್ರಕಾರ್ಯ ಕೈಗೊಳ್ಳಲಾಗಿದೆ, ಬಲ್ಲಾಳ ಪರಂಪರೆಯ ಬೀಡುಗಳು, ಬಸದಿಗಳು, ವೀರಶೈವ ಮಠಗಳು, ಇವುಗಳನ್ನು ಸಂದರ್ಶಿಸಿ ಸಂಬಂಧಿಸಿದವರಿಂದ ಅವುಗಳ ಹಿನ್ನೆಲೆ, ಬೆಳವಣಿಗೆ, ಪ್ರಭಾವ ಮತ್ತು ಅವನತಿಯ ಕಾರಣಗಳನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಈ ಕಾಲದಲ್ಲಿ ತುಳುನಾಡಿನಲ್ಲಿದ್ದ ವ್ಯಾಪಾರ ಪದ್ಧತಿ, ಅದರ ಮೇಲೆ ಕೆಳದಿ ಅರಸರು ಮತ್ತು ಪೋರ್ಚುಗೀಸರ ಪ್ರಭಾವ, ನಾಣ್ಯ ಪದ್ಧತಿ ಮುಂತಾದ ವಿಚಾರಗಳನ್ನು ಅಧ್ಯಯನ ಮಾಡಲಾಗಿದೆ. ಒಟ್ಟಿನಲ್ಲಿ ಕೆಳದಿ ಆಳ್ವಿಕೆಯ ಕಾಲದ ತುಳುನಾಡಿನ ಆರ್ಥಿಕ ಮತ್ತು ಸಾಮಾಜಿಕ ವಿಭಾಗಗಳನ್ನು ಆಳವಾಗಿ ವಸ್ತುನಿಷ್ಠವಾಗಿ ಅಧ್ಯಯನ ಮಾಡಲಾಗಿದೆ.

ಸಾಮ್ರಾಜ್ಯವನ್ನು ಸಂಸ್ಥಾನಗಳ ಮೂಲಕ ನೋಡಬೇಕು ಎಂಬ ಮಾತಿನಂತೆ ಕೆಳದಿಯರಸರ ಸಾಮ್ರಾಜ್ಯವನ್ನು ತುಳುನಾಡಿನ ಸಂಸ್ಥಾನಗಳ ಮೂಲಕ ನೋಡಬಹುದಾಗಿದೆ. ಈ ವಿಶಾಲವಾದ ತುಳುನಾಡನ್ನು ಹತ್ತು ಹಲವು ರಾಜವಂಶಗಳು, ರಾಜರು ಆಳಿದ್ದಾರೆ. ಕದಂಬರಿಂದ ವಿಜಯನಗರದವರೆಗಿನ ಸಾಮ್ರಾಜ್ಯವನ್ನಾಳಿದ ಅರಸರು ತುಳುನಾಡನ್ನು ತಮ್ಮ ಆಳ್ವಿಕೆಯ ಭಾಗವನ್ನಾಗಿ ಮಾಡಿದರು. ಈ ಆಳ್ವಿಕೆಯ ಸಂದರ್ಭದಲ್ಲಿ ಈ ರಾಜರುಗಳು ಸ್ಥಳೀಯ ಅರಸರ ಮೇಲೆ ತಮ್ಮದೇ ಆದ ರೀತಿಯ ಹಿಡಿತವನ್ನು ಹೊಂದಿದ್ದರು. ಬಲ್ಲಾಳರ ಪ್ರಭಾವ ಈ ಭಾಗದಲ್ಲಿ ಪ್ರಬಲವಾಗಿತ್ತು ಎನ್ನುವುದಕ್ಕೆ ಪಾಡ್ದನಗಳಲ್ಲಿ ಪದೇ ಪದೇ ಉಲ್ಲೇಖವಾಗುವ ಬಲ್ಲಾಳ ಪದಗಳೇ ಸಾಕ್ಷಿ. ಈ ಸ್ಥಳೀಯ ಬಲ್ಲಾಳರು ಪ್ರಾದೇಶಿಕ ಮುಖ್ಯಸ್ಥರಾಗಿದ್ದು ಇವರ ಮತ್ತು ಸ್ಥಳೀಯ ರಾಜರುಗಳ ಸಂಬಂಧವನ್ನು ಸ್ಥಳೀಯ ಇತಿಹಾಸದ ಹಿನ್ನೆಲೆಯಲ್ಲಿ ಅಧ್ಯಯನ ನಡೆಸಲಾಗಿದೆ.

ಅದೇ ರೀತಿ ಈ ಅಧ್ಯಯನದಲ್ಲಿ ಪ್ರಮುಖ ಸಾಮಂತ ಮನೆತನಗಳಾಗಿ, ಈ ಭಾಗದಲ್ಲಿ ಆಡಳಿತ

ನಡೆಸಿದ, ಅಜಿಲರು, ಚೌಟರು, ಬಂಗರು, ತೋಳಹರು ಇತ್ಯಾದಿ ಮನೆತನಗಳು ಮತ್ತು ಈ ಕಾಲದಲ್ಲಿ ಪ್ರಾಬಲ್ಯವನ್ನು ಮೆರೆದ ಪೋರ್ಚುಗೀಸರು, ಫ್ರೆಂಚರು, ಬ್ರಿಟಿಷರು ಮತ್ತು ಕೆಳದಿ ಅರಸರ ಸಂಬಂಧದ ಕುರಿತು ಅಧ್ಯಯನ ನಡೆಸಲಾಗಿದೆ. ಈ ಸಾಮಂತ ಅರಸರು ಕೆಳದಿ ಅರಸರ ಸಾರ್ವಭೌಮತ್ವವನ್ನು ಒಪ್ಪಿಕೊಂಡು ಸ್ಥಳೀಯ ಆಡಳಿತಕ್ಕೆ ಧಕ್ಕೆಯಾಗದಂತೆ ತುಳುನಾಡಿನ ಆರ್ಥಿಕ, ಸಾಮಾಜಿಕ, ಸಾಹಿತ್ಯ, ಕಲೆ ಮೊದಲಾದ ಕ್ಷೇತ್ರಗಳಿಗೆ ಬಹಳಷ್ಟು ಕೊಡುಗೆಗಳನ್ನು ನೀಡಿದ್ದಾರೆ. ತುಳು ನಾಡನ್ನು ಆಳುತ್ತಿದ್ದ ರಾಜ ಮನೆತನಗಳು ಕೆಳದಿ ಅರಸರ ಪ್ರಭಾವದಿಂದ ತಮ್ಮ ಪ್ರಾಬಲ್ಯವನ್ನು ಕಳೆದುಕೊಂಡರು. ಇವುಗಳ ಅಧ್ಯಯನಕ್ಕೆ ದೊರಕಿದ ಮೂಲ ದಾಖಲೆಗಳನ್ನು ಕಲೆಹಾಕಿ ವಿಮರ್ಶಾತ್ಮಕವಾಗಿ ಅಧ್ಯಯನ ಕೈಗೊಂಡು ಸಂಶೋಧನ ಗ್ರಂಥವನ್ನು ಸಿದ್ಧಪಡಿಸಲಾಗಿದೆ.

ರಾಜ ಕೇಂದ್ರಿತ ಚರಿತ್ರೆ ಬರವಣಿಗೆಗಳಿಗಿಂತ ಕೆಳವರ್ಗಗಳ ಚರಿತ್ರೆ ಬರವಣಿಗೆಯ ಆಶಯಗಳು ಇಂದಿನ ಅವಶ್ಯಕತೆಯಾಗಿದೆ. ಮೂಲೆಗೊತ್ತಲ್ಪಟ್ಟ ಅಲಕ್ಷಿತ ಸಮುದಾಯಗಳ ವರ್ಗಗಳ ಚರಿತ್ರೆ ಮತ್ತು ಸಂಸ್ಕೃತಿಯ ಅಧ್ಯಯನಗಳಿಂದಾಗಿ ಇತಿಹಾಸದ ಇನ್ನೊಂದು ಮಗ್ಗುಲನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ಈ ಮೂಲಕ ಭಾರತದ ಬಹುಸಂಖ್ಯಾತರು ಅಂದರೆ ಕೆಳಸಮುದಾಯ ಅಥವಾ ವರ್ಗಗಳ ಜನರು, ಸೀಮಿತ ಸಂಖ್ಯೆಯಲ್ಲಿದ್ದ ಬಲಾಢ್ಯರು ರೂಪಿಸಿದ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಗೆ ಚಾರಿತ್ರಿಕವಾಗಿ ನಲುಗಿ ಹೋಗಿರುವ ಪ್ರಕ್ರಿಯೆಯನ್ನು ಅರಿಯಬೇಕಾಗಿದೆ ಮತ್ತು ಅಭ್ಯಸಿಸಬೇಕಾಗಿದೆ. ಇದು ನಾಗರಿಕ ಸಮಾಜದ ಇಂದಿನ ಅವಶ್ಯಕತೆಯಾಗಿದೆ.

**1.6. ಅಧ್ಯಯನ ಸ್ವರೂಪ**

ಈ ಮಹಾಪ್ರಬಂಧದಲ್ಲಿ ಒಟ್ಟು 7 ಅಧ್ಯಾಯಗಳಿದ್ದು ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪಗಳನ್ನು ತಿಳಿಸಲಾಗಿದೆ. ಹಾಗೆಯೆ ಈ ಹಿಂದೆ ಹಲವು ವಿದ್ವಾಂಸರು ನಡೆಸಿದ ಅಧ್ಯಯನಗಳ ಸಮೀಕ್ಷೆ, ಈ ಅಧ್ಯಯನಕ್ಕೆ ಉಪಯೋಗಿಸಲಾದ ಆಕರಗಳ ಕುರಿತಾಗಿ ಚರ್ಚಿಸಲಾಗಿದೆ. ತುಳುನಾಡಿನ ಇತಿಹಾಸ ರಚನಾ ಪರಂಪರೆಯ ಸೈದ್ಧಾಂತಿಕ ಚೌಕಟ್ಟುಗಳು ಮತ್ತು ಪ್ರಸ್ತುತ ಪ್ರಬಂಧದ ರಚನೆಯ ಉದ್ದೇಶ, ಮಹತ್ವವನ್ನೂ ಈ ಅಧ್ಯಾಯ ಒಳಗೊಂಡಿದೆ. ಎರಡನೆಯ ಅಧ್ಯಾಯ ತುಳುನಾಡಿನ ಚಾರಿತ್ರಿಕ ಹಿನ್ನೆಲೆಗೆ ಸೀಮಿತವಾಗಿದ್ದು ಇದರಲ್ಲಿ ತುಳು ನಾಡು ನುಡಿಯ ಕುರಿತಾಗಿರುವ ಭಿನ್ನ ನಿಲುವುಗಳು, ಕೆಳದಿ ಆಳ್ವಿಕೆಯ ಕಾಲದ ತುಳುನಾಡಿನ ವ್ಯಾಪ್ತಿ, ಕೆಳದಿಯರಸರು ಮತ್ತು ಸ್ಥಳೀಯ ಸಾಮಂತ ರಾಜರುಗಳು, ಬೀಡು ಬಲ್ಲಾಳರು, ಯುರೋಪಿಯನ್ನರ ರಾಜಕೀಯ ಆರ್ಥಿಕ ಮೇಲಾಟ ಮತ್ತು ಕೆಳದಿ–ತುಳುನಾಡು ಆಡಳಿತ ನಿಯಂತ್ರಣದ ಸ್ವರೂಪವನ್ನು ಕುರಿತು ಚರ್ಚಿಸಲಾಗುವುದು. ಮೂರನೆಯ ಅಧ್ಯಾಯ ತುಳುನಾಡಿನ ಆರ್ಥಿಕ ವಿಷಯಕ್ಕೆ ಸಂಬಂಧಿಸಿದ್ದು, ತುಳುನಾಡಿನ ಮೇಲೆ ಕೆಳದಿ ಆರ್ಥಿಕ ನೀತಿಯ ಪ್ರಭಾವ, ಭೂ ಸಂಬಂಧೀ

ಚಟುವಟಿಕೆಗಳನ್ನು ಚರ್ಚಿಸಲಾಗಿದೆ. ತುಳುನಾಡಿನಲ್ಲಿ ನಡೆಯುತ್ತಿದ್ದ ಭೂ ವ್ಯವಹಾರಗಳು, ಅವುಗಳಲ್ಲಿ ಸ್ಥಳೀಯ ಅಧಿಕಾರಿಗಳು, ರಾಜರ ಪಾತ್ರ, ರೈತವರ್ಗ, ಅವರ ಸ್ಥಿತಿಗತಿಗಳು, ರಾಜ್ಯ ಹಾಗೂ ರೈತರ ಸಂಬಂಧ ಹಾಗೂ ಗೇಣಿದಾರರ ಮತ್ತು ರೈತ ಸಂಘರ್ಷಗಳು ಇವುಗಳನ್ನು ಈ ಅಧ್ಯಾಯ ಒಳಗೊಂಡಿದೆ.

ನಾಲ್ಕನೇ ಅಧ್ಯಾಯವೂ ಆರ್ಥಿಕ ವಿಭಾಗದ ಪ್ರಮುಖ ಅಂಶವಾದ ವ್ಯಾಪಾರ ಮತ್ತು ತೆರಿಗೆ ಪದ್ಧತಿಯ ವಿಶ್ಲೇಷಣೆಗೆ ಸಂಬಂಧಿಸಿದ್ದಾಗಿದೆ. ಇದರಲ್ಲಿ ವ್ಯಾಪಾರ ಕೇಂದ್ರಗಳು, ಸಾರಿಗೆ ಸಂಪರ್ಕ, ತೆರಿಗೆ ಸ್ವರೂಪ ಮತ್ತು ಅದರಿಂದ ಉಂಟಾದ ಸಾಮಾಜಿಕ ಆರ್ಥಿಕ ಬದಲಾವಣೆ, ಬಳಕೆಯಲ್ಲಿದ್ದ ನಾಣ್ಯ ಪದ್ಧತಿ ಇತ್ಯಾದಿ ವಿಚಾರಗಳನ್ನು ಚರ್ಚಿಸಲಾಗಿದೆ. ಐದನೇ ಅಧ್ಯಾಯವೂ ಆರ್ಥಿಕ ಹಿನ್ನೆಲೆಯದ್ದೇ ಆಗಿದ್ದು ಈ ಕಾಲದಲ್ಲಿ ನಡೆದ ಕೆಳದಿ ಪೋರ್ಚುಗೀಸ್ ಆರ್ಥಿಕ ಸಂಘರ್ಷವನ್ನು ತಿಳಿಸುತ್ತದೆ. ಹೇಗೆ ಕೃಷಿ ಪ್ರಧಾನ ಸಮಾಜವೊಂದು ವಾಣಿಜ್ಯ ಪ್ರಧಾನದ ಸಮಾಜವಾಗಿ ಬದಲಾಯಿತೆಂಬುದನ್ನು ಇಲ್ಲಿ ಚರ್ಚಿಸಲಾಗಿದೆ. ಆರನೇ ಅಧ್ಯಾಯ ಈ ಕಾಲದ ಸಾಮಾಜಿಕ ಜೀವನದ ವಿಮರ್ಶಾತ್ಮಕ ಅಧ್ಯಯನವಾಗಿದೆ. ಇದರಲ್ಲಿ ತುಳುನಾಡಿನಲ್ಲಿ ನೆಲೆಯಾಗಿದ್ದ ವಿವಿಧ ಸಮುದಾಯಗಳಾದ ಬ್ರಾಹ್ಮಣರು, ಬಂಟರು, ಬಿಲ್ಲವರು ಇತ್ಯಾದಿ ವರ್ಗಗಳು, ಅಲ್ಲದೆ ತಳ ಸಮುದಾಯಗಳ ಕುರಿತಾಗಿ ಅಧ್ಯಯನ ಮಾಡಲಾಗಿದೆ. ಈ ಕಾಲದಲ್ಲಿ ವಿವಿಧ ಕಾರಣಗಳಿಗೆ ತುಳುನಾಡಿಗೆ ವಲಸೆ ಬಂದ ಸಮುದಾಯಗಳ ಹಿನ್ನೆಲೆ ಮತ್ತು ಸ್ಥಿತಿಗತಿಗಳನ್ನು ಅವಲೋಕಿಸಲಾಗುವುದು. ಏಳನೇ ಅಧ್ಯಾಯದಲ್ಲಿ, ಕೆಳದಿ ಆಡಳಿತದ ತುಳುನಾಡಿನ ವಿವಿಧ ಧರ್ಮೀಯರ ಧಾರ್ಮಿಕ ಸ್ಥಿತಿ, ವೀರಶೈವ ಪ್ರಸರಣ, ಜೈನ ಇಳಿಮುಖ, ಕ್ರೈಸ್ತ ಮತ್ತು ಇಸ್ಲಾಂ ಧರ್ಮೀಯರ ಕಾರ್ಯಚಟುವಟಿಕೆಗಳು ಇತ್ಯಾದಿ ವಿಚಾರಗಳನ್ನು ಚರ್ಚಿಸಲಾಗಿದೆ. ಕೊನೆಯಲ್ಲಿ, ಅಧ್ಯಯನಕ್ಕೆ ಉಪಸಂಹಾರವನ್ನು ನೀಡಲಾಗಿದೆ. ಹಾಗೆಯೇ ಇದರಲ್ಲಿ ಈ ಅಧ್ಯಯನದ ಪ್ರಮುಖ ಫಲಿತಗಳನ್ನು ನೀಡಲಾಗಿದೆ. ಅನುಬಂಧದಲ್ಲಿ ಅಧ್ಯಯನಕ್ಕೆ ಸಂಬಂಧಿಸಿದ ಕೆಳದಿ ಆಳ್ವಿಕೆಯ ತುಳುನಾಡಿನ ವಿವಿಧ ಪ್ರದೇಶಗಳ ನಕಾಶೆಗಳು, ಪ್ರಮುಖ ಸ್ಥಳಗಳ ಛಾಯಾಚಿತ್ರಗಳು, ಪರಾಮರ್ಶನ ಗ್ರಂಥಗಳ ಪಟ್ಟಿಯನ್ನು ನೀಡಲಾಗಿದೆ.

ಅಧ್ಯಾಯ – 2

# ಚಾರಿತ್ರಿಕ ಹಿನ್ನೆಲೆ

## 2.1 ತುಳುನಾಡಿನ ವ್ಯಾಪ್ತಿ

ತುಳು ಮತ್ತು ತುಳುನಾಡು ಇವುಗಳ ಭೌಗೋಳಿಕ, ಪೌರಾಣಿಕ, ಚಾರಿತ್ರಿಕ ಹಾಗೂ ಐತಿಹ್ಯ ಆಧಾರಿತ ವ್ಯಾಪ್ತಿಗಳ ಕುರಿತಂತೆ ವಿದ್ವಾಂಸರಲ್ಲಿ ಸರ್ವಸಮ್ಮತ ಅಭಿಪ್ರಾಯವಿಲ್ಲ. ತುಳು ಎನ್ನುವ ಪದ ಭಾಷೆಯ ಹಿನ್ನೆಲೆಯಲ್ಲಿ ಬಂದಿದೆಯೋ, ಭೌಗೋಳಿಕ ಅಥವಾ ಜನಾಂಗದ ಹಿನ್ನೆಲೆಯಲ್ಲಿ ಬಂದಿದೆಯೋ ಎನ್ನುವ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿವೆ. ತುಳುನಾಡು, ತುಳುದೇಶ, ತುಳು ವಿಷಯವೆಂದು ಕರೆಯಲ್ಪಡುವ ಈ ಪ್ರದೇಶವು ಇಂದು ಕರ್ನಾಟಕ ರಾಜ್ಯದ ಈಗಿನ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ ಮತ್ತು ಕಾಸರಗೋಡು ಜಿಲ್ಲೆಯ ಉತ್ತರ ಭಾಗಕ್ಕೆ ಸೀಮಿತವಾಗಿದೆ. ಆದರೆ ಅಳುಪರ ಕಾಲದಿಂದ ಮೊದಲ್ಗೊಂಡು ಟಿಪ್ಪು ಸುಲ್ತಾನನ ಕಾಲದವರೆಗೆ ಇದು ಉತ್ತರ ಕನ್ನಡ ಜಿಲ್ಲೆಯ ದಕ್ಷಿಣದ ಕೆಲವು ಪ್ರದೇಶಗಳನ್ನೂ ಒಳಗೊಂಡಿತ್ತು.

ತುಳುನಾಡಿನ ಭೌಗೋಳಿಕ ಮೇರೆಗಳನ್ನು ನೋಡುವುದಾದರೆ ಉತ್ತರಕ್ಕೆ ಕರಾವಳಿ ತೀರದ ಉತ್ತರ ಕನ್ನಡ ಜಿಲ್ಲೆ, ದಕ್ಷಿಣಕ್ಕೆ ಕೇರಳದ ಮಲಬಾರ್ ಪ್ರದೇಶ, ಪೂರ್ವಕ್ಕೆ ಪಶ್ಚಿಮ ಘಟ್ಟಗಳು ಹಾಗೂ ಪಶ್ಚಿಮಕ್ಕೆ ಅರಬ್ಬಿ ಸಮುದ್ರವಿದೆ. ಇದೇ ಮೇರೆಯನ್ನು ಪುರಾಣ ಗ್ರಂಥಗಳಿಂದ ಹಿಡಿದು ಇತ್ತೀಚಿನ ಕಾಲದ ದಾಖಲೆಗಳೂ ಉಲ್ಲೇಖಿಸುತ್ತವೆ. ಪ್ರಾಕೃತಿಕ ಮೇರೆಗಳು ಪ್ರಕೃತಿಯಿಂದಲೇ ನಿರ್ಮಿಸಲ್ಪಟ್ಟಿದೆ. ಇದು ದೊಡ್ಡ ಪ್ರಮಾಣದಲ್ಲಿ ಬದಲಾಗಲು ಸಾಧ್ಯವಿಲ್ಲ. ಪ್ರಾಕೃತಿಕ ವಿಕೋಪಗಳು ಸ್ವಲ್ಪಮಟ್ಟಿಗೆ ಒಂದು ಪ್ರದೇಶದ ಗಡಿಯನ್ನು ಬದಲಿಸಬಹುದು ಅಷ್ಟೆ. ಪ್ರಾಚೀನ ತುಳುನಾಡಿನ ಮೇರೆಗಳನ್ನು ತಿಳಿಯಲು ಗ್ರಾಮ ಪದ್ಧತಿ, ಸಹ್ಯಾದ್ರಿಖಂಡ, ಕೊಂಕಣೋತ್ಪತ್ತಿ, ಕೇರಳೋತ್ಪತ್ತಿ ಮುಂತಾದ ಪುರಾಣಗಳಲ್ಲಿ ಉಲ್ಲೇಖಿತವಾದ ವಿಚಾರಗಳು ಸಹಕಾರಿಯಾಗಿವೆ. ತುಳುನಾಡಿನ ಅತ್ಯಂತ ಪ್ರಾಚೀನ ಉಲ್ಲೇಖವನ್ನು ಕೊಡುವ ಸ್ಕಂದ ಪುರಾಣದ ಸಹ್ಯಾದ್ರಿಖಂಡದಲ್ಲಿ ಪರಶುರಾಮ ಕ್ಷೇತ್ರದ ಕುರಿತಾದ ಉಲ್ಲೇಖ ಕಂಡುಬರುತ್ತದೆ.[1] ಪರಶುರಾಮ ಸೃಷ್ಟಿಯ ಸಪ್ತಕೊಂಕಣ ಪ್ರದೇಶಗಳಲ್ಲಿ ತುಳುನಾಡು ಕೂಡ ಒಂದು ಎಂಬುದಾಗಿ ಹೇಳಲಾಗಿದೆ. ಪರಶುರಾಮ ಸೃಷ್ಟಿಗಿಂತ ಮೊದಲು ತುಳುನಾಡು ಹಾಗೂ ಪಶ್ಚಿಮಘಟ್ಟಗಳ ಕೆಳಗಿನ ಪ್ರದೇಶಗಳೆಲ್ಲವೂ ಅರಬ್ಬಿ ಸಮುದ್ರದ ಭಾಗವಾಗಿತ್ತು ಎನ್ನುವುದು ಪುರಾಣಗಳ ನಿಲುವು. ಈ ರೀತಿಯ ಮಾಹಿತಿ ಮಹಾಭಾರತದಲ್ಲಿ, ವಿಷ್ಣು ಪುರಾಣದಲ್ಲಿಯೂ ಸಿಗುತ್ತದೆ. ಪರಶುರಾಮ ಸೃಷ್ಟಿಯ ಸಪ್ತಕೊಂಕಣಗಳಲ್ಲಿ 'ಆಲುವ' ಎನ್ನುವ ಪ್ರದೇಶವೇ ತುಳುನಾಡು. ಆಳುವಖೇಡ, ಅಳುಪ, ಆಳ್ವ ಮುಂತಾದ ಹೆಸರುಗಳೂ ಈ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿತು ಎಂದು

ಹೇಳಲಾಗಿದೆ.[2] ಪರಶುರಾಮ ಸೃಷ್ಟಿಯಲ್ಲಿ ಗೋಕರ್ಣ ಪ್ರದೇಶದಿಂದ ಪಯಸ್ವಿನಿ ಅಥವಾ ಚಂದ್ರಗಿರಿ ನದಿಯವರೆಗಿನ ಪ್ರದೇಶ ತೌಳವ ತುಳುನಾಡು, ಗೋರಾಷ್ಟ್ರ, ಹೈಗ, ಆಳ್ವಖೇಡ ಮುಂತಾದ ಹೆಸರುಗಳಿಂದ ಕರೆಯಲ್ಪಟ್ಟಿದೆ.[3] ತುಳುನಾಡು ಪರಶುರಾಮನ ಸೃಷ್ಟಿ ಎನ್ನುವುದನ್ನು ಆಧುನಿಕ ವಿಜ್ಞಾನದ ಹಿನ್ನೆಲೆಯಲ್ಲಿ ಒಪ್ಪಲು ಸಾಧ್ಯವಾಗುವುದಿಲ್ಲ. ಆದರೆ ತುಳುನಾಡಿನ ಆರಂಭದ ಮೇರೆಗಳನ್ನು ಕಂಡುಹಿಡಿಯುವಲ್ಲಿ ಈ ಐತಿಹ್ಯಗಳು ಸ್ವಲ್ಪಮಟ್ಟಿಗೆ ಸಹಾಯಕವಾಗಿವೆ. ಪರಶುರಾಮನ ಈ ಕಥಾನಕವನ್ನು ಪ್ರಾಚೀನ ಮಾನವನ ಕೈ ಕೊಡಲಿ ಸಂಸ್ಕೃತಿಯೊಂದಿಗೆ (ನೂತನ ಶಿಲಾಯುಗ) ತುಲನೆ ಮಾಡಿದರೆ ದಟ್ಟವಾದ ಕಾಡಿನಿಂದ ಆವೃತವಾಗಿದ್ದ ಈ ಪ್ರದೇಶವನ್ನು ಕಬ್ಬಿಣದ ಕೈಕೊಡಲಿಯ ಸಹಾಯದಿಂದ ಕೃಷಿಯೋಗ್ಯ ಭೂಮಿಯಾಗಿಸಿದ ಪ್ರಾಚೀನ ಘಟನಾವಳಿಯ ಹಿನ್ನೆಲೆಯಲ್ಲೂ ಪರಿಶೀಲಿಸಲು ಅವಕಾಶಗಳಿವೆ.

ತುಳುನಾಡನ್ನು ಭಾಷೆಯ ಹಿನ್ನೆಲೆಯಲ್ಲಿ ಗುರುತಿಸುವುದಾದರೆ ಇಂದು ಇದರ ಮೇರೆಗಳು ಹೆಚ್ಚು ಕಡಿಮೆ ಸ್ಪಷ್ಟವಾಗಿದೆ. ಇಂದಿನ ಭಾಷಿಕ ತುಳುನಾಡನ್ನು ಉತ್ತರದ ಸ್ವರ್ಣಾ ನದಿಯಿಂದ(ಸೀತಾನದಿ) ದಕ್ಷಿಣದ ಚಂದ್ರಗಿರಿ ನದಿಯವರೆಗೆ ಗುರುತಿಸಬಹುದು. ತುಳುನಾಡನ್ನು ಆಳಿದ ಹೆಚ್ಚಿನ ಸ್ಥಳೀಯ ಅರಸು ಮನೆತನಗಳೆಲ್ಲವೂ ಭಾಷಿಕ ತುಳುನಾಡನ್ನೇ ತಮ್ಮ ಕೇಂದ್ರವನ್ನಾಗಿ ಹೊಂದಿದ್ದವು. ಆದರೆ ಅವರ ಆಡಳಿತಾತ್ಮಕ ಗಡಿಗಳು ಅದರಾಚೆಗೂ ವಿಸ್ತರಿಸಿತ್ತು. ಮೌರ್ಯರ ಹಾಗೂ ಸಂಗಂ ಅವಧಿಯಲ್ಲಿ ತುಳುನಾಡಿನ ಉಲ್ಲೇಖಗಳು ಕಂಡುಬರುತ್ತವಾದರೂ ತುಳುಭಾಷೆಯ ಪ್ರಸ್ತಾಪ ಕಂಡುಬರುವುದು ವಿಜಯನಗರದ ಆಳ್ವಿಕೆಯ ಸಂದರ್ಭದಲ್ಲಿ ಹಾಗೂ ವಿಜಯನಗರೋತ್ತರ ಅವಧಿಯಲ್ಲಿ. ಆದರೆ ಅದಕ್ಕಿಂತ ಹಿಂದೆ ತುಳುಭಾಷೆ ಅಸ್ತಿತ್ವದಲ್ಲಿ ಇರಲಿಲ್ಲ ಎನ್ನಲು ಸಾಧ್ಯವಿಲ್ಲ. ಹಾಗಾಗಿ ತುಳುನಾಡು ತುಳುಭಾಷೆಯ ಹಿನ್ನೆಲೆಯಲ್ಲಿ ಗುರುತಿಸಿಕೊಂಡಿರುವುದನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ತುಳು ಎನ್ನುವುದು ಪಂಚದ್ರಾವಿಡ ಭಾಷೆಗಳಲ್ಲಿ ಒಂದು ಎಂಬುದು ಭಾಷಾ ವಿಜ್ಞಾನಿಗಳ ನಿರ್ಧಾರ. ತುಳು ಭಾಷೆಯನ್ನಾಡುವ ಜನರು ವಾಸವಾಗಿರುವುದರಿಂದ ತುಳುನಾಡು ಎಂಬ ಹೆಸರು ಈ ಪ್ರದೇಶಕ್ಕೆ ಬಂದಿರಬೇಕು. ತಮಿಳು, ಮಲಯಾಳ ಭಾಷೆಗಳನ್ನು ಮಾತನಾಡುವ ಪ್ರದೇಶಕ್ಕೆ ತಮಿಳುನಾಡು, ಮಲೆಯಾಳ ದೇಶವೆಂದು ಕರೆಯುವ ಹಾಗೆ, ಇದನ್ನು ತುಳುನಾಡೆಂದು ಕರೆಯುವ ವಾಡಿಕೆ ಬಂದಿರಬೇಕು ಎಂದೂ ಭಾವಿಸಬಹುದು.

ಇತಿಹಾಸ ಕಾಲದ ತುಳುನಾಡಿನ ಗಡಿಯನ್ನು ನಿರ್ಧರಿಸುವುದು ಸುಲಭವಲ್ಲ. ಇದಕ್ಕೆ ಕಾರಣ ಬೇರೆ ಬೇರೆ ಕಾಲಘಟ್ಟದಲ್ಲಿ ಬೇರೆ ಬೇರೆ ರಾಜವಂಶಗಳ ರಾಜರ ಆಳ್ವಿಕೆಯಲ್ಲಿ ತುಳುನಾಡಿನ ವ್ಯಾಪ್ತಿ ಹಿಗ್ಗಿರುವುದು ಹಾಗೂ ಕುಗ್ಗಿರುವುದು. ಸ್ಥಳೀಯ ಅರಸರಾದ ಅಜಿಲರು, ಬಂಗರು, ಚೌಟರು, ಭೈರವರಸರು ಮುಂತಾದ ಮನೆತನಗಳ ಆಳ್ವಿಕೆ, ತುಳುನಾಡೆಂದು ಗುರುತಿಸಲಾದ ಒಂದೊಂದು ಭಾಗಕ್ಕೆ ಸೀಮಿತವಾಗಿತ್ತು ಹೊರತು ಸಮಗ್ರ ತುಳುನಾಡನ್ನು ಈ ರಾಜವಂಶಗಳು ತಮ್ಮ ಆಳ್ವಿಕೆಗೆ ಒಳಪಡಿಸಲಿಲ್ಲ. ಹಾಗಾಗಿ ಈ ರಾಜ ವಂಶಗಳ ಆಡಳಿತದ ಆಧಾರದಲ್ಲಿ ತುಳುನಾಡಿನ ಮೇರೆಗಳನ್ನು ಗುರುತಿಸುವುದು ಕಷ್ಟ. ತುಳುನಾಡು

ತುಳು ಭಾಷಿಕರಿಗಷ್ಟೇ ಸೀಮಿತವಾಗಿರಲಿಲ್ಲ. ಈಗಿನ ಉತ್ತರ ಕನ್ನಡ ಜಿಲ್ಲೆಯ ಬಹುತೇಕ ಭಾಗಗಳು ತುಳುನಾಡಿಗೆ ಸೇರಿದ್ದವು. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿ ಮತ್ತು ಕುಂದಾಪುರ ತಾಲೂಕಿನ ಉತ್ತರ ಭಾಗವನ್ನೊಳಗೊಂಡು, ಉತ್ತರ ಕನ್ನಡ ಜಿಲ್ಲೆಯ ಭಟ್ಕಳ. ಹೊನ್ನಾವರ ನಗಿರೆ, ಹಾಡುವಳ್ಳಿ ಪ್ರದೇಶಗಳನ್ನು ಸುತ್ತುವರಿದಿರುವ ಭೂ ಪ್ರದೇಶವು ತುಳುನಾಡಾಗಿತ್ತೆಂದು ಹೇಳಲು ಸಾಕಷ್ಟು ಆಧಾರಗಳು ದೊರೆಯುತ್ತವೆ. ಕ್ರಿ.ಶ. 13ನೇ ಶತಮಾನದಲ್ಲಿ ನಗಿರೆ (ಗೇರು ಸೊಪ್ಪೆ) ಮತ್ತು ಹಾಡುವಳ್ಳಿಯಲ್ಲಿ (ಸಂಗೀತಪುರ) ಆಳ್ವಿಕೆ ನಡೆಸಿದ್ದ ಸಾಳುವ ಅರಸರನ್ನು ತುಳುವರಸರೆಂದೂ, ಅವರ ಆಡಳಿತದ ಪ್ರದೇಶವನ್ನು ತುಳುನಾಡೆಂದು ಕರೆಯಲಾಗುತ್ತಿತ್ತು ಎಂಬುದಕ್ಕೆ ಶಾಸನಾಧಾರಗಳಿವೆ. ಮೂಡಬಿದ್ರಿ ಹೊಸಬಸದಿಯಲ್ಲಿರುವ ಒಂದು ಶಾಸನವು,[4] ತುಳುದೇಶವು ಸುವರ್ಣ ಪುರಿಯಿಂದ ಅಂದರೆ, ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರದಿಂದ ಅಲಂಕೃತವಾಗಿ ಹೈವೆ.[5] ಕೊಂಕಣದ[6] ಭಾಗಗಳಿಂದ ಸುತ್ತುವರಿಯಲ್ಪಟ್ಟಿತ್ತು ಎಂದೂ, ನಗಿರೆಯು (ಗೇರು ಸೊಪ್ಪೆ) ಅದರ ಪ್ರಮುಖ ಕೇಂದ್ರವಾಗಿತ್ತೆಂದೂ ತಿಳಿಸುತ್ತದೆ. ಭಟ್ಕಳದ ಹತ್ತಿರದ ಮಾವಳಿಯ ಶಾಸನವೂ,[7] ಕೂಡ ತುಳುರಾಜ್ಯದ ರಾಜಧಾನಿ ಗೇರುಸೊಪ್ಪೆಯೆಂದು ತಿಳಿಸುತ್ತದೆ. ಕಾಯ್ಕಿಣಿ, ಭಟ್ಕಳ ಪರಿಸರದಲ್ಲಿರುವ ಇನ್ನೂ ಹಲವು ಶಾಸನಗಳು[8] ಕೂಡ ಇದೇ ಅಂಶವನ್ನು ಸ್ಪಷ್ಟಪಡಿಸುತ್ತದೆ. ಹೀಗಾಗಿ ತುಳುದೇಶವು ನಗಿರೆ, ಸಂಗೀತಪುರ, ಭಟ್ಕಳ, ಹೊನ್ನಾವರ ಮುಂತಾದ ಭೂಪ್ರದೇಶಗಳನ್ನೊಳಗೊಂಡ ಭೂಭಾಗವೆಂದೂ ಹೇಳಬಹುದು.

ಹಾಗೆಯೇ ಕೆಲವು ಶಾಸನಗಳು[9] ಬಾರಕೂರು ರಾಜ್ಯವನ್ನೂ ತುಳು ರಾಜ್ಯವೆಂದು ಹೆಸರಿಸಿವೆ. ರತ್ನಪ್ಪವೊಡೆಯರ ಕಾಲದ ಒಂದು ಶಾಸನವು[10] ಮಂಗಳೂರು ಮತ್ತು ಬಾರಕೂರು ಈ ಎರಡೂ ರಾಜ್ಯವನ್ನು ತುಳು ರಾಜ್ಯವೆಂದೇ ಹೆಸರಿಸಿವೆ. ಸುಬ್ರಹ್ಮಣ್ಯದ ಒಂದು ತಾಮ್ರ ಶಾಸನವು[11] ಮಂಗಳೂರನ್ನು ತುಳುಮಂಡಲದ ಒಂದು ಭಾಗವೆಂದು ವರ್ಣಿಸಿದೆ. ವಿಜಯನಗರದ ಅರಸರು ತುಳುನಾಡನ್ನು ಮಂಗಳೂರು ರಾಜ್ಯ ಹಾಗೂ ಬಾರ್ಕೂರು ರಾಜ್ಯ ಎಂಬುದಾಗಿ ವಿಂಗಡಿಸಿದ್ದರು. ಬಾರಕೂರು ರಾಜ್ಯವು ಉಡುಪಿ ಮತ್ತು ಕುಂದಾಪುರ ತಾಲೂಕುಗಳನ್ನು ಒಳಗೊಂಡಿದ್ದರೆ, ಮಂಗಳೂರು ರಾಜ್ಯವು ಇಂದಿನ ದಕ್ಷಿಣ ಕನ್ನಡ ಜಿಲ್ಲೆಯನ್ನು ಮತ್ತು ಕಾಸರಗೋಡು ತಾಲೂಕುಗಳನ್ನು ಒಳಗೊಂಡಿತ್ತು.

ತುಳುನಾಡಿನ ಪ್ರಮುಖ ಮೌಖಿಕ ಕಥನಗಳಾದ ಪಾಡ್ದನಗಳಲ್ಲೂ ತುಳುನಾಡಿನ ಪ್ರಾಕೃತಿಕ ಮೇರೆಗಳನ್ನು ಹೇಳಲಾಗಿದೆ. ಲೆಕ್ಕಸಿರಿ ಭೂತದ ಪಾಡ್ದನದಲ್ಲಿ "ಬಡಗು ಅಂಕೋಲೆಯಿಂದ, ತೆಂಕು ರಾಮೇಶ್ವರ, ಮೂಡುಘಟ್ಟ, ಪಡುಸಮುದ್ರ" ಎನ್ನುವ ಉಲ್ಲೇಖವಿದೆ.[12] ಹಾಗೆಯೇ ಉತ್ತರಕ್ಕೆ ಗಂಗೊಳ್ಳಿ ಹೊಳೆ, ದಕ್ಷಿಣಕ್ಕೆ ಮಲಯಾಳ, ಪೂರ್ವಕ್ಕೆ ಘಟ್ಟ ಹಾಗೂ ಪಶ್ಚಿಮಕ್ಕೆ ಸಮುದ್ರ, ತುಳುನಾಡಿನ ಮೇರೆಗಳು ಎನ್ನುವ ಮಾಹಿತಿಯನ್ನು ಪಾಡ್ದನಗಳು ನೀಡುತ್ತವೆ. ಆದರೆ ಪಾಡ್ದನಗಳಲ್ಲಿ ತುಳುನಾಡಿನ ಬಡಗು(ಉತ್ತರ) ಗಡಿಯ ಕುರಿತಾಗಿ ಒಂದೇ ರೀತಿಯ 'ನುಡಿ'(ದೈವ ನುಡಿಯುವ ಸತ್ಯದ ಮಾತು) ಕಂಡುಬರುವುದಿಲ್ಲ. ಕೆಲವು ಪಾಡ್ದನಗಳು ಬಡಗು ಗಂಗೆಯಿಂದ ಎಂಬುದಾಗಿ ಉತ್ತರದ ಮೇರೆಯನ್ನು ಹೇಳುತ್ತವೆ.[13]

ಕ್ರಿ.ಶ.16ನೇ ಶತಮಾನದ ಆದಿಯಲ್ಲಿ ಇಲ್ಲಿಗೆ ಭೇಟಿ ನೀಡಿದ್ದ ಪೋರ್ಚುಗೀಸ್ ಪ್ರವಾಸಿ ಡ್ಯೂರೆಟ್ ಬಾರ್ಬೋಜಾ 'ತುಳು ನಾಡು' ಪದವನ್ನು ಮೊದಲು ಬಳಸಿದ ವಿದೇಶೀ ಯಾತ್ರಿಕ. ತುಳುನಾಡು ದಕ್ಷಿಣದಲ್ಲಿ ಪಯಸ್ವಿನೀ ನದಿಯಿಂದ(ಕಾಸರಗೋಡು ಜಿಲ್ಲೆ) ಮೊದಲ್ಗೊಂಡು ಉತ್ತರದಲ್ಲಿ, ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರದವರೆಗಿನ ಭೂಪ್ರದೇಶವೆಂದು ಹೇಳುತ್ತಾನೆ. ಹಾಗೆಯೇ ಮಿರ್ಜಾನ್ ಅಂಕೋಲ ಕೂಡ ತುಳುನಾಡಿನ ಭಾಗವೆಂದು ಹೇಳುತ್ತಾನೆ.[14] ಪೋರ್ಚುಗೀಸ್ ಭಾಷೆಯಲ್ಲಿ ಕರಾವಳಿ ಕರ್ನಾಟಕಕ್ಕೆ ಕೆನರಾ ಪ್ರಾಂತ್ಯವೆಂದು ಕರೆಯುತ್ತಿದ್ದು, ಮುಂದೆ ಇದು ಮುಂದುವರೆದು ಬ್ರಿಟೀಷ್ ಆಡಳಿತದಲ್ಲಿ (1860) ಉತ್ತರ ಕನ್ನಡ ಹಾಗೂ ದಕ್ಷಿಣ ಕನ್ನಡ (ಸೌತ್ ಕೆನರಾ ಮತ್ತು ನಾರ್ತ್ ಕೆನರಾ) ಜಿಲ್ಲೆಗಳೆಂದು ವಿಭಾಗಿಸಲ್ಪಟ್ಟವು.

ಒಟ್ಟಿನಲ್ಲಿ, ಪೌರಾಣಿಕ ತುಳುನಾಡು, ರಾಜಕೀಯ ತುಳುನಾಡು, ಭೌಗೋಳಿಕ, ಭಾಷಿಕ ಮತ್ತು ಸಾಂಸ್ಕೃತಿಕ ತುಳುನಾಡು ವಿಭಿನ್ನ ವ್ಯಾಪ್ತಿಯನ್ನು ಹೊಂದಿದೆ. ಇದು ನಿರಂತರ ಹಿಗ್ಗುವಿಕೆ ಹಾಗೂ ಕುಗ್ಗುವಿಕೆಯ ಪ್ರಕ್ರಿಯೆಗೆ ಒಳಗಾಗಿದೆ. ಕೆಳದಿ ಆಳ್ವಿಕೆಯ ತುಳುನಾಡು ಕೇವಲ ತುಳು ಭಾಷಿಕ ಪ್ರದೇಶಕ್ಕೆ ಸೀಮಿತವಾಗದೆ, ವಿಶಾಲ ತುಳುನಾಡಿನ ವ್ಯಾಪ್ತಿಯನ್ನು ಹೊಂದಿತ್ತು. ಆದರೆ ಸಾಂಸ್ಕೃತಿಕ ತುಳುನಾಡಿನ ವ್ಯಾಪ್ತಿ ಹೆಚ್ಚು ಕಡಿಮೆ ಸ್ಥಿರವಾಗಿದೆ. ತುಳುಭಾಷೆ, ಇಲ್ಲಿಯ ಸಾಮಾಜಿಕ, ಆರ್ಥಿಕ ಹಾಗೂ ಧಾರ್ಮಿಕ ಆಯಾಮಗಳು, ಕೃಷಿ ಸಂಬಂಧಿ ಆಚರಣೆಗಳು ಸ್ಥಳೀಯ ವ್ಯಾಪಾರ–ವಹಿವಾಟುಗಳು ಆಡಳಿತ ಘಟಕಗಳಾದ ಊರು, ನಾಡು, ಸೀಮೆ, ಮಾಗಣೆ, ಗ್ರಾಮ, ಚಾವಡಿ, ಗುತ್ತು ಮುಂತಾದವುಗಳು, ಪಾಡ್ದನ ಮೊದಲಾದ ಮೌಖಿಕ ಪರಂಪರೆಗಳು, ಕಂಬಳ, ಯಕ್ಷಗಾನ, ಭೂತಾರಾಧನೆಯ ಪರಂಪರೆ ಈ ಸಾಂಸ್ಕೃತಿಕ ತುಳುನಾಡಿನಲ್ಲಿ ಈಗಲೂ ತನ್ನ ಪರಂಪರೆಯನ್ನು ಮುಂದುವರಿಸುತ್ತಿದೆ. ಪ್ರಸ್ತುತ, ಕೆಳದಿ ಆಳ್ವಿಕೆಯ ಕಾಲದ ತುಳುನಾಡಿನ ಅಧ್ಯಯನದಲ್ಲಿ ತುಳುನಾಡಿನ ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿರುವ ಭಾಷಿಕ ತುಳುನಾಡನ್ನು ಮಾತ್ರ ಅಧ್ಯಯನ ವ್ಯಾಪ್ತಿಯಲ್ಲಿ ಸೇರಿಸಲಾಗಿದೆ.

### 2.2 ಭೌಗೋಳಿಕ ಹಿನ್ನೆಲೆ

ತುಳುನಾಡಿನ ಗಡಿಗಳು ಅಂದಿನ ರಾಜಕೀಯ ವ್ಯತ್ಯಯಗಳಿಂದಾಗಿ ಪದೇ ಪದೇ ಬದಲಾಗುತ್ತಿತ್ತು. ನಾವು ಅಧ್ಯಯನಕ್ಕೆ ಸ್ವೀಕಾರ ಮಾಡಿದ ತುಳುನಾಡು ಇಂದಿನ ದಕ್ಷಿಣ ಕನ್ನಡ, ಉಡುಪಿ ಹಾಗೂ ಕೇರಳದ ಕಾಸರಗೋಡು ಜಿಲ್ಲೆಗಳನ್ನು ಒಳಗೊಂಡಿದೆ. ಪಶ್ಚಿಮಘಟ್ಟಗಳ ಕೆಳಗಿನ ಈ ಪ್ರದೇಶಗಳಲ್ಲಿ ಜನಜೀವನ ಬೇರೆಯೇ ಸ್ವರೂಪದಲ್ಲಿ ರೂಪುಗೊಂಡಿದೆ. ಘಟ್ಟದ ಮೇಲಿನ ಪ್ರದೇಶಗಳನ್ನು ಘಟ್ಟದ ಕೆಳಗಿನ ಪ್ರದೇಶಗಳನ್ನು ಹೋಲಿಸಿ ನೋಡಿದಾಗ ಈ ವ್ಯತ್ಯಾಸವನ್ನು ಗಮನಿಸಬಹುದು. ದಟ್ಟವಾದ ಅರಣ್ಯ ಮತ್ತು ಬೆಟ್ಟ ಗುಡ್ಡಗಳಿಂದ ಕೂಡಿರುವ ತುಳುನಾಡಿಗೆ ನದಿಗಳು, ಸಮುದ್ರದ ಲಭ್ಯತೆ ಮತ್ತು ಹಚ್ಚ ಹಸುರಿನಿಂದ ಕೂಡಿದ ಭೌಗೋಳಿಕ ಸೌಂದರ್ಯವಿದೆ. ಭೌಗೋಳಿಕ ಲಕ್ಷಣಗಳು ಒಂದು ಪ್ರದೇಶದ

ಮೇಲೆ ಬೀರುವ ಪರಿಣಾಮ ಗಮನಾರ್ಹವಾದುದು. ಈ ಹಿನ್ನೆಲೆಯಲ್ಲಿ ತುಳುನಾಡಿನ ಪ್ರಾಕೃತಿಕ ಲಕ್ಷಣಗಳನ್ನು ಇಲ್ಲಿ ವಿವರಿಸಲಾಗಿದೆ.

ತುಳುನಾಡೆಂದು ಗುರುತಿಸಲ್ಪಡುವ ಕಾಸರಗೋಡು, ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಗಳು ಆಡಳಿತಾತ್ಮಕವಾಗಿ ಪ್ರತ್ಯೇಕಗೊಂಡರೂ ಭೌಗೋಳಿಕವಾಗಿ ಒಂದೇ ರೀತಿಯ ಲಕ್ಷಣಗಳನ್ನು ಹೊಂದಿದೆ. ಈ ಪ್ರದೇಶದ ಮಳೆಯ ಪ್ರಮಾಣ ಜೂನ್‌ನಿಂದ ಅಕ್ಟೋಬರ್‌ವರೆಗೆ ಸರಾಸರಿ ಸುಮಾರು 4000ಮಿ.ಮೀ ನಷ್ಟು. ದಕ್ಷಿಣ ಕನ್ನಡ ಹಾಗೂ ಉಡುಪಿ 141 ಕಿ.ಮೀ ಉದ್ದದ ಸಮುದ್ರ ತೀರವನ್ನು ಹೊಂದಿದೆ. ಅಲ್ಲಿಂದ ದಕ್ಷಿಣಕ್ಕೆ ಚಂದ್ರಗಿರಿ ನದಿಯವರೆಗೆ ಸುಮಾರು 48ಕಿ.ಮೀ ಉದ್ದದ ಕರಾವಳಿ ತೀರವಿದೆ. ಕರಾವಳಿ ತೀರವು ಹೆಚ್ಚು ಕಡಿಮೆ ನೇರವಾಗಿದ್ದು ನದಿಗಳು ಸೇರುವಲ್ಲಿ ಮಾತ್ರ ಒಳಗಡೆ ಬಂದಂತೆ ಕಾಣಿಸುತ್ತದೆ. ತುಳುನಾಡಿನ ಉತ್ತರ ಅಕ್ಷಾಂಶ 12.4' 15" ರಿಂದ 13.58' 30" ಹಾಗೂ ಪೂರ್ವ ರೇಖಾಂಶ 74. 43' 26" ರಿಂದ 74.44' 31" ಇವುಗಳ ನಡುವೆ ಕಂಡು ಬರುತ್ತವೆ.[15] ಪಶ್ಚಿಮಕ್ಕೆ ಅರಬ್ಬೀ ಸಮುದ್ರ, ಪೂರ್ವಕ್ಕೆ ಮೈಸೂರು ಹಾಗೂ ಕೊಡಗು, ದಕ್ಷಿಣಕ್ಕೆ ತುಳು ಸಂಸ್ಕೃತಿಗೆ ಹತ್ತಿರವಾಗಿರುವ ಮಲಬಾರ್, ಉತ್ತರಕ್ಕೆ ಉತ್ತರ ಕನ್ನಡ ಜಿಲ್ಲೆ, ಪ್ರಾಕೃತಿಕ ಗಡಿಗಳಾಗಿವೆ. ಒಂದೇ ರೀತಿಯ ಮರ ಗಿಡಗಳು, ಸಸ್ಯಗಳು, ಹಾಗೂ ಪ್ರಾಣಿ ಪಕ್ಷಿಗಳು ತುಳುನಾಡಿನಾದ್ಯಂತ ಕಂಡುಬರುತ್ತದೆ. ಕಾಡು, ಬೆಟ್ಟ, ಗುಡ್ಡ, ಸಣ್ಣ ಪುಟ್ಟ ಬಯಲು ಪ್ರದೇಶ ಹಾಗೂ ಭತ್ತದ ಗದ್ದೆಗಳು ಇಲ್ಲಿಯ ಪ್ರಾಕೃತಿಕ ವೈವಿಧ್ಯಗಳಾಗಿವೆ. ಪಶ್ಚಿಮದ ಅರಬ್ಬೀ ಸಮುದ್ರ ಹಲವಾರು ಕಾರಣಗಳಿಂದ ಈ ಭಾಗಕ್ಕೆ ವರದಾನವಾಗಿದೆ. ಉತ್ತರದಿಂದ ದಕ್ಷಿಣಕ್ಕೆ ಬೈಂದೂರು, ಕುಂದಾಪುರ, ಬಸ್ರೂರು, ಬಾರ್ಕೂರು, ಕಲ್ಯಾಣಪುರ, ಬ್ರಹ್ಮಾವರ, ಮಲ್ಪೆ, ಉಡುಪಿ, ಕಾಪು, ಮೂಲ್ಕಿ, ಮಂಗಳೂರು, ಉಳ್ಳಾಲ, ಮಂಜೇಶ್ವರ, ಕುಂಬಳೆ ಹಾಗೂ ಕಾಸರಗೋಡಿನಂತಹ ಬಂದರು ಪಟ್ಟಣಗಳ ಹುಟ್ಟಿಗೆ ಮತ್ತು ವಿದೇಶೀ ವ್ಯಾಪಾರದ ಕೇಂದ್ರವಾಗಿ ತುಳುನಾಡಿನ ಗುರುತಿಸುವಿಕೆಗೆ ಇದು ಕಾರಣವಾಗಿದೆ. ಇವುಗಳಲ್ಲಿ ಮಂಗಳೂರು, ಪ್ರಾಚೀನ ಕಾಲದಿಂದಲೂ ಕರಾವಳಿಯ ಪ್ರಮುಖ ವ್ಯಾಪಾರ ಕೇಂದ್ರವಾಗಿ ಗುರುತಿಸಿಕೊಂಡಿದೆ. ಇದು ಸ್ಥಳೀಯ ಸಾಮಂತರಸರಿಗೆ, ಹೊರಗಿನ ಸಾಮ್ರಾಜ್ಯಗಳಿಗೆ, ಪರ್ಷಿಯನ್ನರಿಗೆ, ಅರೇಬಿಯನ್ನರಿಗೆ ಹಾಗೂ ಯುರೋಪಿಯನ್ನರಿಗೆ ಆಕರ್ಷಣೆಯ ಕೇಂದ್ರವಾಗಿತ್ತು. ಮಂಗಳಾಪುರವೆಂದು ಕರೆಯಲ್ಪಟ್ಟ ಮಂಗಳೂರು ಅಳುಪರ ರಾಜಧಾನಿಯಾಗಿತ್ತು.[16] ಪೋರ್ಚುಗೀಸರು ಮತ್ತು ನಂತರ ಬ್ರಿಟೀಷರು ಈ ಕೇಂದ್ರವನ್ನು ತಮ್ಮ ಪ್ರಮುಖ ಕಾರ್ಯಸ್ಥಾನವನ್ನಾಗಿ ಪರಿವರ್ತಿಸಿಕೊಂಡರು. ಗುರುಪುರ ಮತ್ತು ನೇತ್ರಾವತಿ ನದಿಗಳು ಸೇರುವ ಪ್ರದೇಶದಲ್ಲಿ ಈ ಪಟ್ಟಣ ಇರುವುದರಿಂದ ದೋಣಿಯ ಮೂಲಕ ಸಾಗಾಟ ವ್ಯವಹಾರಕ್ಕೂ ಅನುಕೂಲವಾಯಿತು. ವಿಜಯನಗರದ ಅರಸರ ಆಳ್ವಿಕೆಯ ಸಂದರ್ಭದಲ್ಲಿ ಹಂಜಮಾನ ಎನ್ನುವ ವರ್ತಕ ಸಂಘ, ಅದೇ ರೀತಿ ಸೆಟ್ಟಿಕಾರ, ಬಳಂಜು, ನಾನಾದೇಶಿ, ನಖರ ಮುಂತಾದ ವರ್ತಕ ಸಂಘಗಳು ಈ ಭಾಗದಲ್ಲಿ ಸಕ್ರಿಯವಾಗಿದ್ದವು. ಇದಕ್ಕೆ ಕಾರಣ ಕರಾವಳಿಯ ಬಂದರುಗಳು ಕೃಷಿ ಉತ್ಪನ್ನಗಳ ವ್ಯಾಪಾರೀ

ಕೇಂದ್ರಗಳಾಗಿದ್ದವು. ತುಳುನಾಡಿನ ಪ್ರಮುಖ ನೈಸರ್ಗಿಕ ಬಂದರಿನ ಅಸ್ತಿತ್ವದಿಂದಾಗಿ, ಕೃಷಿ ಉತ್ಪನ್ನಗಳಾದ ಭತ್ತ, ಕರಿಮೆಣಸು, ತೆಂಗು, ಅಡಿಕೆ, ವೀಳ್ಯದೆಲೆ, ಕಬ್ಬು ಮುಂತಾದವು ಮಸ್ಕತ್, ಪೆಗು, ಟರ್ಕಿ, ಒಮಾನ್, ಆಮೇಸಿಯಾ, ಆರ್ಮುಜ್, ಮಾಲ್ಡಿವ್ಸ್, ಚೀನಾ ಮುಂತಾದ ದೇಶಗಳಿಗೆ ಹಾಗೂ ದೇಶದ ಒಳಗೆ ಕಲ್ಲಿಕೋಟೆ, ಬಂಗಾಳ, ಸೂರತ್, ಮುಂತಾದ ಸ್ಥಳಗಳಿಗೆ ರಫ್ತಾಗುತ್ತಿತ್ತು. ಕಬ್ಬಿಣ, ತಾಮ್ರ, ತವರ, ರೇಶ್ಮೆ, ಹತ್ತಿ ಮುಂತಾದ ಸಾಮಾಗ್ರಿಯನ್ನು ಆಮದು ಮಾಡಿಕೊಳ್ಳಲಾಗುತ್ತಿತ್ತು.[17] ಯುರೋಪಿಯನ್ನರ ಆಗಮನದಿಂದ ಪೋರ್ಚುಗಲ್, ಸ್ಪೇಯಿನ್, ಇಂಗ್ಲೆಂಡ್, ಫ್ರಾನ್ಸ್ ಮುಂತಾದ ಹೊಸ ಮಾರುಕಟ್ಟೆಗಳೂ ಸೃಷ್ಟಿಯಾಯಿತು.

ತುಳುನಾಡಿನಲ್ಲಿ ಹರಿಯುವ ನದಿಗಳಲ್ಲಿ ನೇತ್ರಾವತಿ, ಕುಮಾರಧಾರ, ಚಂದ್ರಗಿರಿ ಅಥವಾ ಪಯಸ್ವಿನಿ, ಸೀತಾ, ಸುವರ್ಣ, ಗಂಗೊಳ್ಳಿ, ಕಲ್ಯಾಣಪುರ, ನಂದಿ, ಶಾಂಭವಿ, ಚಕ್ರ, ಹಾಲಾಡಿ, ಕೊಲ್ಲೂರು, ಬೇಕಲ, ನೀಲೇಶ್ವರ, ಹಾಗೂ ಪಾವಂಜೆ ನದಿಗಳು ಪ್ರಮುಖವಾಗಿವೆ. ಇವುಗಳಲ್ಲದೆ ಹಲವಾರು ತೊರೆಗಳೂ ಇಲ್ಲಿವೆ. ನದಿಗಳು ಜಲಪಾತಗಳನ್ನು, ನಡು ಗಡ್ಡೆಗಳನ್ನು ಕೂರ್ವೆಗಳನ್ನು ಅಳಿವೆಗಳನ್ನು ಸೃಷ್ಟಿಸಿವೆ. ಕುದುರುಗಳು (ನಡುಗಡ್ಡೆ) ಮಳೆಗಾಲದಲ್ಲಿ ನದಿಗಳು ತುಂಬಿ ಹರಿಯುವಾಗ ಸಂಪೂರ್ಣವಾಗಿ ಹೊರ ಜಗತ್ತಿನ ಸಂಪರ್ಕವನ್ನು ಕಡಿದುಕೊಳ್ಳುತ್ತವೆ. ಇತಿಹಾಸ ಕಾಲದಲ್ಲಿ ನದಿಗಳು ವ್ಯಾಪಾರ ವಾಣಿಜ್ಯದಲ್ಲಿ ಪ್ರಮುಖ ಪಾತ್ರವಹಿಸುತ್ತಿತ್ತು. ಇದಕ್ಕೆ ಕಾರಣ ರಸ್ತೆ ಸಾರಿಗೆ ಅಷ್ಟೊಂದು ಸುಧಾರಣೆ ಕಂಡಿರಲಿಲ್ಲ. ವಸ್ತುಗಳನ್ನು ನದಿಗಳ ಮೂಲಕ ಪಟ್ಟಣಗಳಿಗೆ ಸಾಗಿಸಲಾಗುತ್ತಿತ್ತು. ಇದು ದೋಣಿಗಳ ಮೂಲಕ ನಡೆಯುತ್ತಿತ್ತು. ಇದು ಅತ್ಯಂತ ಮಿತವ್ಯಯದ ಹಾಗೂ ಅಧಿಕ ಭಾರವನ್ನು ಕಡಿಮೆ ಸಮಯದಲ್ಲಿ ತಲುಪಿಸುವ ಸಂಪರ್ಕ ಮಾಧ್ಯಮವಾಗಿತ್ತು. ನೇತ್ರಾವತಿ ನದಿ ತನ್ನ ದಡದಲ್ಲಿ ಉಪ್ಪಿನಂಗಡಿ, ಬಂಟ್ವಾಳ, ಪಾಣೆಮಂಗಳೂರು, ಫರಂಗಿಪೇಟೆ, ಉಳ್ಳಾಲದಂತಹ ಪಟ್ಟಣಗಳ ಬೆಳವಣಿಗೆಗೆ ಕಾರಣವಾಯಿತು. ಈ ಪಟ್ಟಣಗಳಿಂದ ಮಂಗಳೂರಿಗೆ ಹಾಗೂ ಮಂಗಳೂರಿನಿಂದ ಈ ಪಟ್ಟಣಗಳಿಗೆ ಭತ್ತ, ಕಾಫಿ, ತೆಂಗು, ಉಪ್ಪು ಮುಂತಾದವು ಸಾಗಣಿಕೆಯಾಗುತ್ತಿತ್ತು. ಮಂಗಳೂರನ್ನು ಸುತ್ತುವರೆದಿರುವ ಗುರುಪುರದ ನದಿಯಲ್ಲಿ ಪಿಯತ್ರೋ ಡೆಲ್ಲಾ ವಲ್ಲೆ ಮತ್ತು ಅಬ್ಬಕ್ಕ ಮಣೇಲಿನಿಂದ ಹೋಗಿ ಬರುವ ಚಿತ್ರಣದ ಮಾಹಿತಿ ಲಭ್ಯವಾಗುತ್ತದೆ.[18] ಈ ರೀತಿಯಾಗಿ ತುಳುನಾಡಿನ ನದಿಗಳು ಅಲ್ಲಿಯ ಸಾರಿಗೆ ಸಂಪರ್ಕ ಕೃಷಿ ಹಾಗೂ ನಗರ ಅರ್ಥವ್ಯವಸ್ಥೆಗಳೆರಡರಲ್ಲೂ ಮಹತ್ವದ ಪಾತ್ರವಹಿಸಿವೆ.

ಕೆಳದಿ ಕಾಲದಲ್ಲಿ ತುಳುನಾಡಿಗೆ ಸಂಬಂಧಿಸಿದಂತೆ ಪಶ್ಚಿಮಘಟ್ಟದ ಮೇಲಿನ ಹಾಗೂ ಘಟ್ಟದ ಕೆಳಗಿನ ಪ್ರದೇಶಗಳು ಎನ್ನುವ ವಿಂಗಡಣೆ ಕಂಡುಬರುತ್ತದೆ.[19] ಗುಜರಾತ್‌ನ ಸೂರತ್‌ನಿಂದ ದಕ್ಷಿಣದ ಕನ್ಯಾಕುಮಾರಿಯವರೆಗೆ ಸುಮಾರು 1600 ಕಿ.ಮೀ. ಉದ್ದವಿರುವ ಪಶ್ಚಿಮಘಟ್ಟಗಳು ಕರ್ನಾಟಕದೊಳಗೂ ಹಾಸುಹೊಕ್ಕಾಗಿದೆ. ಸಮುದ್ರದಿಂದ ಸುಮಾರು 50 ಮೈಲು ದೂರದಲ್ಲಿರುವ ಸಹ್ಯಾದ್ರಿ ಶ್ರೇಣಿ, ಸಮುದ್ರ ಮಟ್ಟದಿಂದ 600 ರಿಂದ 700 ಮೀಟರ್‌ಗಳಷ್ಟು ಎತ್ತರದಲ್ಲಿದೆ. ಸಮುದ್ರದಿಂದ ಬೀಸುವ ಮಾರುತಗಳನ್ನು ತಡೆದು ತುಳುನಾಡಿಗೆ ಮಳೆಯನ್ನು ಸುರಿಸುವ ಪ್ರಕ್ರಿಯೆಯಲ್ಲಿ ಇವು ಸಹಕಾರಿಯಾಗಿವೆ. ಇವುಗಳಲ್ಲಿ

ಅತ್ಯಂತ ಎತ್ತರದ ಗಿರಿಶಿಖರಗಳೂ ಇವೆ. ಕುದುರೆಮುಖ, ಕುಮಾರಪರ್ವತ, ಬಲ್ಲಾಳರಾಯನ ದುರ್ಗ, ಅಮೆದಿಕ್ಕಲ್, ವಾಲಿಕುಂಜಿ, ಕೊಡಚಾದ್ರಿ ಮುಂತಾದವು ಇವುಗಳಲ್ಲಿ ಪ್ರಮುಖವಾಗಿವೆ. ಅತ್ಯಂತ ಎತ್ತರವಾಗಿರುವ ಕೆಲವು ಶಿಖರಗಳು 6200ಅಡಿಗಳಷ್ಟು ಎತ್ತರವಾಗಿವೆ. ದಕ್ಷಿಣದಲ್ಲಿ ಸುಬ್ರಹ್ಮಣ್ಯದ ಬಳಿಯ ಪುಷ್ಪಗಿರಿ ಶಿಖರ 5667ಅಡಿ ಎತ್ತರವಾಗಿದೆ.[20] ಈ ಬೆಟ್ಟ ಪರ್ವತಗಳು ತುಳುನಾಡನ್ನು ಕರ್ನಾಟಕದ ಇತರ ಸ್ಥಳಗಳಿಂದ ಬೇರ್ಪಡಿಸಿ ಇಲ್ಲಿ ಪ್ರತ್ಯೇಕವಾದ ಸಂಸ್ಕೃತಿ ಬೆಳೆಯಲು ಕಾರಣವಾಗಿತ್ತು.

ಘಟ್ಟದ ಮೇಲಿನ ಪ್ರದೇಶಗಳಿಗೆ ತುಳುನಾಡಿನ ಸಂಪರ್ಕ ಸಾಧ್ಯವಾದದ್ದು ಪಶ್ಚಿಮಘಟ್ಟಗಳ ಮೂಲಕ. ಈ ಸಂಪರ್ಕ ಸಾಧಿಸುವಲ್ಲಿ ಘಟ್ಟ ರಸ್ತೆಗಳ ಪಾತ್ರ ಮಹತ್ವವಾಗಿದೆ. ಬ್ರಿಟೀಷ್ ಆಳ್ವಿಕೆಗೆ ಪೂರ್ವದಲ್ಲಿ ಬಂಡಿಗಳು ಓಡಾಡುವುದಕ್ಕೆ ರಸ್ತೆಗಳು ಹಾಗೂ ಮಾನವನ ಸಂಚಾರಕ್ಕೆ ಕಾಲುದಾರಿಗಳಿದ್ದವು. ತುಳುನಾಡಿನ ಸಾಮಂತರೆಲ್ಲರೂ ಕರ್ನಾಟಕದ ಇತರ ರಾಜಮನೆತನಗಳೊಂದಿಗೆ ಸಂಬಂಧ ಹೊಂದಿದ್ದವು. ಕಪ್ಪ ಕಾಣಿಕೆಗಳನ್ನು ನೀಡುವ ಸಲುವಾಗಿ, ಸೈನಿಕ ನೆರವನ್ನು ನೀಡಲು ಮತ್ತು ವ್ಯಾಪಾರ ಸಂಬಂಧೀ ಚಟುವಟಿಕೆಗಳಿಗಾಗಿ ನಿರಂತರ ಸಂಪರ್ಕ ಬೇಕಾಗಿತ್ತು. ಘಟ್ಟ ಪ್ರದೇಶಗಳ ದಟ್ಟಾರಣ್ಯ ಮತ್ತು ಕಡಿದಾದ ಬೆಟ್ಟಗುಡ್ಡಗಳ ಮೂಲಕ ನೋಡಿದರೆ ಇವುಗಳನ್ನು ಹಾದು ಹೋಗುವುದು ಅಷ್ಟು ಸುಲಭ ಸಾಧ್ಯವಾಗಿರಲಿಲ್ಲ. ಮೈಸೂರು ಹಾಗೂ ಕೊಡಗು ಪ್ರದೇಶಗಳೊಂದಿಗೆ ತುಳುನಾಡನ್ನು ಸಂಪರ್ಕಿಸುತ್ತಿದ್ದ ಪ್ರಮುಖ ಘಟ್ಟ ರಸ್ತೆಗಳೆಂದರೆ ಸಂಪಾಜೆ, ಚಾರ್ಮಾಡಿ, ಆಗುಂಬೆ, ಶಿರಾಡಿ, ಹೊಸಂಗಡಿ, ಬಿಸ್ಲೆ, ಕೊಲ್ಲೂರು ಹಾಗೂ ಶಿಶಿಲ. ಉತ್ತರ ಕನ್ನಡ ಜಿಲ್ಲೆಯ ಮೂಲಕ ರಾಜ್ಯದ ಇತರ ಪ್ರದೇಶಗಳಿಗೆ ಸಂಪರ್ಕ ಕಲ್ಪಿಸುತ್ತಿದ್ದ ಘಟ್ಟ ರಸ್ತೆಗಳಲ್ಲಿ ಮಾವಿನಗುಂಡಿ, ಅಣಸಿ, ದೇವಿಮನೆ, ಅರಬೈಲ್, ಮಲೆಮನೆ ಮುಂತಾದವು ಪ್ರಮುಖವಾಗಿದೆ.[21]

ಹಲವು ರೀತಿಯಲ್ಲಿ ತುಳುನಾಡು ಭೌಗೋಳಿಕವಾಗಿ ಹಾಗೂ ಆರ್ಥಿಕ ಲಕ್ಷಣಗಳಲ್ಲಿ ಇದರ ಪಕ್ಕದ ಜಿಲ್ಲೆಗಳಾದ ಕೊಡಗು, ಶಿವಮೊಗ್ಗ, ಚಿಕ್ಕಮಗಳೂರು ಇತ್ಯಾದಿ ಜಿಲ್ಲೆಗಳನ್ನು ಹೋಲುತ್ತದೆ.[22] ಪಿಯತ್ರೋ ಡೆಲ್ಲಾ ವಲ್ಲೆ ಕರಾವಳಿಯಿಂದ ಕೆಳದಿಗೆ ಸಾಗಿದ ದಾರಿಯ ಪರಿಸರವನ್ನು ಸುಂದರವಾಗಿ ವರ್ಣಿಸಿದ್ದಾನೆ. ಈ ಭಾಗದ ಸಮತಟ್ಟಾದ ಪ್ರದೇಶಗಳು ಸಮುದ್ರ ಮಟ್ಟದಿಂದ 150ರಿಂದ 300 ಅಡಿಗಳಷ್ಟು ಎತ್ತರದಲ್ಲಿದ್ದರೆ ಪರ್ವತ ಶ್ರೇಣಿಗಳು 1000 ದಿಂದ 1500 ಅಡಿಗಳಷ್ಟು ಎತ್ತರದಲ್ಲಿದೆ. ಲಿಂಗಣ್ಣ ಕವಿಯು ತನ್ನ ಕೆಳದಿ ನೃಪವಿಜಯದಲ್ಲಿ ಸಹ್ಯಾದ್ರಿಯ ಸೌಂದರ್ಯವನ್ನು ವರ್ಣಿಸುತ್ತಾ ಅಲ್ಲಿರುವ ನದಿಗಳು, ಪವಿತ್ರ ತೀರ್ಥಗಳನ್ನು ವರ್ಣಿಸುತ್ತಾನೆ.[23] ಅದೇ ರೀತಿ ಘಟ್ಟ ಪ್ರದೇಶದಲ್ಲಿ ಬೆಳೆಯುತ್ತಿದ್ದ ಬೆಲೆಬಾಳುವ ಮರಗಳ ಬಗ್ಗೆ ಬಾರ್ಬೋಸ ಉಲ್ಲೇಖಿಸುತ್ತಾನೆ.[24] ಘಟ್ಟ ಪ್ರದೇಶದ ದೊಡ್ಡ ದೊಡ್ಡ ಮರಗಳು, ತೊರೆಗಳು ಹಾಗೂ ಜಲಪಾತಗಳ ಉಲ್ಲೇಖವನ್ನು ಪಿಯತ್ರೋ ಡೆಲ್ಲಾ ವಲ್ಲೆಯ ಬರಹಗಳಲ್ಲಿಯೂ ಕಾಣಬಹುದು.[25] ಇಲ್ಲಿ ಬೆಳೆಯುವ ಮರಗಳಿಗೂ ವಿಶೇಷ ಬೇಡಿಕೆ ಇದ್ದು ಕೆಳದಿಯರಸರು ಮತ್ತು ಪೋರ್ಚುಗೀಸರ ಒಪ್ಪಂದಗಳಲ್ಲಿ ಹಡಗು ನಿರ್ಮಾಣಕ್ಕೆ ಬಳಸುವ "ಕುವೆ" ಮರ ಮತ್ತಿತರ ಮರಗಳ ಉಲ್ಲೇಖಗಳು ಕಂಡುಬರುತ್ತವೆ.[26] ತುಳುನಾಡಿನ

ಮಣ್ಣಿನ ಫಲವತ್ತತೆಯ ಕುರಿತಂತೆ ಕವಿ ಚದುರಚಂದ್ರಮನ ಅವಲೋಕನದಂತೆ, ತುಳುದೇಶ ಸಮುದ್ರದ ತೀರದಲ್ಲಿದ್ದು ಹಸಿರಾದ ಭತ್ತದ ಗದ್ದೆಗಳಿಂದ, ಹೂ ಹಣ್ಣು ಹಂಪಲು ಮರಗಳಿಂದ ಅಲಂಕೃತಗೊಂಡಿದೆ. ಅವನ ಪ್ರಕಾರ ತುಳುನಾಡು ವಿವಿಧ ಧಾನ್ಯಗಳ ಬೇಸಾಯಕ್ಕೆ ಪ್ರಸಿದ್ಧವಾಗಿದೆ.[27] ಮೂಲ್ಕಿಯ ಪದ್ಮನಾಭ ಕವಿಯೂ ಮೂಲ್ಕಿ ಪರಿಸರದ ಭತ್ತದ ಗದ್ದೆಗಳು ಮತ್ತಿತರ ಪರಿಸರದ ಮಾಹಿತಿ ನೀಡುತ್ತಾನೆ.[28] ಕರಾವಳಿಯ ಶ್ರೀಮಂತಿಕೆ ವಿದೇಶಿಯರ ಗಮನವನ್ನು ಸೆಳೆದಿದೆ. ಡಚ್ ಯಾತ್ರಿಕ ಬಾಲ್ಡೂಸ್‌ನ ಉಲ್ಲೇಖದಂತೆ ಕೆನರಾ ಪ್ರದೇಶ ಅಕ್ಕಿ ಮತ್ತು ಇತರ ಉತ್ಪನ್ನಗಳಿಂದ ಶ್ರೀಮಂತವಾಗಿತ್ತು ಮತ್ತು ಯಾವುದೇ ರೀತಿಯ ಕೆಲಸ ಪೂರೈಸುವ ಸಾಮರ್ಥ್ಯ ಇರುವ ಆರೋಗ್ಯವಂತ ಜನರನ್ನು ಹೊಂದಿತ್ತು.[29]

ಪಶ್ಚಿಮಘಟ್ಟಗಳು ಕೃಷಿ ಆರ್ಥಿಕತೆಯ ಮೇಲೆ ಬಹಳಷ್ಟು ಪ್ರಭಾವವನ್ನು ಬೀರಿತು. ಇದಕ್ಕೆ ಕಾರಣ ಅವುಗಳ ಪ್ರಭಾವವದಿಂದ ಬೀಸುವ ಮಾರುತ, ಕೃಷಿ ವ್ಯವಸ್ಥೆಯ ಮೇಲೆ ಪ್ರಭಾವ ಬೀರಿತ್ತು.[30] ತುಳುನಾಡಿನ ರಾಜರುಗಳು, ಮತ್ತು ಅಧಿಕಾರಿಗಳು ಅಣೆಕಟ್ಟುಗಳ ನಿರ್ಮಾಣದ ಮೂಲಕ ನದಿಗಳ ಉಪಯುಕ್ತತೆಯನ್ನು ಹೆಚ್ಚಿಸಿದ್ದರು.[31] ಈ ಅಣೆಕಟ್ಟೆಗಳ ಮೂಲಕ ಕೃಷಿ ಉತ್ಪನ್ನ ಮತ್ತು ಕೃಷಿ ವ್ಯಾಪಾರ ಹೆಚ್ಚಾಯಿತು. ಮೇಲೆ ಹೆಸರಿಸಿದ ತುಳುನಾಡಿನ ಪ್ರಮುಖ ನದಿಗಳಲ್ಲದೆ ಇನ್ನಿತರ ಹಲವು ಉಪನದಿಗಳಿದ್ದು ಮಳೆಗಾಲದಲ್ಲಿ ಇವು ತಾತ್ಕಾಲಿಕ ಪ್ರವಾಹವನ್ನು ಸೃಷ್ಟಿಸುತ್ತವೆ. ಈ ನದಿಗಳು ಪದೇ ಪದೇ ತಮ್ಮ ದಿಕ್ಕನ್ನು ಬದಲಾಯಿಸಿ ಬೆಳೆಗಳನ್ನು ನಾಶ ಪಡಿಸಿದ್ದೂ ಇದೆ. ದಾಖಲೆಗಳಲ್ಲಿ ಇವುಗಳನ್ನು ಹೊಳೆ ಹರಿದ ನಷ್ಟ ಎಂಬುದಾಗಿ ಕರೆಯಲಾಗಿದೆ.[32] ಇದೇ ಸಂದರ್ಭದಲ್ಲಿ ಈ ರೀತಿಯ ಪ್ರವಾಹಗಳಿಂದ ಸೃಷ್ಟಿಯಾದ ಫಲವತ್ತಾದ ಭೂಮಿಯನ್ನು ಕಜ್ಜಿಯಾನ ಅಥವಾ ಗಜನಿ ಎಂದು ಕರೆಯಲಾಗಿದೆ. ಈ ನದಿಗಳ ಮೂಲ, ಹರಿಯುವ ದಿಕ್ಕು ಮತ್ತು ಅವುಗಳ ಪ್ರಾಮುಖ್ಯತೆಯನ್ನು ಪೋರ್ಚುಗೀಸ್ ದಾಖಲೆಗಳು ವಿವರಿಸುತ್ತವೆ.[33] ನೇತ್ರಾವತಿ ನದಿಯ ಹರಿಯುವಿಕೆ, ಅದರ ಅಕ್ಕ ಪಕ್ಕದ ಪರಿಸರದ ಕುರಿತಾಗಿ ಬಾರ್ಬೋಸ, ಪಿಯತ್ರೋ ಡೆಲ್ಲಾ ವಲ್ಲೆ, ಜಾನ್ ಫ್ರೇಯರ್, ಬುಕಾನನ್ ಮುಂತಾದ ವಿದೇಶಿ ಯಾತ್ರಿಕರು ಉಲ್ಲೇಖಿಸಿದ್ದಾರೆ. ಈ ನದಿ ಬಂಟವಾಳ, ಉಪ್ಪಿನಂಗಡಿ, ನಂದಾವರ ಮುಂತಾದ ಬಂಗರ ಪ್ರಮುಖ ವ್ಯಾಪಾರಿ ಕೇಂದ್ರಗಳನ್ನು ಹೊಂದಿತ್ತು ಮತ್ತು ನದೀ ವ್ಯಾಪಾರದಲ್ಲಿ ಬಹುಮುಖ್ಯ ಪಾತ್ರವಹಿಸಿತ್ತು.

ಚಂದ್ರಗಿರಿ ನದಿ ಐತಿಹಾಸಿಕ ಮಹತ್ವವನ್ನು ಹೊಂದಿದೆ.[34] ಇದು ತುಳುವ ಮತ್ತು ಮಲಯಾಳ ಪ್ರದೇಶಗಳನ್ನು ಬೇರ್ಪಡಿಸುತ್ತದೆ. ಈ ನದಿಗೆ ಎರಡು ಉಪನದಿಗಳಿವೆ. ಪಯಸ್ವಿನಿ, ಕೊಡಗಿನ ಸಂಪಾಜೆಯಲ್ಲಿ ಹುಟ್ಟಿ ಪಶ್ಚಿಮಾಭಿಮುಖವಾಗಿ ಹರಿದು ಸಮುದ್ರ ಸೇರುತ್ತದೆ. ಸುಳ್ಯ ನಗರಕ್ಕೆ ಸಮೀಪವಿರುವ ಕಾಂತಮಂಗಲ ಎನ್ನುವ ಸ್ಥಳದಲ್ಲಿ ಕೆಳದಿಯರಸರ ಕೋಟೆ ಇದ್ದ ಮಾಹಿತಿ ಕೆಳದಿ ನೃಪ ವಿಜಯದಲ್ಲಿ ಉಲ್ಲೇಖಿಸಲ್ಪಟ್ಟಿದೆ.[35] ಇದರ ಕುರುಹುಗಳನ್ನು ಇಂದಿಗೂ ಕಾಣಬಹುದಾಗಿದ್ದು ಪಯಸ್ವಿನೀ ನದಿಯ ಪಕ್ಕದಲ್ಲಿರುವ ಈ ಕೋಟೆ ಆಯಕಟ್ಟಿನ ಸ್ಥಳದಲ್ಲಿದ್ದು ಕೆಳದಿಯರಸರ ಒಂದು ಪ್ರಮುಖ ಕೇಂದ್ರವಾಗಿತ್ತು ಎಂದು ಭಾವಿಸಬಹುದಾಗಿದೆ.

ಪಯಸ್ವಿನಿ ನದಿಯ ಮೂಲಕ ಈ ಕೋಟೆಯಿಂದ ಸರಕುಗಳನ್ನು ಕಾಸರಗೋಡು ಅಥವಾ ಚಂದ್ರಗಿರಿ ಕೋಟೆಗಳಿಗೆ ಸಾಗಿಸುತ್ತಿದ್ದಿರಬೇಕು.[36] 65 ಮೈಲುಗಳಷ್ಟು ಉದ್ದವಾಗಿರುವ ಈ ನದಿಯ ನೀರನ್ನು ಕೃಷಿಗೆ ವಿಪುಲವಾಗಿ ಬಳಸಲಾಗುತ್ತಿತ್ತು.

ಚಂದ್ರಗಿರಿ ನದಿಯ ನೀರನ್ನೂ ಕೃಷಿಗೆ ಬಳಸಲಾಗುತ್ತಿತ್ತು. ನದಿಯ ಇಕ್ಕೆಲಗಳಲ್ಲಿ ಎತ್ತರದ ಪ್ರದೇಶಗಳು ಹಾಗೂ ಭತ್ತದ ಗದ್ದೆಗಳೂ ತಾಳೆ ಮರಗಳ ತೋಟಗಳೂ ನಾಯರ್ ಜನಾಂಗದ ಜನರ ಮನೆಗಳೂ ಇದ್ದವು.[37] ಹಾಗೆಯೇ ಕುಂಬಳೆ ನದಿಯ ನೀರನ್ನು ತೆಂಗು ಮತ್ತು ಭತ್ತದ ಕೃಷಿಗೆ ಬಳಸಲಾಗುತ್ತಿತ್ತು. ಸಮುದ್ರದ ಬಳಿಯಲ್ಲಿ ಕಬ್ಬನ್ನು ಬೆಳೆಯಲಾಗುತ್ತಿತ್ತು. ಕುಂಬಳೆ ಪಟ್ಟಣ ಉಪ್ಪು ನೀರಿನ ಹಿನ್ನೀರಿನ ಪಕ್ಕದಲ್ಲಿದೆ ಎಂಬುದಾಗಿ ಐತಿಹಾಸಿಕ ಉಲ್ಲೇಖಗಳಿವೆ. ಕುಂಬಳೆ, ಮಂಜೇಶ್ವರ, ಚಂದ್ರಗಿರಿ ನದಿಗಳ ಕಾರಣದಿಂದಾಗಿ ಒಳನಾಡಿನ ತೆಂಗು, ಅಕ್ಕಿ, ಕರಿಮೆಣಸುಗಳು ನದಿಯ ಮೂಲಕ ಬಂದರಿಗೆ ಬಂದು ಗುಜರಾತ್ ಮತ್ತು ಅರೇಬಿಯಾಗಳಿಗೆ ರಫ್ತಾಗುತ್ತಿತ್ತು.[38]

ತುಳುನಾಡಿನ ಉತ್ತರಕ್ಕಿರುವ ನದಿಗಳೆಂದರೆ ಗುರುಪುರ, ಶಾಂಭವಿ, ಗಂಗೊಳ್ಳಿ, ಸೀತಾನದಿ ಮತ್ತು ಸ್ವರ್ಣಾನದಿ. ಗುರುಪುರ ನದಿಯಲ್ಲಿ ಅಬ್ಬಕ್ಕನ ಮತ್ತು ವೆಂಕಟಪ್ಪನ ಸುಂಕ ಠಾಣೆಗಳ ಮಾಹಿತಿ ಹಾಗೂ ಆಂತರಿಕ ಜಲ ಸಾರಿಗೆ ವ್ಯವಸ್ಥೆ ಬಗ್ಗೆ ಪಿಯತ್ರೋ ಡೆಲ್ಲಾ ವಲ್ಲೆ ವಿವರಿಸುತ್ತಾನೆ.[39] ಮೂಲ್ಕಿ ಪರಿಸರದಲ್ಲಿ ಹರಿಯುವ ಶಾಂಭವಿ ನದಿ, ಕಾರ್ನಾಟೆ(ಕಾರ್ನಾಡು) ಪ್ರದೇಶವನ್ನು ಸುತ್ತುವರಿದು ಹರಿಯುತ್ತದೆ. ಕ್ರಿ.ಶ.1580ರ ಪೋರ್ಚುಗೀಸ್ ದಾಖಲೆಗಳು ಹೇಳುವಂತೆ ಈ ಜಾಗದಲ್ಲಿ ದ್ವೀಪಗಳ ಗುಂಪಿನ ಅಸ್ತಿತ್ವವಿತ್ತು. ಇವುಗಳು ಫಲವತ್ತಾಗಿದ್ದು ಇಲ್ಲಿ ಬೇಸಾಯ ಮಾಡಲಾಗುತ್ತಿತ್ತು. ವಿದೇಶಿ ದಾಖಲೆಗಳು ಮತ್ತು ಅವರ ನಕ್ಷೆಗಳು ಸೂಚಿಸುವಂತೆ ಇಂದಿನ ಮೂಲ್ಕಿ ಪಟ್ಟಣದ ಹೆಚ್ಚಿನ ಭೂಪ್ರದೇಶ ನೀರಿನಿಂದ ಆವೃತವಾಗಿತ್ತು. ಈಗ ಅಲ್ಲಿರುವ ಹೆಚ್ಚಿನ ವ್ಯವಸಾಯ ಯೋಗ್ಯ ಭೂಮಿ ಗಜನಿಯಾಗಿತ್ತು.[40] ಇಲ್ಲಿ ಕೆಳದಿ ನಾಯಕರ ಒಂದು ಕೋಟೆಯೂ ಇತ್ತು. ಕ್ರಿ.ಶ.1705ರ ಕೆಳದಿ ಬಸವಪ್ಪ ಮತ್ತು ಪೋರ್ಚುಗೀಸರ ಒಪ್ಪಂದದಂತೆ ಪೋರ್ಚುಗೀಸರು ಈ ಪ್ರದೇಶದ ಸುಂಕವನ್ನು ಸಂಗ್ರಹಿಸುವ ಅಧಿಕಾರವನ್ನು ಹೊಂದಿದ್ದರು.[41] ಇಲ್ಲಿಯ ಒಿನ್ನಾಡುವಿನಲ್ಲಿ ಭತ್ತವನ್ನು ಬೆಳೆಯುತ್ತಿದ್ದು ಮೂಲ್ಕಿ, ಭತ್ತವನ್ನು ರಫ್ತು ಮಾಡುವ ಪ್ರಮುಖ ಕೇಂದ್ರವಾಗಿತ್ತು.[42] ಆಗುಂಬೆ ಸಮೀಪದ ಸೋಮೇಶ್ವರದಲ್ಲಿ ಉಗಮವಾಗುವ ಸೀತಾನದಿ ಹಂಗಾರ ಕಟ್ಟೆಯ ಸಮೀಪ ಸ್ವರ್ಣಾನದಿಯೊಂದಿಗೆ ಸೇರಿ ಪಶ್ಚಿಮಾಭಿಮುಖವಾಗಿ ಅರೇಬಿಯನ್ ಸಮುದ್ರವನ್ನು ಸೇರುತ್ತದೆ. ಕೊಕ್ಕರ್ಣೆಯ ವರೆಗಿನ ಸುಮಾರು 11 ಮೈಲಿಗಳಷ್ಟು ದೂರ ಈ ನದಿಯಲ್ಲಿ ಜಲಯಾನ ಮಾಡಬಹುದಾಗಿದೆ ಹಾಗೂ ಸ್ವರ್ಣಾನದಿಯಲ್ಲಿ ಸುಮಾರು 12 ಮೈಲಿಗಳಷ್ಟು ದೂರ ಇರುವ ಬಜೆ ಎಂಬಲ್ಲಿಯವರೆಗೆ ಜಲಾಯಾನ ಸಾಧ್ಯವಿತ್ತು. ಹಾಗಾಗಿ ಈ ನದಿಗಳ ಮೂಲಕ ವ್ಯಾಪಾರದ ಸರಕುಗಳು ಸಾಗಾಟವಾಗುತ್ತಿತ್ತು ಎಂಬುದನ್ನು ತಿಳಿಯಬಹುದಾಗಿದೆ. ಸ್ವರ್ಣಾನದಿ ಕುದುರೆಮುಖದ ಈಶಾನ್ಯ ಭಾಗದ ಅಂಡಾರು ರಕ್ಷಿತಾರಣ್ಯದಲ್ಲಿ

ಹುಟ್ಟಿ ಉತ್ತರಾಭಿಮುಖವಾಗಿ ಹರಿದು ಹಂಗಾರಕಟ್ಟೆಯ ಸಮೀಪ ಸಮುದ್ರವನ್ನು ಸೇರುತ್ತದೆ. ಈ ನದಿಯ ಇಕ್ಕೆಲೆಗಳಲ್ಲಿ ತೆಂಗಿನ ತೋಟ ಹಾಗೂ ಭತ್ತದ ಗದ್ದೆ ಕೃಷಿ ಕುರಿತಾಗಿ ಬುಕಾನನ್ ವಿವರಿಸಿದ್ದಾನೆ.[43] ಕುಂದಾಪುರ ಪಟ್ಟಣದ ಉತ್ತರದಲ್ಲಿ ಹಲವು ಸಣ್ಣ ಸಣ್ಣ ತೊರೆಗಳಿಂದ ಕೂಡಿ ವಿಶಾಲವಾದ ನದಿಯಾಗುವ ಗಂಗೊಳ್ಳಿ ಅಥವಾ ಗರ್ಜೆಟ್ ನದಿ ಗಂಗೊಳ್ಳಿ ಬಂದರಿನ ಬಳಿ ಸಮುದ್ರವನ್ನು ಸೇರುತ್ತದೆ. ಕೊಲ್ಲೂರು, ಹಾಲಾಡಿ ಮತ್ತು ಚಕ್ರಾನದಿಗಳು ಸೇರಿ ಗಂಗೊಳ್ಳಿಯಾಗಿ ಹರಿಯುತ್ತದೆ. ಕೊಲ್ಲೂರು ನದಿಯಲ್ಲಿ 8 ರಿಂದ 9 ಮೈಲಿಗಳಷ್ಟು ಉದ್ದ ಜಲಾಯಾನ ಮಾಡಬಹುದಾಗಿದೆ. ಚಕ್ರಾನದಿಯಲ್ಲಿ ವಂಡ್ಸೆಯವರೆಗೆ ಸುಮಾರು 12 ಮೈಲಿ ಜಲ ಯಾನ ಕೈಗೊಳ್ಳಬಹುದಾಗಿದ್ದರೆ ಹಾಲಾಡಿ ನದಿಯಲ್ಲಿ 17ಮೈಲಿಗಳಷ್ಟು ದೂರ ಜಲ ಯಾನಕ್ಕೆ ಅವಕಾಶವಿದೆ. ಈ ನದಿಗಳಲ್ಲಿ ಮರಮಟ್ಟುಗಳನ್ನು ಸಾಗಿಸಲು ಮತ್ತು ನಂತರದ ಕಾಲಘಟ್ಟದಲ್ಲಿ ಇಂಧನವನ್ನು ಸಾಗಿಸಲು ಅನುಕೂಲಕರವಾಗಿತ್ತು.

ಪಂಚಗಂಗಾವಳಿ ನದಿ ಕಣಿವೆ ಫಲವತ್ತಾಗಿದ್ದು ಅದರ ದಡದಲ್ಲಿ ಭತ್ತದ ಗದ್ದೆಗಳು, ಕಬ್ಬು, ತಾಳೆಮರ ತೆಂಗಿನ ತೋಟಗಳಿತ್ತೆಂದು ಡೆಲ್ಲಾ ವಲ್ಲೆ ಉಲ್ಲೇಖಿಸುತ್ತಾನೆ. ನದಿಯ ಉತ್ತರ ದಡದಲ್ಲಿ ಗುಲ್ವಾನ್ (ಗುಜ್ಜಾಡಿ) ಎಂಬ ಗ್ರಾಮವಿದೆ. ಮತ್ತು ಇಲ್ಲಿ ನದಿ ಸಣ್ಣದಾದ ದ್ವೀಪವನ್ನು ಸೃಷ್ಟಿಸಿದೆ.[44] ಕ್ರಿ.ಶ.1630ರ ಪೋರ್ಚುಗೀಸ್ ದಾಖಲೆಯಂತೆ ಈ ನದಿಯ ಮುಖಜ ಭೂಮಿಯಲ್ಲಿ (ಗಂಗೊಳ್ಳಿ) ಹಚ್ಚ ಹಸಿರಾದ ಭತ್ತದ ಗದ್ದೆಗಳು ಮತ್ತು ತೆಂಗಿನ ಮರಗಳಿವೆ. ಈ ಪ್ರದೇಶವನ್ನು ವಶಪಡಿಸಿಕೊಂಡ ನಂತರ ಪೋರ್ಚುಗೀಸರು 2999 ಬೇಲ್ಸ್‌ನಷ್ಟು ಅಕ್ಕಿಯನ್ನು ಮತ್ತು 1500 ಖಂಡಿಗಳಷ್ಟು ಕಾಳುಮೆಣಸನ್ನು ಪಡೆಯುವ ನಿರೀಕ್ಷೆಯನ್ನು ಹೊಂದಿದ್ದರು.[45] ಈ ನದೀ ಕಣಿವೆ 2 ಬೆಳೆ ತೆಗೆಯಲು ಅನುಕೂಲವಾಗಿತ್ತು ಮತ್ತು ಈ ಕಾರಣದಿಂದ ದೊಡ್ಡ ಪ್ರಮಾಣದ ಅಕ್ಕಿಯನ್ನು ರಫ್ತು ಮಾಡಲು ಸಾಧ್ಯವಾಗಿತ್ತು. ಈ ನದಿಯ ಪರಿಸರವನ್ನು ನೋಡಿ ಬುಕಾನನ್, ಇದಕ್ಕಿಂತ ಸುಂದರವಾದ ಪ್ರದೇಶವನ್ನು ನಾನು ನೋಡಿಲ್ಲ ಎಂದು ಹೇಳುತ್ತಾನೆ.[46] ಶಾಸನಗಳ ಮತ್ತು ಕಡತಗಳ ಅಧ್ಯಯನದಿಂದ ಮಳೆಗಾಲದಲ್ಲಿ ಪಂಚ ಗಂಗಾವಳಿ ಉಕ್ಕಿ ಹರಿದು ಬಹಳಷ್ಟು ಬೆಳೆನಾಶಕ್ಕೆ ಕಾರಣವಾಗುತ್ತಿತ್ತು ಎಂದು ತಿಳಿದುಬರುತ್ತದೆ.[47] ಎಡಮವನಿ ಮತ್ತು ಅಂಗರು ನದಿಗಳು ಕಿರಿಮಂಜೇಶ್ವರ ಮತ್ತು ಬೈಂದೂರಿನ ನಡುವೆ ಹರಿಯುತ್ತಿದ್ದು ಮಹತ್ವದ ಕಾಲ್ಹೊಳೆಯಾಗಿತ್ತು. ಅಂಗರೂ ನದಿಯ ನದೀ ಪಾತ್ರದಲ್ಲಿ ಉಪ್ಪನ್ನು ತಯಾರಿಸಲಾಗುತ್ತಿತ್ತು.[48] ಮಬುಕುಲ್ಲು ಅಥವಾ ಸೀತಾ ನದಿ ವಿಶಾಲವಾಗಿದ್ದು ಘಟ್ಟ ಪ್ರದೇಶದಿಂದ ಇಳಿದು ಬರುತ್ತದೆ. ಇದರ ಕುರಿತಾಗಿ ಬುಕಾನನ್ ವಿವರಣೆಯನ್ನು ನೀಡಿದ್ದಾನೆ.[49]

ಈ ಐತಿಹಾಸಿಕ ಸಮೀಕ್ಷೆಗಳಿಂದ ತಿಳಿಯುವ ಅಂಶಗಳೆಂದರೆ, ತುಳುನಾಡಿನ ಪಶ್ಚಿಮಕ್ಕಿರುವ ಸಮುದ್ರ, ಒಳನಾಡಿನಲ್ಲಿರುವ ನದಿಗಳು ವ್ಯಾಪಾರ ವ್ಯವಹಾರಗಳಲ್ಲಿ ಪ್ರಮುಖ ಪಾತ್ರವಹಿಸಿದ್ದವು. ಪ್ರಾಕೃತಿಕವಾಗಿ ದೊರೆತ ಅನುಕೂಲತೆಗಳು ತುಳುನಾಡಿನ ಕೃಷಿಗೆ ಪೂರಕವಾಗಿದ್ದು ಅಡಿಕೆ, ತೆಂಗು, ಭತ್ತ, ಕಾಳುಮೆಣಸು,

ಮೊದಲಾದ ಕೃಷಿ ಉತ್ಪನ್ನಗಳ ಬೆಳೆಗಳನ್ನು ಬೆಳೆಯಲು ಅನುಕೂಲಕರವಾಗಿತ್ತು. ಆದರೆ ಮಳೆಗಾಲದಲ್ಲಿ ತುಂಬಿ ಹರಿಯುತ್ತಿದ್ದ ನದಿಗಳು ಬೆಳೆ ನಾಶಕ್ಕೂ ಕಾರಣವಾಗುತ್ತಿತ್ತು. ನದಿಗಳು ತಮ್ಮ ಹರಿಯುವ ದಿಕ್ಕನ್ನು ಬದಲಾಯಿಸುತ್ತಿದ್ದ ಕಾರಣದಿಂದ ಕೃಷಿ ವ್ಯವಸ್ಥೆಯ ಮೇಲೆ ಅದರ ಪರಿಣಾಮವನ್ನು ಬೀರಿತ್ತು. ಹೀಗೆ ಕೃಷಿ, ವ್ಯಾಪಾರ, ಮೀನುಗಾರಿಕೆ ಮೊದಲಾದ ಕಸುಬುಗಳ ಬೆಳವಣಿಗೆ ಮತ್ತು ವಿಶಿಷ್ಟ ಸಂಸ್ಕೃತಿಯ ಬೆಳವಣಿಗೆಗೆ ಇಲ್ಲಿಯ ಪರಿಸರ ಕಾರಣವಾಗಿತ್ತು ಎನ್ನುವ ಅಂಶಗಳನ್ನು ಈ ಕಾಲಘಟ್ಟದ ದಾಖಲೆಗಳ ಅಧ್ಯಯನಗಳು ದೃಢಪಡಿಸುತ್ತವೆ. ಬಹುಶಃ ಈ ಕಾರಣಕ್ಕೇ ಕೆಳದಿಯ ಕಾಲಘಟ್ಟದಲ್ಲಿ ಕೆಳದಿಯ ಅರಸರೂ ಸೇರಿದಂತೆ ವಿದೇಶೀಯರಿಗೂ ತುಳುನಾಡು ಆಕರ್ಷಣೆಯ ಕೇಂದ್ರವಾಗಿತ್ತು.

### 2.3 ಕೆಳದಿ ಪೂರ್ವ ಮತ್ತು ಕೆಳದಿ ಆಳ್ವಿಕೆಯಲ್ಲಿ ತುಳುನಾಡು

ತುಳುನಾಡಿನ ಚಾರಿತ್ರಿಕ ಹಿನ್ನೆಲೆಯನ್ನು ಹೇಳುವಾಗ ಮೌರ್ಯರ ಕಾಲಕ್ಕೆ ಹೋಗಬೇಕಾಗುತ್ತದೆ. ಅಶೋಕನ 2ನೇ ಶಾಸನದಲ್ಲಿ ದಕ್ಷಿಣ ಭಾರತದ ರಾಜ್ಯಗಳ ಪ್ರಸ್ತಾಪವಿದೆ. ಅವುಗಳಲ್ಲಿ ಸತಿಯಪುತ ಅಥವಾ ಸತಿಯಪುತ್ರ ಎನ್ನುವುದು ತುಳುನಾಡಿಗೆ ಸಂಬಂಧಿಸಿದ್ದು ಎನ್ನುವ ಅಭಿಪ್ರಾಯಗಳಿವೆಯಾದರೂ ಸತಿಯಪುತ್ರದ ನಿರ್ದಿಷ್ಟ ಪರಿಸರದ ಹಾಗೂ ಗಡಿಗಳ ಕುರಿತಾಗಿ ಚರ್ಚೆಗಳಿವೆ. ತಮಿಳು ಸಂಗಂ ಸಾಹಿತ್ಯದ ಪ್ರಕಾರವೂ ಸತಿಯಪುತ್ರವೆಂಬುದು ತುಳುನಾಡಿನ ಪ್ರದೇಶವೇ ಆಗಿದೆ.[50] ಈ ಹಿನ್ನೆಲೆಯಲ್ಲಿ, ಮೌರ್ಯರ ಕಾಲದಲ್ಲಿಯೇ ತುಳುನಾಡು ಒಂದು ಆಡಳಿತ ಘಟಕವಾಗಿತ್ತು ಎನ್ನುವುದು ಸ್ಪಷ್ಟವಾಗುತ್ತದೆ.

ಮೌರ್ಯರ ನಂತರ ದಕ್ಷಿಣದಲ್ಲಿ ಅಧಿಕಾರಕ್ಕೆ ಬಂದ ಶಾತವಾಹನರು ತುಳುನಾಡಿನ ಮೇಲೆ ಯಾವ ರೀತಿ ಅಧಿಕಾರ ಹೊಂದಿದ್ದರು ಎಂಬುದು ಸ್ಪಷ್ಟವಾಗಿಲ್ಲ. ಮುಂದೆ ಬನವಾಸಿ ಕದಂಬರ ಆಡಳಿತದಲ್ಲಿ ತುಳುನಾಡು ಅವರ ಸಾಮ್ರಾಜ್ಯದ ಭಾಗವಾಗಿತ್ತು. ಕದಂಬ ರಾಜ ಭಗೀರಥವರ್ಮ ತನ್ನ ರಾಜ್ಯದ ಪಶ್ಚಿಮ ತೀರದ ಪ್ರದೇಶವನ್ನು ಆಡಳಿತದ ಅನುಕೂಲಕ್ಕಾಗಿ 4 ವಿಭಾಗಗಳಾಗಿ ವಿಂಗಡಿಸಿದ್ದ ಎನ್ನಲಾಗಿದೆ.[51] ಅವುಗಳೆಂದರೆ, ಕಾಸರಗೋಡು, ಬಾರ್ಕೂರು, ಮಂಗಳೂರು ಮತ್ತು ಕಡಬ. ಈ 4 ಕೇಂದ್ರಗಳು ಇಂದು ತುಳು ಭಾಷಿಕ ಪ್ರದೇಶವಾಗಿರುವುದರಿಂದ ಬಹಳಷ್ಟು ಹಿಂದೆಯೇ ತುಳುನಾಡಿನ ಗಡಿಗಳು ಗುರುತಿಸಲ್ಪಟ್ಟಿದ್ದವು ಎನ್ನುವುದರ ದ್ಯೋತಕವಾಗಿದೆ. ಬನವಾಸಿ ಕದಂಬರು ತುಳುನಾಡನ್ನು ತಮ್ಮ ಆಡಳಿತ ವಿಭಾಗವನ್ನಾಗಿ ಹೊಂದಿದ್ದರು.[52] ಕುಂಬಳೆ ಅರಸರ ಬಿರುದಾವಳಿಗಳಲ್ಲಿ 'ಬನವಸೆ ಪುರವರಾಧೀಶ್ವರ' ಎಂಬುದಾಗಿ ಕರೆದುಕೊಂಡಿರುವುದನ್ನೂ ಈ ನಿಟ್ಟಿನಲ್ಲಿ ಗಮನಿಸಬಹುದು.[53] ಬಾದಾಮಿಯ ಚಾಲುಕ್ಯರು, ಕಲ್ಯಾಣದ ಚಾಲುಕ್ಯರು, ಗಂಗರು. ರಾಷ್ಟ್ರಕೂಟರೂ ತುಳುನಾಡನ್ನು ತಮ್ಮ ಸಾಮ್ರಾಜ್ಯದ ಭಾಗವಾಗಿ ಹೊಂದಿದ್ದರು.[54]

ಆಳುಪರು ತುಳುನಾಡನ್ನು ಆಳ್ವಿಕೆ ಮಾಡಿದ ಪ್ರಾಚೀನ ರಾಜ ಮನೆತನ. ಗ್ರೀಕ್ ದೇಶದ ಭೂಗೋಳ ತಜ್ಞ ಟಾಲೆಮಿಯು ಉಲ್ಲೇಖಿಸಿರುವ ಒಲೊಖೊಯಿರವ್ರು. ಆಳುಪರ ರಾಜ್ಯವಾದ ಆಳ್ವಖೇಡ ಎಂಬುದು

ವಿದ್ವಾಂಸರ ಅಭಿಪ್ರಾಯ.[55] ಆದರೆ ಆಳುಪರ ಆಳ್ವಿಕೆಯ ನಿಖರವಾದ ಮಾಹಿತಿ ನಮಗೆ ಕಂಡುಬರುವುದು ಕ್ರಿ.ಶ.7ನೇ ಶತಮಾನದ ಮಧ್ಯಭಾಗದಿಂದ ಮಂಗಳೂರನ್ನು ರಾಜಧಾನಿಯನ್ನಾಗಿಸಿಕೊಂಡು ಆಳಿದ ಆಳುಪ ದೊರೆ ಒಂದನೇ ಆಳುವರಸನ ಕಾಲದಲ್ಲಿ. ತುಳುನಾಡಿನೊಂದಿಗೆ ಶಿವಮೊಗ್ಗ ಜಿಲ್ಲೆಯ ಹೊಂಬುಚ್ಚ ಮತ್ತು ಕದಂಬ ಮಂಡಲ ಇವರ ಅಧಿಕಾರ ವ್ಯಾಪ್ತಿಗೆ ಸೇರಿತ್ತು.[56] ಆಳುಪರು ಆಳಿದ ರಾಜ್ಯವನ್ನು ಆಳ್ವಖೇಡ 6000 ಎಂದು ಅದರ ವ್ಯಾಪ್ತಿಯನ್ನು ಗುರುತಿಸಲಾಗಿದೆ.[57] ಇವರು ಕ್ರಮವಾಗಿ ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು ಹಾಗೂ ವಿಜಯನಗರದ ಅರಸರ ಮಂಡಲೇಶ್ವರರಾಗಿದ್ದರು.[58] ಮೊದಲು ಮಂಗಳಾಪುರ,[59](ಮಂಗಳೂರು) ನಂತರ ಉದಯಪುರ,[60] (ಉದ್ಯಾವರ) ದಿಂದ ರಾಜ್ಯಭಾರ ಮಾಡಿದ ಆಳುಪರು ಕ್ರಮೇಣ ಪೊಂಬುಚ್ಚಪುರ(ಹುಂಬುಜ) ಬನವಾಸಿ,[61] ಬಾರ್ಕೂರು, ಮೂಡಬಿದಿರೆಗಳನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ್ದರು.[62] ಸಾಮಂತ ಅರಸರಾದರೂ ಚಿನ್ನದ ನಾಣ್ಯಗಳನ್ನು ಸ್ವತಂತ್ರವಾಗಿ ಅಚ್ಚುಹಾಕಿಸಿ ಚಲಾವಣೆಗೆ ತಂದ ಗೌರವ ಇವರಿಗಿದೆ. ಸುಮಾರು ಸಾವಿರ ವರ್ಷಗಳ ಕಾಲ ಆಳಿದ ಅಳುಪರು ತುಳುನಾಡಿನ ಇತಿಹಾಸ ಮತ್ತು ಸಂಸ್ಕೃತಿಗೆ ತಮ್ಮದೇ ಕೊಡುಗೆ ನೀಡುವಲ್ಲಿ ಸಫಲರಾಗಿದ್ದಾರೆ.

ತದನಂತರ ತುಳುನಾಡಿನ ಮೇಲೆ ರಾಜಕೀಯ ಹಿಡಿತ ಸಾಧಿಸಿದವರು ಹೊಯ್ಸಳರು. ಈ ಕಾರಣಕ್ಕಾಗಿಯೇ ಹೊಯ್ಸಳರು ಅಳುಪರೊಂದಿಗೆ ಸಂಘರ್ಷಕ್ಕೆ ಇಳಿದರು. ಕ್ರಿ.ಶ.1117ರ ವಿಷ್ಣುವರ್ಧನನ ಶಾಸನ[63] ಮತ್ತು ಕ್ರಿ.ಶ.1155ರ ಒಂದನೆಯ ನರಸಿಂಹನ ಶಾಸನ,[64] ಹೊಯ್ಸಳರ ತುಳುನಾಡಿನ ಯಶಸ್ವೀ ದಾಳಿಯನ್ನು ದೃಢಪಡಿಸುತ್ತವೆ. ಕೊನೆಗೆ ಅಳುಪ ರಾಜಕುಮಾರಿ ಚಿಕ್ಕಾಯಿ ತಾಯಿಯನ್ನು ಹೊಯ್ಸಳ ಮೂರನೆಯ ವೀರಬಲ್ಲಾಳನಿಗೆ ಮದುವೆ ಮಾಡಿಕೊಡುವ ಮೂಲಕ ಶಾಂತಿಯನ್ನು ಕಾಪಾಡಲಾಯಿತು. ಚಿಕ್ಕಾಯಿತಾಯಿ ತುಳುನಾಡನ್ನು ಆಳಿದ ಕೊನೆಯ ಹೊಯ್ಸಳ ರಾಣಿಯಾಗಿದ್ದಾಳೆ.[65] ತುಳುನಾಡಿನ ಆಳುಪರು, ಹೊರಗಿನ ರಾಜಕೀಯ ಶಕ್ತಿಯಾದ ಹೊಯ್ಸಳರ ಆಳ್ವಿಕೆಯ ನಂತರ, ತುಳುನಾಡು ದಕ್ಷಿಣ ಭಾರತದ ಪ್ರಮುಖ ರಾಜವಂಶವಾದ ವಿಜಯನಗರದ ಕೆಳಗೆ ಬಂತು. ವಿಜಯನಗರದ ಪ್ರತಿಯೊಬ್ಬ ರಾಜನೂ ತುಳುನಾಡಿನ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸಿದ್ದು ಕಂಡುಬರುತ್ತದೆ. ತುಳುನಾಡಿನಲ್ಲಿ ವಿಜಯನಗರದ ಅರಸರಿಗಿದ್ದ ಕಾಳಜಿಗೆ ಭೌಗೋಳಿಕ ಸನ್ನಿವೇಶಗಳು ಮತ್ತು ವ್ಯಾಪಾರದ ಅನುಕೂಲತೆಗಳು ಕಾರಣವಾಗಿವೆ. ಸಂಗಮ ವಂಶದ ಒಂದನೇ ಹರಿಹರ ಮತ್ತು ಒಂದನೇ ಬುಕ್ಕರು ಆಡಳಿತದ ಅನುಕೂಲಕ್ಕಾಗಿ ತುಳುನಾಡನ್ನು ಬಾರ್ಕೂರು ಮತ್ತು ಮಂಗಳೂರು ರಾಜ್ಯಗಳಾಗಿ ವಿಂಗಡಿಸಿದರು. ಬಾರ್ಕೂರು ಮತ್ತು ಮಂಗಳೂರು ಈ ಪ್ರಾಂತ್ಯಗಳ ರಾಜಧಾನಿಗಳಾದವು. ಇವುಗಳ ನಿರ್ವಹಣೆಗೆ ನಿಷ್ಠಾವಂತರಾದ ರಾಜ್ಯಪಾಲರನ್ನು ಅರಸರು ನೇಮಿಸುತ್ತಿದ್ದರು. ವಿಜಯನಗರದ ಆಳ್ವಿಕೆಯ ಪ್ರಾರಂಭದಿಂದ ಕೊನೆಯವರೆಗೆ ಸುಮಾರು 81ರಷ್ಟು ಸಂಖ್ಯೆಯ ರಾಜ್ಯಪಾಲರು ಬಾರ್ಕೂರಿಗೆ, 33 ರಾಜ್ಯಪಾಲರು ಮಂಗಳೂರಿಗೆ, ಹೀಗೆ ಒಟ್ಟು 114 ರಾಜ್ಯಪಾಲರು

ತುಳುನಾಡಿಗೆ ನಿಯುಕ್ತಿಗೊಂಡಿರುವುದು.[66] ವಿಜಯನಗರದ ಅರಸರು ತುಳುನಾಡಿಗೆ ನೀಡಿದ್ದ ಪ್ರಾಮುಖ್ಯತೆ ಮತ್ತು ಅವರ ಆಡಳಿತ ವೈಖರಿಯ ಕೈಗನ್ನಡಿಯಾಗಿದೆ. ಕ್ರಿ.ಶ.1565ರ ತಾಳಿಕೋಟೆ ಯುದ್ಧದ ನಂತರ ವಿಜಯನಗರದರಸರ ಹಿಡಿತದಲ್ಲಿದ್ದ ತುಳುನಾಡು ಕೆಳದಿಯರಸರ ವ್ಯಾಪ್ತಿಗೆ ಬಂತು.

**ಕೆಳದಿ ಆಳ್ವಿಕೆಯ ತುಳುನಾಡು:** ಕೆಳದಿಯರಸರ ಆಡಳಿತವು ಈಗಿನ ಶಿವಮೊಗ್ಗ, ಚಿಕ್ಕಮಗಳೂರು, ಹಾಸನದ ಕೆಲವು ಭಾಗ, ದಕ್ಷಿಣ ಕನ್ನಡ, ಉತ್ತರ ಕನ್ನಡದ ಪ್ರದೇಶಗಳು, ಕೊಡಗು, ಚಿತ್ರದುರ್ಗದ ಹಲವು ಭಾಗ; ತುಮಕೂರು ಜಿಲ್ಲೆಯ ಕೆಲವು ಭಾಗ ಮತ್ತು ಕೇರಳದಲ್ಲಿರುವ ಕಾಸರಗೋಡಿನ ಹಲವು ಭಾಗ, ಇವುಗಳಿಂದ ಸೇರಿ ಸುಮಾರು 13 ಜಿಲ್ಲೆಗಳನ್ನು ಒಳಗೊಂಡಿತ್ತು.[67] ಕೆಳದಿ ವಂಶದ ಸ್ಥಾಪಕ ಚೌಡಪ್ಪ ನಾಯಕ (ಕ್ರಿ.ಶ.1498–1506) ಇಂದಿನ ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ಕೆಳದಿಯನ್ನು ರಾಜಧಾನಿಯಾಗಿ ಮಾಡಿಕೊಂಡು ತನ್ನ ಆಳ್ವಿಕೆಯನ್ನು ಪ್ರಾರಂಭಿಸಿದ. ಸದಾಶಿವ ನಾಯಕನ ಕಾಲದಲ್ಲಿ ಸಮೀಪದ ಇಕ್ಕೇರಿ ಇವರ ರಾಜಧಾನಿ ಆಯಿತು. ವೀರಭದ್ರ ನಾಯಕನ ಕಾಲದಲ್ಲಿ ಬಿದನೂರು ಇವರ ರಾಜಧಾನಿಯಾಗಿತ್ತು. ತೀರ್ಥಹಳ್ಳಿ ಸಮೀಪದ ಭುವನಗಿರಿ ದುರ್ಗವೂ(ಕವಳೇದುರ್ಗ) ಇವರ ಪ್ರಮುಖ ಕೇಂದ್ರವಾಗಿ ಕಾರ್ಯನಿರ್ವಹಿಸಿತ್ತು.[68]

ಚೌಡಪ್ಪನ ನಂತರ ಅಧಿಕಾರಕ್ಕೆ ಬಂದಿದ್ದ ಕೆಳದಿ ಸದಾಶಿವ ನಾಯಕ(ಕ್ರಿ.ಶ.1509–1565)) ಕ್ರಿ.ಶ.1554ರಲ್ಲಿ ವಿಜಯನಗರದ ಸಾರ್ವಭೌಮ ಸದಾಶಿವರಾಯನ ಕೆಳಗೆ ಬಾರಕೂರು ಮತ್ತು ಮಂಗಳೂರಿನ ರಾಜ್ಯಪಾಲನಾಗಿದ್ದನು.[69] ಕ್ರಿ.ಶ.1562ರಲ್ಲಿ ವಿಜಯನಗರದ ಅರಸ ಸದಾಶಿವರಾಯ, ಕೆಳದಿ ಸದಾಶಿವ ನಾಯಕನಿಗೆ ಅರಗ, ಗುತ್ತಿ, ತುಳುರಾಜ್ಯ, ಬಾರ್ಕೂರು ಮತ್ತು ಮಂಗಳೂರುಗಳನ್ನು ಅಮರ ಮಾಗಣೆಯಾಗಿ ನೀಡಿದ್ದ.[70] ವಿಜಯನಗರದ ಪರವಾಗಿ ಸದಾಶಿವ ನಾಯಕ ಕಾಸರಗೋಡಿನವರೆಗೂ ದಿಗ್ವಿಜಯವನ್ನು ಮಾಡಿ ಅಲ್ಲಿ ವಿಜಯಸ್ತಂಭ ಸ್ಥಾಪಿಸಿದನೆಂದು ಹೇಳಲಾಗಿದೆ. ಈ ಸಂದರ್ಭದಲ್ಲಿಯೇ ಅವನು ಕಾಸರಗೋಡು ಕೋಟೆಯನ್ನು ನಿರ್ಮಿಸಿದನೆಂದು ಹೇಳಲಾಗಿದೆ.[71] ತುಳುನಾಡಿನ ಸುಪ್ರಸಿದ್ಧ ಸಾನಿಧ್ಯ ಕುಕ್ಕೆ ಸುಬ್ರಹ್ಮಣ್ಯ ದೇವಾಲಯಕ್ಕೆ ಇವನಿಂದ ದಾನ ನೀಡಲ್ಪಟ್ಟಿತ್ತು.[72] ಸದಾಶಿವ ನಾಯಕನ ಕಾಲದ ಕಾಪು ತಾಮ್ರ ಶಾಸನದಲ್ಲಿ ಇಲ್ಲಿಯ ಜೈನ ತೀರ್ಥಂಕರ ಬಸದಿಯ ಧರ್ಮನಾಥನ ಸಾನಿಧ್ಯಕ್ಕೆ ನೀಡಿರುವ ದಾನದ ವಿವರಗಳಿವೆ.[73] ಇವನು ಇಕ್ಕೇರಿಯಲ್ಲಿ ಟಂಕಸಾಲೆಯನ್ನು ಸ್ಥಾಪಿಸಿ, ನಾಣ್ಯವನ್ನು ಅಚ್ಚು ಹಾಕಿಸಿದನು. ಇವನ 'ಶ್ರೀಸದಾಶಿವ' ಎಂಬ ಬರಹವಿರುವ ನಾಣ್ಯ, ತುಳುನಾಡಿನಲ್ಲಿ ಇಕ್ಕೇರಿ ವರಹಗಳೆಂದು ಜನಪ್ರಿಯವಾಗಿತ್ತು. ಸದಾಶಿವ ನಾಯಕನ ಮರಣದ ನಂತರ ಆಳ್ವಿಕೆ ಮಾಡಿದ ದೊಡ್ಡ ಸಂಕಣ್ಣ ನಾಯಕ, ಚಿಕ್ಕ ಸಂಕಣ್ಣ ನಾಯಕ ಮತ್ತು ರಾಮರಾಜ ನಾಯಕರ ಕಾಲದಲ್ಲಿಯೂ(ಕ್ರಿ.ಶ.1567–1586) ಬಾರ್ಕೂರು ಮಂಗಳೂರು ಸೇರಿದಂತೆ ತುಳುನಾಡು, ಕೆಳದಿ ಸಂಸ್ಥಾನದ ಅಧೀನದಲ್ಲಿತ್ತು.[74]

**ಹಿರಿಯ ವೆಂಕಟಪ್ಪ ನಾಯಕ:** (ಕ್ರಿ.ಶ.1586–1630) ಬಹಳ ದೀರ್ಘಕಾಲ ಕೆಳದಿ ಸಂಸ್ಥಾನವನ್ನಾಳಿದ

ಮೊದಲನೆಯ ವೆಂಕಟಪ್ಪ ನಾಯಕ ಆ ವಂಶದ ಒಬ್ಬ ಪ್ರಸಿದ್ಧ ರಾಜ. ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ಇವನ ಕಾಲದಲ್ಲಿ ರಾಜ್ಯವು ಬಹಳಷ್ಟು ಬೆಳೆಯಿತು. ಈ ವಂಶದ ರಾಜರು ಕ್ರಿ.ಶ.1613ರಲ್ಲಿ ಮೊದಲನೆಯ ವೆಂಕಟಪ್ಪನಾಯಕ ಸ್ವತಂತ್ರನಾಗುವವರೆಗೂ ವಿಜಯನಗರದ ಸಾಮಂತರಾಗಿಯೇ ಇದ್ದರೆಂದು ಹೇಳಲಾಗಿದೆ. ಕ್ರಿ.ಶ.1613ರ ಉಡುಪಿಯ ಕೃಷ್ಣ ಮಠದ ಶಾಸನ,[75] ಈ ಕುರಿತು ಬೆಳಕು ಚೆಲ್ಲುವುದಲ್ಲದೆ ಈ ಕಾಲದಲ್ಲಿ ವೆಂಕಟಪತಿ ದೇವನು ಪೆನುಕೊಂಡೆಯಿಂದ ಆಳುತಿದ್ದಾಗ ಕೆಳದಿ ವೆಂಕಟಪ್ಪನ ಕೆಳಗೆ ರಾಮಕೃಷ್ಣಪ್ಪ ಒಡೆಯರು ಬಾರಕೂರು ರಾಜ್ಯವನ್ನು ನೋಡಿಕೊಳ್ಳುತಿದ್ದರೆಂಬ ಮಾಹಿತಿ ಇಲ್ಲಿ ದೊರೆಯುತ್ತದೆ. ತಾಳಿಕೋಟೆ ಯುದ್ಧದ ನಂತರವೂ ವಿಜಯನಗರದರಸರ ಹೆಸರಿನಲ್ಲಿ ಶಾಸನವನ್ನು ಕೆಳದಿ ಅರಸರು ಪ್ರಕಟಿಸಿರುವುದು ತುಳುನಾಡಿನ ಮೇಲೆ ವಿಜಯನಗರದ ವಸ್ತುತಃ ಪಾರುಪತ್ಯವನ್ನು ಸೂಚಿಸದೆ, ಅವರ ಕುರಿತಾಗಿರುವ ಗೌರವದ ದ್ಯೋತಕವಾಗಿದೆ. ಯಾಕೆಂದರೆ, ವಿಶಾಲ ಕೆಳದಿ ಸಾಮ್ರಾಜ್ಯವನ್ನು ನಿರ್ಮಿಸಿದ ಹಿರಿಯ ವೆಂಕಟಪ್ಪ, ಅದಾಗಲೇ ದುರ್ಬಲರಾಗಿದ್ದ ವಿಜಯನಗರದ ಅರಸರ ಅಡಿಯಾಳಾಗಿದ್ದ ಎಂದು ಒಪ್ಪಲು ಸಾಧ್ಯವಿಲ್ಲ. ಪೋರ್ಚುಗೀಸ್ ದಾಖಲೆಗಳು ಮತ್ತು ಲಿಂಗಣ್ಣ ಕವಿ ವಿರಚಿತ ಕೆಳದಿ ನೃಪವಿಜಯ ಗ್ರಂಥ ಒಂದನೇ ವೆಂಕಟಪ್ಪ ನಾಯಕನ ದಿಗ್ವಿಜಯದ ಮಾಹಿತಿ ನೀಡುತ್ತದೆ.[76] ತುಳುನಾಡಿನಲ್ಲಿ ಅವನು ಸೋಲಿಸಿದ ಅರಸರ ವಿವರ ಈ ರೀತಿ ಇದೆ. ಈತ, "ಹೊಸಂಗಡಿ ಹೊನ್ನೆಯ ಕಂಬಳಿ ಅರಸನನ್ನು ಸೋಲಿಸಿ ಹೊಸಂಗಡಿ, ಬಗ್ಗವಾಡಿ, ಕದಿರೆ, ಕೊಲ್ಲೂರು ಪ್ರಾಂತ್ಯಗಳನ್ನು ವಶಮಾಡಿಕೊಂಡನು. ಕಾರ್ಕಳದ ಭೈರರಸರನ್ನು ಸೋಲಿಸಿ ಕೊಪ್ಪ, ಬೆಳ್ಳರೆ, ಕಾರ್ಕಳ, ಕಳಸ ಮತ್ತು ಖಾಂಡ್ಯವೆಂಬ ಪ್ರಾಂತ್ಯವನ್ನು ಗೆದ್ದುಕೊಂಡನು. ಆಮೇಲೆ ಬಂಗ, ಅಜಿಲ. ಸಾವಂತ ಮತ್ತು ಮೂಲ ಮನೆತನದವರನ್ನು, ಕುಂಬಳೆ ಮತ್ತು ಕಾಸರಗೋಡಿನ ಮನ್ನೆಯರನ್ನೂ ಸೋಲಿಸಿ, ಅವರವರ ಸಂಸ್ಥಾನಗಳನ್ನು ವಶಪಡಿಸಿಕೊಂಡನು. ವೆಂಕಟಪ್ಪನಾಯಕನು ಮಂಗಳೂರು ಸಂಸ್ಥಾನವನ್ನು ವಶಪಡಿಸಿಕೊಂಡ ಮೇಲೆ ಮೂಲಿಕೆ(ಮೂಲ್ಕಿ) ಕೊಡಿಯಾಲ(ಮಂಗಳೂರು) ಮೂಡಬಿದಿರೆ, ಉಳ್ಳಾಲ, ಕುಂಬಳೆ, ಕಾಸರಗೋಡು, ಪುದುವೆಟ್ಟು, ಬೆಳ್ಳಾರೆ, ಕಾಂತಮಂಗಲ, ಬಂದ್ಯಡಕ, ಕಂಡಂಕುಳಿ, ಕೊಲ್ಲೂರಬಾಚಿ, ಶಿಶಿಲ, ಚಂದ್ರಗಿರಿ, ಕಿದುಟು(ಕಿದೂರು), ಮೂಡಗೊಡೆಯಾಲ, ಪಣಿಯಾಲ ಮುಂತಾದ ಕೋಟೆಗಳನ್ನು ಬಲಪಡಿಸಿದನು. ಹೆಗ್ಗಡೆ ಬಲ್ಲಾಳರುಗಳ ಸೊಕ್ಕನ್ನು ಮುರಿದು ಅವರ ರಾಜ್ಯಗಳನ್ನು ವಶಪಡಿಸಿಕೊಂಡನು.[77] ಈ ಎಲ್ಲಾ ಕೋಟೆಗಳ ಪಳೆಯುಳಿಕೆಗಳನ್ನು ಈ ಸ್ಥಳಗಳಲ್ಲಿ ಇಂದಿಗೂ ಕಾಣಬಹುದಾಗಿದೆ. ಗೇರುಸೊಪ್ಪೆ ರಾಣಿಯಾದ ಚೆನ್ನ ಭೈರಾದೇವಿಯೊಡನೆ ಯುದ್ಧ ನಡೆಸಿ ಅವಳನ್ನು ಸೆರೆ ಹಿಡಿದುದಲ್ಲದೆ ಭಟ್ಕಳ, ಗೇರುಸೊಪ್ಪೆ ನಗಿರೆ ರಾಜ್ಯವನ್ನು ಧ್ವಂಸಮಾಡಿ. ತದನಂತರ ಹಾಡುವಳ್ಳಿ ರಾಜ್ಯವನ್ನು ನಿರ್ನಾಮ ಮಾಡಿದ ವಿಚಾರವನ್ನು ಇಟಲಿಯ ಪ್ರವಾಸಿ ಪಿಯತ್ರೋ ಡೆಲ್ಲಾ ವಲ್ಲೆ ತನ್ನ ಪ್ರವಾಸಿ ಕಥನದಲ್ಲಿ ವಿವರಿಸಿದ್ದಾನೆ.[78]

ವೆಂಕಟಪ್ಪನಾಯಕ ತುಳುವ ಪ್ರದೇಶದಲ್ಲಿ ತನ್ನ ಚಟುವಟಿಕೆಗಳನ್ನು ತೀವ್ರಗೊಳಿಸಲು ಕೆಲವು

ಕಾರಣಗಳಿವೆ. ಮೊದಲನೆಯದಾಗಿ ಗೇರುಸೊಪ್ಪೆ ಮತ್ತು ಭಟ್ಕಳದ ಮುಖ್ಯಸ್ಥರು ಬಿಜಾಪುರದ ಆದಿಲ್ ಷಾಗಳ ಸಾರ್ವಭೌಮತೆಯನ್ನು ಒಪ್ಪಿಕೊಂಡದ್ದು, ವೆಂಕಟಪ್ಪ ನಾಯಕನಿಗೆ ಹಿಡಿಸಲಿಲ್ಲ. ಅದಕ್ಕಾಗಿ ಗೇರುಸೊಪ್ಪೆಯ ಮೇಲೆ ಆಕ್ರಮಣ ಮಾಡಿ ಅದನ್ನು ವಶಪಡಿಸಿಕೊಂಡ. ಎರಡನೆಯದಾಗಿ ಕರಾವಳಿ ತೀರದಲ್ಲಿ ಭದ್ರವಾಗಿ ನೆಲೆಯೂರಲು ಪ್ರಯತ್ನಿಸುತ್ತಿದ್ದ ಪೋರ್ಚುಗೀಸರನ್ನು ಸದೆಬಡಿಯಲೂ ಮುಂದಾದ. ಈ ಕಾರಣಕ್ಕಾಗಿಯೇ ಉಳ್ಳಾಲದ ರಾಣಿ, ತನ್ನ ಗಂಡ ಬಂಗರಸ ಮತ್ತು ಪೋರ್ಚುಗೀಸರ ವಿರುದ್ಧ ಸಹಾಯ ಯಾಚಿಸಿದಾಗ ವೆಂಕಟಪ್ಪನಾಯಕ ಧನಾತ್ಮಕವಾಗಿ ಪ್ರತಿಕ್ರಿಯಿಸಿದ್ದ. ಹಾಗೆಯೇ ಬಂಗರಾಜ, ಪೋರ್ಚುಗೀಸರು ಹಾಗೂ ವೆಂಕಟಪ್ಪನಾಯಕನ ನಡುವಿನ ರಾಜಕೀಯ ಚದುರಂಗದಾಟಗಳು ಬಹುದೊಡ್ಡ ಅಧ್ಯಾಯವಾಗಿದ್ದು ಇವು ವೆಂಕಟಪ್ಪನಾಯಕನ ದಕ್ಷತೆಯನ್ನು ಪ್ರತಿಬಿಂಬಿಸುತ್ತವೆ. ಪೋರ್ಚುಗೀಸ್ ವೈಸ್‌ರಾಯ್, ಬಂಗರಾಜ ಹಾಗೂ ವೆಂಕಟಪ್ಪನಾಯಕನ ನಡುವಿನ ಪತ್ರವ್ಯವಹಾರಗಳು ಶಾಂತಿ ಸಂಧಾನಗಳು, ಸಂಧಿ ನಿರ್ಣಯಗಳ ಮಾಹಿತಿಗಳು ಲಭ್ಯವಿದ್ದು ಈ ವಿಚಾರಗಳನ್ನು ಇಟಾಲಿಯನ್ ಪ್ರವಾಸಿ ಪಿಯತ್ರೋ ಡೆಲ್ಲಾ ವಲ್ಲೆಯ ಬರಹಗಳೂ ದೃಢಪಡಿಸುತ್ತವೆ. ಬಂಗವಾಡಿಯ ಅರಸ ತನ್ನ ವಿರುದ್ಧ ಯುದ್ಧ ನಡೆಸುತ್ತಿದ್ದ 'ಪರ್ವತರಾಜ' ನನ್ನು ಎದುರಿಸಲು ನೆರವು ನೀಡಬೇಕೆಂದು ವೆಂಕಟಪ್ಪನನ್ನು ಕೇಳಿಕೊಂಡಾಗ ವೆಂಕಟಪ್ಪ ನಾಯಕ ಉತ್ಸಾಹದಿಂದ ಅವನಿಗೆ ಸಹಾಯ ನೀಡಿದ. ಇಲ್ಲಿ ಹೆಸರಿಸಿರುವ ಪರ್ವತರಾಜ ಕಳಸ ಕಾರ್ಕಳದಿಂದ ಆಳ್ವಿಕೆ ಮಾಡುತ್ತಿದ್ದ ಭೈರವರಸರೆಂದು ತಿಳಿಯಬಹುದಾಗಿದೆ.[79] ಇದಾದ ನಂತರ ಬಂಗವಾಡಿಯ ರಾಜ, ವೆಂಕಟಪ್ಪನ ಸಾಮಂತನಾಗಿರಲು ಒಪ್ಪಬೇಕಾಯಿತು. ಅಲ್ಲದೇ ವೆಂಕಟಪ್ಪ ನಾಯಕ ಮಂಗಳೂರಿನಲ್ಲಿ ಪೋರ್ಚುಗೀಸರ ಕೋಟೆಯಿಂದ ಸ್ವಲ್ಪವೇ ದೂರದಲ್ಲಿದ್ದ ಬೋಳಾರು ಎಂಬ ಸ್ಥಳದಲ್ಲಿ ಹೊಸತೊಂದು ಕೋಟೆ ಕಟ್ಟಿಸಿದನು. ಕ್ರಿ.ಶ. ಸುಮಾರು 1612ರಲ್ಲಿ ಈ ಘಟನೆ ನಡೆದ ನಂತರ, ಇದರಿಂದ ಹೆದರಿಕೊಂಡ ಬಂಗರಾಜ ವೆಂಕಟಪ್ಪನ ವಿರುದ್ಧ ಪೋರ್ಚುಗೀಸರ ಸಹಾಯ ಯಾಚಿಸಿದ.[80] ಆದರೆ ಕೆಳದಿ ರಾಜ್ಯದಲ್ಲಿ ಅವರು ವ್ಯಾಪಾರ ವ್ಯವಹಾರ ನಡೆಸುತ್ತಿದ್ದುದರಿಂದ ಮತ್ತು ಬಲಿಷ್ಠ ವೆಂಕಟಪ್ಪನನ್ನು ಎದುರು ಹಾಕಿಕೊಳ್ಳಲು ಇಚ್ಛಿಸದ ಕಾರಣದಿಂದ, ಪೋರ್ಚುಗೀಸರು ನೇರವಾಗಿ ಬಂಗರಾಜನಿಗೆ ಸಹಾಯ ಮಾಡದೆ ರಹಸ್ಯವಾಗಿ ಸಹಾಯ ಹಸ್ತ ಚಾಚಿದ್ದರು. ಕಾಸರಗೋಡಿಗೆ ಓಡಿ ಹೋದ ಬಂಗರಾಜನಿಗೆ, ಕಣ್ಣಾನೂರಿನ ರಾಜ ಮತ್ತಿತರರ ಸಹಾಯ ಸಿಗದೆ ವೆಂಕಟಪ್ಪನ ಮರಣದವರೆಗೂ ತನ್ನ ರಾಜ್ಯವನ್ನು ಸ್ವತಂತ್ರಗೊಳಿಸಲಾಗಲಿಲ್ಲ.[81]

ವೆಂಕಟಪ್ಪ ನಾಯಕನ ಕರಾವಳಿಯ ಚಟುವಟಿಕೆಗಳು ರಾಜಕೀಯವಾಗಿ ಕೆಳದಿ ಸಂಸ್ಥಾನದ ಸಾಮ್ರಾಜ್ಯದ ಗಡಿಯನ್ನು ವಿಸ್ತರಿಸುವ ಗುರಿಯನ್ನು ಮಾತ್ರ ಹೊಂದಿರದೆ ಆರ್ಥಿಕವಾಗಿ ಮತ್ತು ಧಾರ್ಮಿಕವಾಗಿ ಹಲವು ಮೈಲುಗಲ್ಲುಗಳ ಸ್ಥಾಪನೆಯ ಗುರಿಯನ್ನು ಹೊಂದಿತ್ತು. ತುಳುನಾಡಿನಾದ್ಯಂತ ಅವನು ನಿರ್ಮಿಸಿದ ಕೋಟೆಗಳನ್ನು ರಾಜಕೀಯ ಮತ್ತು ಆರ್ಥಿಕ ಹಿನ್ನೆಲೆಯಿಂದ ನೋಡಿದರೆ, ಗೇರುಸೊಪ್ಪೆ ಬಾರ್ಕೂರು ಮತ್ತಿತರ ಸ್ಥಳಗಳ ಮೇಲಿನ ದಾಳಿಯ ಲಕ್ಷಣಗಳು ರಾಜಕೀಯ ಮತ್ತು ಧಾರ್ಮಿಕ ಹಿನ್ನೆಲೆಯನ್ನೂ

ಒಳಗೊಂಡಿದ್ದವು ಎನ್ನುವ ಅಭಿಪ್ರಾಯಗಳಿವೆ. ಒಟ್ಟಿನಲ್ಲಿ ಹಿರಿಯ ವೆಂಕಟಪ್ಪ ನಾಯಕ ಬಂಗರಾಜ ಹಾಗೂ ಪೋರ್ಚುಗೀಸರಿಗೆ ತನ್ನ ಆಡಳಿತಾವಧಿಯವರೆಗೆ ದುಸ್ವಪ್ನವಾಗಿ ಕಾಡಿದ್ದಂತೂ ನಿಜ. ಇವನ ಕಾಲದಲ್ಲಿ ಇಕ್ಕೇರಿಗೆ ಮತ್ತು ತುಳುನಾಡಿಗೆ ಭೇಟಿ ನೀಡಿದ್ದ ಪಿಯತ್ರೋ ಡೆಲ್ಲಾ ವಲ್ಲೆ ತಾನು ಕಂಡ ದೃಶ್ಯಗಳನ್ನು ವಿವರಿಸಿದ್ದಾನೆ.

ವೆಂಕಟಪ್ಪನ ನಂತರ ಅವನ ಮೊಮ್ಮಗ ವೀರಭದ್ರ ನಾಯಕ ಕೆಳದಿ ವಂಶದ ರಾಜನಾದಾಗ (1630–1645) ಬಿದನೂರು, ಕೆಳದಿ ಸಾಮ್ರಾಜ್ಯದ ರಾಜಧಾನಿಯಾಯಿತು. ಇವನ ಆಡಳಿತಾವಧಿಯುದ್ದಕ್ಕೂ ಇವನು ಹಲವು ರಾಜಕೀಯ ತೊಂದರೆಗಳನ್ನು ಎದುರಿಸಬೇಕಾಯಿತು. ಬಿಜಾಪುರದ ಆದಿಲ್ ಷಾನ ಕಿರುಕುಳವನ್ನು ಎದುರಿಸಬೇಕಾಯಿತು. ವೆಂಕಟಪ್ಪ ನಾಯಕ ಬಲ್ಲಾಳರಿಂದ ಕಿತ್ತುಕೊಂಡಿದ್ದ ರಾಜ್ಯಗಳನ್ನು ತನಗೆ ಬಿಟ್ಟುಕೊಡಬೇಕೆಂಬುದು ಅವನ ಬೇಡಿಕೆಯಾಗಿತ್ತು. ಅವುಗಳಿಗೆ ಒಪ್ಪದ ಕಾರಣ ಅವರೊಳಗಿನ ಸಂಘರ್ಷ ಮುಂದುವರೆದಿತ್ತು.[82] ಈ ಅವಧಿಯಲ್ಲಿ "ಪರ್ವತರಾಜ"(ಭೈರರರಸ) ಇಕ್ಕೇರಿ ರಾಜ್ಯದ ಮೇಲೆ ದಂಡೆತ್ತಿ ಹೋದನಲ್ಲದೆ ವೀರಭದ್ರನ ದಂಡನಾಯಕನನ್ನು ಸೋಲಿಸಿ ಅನೇಕ ಸೈನಿಕರನ್ನು ಕೊಂದನು. ಒಂದು ಅನೆ ಮತ್ತು 30 ಕುದುರೆಗಳನ್ನು ವಶಪಡಿಸಿಕೊಂಡ. ಮತ್ತೊಮ್ಮೆ ನಡೆದ ಯುದ್ಧದಲ್ಲಿಯೂ ಭೈರವರಸರ ಕೈ ಮೇಲಾಯಿತು. ಮೇಲಿಂದ ಮೇಲೆ ಬಿದ್ದ ಈ ಪೆಟ್ಟುಗಳು ವೀರಭದ್ರನ ಶಕ್ತಿಗುಂದುವಂತೆ ಮಾಡಿದವು. ಬಂಗರಾಜ, ಉಳ್ಳಾಲದ ರಾಣಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಇತರ ಅರಸರೂ ದಂಗೆಯೆದ್ದರು.[83] ಪೋರ್ಚುಗೀಸರು ಈ ಸಂಕಷ್ಟಗಳ ಲಾಭ ಪಡೆಯಲು ಮುಂದಾದರು. ಗಂಗೊಳ್ಳಿಯ ಮೇಲೆ ಹಿಡಿತ ಪಡೆಯಲು ಮತ್ತು ಅಲ್ಲಿ ಕೋಟೆ ಕಟ್ಟಲು ಆಲೋಚಿಸಿದ್ದರು. ಅಲ್ಲಿ ಪೋರ್ಚುಗೀಸರು ಕೋಟೆ ನಿರ್ಮಾಣದ ಕೆಲಸ ಪ್ರಾರಂಭಿಸಿದಾಗ ವೀರಭದ್ರನು ಗಂಗೊಳ್ಳಿ ಹಾಗೂ ಕುಂದಾಪುರದಲ್ಲಿ ಯುದ್ಧ ಪ್ರಾರಂಭಿಸಿದನು. ಆದರೆ ಇದರಿಂದ ವೀರಭದ್ರನಿಗೇ ಸೈನಿಕರ ನಷ್ಟವಾಯಿತು.[84] ಈ ಮಧ್ಯದಲ್ಲಿ ಇಕ್ಕೇರಿಯಲ್ಲಿ ವೀರಭದ್ರ ನಾಯಕ ಮತ್ತು ಅವನ ಸಂಬಂಧಿಕ ವೀರಪ್ಪ ಎನ್ನುವವರ ನಡುವೆ ಆಂತರಿಕ ಕಲಹ ಪ್ರಾರಂಭಗೊಂಡು ಕುಂದಾಪುರ ಮತ್ತು ಬಸ್ರೂರು ಭಾಗಗಳು ವೀರಪ್ಪನ ಸ್ವಾಧೀನಕ್ಕೆ ಬಂದಂತೆ ತೋರುತ್ತದೆ. ಅಲ್ಲದೇ ಪೋರ್ಚುಗೀಸರೂ ಮತ್ತು ವೀರಪ್ಪನೂ ಒಂದು ಒಪ್ಪಂದವನ್ನು ಮಾಡಿಕೊಂಡರು.[85] ಅದರಂತೆ, ವೀರಪ್ಪನು ಸ್ವಾಧೀನ ಪತ್ರ ತಯಾರು ಮಾಡಿ ಗಂಗೊಳ್ಳಿಯನ್ನು ಪೋರ್ಚುಗೀಸರಿಗೆ ನ್ಯಾಯಬದ್ಧವಾಗಿ ನೀಡಿದನು.[86] ಮುಂದೆ ವೀರಪ್ಪನು ತೀರಿಕೊಂಡಾಗ ವೀರಭದ್ರನು ಇಕ್ಕೇರಿಯ ನಿರ್ವಿವಾದಿತ ರಾಜನಾದನು.

ಬಂಗವಾಡಿ, ಕಾರ್ನಾಡು ಮತ್ತು ಕಳಸ – ಕಾರ್ಕಳದ ರಾಜರು ವೀರಭದ್ರನ ವಿರುದ್ಧ ಪೋರ್ಚುಗೀಸರ ಸಹಾಯ ಕೇಳಿದಾಗ ವೀರಭದ್ರನಾಯಕನೊಂದಿಗೆ ಒಪ್ಪಂದ ಮಾಡಿಕೊಳ್ಳುವ ಬದಲಿಗೆ ಸ್ಥಳೀಯ ಅರಸರಿಗೆ ಮತ್ತು ಬಸ್ರೂರಿನ ಸ್ಥಳೀಯಾಡಳಿತ ಸಂಸ್ಥೆಗೆ ಸಹಾಯ ಮಾಡಬೇಕೆಂದು ಪೋರ್ಚುಗೀಸರು ತೀರ್ಮಾನಿಸಿದರು.[87] ಆದರೂ ಕ್ರಿ.ಶ. 1633ರ ಏಪ್ರಿಲ್ 5ರಂದು ವೀರಭದ್ರನಾಯಕ ಮತ್ತು ಪೋರ್ಚುಗೀಸರ

ನಡುವೆ ಒಪ್ಪಂದವಾಯಿತು.[88] ಪೋರ್ಚುಗೀಸ್ ದೊರೆಯು ಭಾರತದ ತನ್ನ ಪ್ರತಿನಿಧಿಗೆ ಬರೆದ ಕಾಗದದಿಂದ ತಿಳಿದು ಬರುವಂತೆ, ಉಳ್ಳಾಲ, ಬಂಗವಾಡಿಯ ರಾಣಿಯರು ವೀರಭದ್ರನಿಗೆ ಕೊಡುತ್ತಿದ್ದ ಕಪ್ಪಗಳನ್ನು ಅದಿಲ್ ಷಾನಿಗೆ ಅರ್ಪಿಸಿ ವೀರಭದ್ರನ ವಿರುದ್ಧ ರಕ್ಷಣೆ ಕೇಳಿದ್ದರು. ಈ ಸಂದರ್ಭದಲ್ಲಿ ಪೋರ್ಚುಗೀಸರು ಬಹಳ ಜಾಗೃತೆಯಿಂದ ನಡೆದುಕೊಂಡರು.[89] ಕನ್ನಡ ನಾಡಿನಲ್ಲಿ ಯಾರೂ ಅತ್ಯಂತ ಬಲಶಾಲಿಗಳಾಗಬಾರದು ಯಾರೂ ಸಂಪೂರ್ಣ ಸೋಲಬಾರದೆಂಬ ಅವರ ನೀತಿಗೆ ಅನುಗುಣವಾಗಿ ಬಲಶಾಲಿಯಾದ ಅದಿಲ್ ಷಾನ ವಿರುದ್ಧ ವೀರಭದ್ರನಿಗೆ ಸಾಧ್ಯವಾದಷ್ಟು ಸಹಾಯ ಮಾಡಿದರು. ಇವನ ಕಾಲದಲ್ಲಿ ಇಂಗ್ಲೆಂಡಿನ ಯಾತ್ರಿಕ ಪೀಟರ್ ಮಂಡಿ ಸಾಮ್ರಾಜ್ಯಕ್ಕೆ ಭೇಟಿ ನೀಡಿ ಬಹಳಷ್ಟು ಮಾಹಿತಿಗಳನ್ನು ದಾಖಲಿಸಿದ್ದಾನೆ.

ವೀರಭದ್ರ ನಾಯಕನಿಗೆ ಮಕ್ಕಳಿಲ್ಲದಿದ್ದುದರಿಂದ ಶಿವಪ್ಪನಾಯಕ ಕೆಳದಿ ಸಿಂಹಾಸನವನ್ನೇರಿದ. (1646–1660) ಕೆಳದಿವಂಶದ ಪ್ರಖ್ಯಾತ ಅರಸನಾದ ಇವನು ವೆಂಕಟಪ್ಪ ನಾಯಕನಂತೆ ತನ್ನ ದಕ್ಷಿಣದ ಸಾಮ್ರಾಜ್ಯವನ್ನು ಭದ್ರಪಡಿಸಿದ. ಕಾಸರಗೋಡು ತಾಲೂಕಿನ ಬೇಕಲ್ ಮತ್ತು ಚಂದ್ರಗಿರಿಯಂತಹ ಕೋಟೆಗಳನ್ನು ನಿರ್ಮಿಸಿದ. ತುಳುನಾಡಿನ ಸ್ಥಳೀಯ ಅರಸರನ್ನು ಅಂಕೆಯಲ್ಲಿರಿಸಿಕೊಂಡು ನೀಲೇಶ್ವರದವರೆಗೆ ತನ್ನ ಸಾಮ್ರಾಜ್ಯ ವಿಸ್ತರಣೆ ಮಾಡಿದ.[90] ಇವನ ಕಾಲದಲ್ಲಿಯೂ ಬಿದನೂರು ಮತ್ತು ಪೋರ್ಚುಗೀಸರ ಸಂಘರ್ಷಗಳು ಮುಂದುವರಿಯಿತು. ಕ್ರಿ.ಶ.1652 ಮತ್ತು ಕ್ರಿ.ಶ.1653ರಲ್ಲಿ ನಡೆದ ನಿರಂತರ ಕದನಗಳಲ್ಲಿ ಪೋರ್ಚುಗೀಸರು ತಮ್ಮ ಭದ್ರ ನೆಲೆಗಳನ್ನು ಕಳೆದುಕೊಂಡು ಗೋವೆಗೆ ಹಿಂತಿರುಗಬೇಕಾಯಿತು. ವಿದೇಶೀಯರನ್ನು ಮತ್ತು ಸಾಮಂತ ರಾಜರುಗಳನ್ನು ಸಂಪೂರ್ಣ ಹತೋಟಿಯಲ್ಲಿಟ್ಟ ಖ್ಯಾತಿ ಶಿವಪ್ಪ ನಾಯಕನಿಗೆ ಸಲ್ಲುತ್ತದೆ. ಶಿವಪ್ಪ ನಾಯಕ, ಕರಾವಳಿಯಲ್ಲಿದ್ದ ಪೋರ್ಚುಗೀಸ್ ಕೋಟೆಗಳನ್ನೆಲ್ಲ ವಶಪಡಿಸಿಕೊಂಡ ಮಹತ್ವಾಕಾಂಕ್ಷಿ ದೊರೆಯಾಗಿದ್ದ. ಅವನೊಡನೆ ಸ್ನೇಹದಿಂದಿರಲು ಪೋರ್ಚುಗೀಸರಿಗೆ ಅವಕಾಶಗಳಿದ್ದರೂ ಅವರದನ್ನು ಉಪಯೋಗಿಸಿಕೊಳ್ಳಲಿಲ್ಲ. ಅದು ಅವರ ಅವನತಿಗೆ ಕಾರಣವಾಯಿತು. ಹಲವು ಬಾರಿ ಸಂಧಾನ, ಒಪ್ಪಂದದ ಪ್ರಯತ್ನಗಳು ನಡೆದರೂ ಅದು ವಿಫಲವಾಯ್ತು. ಅದೇ ರೀತಿ ಕರಾವಳಿಯಲ್ಲಿ ಪೋರ್ಚುಗೀಸರೊಂದಿಗೆ ಕಾದಾಡಿ ಜಯಗಳಿಸಲು ಶಿವಪ್ಪ ನಾಯಕನಿಗೆ ಆಗಿನ ಸಂದರ್ಭಗಳು ತುಂಬಾ ಅನುಕೂಲಕರವಾಗಿತ್ತು. ಡಚ್ಚರು, ಪೋರ್ಚುಗೀಸರ ವಿರುದ್ಧ ಯುದ್ಧ ನಿರತರಾಗಿದ್ದರು. ಇದು ಪೋರ್ಚುಗೀಸರ ವ್ಯಾಪಾರ ವ್ಯವಹಾರಗಳಿಗೆ ಅಡಚಣೆಯೊಡ್ಡಿ ಆರ್ಥಿಕ ದುಸ್ಥಿತಿ ಮತ್ತು ರಾಜಕೀಯ ಅವನತಿಗೆ ಕಾರಣವಾಗಿತ್ತು. ಕ್ರಿ.ಶ.1652ರ ಮೇ ತಿಂಗಳಲ್ಲಿ ಶಿವಪ್ಪ ನಾಯಕನು ಪೋರ್ಚುಗೀಸರೊಡನೆ ಕಾದಾಡಲು ಪ್ರಾರಂಭಿಸುವ ಮೊದಲು, ಪೋರ್ಚುಗೀಸರ ಅನೇಕ ಹಡಗುಗಳು ಬಿರುಗಾಳಿಗೆ ಸಿಲುಕಿ ಧ್ವಂಸಗೊಂಡವು. ಶಿವಪ್ಪ ನಾಯಕ ಕುಂದಾಪುರದ ಕೋಟೆಯನ್ನು ಪೋರ್ಚುಗೀಸರ ಕೈಯಿಂದ ವಶಪಡಿಸಿಕೊಂಡನು.ಹಾಗಾಗಿ ಕುಂದಾಪುರವನ್ನು ಬಿಟ್ಟ ಪೋರ್ಚುಗೀಸ್ ಸೇನೆಯು ಗಂಗೊಳ್ಳಿಯ ಕೋಟೆಯನ್ನು ಸೇರಿಕೊಂಡಿತು. ಶಿವಪ್ಪನಾಯಕ ಅದಕ್ಕೂ ಮುತ್ತಿಗೆ ಹಾಕಿದ. ಮಂಗಳೂರು ಮತ್ತು ಹೊನ್ನಾವರದ ಕೋಟೆಗಳೂ ಅವನ

ಸೈನಿಕರಿಂದ ಆವರಿಸಲ್ಪಟ್ಟವು.[91] ಆದಾಗ್ಯೂ ಉಳಿದ ಕೋಟೆಗಳನ್ನು ರಕ್ಷಿಸಿಕೊಳ್ಳಲು ಅವರು ಬಹಳ ಪ್ರಯತ್ನ ಮಾಡಿದರಾದರೂ ಅದರಲ್ಲಿ ವಿಫಲರಾದರು. ಲಿಯಾನಾರ್ದು ಪಾಯಿಷ್ ಹೇಳಿರುವಂತೆ,[92] ಶಿವಪ್ಪನ ರಾಜ್ಯವು ಮಿರ್ಜಾನಿನಿಂದ ಕಾಸರಗೋಡಿನವರೆಗೆ ಹರಡಿದ್ದು, ಅವನ ಸೈನ್ಯವು 40,000–50,000 ಉತ್ತಮ ಯೋಧರಿಂದ ಕೂಡಿದ್ದು, ಅವನು ಐಶ್ವರ್ಯವಂತನೂ ಬಲಾಢ್ಯನೂ ಆಗಿದ್ದನು. ಶಿವಪ್ಪ ನಾಯಕನಿಂದ ಎಷ್ಟು ಖಂಡಿ ಕರಿಮೆಣಸು ಖರೀದಿಸಬೇಕು ಮತ್ತು ಅದರ ಬೆಲೆ ಖಂಡಿಗೆ ಎಷ್ಟು ಪ್ರತಾಪಗಳಿರಬೇಕೆಂಬ ವಿಚಾರದಲ್ಲಿ ಶಿವಪ್ಪ ನಾಯಕನ ಮತ್ತು ಪೋರ್ಚುಗೀಸರ ನಡುವೆ ಭಿನ್ನಾಭಿಪ್ರಾಯಗಳಿದ್ದು ಇದು ಅವನ ಆಳ್ವಿಕೆಯ ಕೊನೆಯವರೆಗೂ ಮುಂದುವರೆದಿತ್ತು. ಹಲವು ಬಾರಿ ಸಂಧಾನ ಪ್ರಯತ್ನಗಳು ನಡೆದರೂ ಅದು ಫಲಕಾರಿಯಾಗದೆ ಪೋರ್ಚುಗೀಸರು ತುಳುನಾಡಿನ ಕರಾವಳಿ ತೀರದಲ್ಲಿ ತಮ್ಮ ಹಿಡಿತವನ್ನು ಕಳೆದುಕೊಂಡರಲ್ಲದೆ ಅವರ ಎಲ್ಲಾ ಕೋಟೆಗಳನ್ನು ತ್ಯಜಿಸಿ ಅವರು ಗೋವೆಗೆ ಹಿಂತಿರುಗಬೇಕಾಯಿತು.

ಶಿವಪ್ಪ ನಾಯಕನ ಮರಣದ ನಂತರ ಅವನ ತಮ್ಮ ಇಮ್ಮಡಿ ವೆಂಕಟಪ್ಪ ನಾಯಕನು ಕೆಳದಿಯ ರಾಜನಾದನು. (ಕ್ರಿ.ಶ.1660–1661) ಅವನ ಅಲ್ಪಾವಧಿಯ ಆಳ್ವಿಕೆಯ ತರುವಾಯ ಶಿವಪ್ಪ ನಾಯಕನ ಮಗ ಭದ್ರಪ್ಪನು ನಾಯಕನಾದನು. (ಕ್ರಿ.ಶ.1661–1664) ಭದ್ರಪ್ಪ ನಾಯಕನ ಆಳ್ವಿಕೆಯ ಅವಧಿಯಲ್ಲಿ ಬಿಜಾಪುರದ ಆದಿಲ್‌ಷಾನು ಇಕ್ಕೇರಿ ಸಾಮ್ರಾಜ್ಯದ ಮೇಲೆ ದಾಳಿ ಮಾಡಿ ರಾಜಧಾನಿಯನ್ನೂ ವಶಪಡಿಸಿಕೊಂಡನು. ಈ ಅಸಹಾಯಕತೆಯ ಲಾಭ ಪಡೆದುಕೊಂಡು, ಶಿವಪ್ಪ ನಾಯಕನು ತಮ್ಮಿಂದ ವಶಪಡಿಸಿಕೊಂಡಿದ್ದ ಕನ್ನಡ ಕರಾವಳಿಯ ಕೆಲಭಾಗವನ್ನಾದರೂ ಇನ್ನೊಮ್ಮೆ ಗಳಿಸಿಕೊಳ್ಳಲು ಪೋರ್ಚುಗೀಸರು ಪ್ರಯತ್ನಪಟ್ಟರು. ಈ ಹಿನ್ನೆಲೆಯಲ್ಲಿ ಭದ್ರಪ್ಪನು, ಮಲ್ಲಪ್ಪ ಮಲ್ಯರನ್ನು ರಾಯಭಾರಿಯಾಗಿ ಗೋವೆಗೆ ಕಳುಹಿಸಿ, ಹಿಂದೆ ಪೋರ್ಚುಗೀಸರಿಗೆ ಸೇರಿದ್ದ ಹೊನ್ನಾವರ, ಕುಂದಾಪುರ, ಹಾಗೂ ಮಂಗಳೂರು ಕೋಟೆಗಳನ್ನು ಅವರಿಗೆ ಕೊಡಲು ಸಿದ್ಧನಿರುವುದಾಗಿ ತಿಳಿಸಿರುವುದು, ಭದ್ರಪ್ಪನ ಅಸಹಾಯಕತೆಗೆ ಉದಾಹರಣೆಯಾಗಿದೆ.[93]

ರಾಯಭಾರಿ ಮಲ್ಲಪ್ಪನು ಗೋವೆಯಲ್ಲಿ ಸಂಧಾನ ನಡೆಸುತ್ತಿದ್ದಾಗ ಬಿದನೂರಿನಲ್ಲಿ ಭದ್ರಪ್ಪನ ಕೊಲೆಯಾಯಿತು. ಭದ್ರಪ್ಪನ ತಮ್ಮ ಕಿರಿಯ ಸೋಮಶೇಖರ ನಾಯಕನು ರಾಜನಾದನು. (ಕ್ರಿ.ಶ.1664–1671) ಮೇಲೆ ಉಲ್ಲೇಖಿಸಿದ ಸಂಧಾನ ಪ್ರಕ್ರಿಯೆಗಳು ಮುಂದುವರೆದು ಗಂಗೊಳ್ಳಿ, ಕುಂದಾಪುರ ಮತ್ತು ಮಂಗಳೂರುಗಳನ್ನು ಪೋರ್ಚುಗೀಸರಿಗೆ ಹಿಂದಿರುಗಿಸುವುದೆಂದು ನಿರ್ಧರಿಸಲಾಯ್ತು.[94] ಈ ಸ್ಥಳಗಳನ್ನು ಹಿಂತಿರುಗಿಸಲು ಸೋಮಶೇಖರ ನಾಯಕನಿಗೆ ಬಂದ ಸಮಸ್ಯೆಗಳು ಕಾರಣವಾಗಿದ್ದವು.[95] ಈ ಹಿನ್ನೆಲೆಯಲ್ಲಿ ಪೋರ್ಚುಗೀಸರು ಗಂಗೊಳ್ಳಿಯನ್ನು ಸ್ವಾಧೀನಪಡಿಸಿಕೊಂಡರು. ಆದರೆ ಮರುದಿನ ಕುಂದಾಪುರವನ್ನು ವಶಪಡಿಸಿಕೊಳ್ಳುವ ವ್ಯವಸ್ಥೆ ನಡೆಸುತ್ತಿದ್ದಾಗ, ಡಚ್ಚರ 2 ಹಡಗುಗಳು ಪೋರ್ಚುಗೀಸರ ಯುದ್ಧ ಸಲಕರಣೆಗಳ ಹಡಗನ್ನು ಮುತ್ತಿದವು. ಮಂಗಳೂರು ಕೋಟೆ ಕೂಡ ಪೋರ್ಚುಗೀಸರಿಗೆ ಸಿಕ್ಕದಂತೆ ಮಾಡಲು ಡಚ್ಚರು

ಶಕ್ತರಾದರು.[96] ಕ್ರಿ.ಶ.1668ರಲ್ಲಿ ಕರ್ನಾಟಕದ ಕರಾವಳಿಯಲ್ಲಿದ್ದ ಪೋರ್ಚುಗೀಸ್ ಸೇನೆ ಗೋವಾಗೆ ತೆರಳುವ ಅನಿವಾರ್ಯತೆ ಉಂಟಾಯಿತು. ಇದಕ್ಕೆ ಕಾರಣ ಶಿವಾಜಿಯ ಗೋವಾದ ಆಕ್ರಮಣ. ಪೋರ್ಚುಗೀಸರ ನೌಕಾದಳ ಕನ್ನಡ ಕರಾವಳಿಯನ್ನು ಬಿಟ್ಟು ಹೋದೊಡನೆ ಸೋಮಶೇಖರನು ತನ್ನ ರಾಜ್ಯದಲ್ಲಿ ವಾಸಿಸುತ್ತಿದ್ದ ಪೋರ್ಚುಗೀಸರನ್ನು, ಕ್ರೈಸ್ತರನ್ನೂ ಸೆರೆಯಲ್ಲಿರಿಸಿದನು. ಅಲ್ಲದೆ ಗಂಗೊಳ್ಳಿಯ ಕೋಟೆಯನ್ನು ವಶಪಡಿಸಿಕೊಂಡನು.[97]

ಸೋಮಶೇಖರ ನಾಯಕನ ಆಳ್ವಿಕೆ ಅವನ ಕೊಲೆಯೊಂದಿಗೆ ಕ್ರಿ.ಶ.1671ರ ಡಿಸೆಂಬರ್‌ನಲ್ಲಿ ಕೊನೆಗೊಂಡಿತು. ಆ ನಂತರ ಕುತ್ಸಿತ ಶಿವಪ್ಪ ನಾಯಕನೆಂಬುವವನು ನಂತರದ ಕೆಲವು ವರ್ಷ ಆಳಿದನೆಂದು ಊಹಿಸಲಾಗಿದೆ.[98] ಆದರೆ ಈ ಕುರಿತು ಭಿನ್ನಾಭಿಪ್ರಾಯಗಳಿವೆ. ಮುಂದೆ ಸೋಮಶೇಖರ ನಾಯಕನ ಪತ್ನಿ ಚೆನ್ನಮ್ಮಾಜಿಯು (1671–96) ಅಧಿಕಾರ ನಡೆಸಿದಳು. ಕ್ರಿಶ.1677ರಲ್ಲಿ ಅವಳ ಮತ್ತು ಪೋರ್ಚುಗೀಸರ ನಡುವೆ ಘರ್ಷಣೆಯಾಯ್ತು. ಇದಕ್ಕೆ ಕಾರಣ ಚೆನ್ನಮ್ಮಾಜಿಯು ಅರಬರಿಗೆ ಕುಂದಾಪುರ, ಹೊನ್ನಾವರ ಮತ್ತು ಮಂಗಳೂರುಗಳಿಂದ ಅಕ್ಕಿ ಸಾಗಿಸಲು ಮತ್ತು ಆ ಬಂದರುಗಳಲ್ಲಿ ವ್ಯಾಪಾರ ಕೇಂದ್ರಗಳನ್ನು ಸ್ಥಾಪಿಸಲು ಅನುಮತಿ ನೀಡಿದ್ದು,[99] ಇದರ ಮಧ್ಯದಲ್ಲಿ ಚೆನ್ನಮ್ಮಾಜಿಯ ದತ್ತಕ ಪುತ್ರ ಬಸವಪ್ಪನಾಯಕನ ಮಗನಾದ ವೀರಭದ್ರ ನಾಯಕನನ್ನು ಮುಂದಿಟ್ಟುಕೊಂಡು ಕಾಸರಗೋಡಿನ ತಿಮ್ಮಣ್ಣನಾಯಕ ಎಂಬವನು ದಂಗೆ ಎದ್ದನು ಮಾತ್ರವಲ್ಲ ಅವರು ಪೋರ್ಚುಗೀಸರ ಸಹಾಯ ಯಾಚಿಸಿದರು.[100] ಆದರೆ ಪೋರ್ಚುಗೀಸರು ಸಹಾಯ ಮಾಡುವ ಮೊದಲೇ ವೀರಭದ್ರನನ್ನೂ, ತಿಮ್ಮಣ್ಣನನ್ನೂ ಚೆನ್ನಮ್ಮಾಜಿಯು ಹತೋಟಿಗೆ ತಂದಳು. ಮುಂದೆ ಮಂಗಳೂರು ಬಂದರಿನಲ್ಲಿ ವ್ಯಾಪಾರ ಕೇಂದ್ರದ ಸ್ಥಾಪನೆ, ಅಕ್ಕಿಯ ಪೂರೈಕೆ, ಧಾರ್ಮಿಕ ವಿಚಾರಗಳಿಗೆ ಸಂಬಂಧಿಸಿದಂತೆ ಪೋರ್ಚುಗೀಸರೊಂದಿಗೆ ಚೆನ್ನಮ್ಮಾಜಿಯ ಪರವಾಗಿ ಬಸವಪ್ಪನಾಯಕ ಸಂಧಾನ ಮಾತುಕತೆಯ ಮೂಲಕ ಒಪ್ಪಂದಕ್ಕೆ ಸಹಿ ಹಾಕಿದ.[101]

ಚೆನ್ನಮ್ಮಾಜಿಯ ಮರಣದ ನಂತರ ಬಸವಪ್ಪ ಬಿದನೂರಿನ ರಾಜನಾದ.(ಕ್ರಿ.ಶ.1697–1714) ಇವನ ಕಾಲದಲ್ಲಿ ಪೋರ್ಚುಗೀಸರು ಅರಬರನ್ನು ಕನ್ನಡ ಕರಾವಳಿಗೆ ಬರದಂತೆ ತಡೆಯಲು ಪ್ರಯತ್ನಿಸಿದರು. ಅವರ ಪ್ರಯತ್ನಕ್ಕೆ ಬಸವಪ್ಪನ ಬೆಂಬಲವೂ ಇತ್ತು. ಕ್ರಿ.ಶ. 1708ರಲ್ಲಿ ಅರಬರು ಹೊನ್ನಾವರ ಬಸರೂರು ಮತ್ತು ಮಂಗಳೂರುಗಳಲ್ಲಿ ಒಡಿತ ಸಾಧಿಸಲು ಪ್ರಯತ್ನಿಸಿದರಾದರೂ ಬಸವಪ್ಪ ಅದಕ್ಕೆ ಅವಕಾಶ ನೀಡಲಿಲ್ಲ. ಹೊನ್ನಾವರದಲ್ಲಿ 2000 ಸೈನಿಕರೊಂದಿಗೆ ಅವರು ಇಳಿದರಾದರೂ ಬಸವಪ್ಪನ ಸೇನೆ ಅವರನ್ನು ಹಿಮ್ಮೆಟ್ಟಿಸಿತು. ಬಸರೂರು ಮತ್ತು ಮಂಗಳೂರುಗಳಲ್ಲಿ ಅರಬರನ್ನು ಪೋರ್ಚುಗೀಸರು ಹಿಮ್ಮೆಟ್ಟಿಸಿದರು.[102] ಈ ಘಟನೆಗೆ ಸಂಬಂಧಿಸಿದಂತೆ ಸ್ವಾಮಿನಾಥನ್ ಅವರು ಈ ದಾಳಿಯನ್ನು ಪೋರ್ಚುಗೀಸರು ನಡೆಸಿದ್ದರು ಎಂದು ಹೇಳಿರುವುದು ಆಧಾರರಹಿತ ಎಂಬುದಾಗಿ ಬಿ.ಎಸ್. ಶಾಸ್ತ್ರಿಯವರು ಆಧಾರಸಹಿತವಾಗಿ ವಿವರಿಸಿದ್ದಾರೆ.[103] ಬಸವಪ್ಪ ನಾಯಕ ಮತ್ತು ಪೋರ್ಚುಗೀಸರ ಮಧ್ಯೆ ಸಂಘರ್ಷ ತಾರಕಕ್ಕೇರಿದ್ದು ಕ್ರಿ.ಶ.1713ರಲ್ಲಿ. ಕ್ರಿ.ಶ.1712ರಲ್ಲಿ

ಪೋರ್ಚುಗೀಸರು, ಕುದುರೆಗಳನ್ನು ಸಾಗಿಸುತ್ತಿದ್ದ ಬಸವಪ್ಪನ ಹಡಗೊಂದನ್ನು ಪೋರ್ಚುಗೀಸರ ಅಧಿಕಾರ ಪತ್ರವಿಲ್ಲವೆಂದೂ, ನಿಷೇಧಿಸಲ್ಪಟ್ಟ ಸರಕುಗಳಿದ್ದವೆಂದು ಆರೋಪಿಸಿ ವಶಪಡಿಸಿಕೊಂಡರು. ಇದರಿಂದ ಸಿಟ್ಟಿಗೆದ್ದ ಬಸವಪ್ಪ ಪೋರ್ಚುಗೀಸರಿಗೆ ಅಕ್ಕಿ ಪೂರೈಕೆ ಮಾಡಿದರೆ ಮರಣ ದಂಡನೆಯೆಂದು ಸಾರಿದ. ಅಕ್ಕಿಯ ತೀವ್ರವಾದ ಕೊರತೆ ಪೋರ್ಚುಗೀಸರು ಕನ್ನಡ ಕರಾವಳಿಯ ಮೇಲೆ ದಾಳಿ ಮಾಡುವಂತೆ ಮಾಡಿತು. ಜೋಸೆಫ್ ಪೆರೈರ ದೆ ಬ್ರೀತು ಎಂಬ ನೌಕಾಪಡೆಯ ಮುಖಂಡನ ನೇತೃತ್ವದಲ್ಲಿ 350 ಯೋಧರಿದ್ದ 13 ಯುದ್ಧದ ಹಡಗುಗಳು ಕ್ರಿ.ಶ. 1713 ಜನವರಿ 15ರಂದು ಗೋವೆಯಿಂದ ಹೊರಟು ಕುಮಟಾದಲ್ಲಿ ಬಸವಪ್ಪನ 13 ನಾವೆಗಳನ್ನು ಸುಟ್ಟುಹಾಕಿದರು.[104] ಮಂಗಳೂರಿನಿಂದ ಮಿರ್ಜಾನ್‌ವರೆಗಿನ ಕರಾವಳಿ ಪ್ರದೇಶವನ್ನು ಹಾಳುಗೆಡವಿದರು. 4 ಕೋಟೆಗಳು (ಕುಮುಟಾ, ಬಸ್ರೂರು, ಮೂಲ್ಕಿ, ಕಲ್ಯಾಣಪುರ.) 82 ಹಡಗುಗಳು ನಾಶವಾದವು. 600 ಜನ ಕನ್ನಡಿಗ ಸೈನಿಕರು ಮತ್ತು ಪ್ರಜೆಗಳು ಪ್ರಾಣ ಕಳೆದುಕೊಂಡರು. ಬಸವಪ್ಪನಿಗೆ 50 ಲಕ್ಷ ಪ್ರತಾಪಗಳಷ್ಟು ನಷ್ಟವಾದರೆ ಪೋರ್ಚುಗೀಸರಲ್ಲಿ 12 ಮಂದಿ ಸತ್ತರು ಹಾಗೂ 30 ಮಂದಿ ಗಾಯಗೊಂಡರು.[105] ಕ್ರಿ.ಶ.1713ರ ಡಿಸೆಂಬರ್ 28ರಂದು ವೈಸ್‌ರಾಯನಿಗೆ ಹಾಗೂ ಬಸವಪ್ಪನ ಪ್ರತಿನಿಧಿ ಕಡ್ವಾಸೆ ದಾಮರಸ ಪ್ರಭುವಿಗೂ ಮಾತುಕತೆಯಾಗಿ ಕ್ರಿ.ಶ.1714ರ ಫೆಬ್ರವರಿ 19ರಂದು ಒಪ್ಪಂದವಾಯಿತು.[106] ಹಡಗನ್ನು ಬಂಧಿಸುವ ಬಿಡಿಸುವ ವಿಚಾರದಲ್ಲಿ, ಅಧಿಕಾರ ಪತ್ರದಲ್ಲಿ ನಿಷೇಧಿಸಿದ್ದ ವಸ್ತುಗಳ ಸಾಗಾಟ ವಿಷಯದಲ್ಲಿ, ಪಾದ್ರಿಗಳ ಬಂಧನದ ವಿಚಾರದಲ್ಲಿ, ಹೀಗೆ ಬೇರೆ ಬೇರೆ ವಿಚಾರಗಳಲ್ಲಿ ಪೋರ್ಚುಗೀಸರು ಹಾಗೂ ಬಿದನೂರಿನ ಅರಸರ ನಡುವಿನ ಸಂಘರ್ಷ–ಸಂಧಾನಗಳು ಸೋಮಶೇಖರ ನಾಯಕನ ಆಡಳಿತದ ಕಾಲದಲ್ಲಿಯೂ(1715–1739) ಮುಂದುವರೆಯಿತು.

ಎರಡನೇ ಬಸವಪ್ಪ ನಾಯಕ(1739–1755) ಚನ್ನಬಸವಪ್ಪ(1755–1757) ವೀರಮ್ಮಾಜಿ(1758–1763)ಯ ಕಾಲದಲ್ಲಿಯೂ ಪೋರ್ಚುಗೀಸರೊಂದಿಗೆ ಹಾವು ಏಣಿ ಆಟ ಮುಂದುವರೆದಿತ್ತು. ಈ ಮಧ್ಯದಲ್ಲಿ ಮರಾಠಾ ಲೂಟಿಕೋರ ತುಳಾಜಿ ಅಂಗ್ರಿಯನು ಮಂಗಳೂರು ಮತ್ತು ಹೊನ್ನಾವರದ ಮೇಲೆ ದಾಳಿ ಮಾಡಿ ಬಂದರುಗಳನ್ನು ಸುಲಿದು, ಅಮೂಲ್ಯವಾದ ವಸ್ತುಗಳನ್ನು ದೋಚಿಕೊಂಡು ಹೋದನು. ಅವನು ಮಂಜೇಶ್ವರ ದೇವಳವನ್ನೂ ಲೂಟಿ ಮಾಡಿದ್ದಾಗಿ ದೇವಳದ ದಾಖಲೆಯೊಂದು ಮಾಹಿತಿ ನೀಡುತ್ತದೆ.[107] ಅವನು ಮುಂದೆ ಆಕ್ರಮಣ ಮಾಡದಂತೆ ತಡೆಯಲು ಒಂದು ನೌಕಾದಳವನ್ನು ತಯಾರು ಮಾಡುವುದಾಗಿ ಬಸವಪ್ಪ ಹೇಳಿದನೆಂದು ಪೋರ್ಚುಗೀಸರು ಬರೆದ ಒಂದು ಪತ್ರದಿಂದ ಸ್ಪಷ್ಟವಾಗುತ್ತದೆ.[108] ಆದರೆ ತುಳಾಜಿ ಅಂಗ್ರಿಯು ಮತ್ತೆ ಮತ್ತೆ ಕರಾವಳಿಯ ಬಂದರುಗಳ ಮೇಲೆ ದಾಳಿ ಮಾಡಿ ಬೇಕಾದ ವಸ್ತುಗಳನ್ನು ಲೂಟಿ ಮಾಡುತ್ತಿದ್ದ. ಕ್ರಿ.ಶ.1747ನೇ ಜನವರಿಯಲ್ಲಿ ಮಂಗಳೂರಿನ ಪೋರ್ಚುಗೀಸ್ ವ್ಯಾಪಾರ ಕೇಂದ್ರದಿಂದ ಮತ್ತು ಅಲ್ಲಿಯ ಮಂಡಲಾಧಿಕಾರಿಯ ಅರಮನೆಯಿಂದ ಬೆಲೆಬಾಳುವ ವಸ್ತುಗಳನ್ನು ದೋಚಿದ.[109] ಅವನನ್ನು ತಡೆಯಲು ಮಂಗಳೂರಿನ ವ್ಯಾಪಾರ ಕೇಂದ್ರದ ಸುತ್ತ ಕೋಟೆ ಕಟ್ಟಬೇಕೆಂಬ ಪೋರ್ಚುಗೀಸರ

ವಿನಂತಿಯನ್ನು ಬಸವಪ್ಪ ನಾಯಕ ಪೋರ್ಚುಗೀಸರ ಕುರಿತಾದ ಸಂಶಯದಿಂದ ಮನ್ನಿಸಿದಂತೆ ಕಾಣುವುದಿಲ್ಲ. ಕ್ರಿ.ಶ.1749 ನವೆಂಬರ್‌ನಲ್ಲಿ ಅವನು ಪುನಃ ಮಂಗಳೂರಿನ ಮೇಲೆ ದಾಳಿ ಮಾಡಿದನು. ಅಲ್ಲಿಯ ಬಂದರನ್ನು ಕೊಳ್ಳೆ ಹೊಡೆದನಲ್ಲದೆ ಅಲ್ಲಿದ್ದ ಅವರ 2 ನೌಕೆಗಳನ್ನು ಸೂರೆ ಮಾಡಿದನು.[110] ಕ್ರಿ.ಶ 1750ನೇ ಮಾರ್ಚ್‌ನಲ್ಲಿ ತುಳಾಜಿಯು ಹೊನ್ನಾವರ ಕೋಟೆಯ ಮೇಲೆ ದಾಳಿ ಮಾಡಿ ವಶಪಡಿಸಿಕೊಂಡನು. ಅಲ್ಲಿಯ ಪ್ರಮುಖ ವ್ಯಕ್ತಿಗಳ ಪೈಕಿ 1500 ಜನರನ್ನು ಸೆರೆಹಿಡಿದು ಒಯ್ದನು. ಅವರ ಬಿಡುಗಡೆಗೆ ಹಣಪಡೆದು ಲಾಭ ಹೊಂದುವುದು ಅವನ ಉದ್ದೇಶವಾಗಿತ್ತು. ಹಾಗೆಯೇ ಮುಂದುವರೆದು ಅವನು ಗೋಕರ್ಣವನ್ನು ಕೊಳ್ಳೆ ಹೊಡೆದನು.[111]

ಪೋರ್ಚುಗೀಸರ ಮತ್ತು ಬಸವಪ್ಪನ ನಡುವೆ ಶಾಂತಿ ಸಂಧಾನದ ಮಾತುಕತೆಗಳು ನಡೆದರೂ ಅದು ಯಶಸ್ವಿಯಾಗದ ಕಾರಣ ಆ ಅವಕಾಶವನ್ನು ಮರಾಠರು ಸರಿಯಾಗಿಯೇ ಉಪಯೋಗಿಸಿಕೊಂಡರು. ವೀರಮ್ಮಾಜಿ(1757–1763)ಯ ಕಾಲದಲ್ಲಿ ಮೈಸೂರಿನ ಹೈದರಾಲಿ ಬಿದನೂರಿನ ಮೇಲೆ ದಾಳಿ ಮಾಡಿದನಲ್ಲದೆ, ವೀರಮ್ಮಾಜಿಯನ್ನು ಸೆರೆ ಹಿಡಿದು ಕೆಳದಿ ಅರಸರ ಆಳ್ವಿಕೆಯನ್ನು ಅಂತ್ಯಗೊಳಿಸಿದ. ಮುಂದೆ ಕೆಳದಿ ವ್ಯಾಪ್ತಿಯಲ್ಲಿದ್ದ ಸಂಪೂರ್ಣ ತುಳುನಾಡು ಹೈದರಾಲಿ ಮತ್ತು ನಂತರ ಟಿಪ್ಪುಸುಲ್ತಾನನ ಆಳ್ವಿಕೆಗೆ ಒಳಪಟ್ಟಿತು. ಕ್ರಿ.ಶ.1799ರಲ್ಲಿ ಟಿಪ್ಪುವಿನ ಮರಣದ ನಂತರ ಅವಿಭಜಿತ ದಕ್ಷಿಣಕನ್ನಡ, ಕಾಸರಗೋಡು ಮತ್ತು ಉತ್ತರ ಕನ್ನಡ ಜಿಲ್ಲೆಗಳು ಬ್ರಿಟೀಷರ ಕೆಳಗೆ ಮದರಾಸು ಪ್ರಸಿಡೆನ್ಸಿಗೆ ಸೇರಿಸಲ್ಪಟ್ಟವು.

## 2.4 ಕೆಳದಿಯರಸರು ಮತ್ತು ತುಳುನಾಡಿನ ಸಾಮಂತರಸರು

ಈ ಅಧ್ಯಯನದಲ್ಲಿ ಪ್ರಮುಖ ಸಾಮಂತ ಮನೆತನಗಳಾಗಿ, ಈ ಭಾಗದಲ್ಲಿ ಆಡಳಿತ ನಡೆಸಿದ, ಅಜಿಲರು, ಚೌಟರು, ಬಂಗರು, ತೋಳಹರು ಇತ್ಯಾದಿ ಮನೆತನಗಳು ಮತ್ತು ಕೆಳದಿ ಅರಸರ ಸಂಬಂಧದ ಕುರಿತು ಅಧ್ಯಯನ ನಡೆಸಲಾಗಿದೆ. ಈ ಸಾಮಂತ ಅರಸರು ಕೆಳದಿ ಅರಸರ ಸಾರ್ವಭೌಮತ್ವವನ್ನು ಒಪ್ಪಿಕೊಂಡು ಸ್ಥಳೀಯ ಆಡಳಿತಕ್ಕೆ ಧಕ್ಕೆಯಾಗದಂತೆ ತುಳುನಾಡಿನ ಆರ್ಥಿಕ, ಸಾಮಾಜಿಕ, ಸಾಹಿತ್ಯ, ಕಲೆ ಮೊದಲಾದ ಕ್ಷೇತ್ರಗಳಿಗೆ ಕೊಡುಗೆ ನೀಡಿದ್ದರು. ವಿಜಯನಗರದರಸರ ಆಳ್ವಿಕೆಯ ಕಾಲದಿಂದಲೇ ತುಳು ನಾಡನ್ನು ಆಳುತ್ತಿದ್ದ ಈ ರಾಜ ಮನೆತನಗಳು ಕೆಳದಿ ಅರಸರ ಪ್ರಭಾವದಿಂದ ತಮ್ಮ ಪ್ರಾಬಲ್ಯವನ್ನು ಕಳೆದುಕೊಂಡರು. ಕ್ರಿ.ಶ.16ನೇ ಶತಮಾನದಿಂದ ಕ್ರಿ.ಶ.18ನೇ ಶತಮಾನದವರೆಗಿನ ತುಳುನಾಡಿನಲ್ಲಿ, ಕೆಳದಿಯರಸರು ಮತ್ತು ಸ್ಥಳೀಯ ಅರಸರ ಸಂಬಂಧಗಳನ್ನು ಇಲ್ಲಿ ಚರ್ಚಿಸಲಾಗಿದೆ.

**ಕೆಳದಿಯ ಕಾಲದಲ್ಲಿ ಬಂಗರು:** ಬೆಳ್ತಂಗಡಿ ತಾಲೂಕಿನ ಬಂಗವಾಡಿಯ ಅರಮನೆಯಲ್ಲಿ ಈಗಲೂ ಬಂಗರ ಸಂತತಿಯವರು ವಾಸವಾಗಿದ್ದಾರೆ. ಜೈನ ಮತಾವಲಂಬಿಗಳಾದ ಇವರು ಬಂಗವಾಡಿ, ಬೆಳ್ತಂಗಡಿ, ಉಪ್ಪಿನಂಗಡಿ, ನಂದಾವರ, ಮಂಗಳೂರುಗಳಲ್ಲಿ ಅರಮನೆ ಕೋಟೆಗಳನ್ನು ನಿರ್ಮಿಸಿಕೊಂಡು ಸುಮಾರು ಕ್ರಿ.ಶ.12ನೇ

ಶತಮಾನದಿಂದ ಕ್ರಿ.ಶ.19ನೇ ಶತಮಾನದವರೆಗೆ ತುಳುನಾಡಿನ ಕೆಲವು ಭಾಗವನ್ನು ಆಳ್ವಿಕೆ ಮಾಡಿದರು. ಇಮ್ಮಡಿ ಲಕ್ಷ್ಮಪ್ಪರಸ ಬಂಗನ ನಂತರ ಬಂಗರ ರಾಜನಾಗಿ ಆತನ ಅಳಿಯ ಮುಮ್ಮಡಿ ಕಾಮರಾಯನು ಕ್ರಿ.ಶ.(1556–1611) ಪಟ್ಟಕ್ಕೆ ಬಂದ. ಕಾಮರಾಯನ ತಂಗಿಯಾದ ಕಮಲಾದೇವಿಯನ್ನು ಕಾರ್ಕಳದ ಇಮ್ಮಡಿ ಭೈರವನಿಗೆ ಮದುವೆ ಮಾಡಿ ಕೊಡುವುದಾಗಿ ನಿಶ್ಚಯಿಸಲಾಗಿತ್ತು. ಆದರೆ ಯುದ್ಧವೊಂದರಲ್ಲಿ ಚೌಟರ ರಾಣಿ ತಿರುಮಲಾದೇವಿಯು ಭೈರವರಾಯನಿಂದ ಕೊಲ್ಲಲ್ಪಟ್ಟಳು. ತಂಗಿಯನ್ನು ವಿವಾಹ ಮಾಡಿಕೊಡಲೊಪ್ಪದ ಕಾಮರಾಯ ಬಂಗನೂ ಸೋತು ಹೋದನು. ಅಧಿಕಾರವನ್ನು ಕಳೆದುಕೊಂಡ ಕಾಮರಾಯನು ತನ್ನ ಮಾವನಾದ ಲಕ್ಷ್ಮಪ್ಪರಸ ಬಂಗನ ಪತ್ನಿ ಉಳ್ಳಾಲದ ರಾಣಿ ಅಬ್ಬಕ್ಕದೇವಿಯ ವಿರುದ್ಧವಾಗಿ ಪೋರ್ಚುಗೀಸರನ್ನು ಎತ್ತಿಕಟ್ಟಿ ಅವರೊಳಗೆ ಯುದ್ಧವಾಗುವಂತೆಯೂ ಮಾಡಿದನು.[112] ಇಲ್ಲಿ ಅಬ್ಬಕ್ಕನ ಪತಿ ಬಂಗರಾಜ ಹೌದಾದರೂ ಅವನು ಯಾರು ಎನ್ನುವ ವಿಚಾರದಲ್ಲಿ ಚರ್ಚೆಗಳಿವೆ.

ಕಾಮರಾಯನು ಕ್ರಿ.ಶ.1612ರಲ್ಲಿ ತೀರಿಕೊಂಡ ಮೇಲೆ ಪಟ್ಟಕ್ಕೆ ಬಂದ ಆತನ ಅಳಿಯ ಮುಮ್ಮಡಿ ಲಕ್ಷ್ಮಪ್ಪರಸ ಬಂಗರಾಯನು ಪೋರ್ಚುಗೀಸರೊಡನೆ ಹೆಚ್ಚು ಸ್ನೇಹವನ್ನು ಬೆಳೆಸಿಕೊಂಡು ಇಕ್ಕೇರಿಯ ನಾಯಕರ ವಿರೋಧವನ್ನು ಕಟ್ಟಿಕೊಳ್ಳಬೇಕಾಯಿತು. ಇದರಿಂದ ಕೆಳದಿಯ ವೆಂಕಟಪ್ಪ ನಾಯಕನು ಬಂಗರ ರಾಜ್ಯದ ಮೇಲೆ ದಾಳಿಯನ್ನು ನಡೆಸಿ ಬಂಗರನ್ನು ಸೋಲಿಸಿದನು. ಬಂಗರಸನು 3500 ವರಹಗಳ ಕಪ್ಪವನ್ನು ಕೊಡಬೇಕೆಂದು ಸೂಚಿಸಿದನು. ಈ ಬಂಗರಾಜನ, ಪೋರ್ಚುಗೀಸರ, ಕೆಳದಿ ರಾಜರ ಮತ್ತು ಅಬ್ಬಕ್ಕನ ಸಂಬಂಧಗಳ ಕುರಿತಾಗಿ ಪಿಯತ್ರೋ ಡೆಲ್ಲಾ ವಲ್ಲೆ ಸವಿಸ್ತಾರವಾಗಿ ವರ್ಣಿಸಿದ್ದಾನೆ. ಮುಮ್ಮಡಿ ಲಕ್ಷ್ಮಪ್ಪರಸ ಬಂಗನ ತರುವಾಯ ಆತನ ಅಳಿಯನಾದ ನಾಲ್ಮಡಿ ಹಾವಳಿ ಬಂಗರಾಜ ಒಡೆಯನು ಪಟ್ಟಕ್ಕೆ ಬಂದನು. ಇಕ್ಕೇರಿಯ ಅರಸನು ವಿಧಿಸಿದ ಕಪ್ಪವನ್ನು ಕೊಡದಿದ್ದುದರಿಂದ ಶಿವಪ್ಪನಾಯಕ ಇವನನ್ನು ಸೆರೆಹಿಡಿದು ಇಕ್ಕೇರಿಗೆ ಕೊಂಡೊಯ್ದನು. ಕೆಲವು ಮೂಲಗಳ ಪ್ರಕಾರ ಇವನಿಗೆ ಸಾಹುಕಾರನಾದ ದಾಸಪ್ಪ ಪೈ ಜಾಮೀನು ನಿಂತು ಸಹಕರಿಸಿದ.[113] ಬಂಗರ ಕೈಯಿಂದ ಮಂಗಳೂರು ತಪ್ಪಿ ಹೋಗಿ, ಅದು ಇಕ್ಕೇರಿಯ ಅರಸರ ನೇರ ಆಡಳಿತಕ್ಕೆ ಒಳಗಾಯಿತು. ಬಂಗರಸರು ಬಂಗಾಡಿಯಲ್ಲದೆ ಇತರ ಕಡೆಗಳಲ್ಲಿ ಅರಮನೆಗಳನ್ನೂ ಕೋಟೆಗಳನ್ನೂ ಹೊಂದಿರಬಾರದೆಂದು ಒತ್ತಡ ಹೇರಲಾಯ್ತು. ಆದಾಗ್ಯೂ ನಂದಾವರದ ಕೋಟೆ ಬಂಗರ ವಶದಲ್ಲೇ ಇತ್ತು.[114]

ಕೆಳದಿಯರಸರು, ಪೋರ್ಚುಗೀಸರು ಮತ್ತು ಬಂಗರಸರ ಸಂಘರ್ಷ ಹಾಗೂ ಒಪ್ಪಂದಗಳು ಕ್ರಿ.ಶ.17 ಮತ್ತು 18ನೇ ಶತಮಾನದಲ್ಲಿ ನಿರಂತರವಾಗಿ ನಡೆದಿದ್ದು ಈ ವಿಚಾರವನ್ನು ಈ ಮೊದಲೇ ಚರ್ಚಿಸಲಾಗಿದೆ. ಈ ಸಂಘರ್ಷದ ಕಾರಣದಿಂದ ಬಂಗರು ತುಳುನಾಡಿನಲ್ಲಿ ತಮ್ಮ ಹಿಡಿತವನ್ನು ಕಳೆದುಕೊಳ್ಳಬೇಕಾಯಿತು.ಸುಳ್ಯ ಪುತ್ತೂರು ಭಾಗದ ಹತ್ತಾರು ಬೀಡು ಬಲ್ಲಾಳರು ಬಂಗರ ಅಧೀನದಲ್ಲಿದಲ್ಲಿದ್ದರೆಂದು ತಿಳಿದು ಬರುತ್ತದೆ. ಸುಬ್ರಹ್ಮಣ್ಯದ ಅಪ್ರಕಟಿತ ತಾಮ್ರ ಶಾಸನವೊಂದು ಕ್ರಿ.ಶ.1682ರಲ್ಲಿ ಬೇಲೂರಿನ ಪಾಳೆಯಗಾರನಾಗಿದ್ದ

ವೆಂಕಟಪ್ಪ ನಾಯಕನು ದಾನ ನೀಡಿದ ಉಲ್ಲೇಖವನ್ನು ಮಾಡುತ್ತಾ, "ಈ ಧರ್ಮವನ್ನು ಬಂಗರ ಒಡೆತನದಲ್ಲಿ ಅಲ್ಲಿಯ ಸ್ಥಾನಿಕರು ನಡೆಸಿಬಹರು"ಎಂದು ದಾಖಲಿಸುತ್ತದೆ.[115] ಕ್ರಿ.ಶ.1673ರಲ್ಲಿ ಸುಳ್ಯ ತಾಲೂಕಿನ ಕೊಲ್ಲಮೊಗರು ಬೀಡಿನ ಶಂಕರದೇವಿ ಬಲ್ಲಾಳ್ತಿ ಈ ದೇವರಿಗೆ ದಾನ ನೀಡಿದ್ದಳು.[116] ಈ ದಾಖಲೆಗಳು ಬಂಗರ ಅಧೀನದ ಬಲ್ಲಾಳರ ಅಸ್ತಿತ್ವ ಸಾರುವ ಮಹತ್ವದ ದಾಖಲೆಗಳಾಗಿವೆ.

**ಕುಂಬಳೆ ಅರಸು ಮನೆತನ:** ಕರ್ನಾಟಕವನ್ನಾಳಿದ ಆದಿ ಕದಂಬರಿಂದ ಪ್ರಾರಂಭಿಸಿ ವಿಜಯನಗರದವರೆಗೆ ವಿವಿಧ ಸಾಮ್ರಾಟರ ಸಾಮ್ರಾಜ್ಯದ ಕೆಳಗೆ ಆಡಳಿತಕ್ಕೊಳಪಟ್ಟ ಸಂಸ್ಥಾನಗಳಲ್ಲಿ ಕಾಸರಗೋಡು ಜಿಲ್ಲೆಯಲ್ಲಿರುವ ಕುಂಬಳೆ ಪ್ರಾಂತ್ಯವೂ ಒಂದಾಗಿತ್ತು. ಇಕ್ಕೇರಿಯ ಅರಸ ಸದಾಶಿವ ನಾಯಕನು ಕಾಸರಗೋಡಿನವರೆಗೆ ದಂಡಯಾತ್ರೆ ನಡೆಸಿ ಅಲ್ಲಿ ತೊಲಗದ ಕಂಬವನ್ನು ಸ್ಥಾಪಿಸಿ ಕೋಟೆಯನ್ನು ಕಟ್ಟಿಸಿದನು.[117] ಆದರೆ ಕೆಳದಿ ನೃಪ ವಿಜಯ, ಕುಂಬಳೆ ಮತ್ತು ಕಾಸರಗೋಡನ್ನು ವಶಪಡಿಸಿಕೊಂಡ ಹಿರಿಯ ವೆಂಕಟಪ್ಪ ನಾಯಕ ಇಲ್ಲಿ ಕೋಟೆಯನ್ನು ನಿರ್ಮಿಸಿದ ಎಂಬ ಮಾಹಿತಿ ನೀಡುತ್ತದೆ.[118] ಹಿರಿಯ ವೆಂಕಟಪ್ಪ ನಾಯಕನು ಪೋರ್ಚುಗೀಸರಿಗೆ ಸಹಾಯಕನಾಗಿದ್ದ ಬಂಗರಸನನ್ನು ಸೋಲಿಸಿ ಓಡಿಸಿದಾಗ ಅವನು ಕುಂಬಳೆಯ ಅಪ್ರಾಪ್ತ ವಯಸ್ಕ ಅರಸನ ಆಶ್ರಯವನ್ನು ಪಡೆದನು. ಹಾಗೆಯೇ ಚೌಟ ರಾಣಿ ಅಬ್ಬಕ್ಕನಿಗೆ ಕುಂಬಳೆಯರಸ ಪೋರ್ಚುಗೀಸರ ವಿರುದ್ಧ ಸಹಾಯ ಮಾಡಿದ್ದ ಎಂದು ತಿಳಿದುಬರುತ್ತದೆ.[119] ಕೆಳದಿಯರಸರಿಗೆ ಕುಂಬಳೆ ರಾಮರಾವ್ ಅರಸನು ಅವನ ಒಟ್ಟು 2 ಸಾವಿರ ಇಕ್ಕೇರಿ ಪಗೋಡ ಆದಾಯದಲ್ಲಿ 800 ಪಗೋಡ ಕಪ್ಪ ಕೊಡಬೇಕಾಗಿತ್ತು. ಇವನ ಕಾಲದಲ್ಲಿ ಕುಂಬಳೆ, ಅಕ್ಕಿ ಮತ್ತು ಕರಿಮೆಣಸು ರಫ್ತು ಮಾಡುವ ಕೇಂದ್ರವಾಗಿತ್ತು. ಪೋರ್ಚುಗೀಸರು ಇದನ್ನು ಖರೀದಿಸುತ್ತಿದ್ದರು. ಈ ಕಾಲದಲ್ಲಿ ಕುಂಬಳೆ ನಾಯಕ ಮನೆತನದವರು ಪ್ರಮುಖ ವ್ಯಾಪಾರಿಗಳಾಗಿದ್ದರು. ಕುಂಬಳೆ ಅರಸನ ಈ ವ್ಯಾಪಾರವನ್ನು ಕೆಳದಿ ಶಿವಪ್ಪನಾಯಕನು ವಿರೋಧಿಸಿ ಸೈನಿಕ ಕ್ರಮ ತೆಗೆದುಕೊಂಡನು.[120]

ಶಿವಪ್ಪನಾಯಕನು ಕಾಸರಗೋಡಿನ ಕರಾವಳಿಯುದ್ದಕ್ಕೂ ಅಲ್ಲಲ್ಲಿ ಕೋಟೆಗಳನ್ನು ಕಟ್ಟಿಸಿದ್ದನಲ್ಲದೆ, ನೀಲೇಶ್ವರದವರೆಗೆ ದಂಡಯಾತ್ರೆ ನಡೆಸಿ ಅಲ್ಲಿವರೆಗೆ ತನ್ನ ರಾಜ್ಯವನ್ನು ವಿಸ್ತರಿಸಿದ. ಕ್ರಿ.ಶ.1654ರಲ್ಲಿ ಕುಂಬಳೆ ಅರಸನನ್ನು ಸೋಲಿಸಿದ ಶಿವಪ್ಪ ನಾಯಕನು ಅವನಿಗೆ ಅಡೂರು, ಮಧೂರು, ಕಾವು, ಕಣಿಪುರಗಳನ್ನೊಳಗೊಂಡ ಪ್ರದೇಶಗಳನ್ನು ಮಾತ್ರ ವಹಿಸಿಕೊಟ್ಟರು.[121] ಇಮ್ಮಡಿ ಸೋಮಶೇಖರ ನಾಯಕನು ಕುಂಬಳೆ ಅರಸನನ್ನು ಬಂಧಿಸಿದ್ದಾಗಿ ಕೆಳದಿ ನೃಪವಿಜಯದಲ್ಲಿ ಹೇಳಿದೆ.[122] ಹೀಗೆ ಹೈದರ್ ಆಲಿಯ ಪ್ರವೇಶದವರೆಗೂ ಈ ಪ್ರಾಂತ್ಯ ಕೆಳದಿಯ ಆಡಳಿತಕ್ಕೆ ಒಳಪಟ್ಟಿತ್ತು.

**ವಿಟ್ಲದ ಡೊಂಬ ಹೆಗ್ಗಡೆ ಅರಸರು:** ಕ್ರಿ.ಶ.13ನೇ ಶತಮಾನದಿಂದ ಕ್ರಿ.ಶ.19ನೇ ಶತಮಾನದ ಪ್ರಾರಂಭದ ಕಾಲದವರೆಗೆ ವಿಟ್ಲವನ್ನು ತಮ್ಮ ರಾಜಕೀಯ ಕೇಂದ್ರವನ್ನಾಗಿಸಿ ಆಳಿದ ಡೊಂಬ ಹೆಗ್ಗಡೆ ಅರಸರ ಹಾಗೂ ಕೆಳದಿ ರಾಜರ ಸಂಬಂಧಗಳನ್ನು ಇಲ್ಲಿ ಚರ್ಚಿಸಲಾಗಿದೆ. ಕ್ರಿ.ಶ.1608ರಲ್ಲಿ ವಿಟ್ಲದ ಹೆಗ್ಗಡೆಯು ಇಕ್ಕೇರಿಯ

ವೆಂಕಟಪ್ಪ ನಾಯಕನ ಜೊತೆ ವಾರ್ಷಿಕ ಕಪ್ಪ ನೀಡುವಿಕೆಯ ಕುರಿತಂತೆ ಒಪ್ಪಂದವನ್ನು ಮಾಡಿಕೊಳ್ಳುತ್ತಾನೆ.[123] ವೆಂಕಟಪ್ಪನ ಮೊಮ್ಮಗ ವೀರಭದ್ರ ನಾಯಕನು ಪಟ್ಟವನ್ನೇರಿದ ಸಂದರ್ಭ ಕೆಳದಿಯ ಸಾಮಂತರೆಲ್ಲ ದಂಗೆಯೆದ್ದು ಗೊಂದಲದ ಪರಿಸ್ಥಿತಿಯ ನಿರ್ಮಾಣವಾಯಿತು. ದಂಗೆಯೆದ್ದ ರಾಜರುಗಳಲ್ಲಿ ಡೊಂಬ ಹೆಗ್ಗಡೆಯೂ ಒಬ್ಬ.[124] ಆದರೆ ಈ ಸ್ವಾತಂತ್ರ್ಯ ಹೆಚ್ಚು ಕಾಲ ಉಳಿಯಲಿಲ್ಲ. ಪುನಃ ಆತನು ಕೆಳದಿ ಅರಸರ ಅಧಿಪತ್ಯವನ್ನು ಒಪ್ಪಿಕೊಂಡು ತನ್ನೆಲ್ಲಾ ಅಧಿಕಾರವನ್ನು ಕಳೆದುಕೊಂಡು ಹೆಸರಿಗೆ ಮಾತ್ರ ರಾಜನಾಗಿ ಉಳಿಯಬೇಕಾಯಿತು.[125] ವಿಟ್ಲದ ಹೆಗ್ಗಡೆಯು ಕೆಳದಿ ಸಂಸ್ಥಾನಕ್ಕೆ ನೀಡಬೇಕಾಗಿದ್ದ ವಾರ್ಷಿಕ ಕಾಣಿಕೆಯನ್ನು ದೀರ್ಘಕಾಲದವರೆಗೆ ನೀಡದೇ ಇದ್ದಾಗ ಆತನನ್ನು ಬಂಧಿಸಿ ಕೆಳದಿಗೆ ಒಯ್ಯಲಾಯಿತು. ಆ ಸಂದರ್ಭ ಆಸ್ಥಾನದಲ್ಲಿ ಮಂತ್ರಿಯಾಗಿದ್ದ ನಿರ್ವಾಣ ಶೆಟ್ಟಿಯು ಡೊಂಬ ಹೆಗ್ಗಡೆಗೆ ಜಾಮೀನು ನೀಡಿ ಆತನನ್ನು ಬಿಡುಗಡೆಗೊಳಿಸಿದ.[126] ಈ ಉಪಕಾರಕ್ಕೆ ಉತ್ತರವಾಗಿ ನಿರ್ವಾಣ ಶೆಟ್ಟಿಗೆ ವಿಟ್ಲದ ಹೆಗ್ಗಡೆಯು ತನ್ನ ರಾಜ್ಯದ ಚಂದಪ್ಪಾಡಿ, ಕಾಡುಮಠ ಮತ್ತು ಸೆರ್ಕಳ ಗ್ರಾಮಗಳಲ್ಲಿ ಭೂಮಿಯನ್ನು ನೀಡಿದ್ದ. ಈ ಘಟನೆಯು ಇಮ್ಮಡಿ ಸೋಮಶೇಖರ ನಾಯಕನ (ಕ್ರಿ.ಶ.1714–1739) ಕಾಲದಲ್ಲಿ ನಡೆದಿರಬೇಕು. ಮುಂದೆ ಕೆಳದಿ ರಾಜ್ಯವು ಹೈದರಾಲಿಯ ವಶವಾದಾಗ ಕೆಳದಿಯ ಸಾಮಂತರಾಗಿದ್ದ ವಿಟ್ಲದರಸರೂ ಹೈದರಾಲಿಯ ಪ್ರಾಬಲ್ಯವನ್ನು ಒಪ್ಪಿಕೊಳ್ಳಬೇಕಾಯಿತು.

**ಮೂಲಿಕೆ (ಮೂಲ್ಕಿ) ಸಾಮಂತರಸರು:** ಮೂಲಿಕೆಯ ಸಾಮಂತರಸರ ರಾಜಧಾನಿ ಇಂದಿನ ಪಡುಪಣಂಬೂರು. ಇವರ ಆಳ್ವಿಕೆಯ ಅವಧಿಯಲ್ಲಿ ಏಳಂಜೆ, ಸೀಮಂತೂರು, ಮೂಲಿಕೆಯ ಕೋಟೆಕೇರಿ ಮತ್ತು ಈಗಿನ ಪಡುಪಣಂಬೂರು ಹೀಗೆ ವಿವಿಧ ಕಡೆಗಳಿಂದ ಅವರು ಆಳ್ವಿಕೆ ನಡೆಸಿದರು.[127] ವಿಜಯನಗರ ಅರಸರ ಪ್ರಾಬಲ್ಯ ತಗ್ಗಿದಾಗ ಇವರು ಸ್ವತಂತ್ರರಂತೆ ವರ್ತಿಸಿದರೂ ಮುಂದೆ ಕ್ರಿ.ಶ.1606ರಲ್ಲಿ ಕೆಳದಿ ವೆಂಕಟಪ್ಪ ನಾಯಕನಿಂದ ಸೋತು ಈ ನಾಯಕನ ಅಧಿಕಾರವನ್ನು ಒಪ್ಪಿಕೊಳ್ಳಬೇಕಾಗಿ ಬಂತು. ಇದನ್ನು ವಿರೋಧಿಸಲು ಈ ವಂಶದ ಕಾರ್ನಾಡಿನ ರಾಣಿ ಪೋರ್ಚುಗೀಸ್ ಮತ್ತು ಬಂಗರಸರೊಂದಿಗೆ ಕೂಡಿಕೊಂಡು ಕೆಳದಿ ವೆಂಕಟಪ್ಪನನ್ನು ಎದುರಿಸಿದಳಾದರೂ ಅವಳು ಯಶಸ್ವಿಯಾಗಲಿಲ್ಲ. ಕೆಳದಿ ನಾಯಕರನ್ನು ಕುಗ್ಗಿಸಲು ಈ ಸಾವಂತರಸರು ಇನ್ನಿತರ ತುಳು ರಾಜರುಗಳೊಂದಿಗೆ ಬಂಡೆದ್ದು ವಿಫಲರಾದರೆಂದು ಕೆಳದಿ ನೃಪವಿಜಯ ಮತ್ತು ಕ್ರಿ.ಶ.1630ರ ಪೋರ್ಚುಗೀಸ್ ದಾಖಲೆಗಳು ಸೂಚಿಸುತ್ತದೆ.[128]

ಒಟ್ಟಿನಲ್ಲಿ ಹೇಳುವುದಾದರೆ ಕೆಳದಿ ನಾಯಕರ ಆಳ್ವಿಕೆಯ ಅವಧಿಯಲ್ಲಿ ಸಾವಂತರಸರ ರಾಜಕೀಯ ಪ್ರಭಾವ ಇಳಿಮುಖವಾಯ್ತು. ಅರಬರು, ಪೋರ್ಚುಗೀಸರು ಮತ್ತು ಡಚ್ಚರ ಸಂಪರ್ಕವನ್ನು ಸಾವಂತರಸರು ಹೊಂದಿದ್ದರು. ಇದಕ್ಕೆ ಕರಾವಳಿ ತೀರದಲ್ಲಿ ಅವರ ರಾಜಧಾನಿ ಇರುವುದೇ ಕಾರಣವಾಗಿರಬೇಕು. ಕ್ರಿ.ಶ.17ನೇ ಶತಮಾನದ ಪೂರ್ವಾರ್ಧದಲ್ಲಿ ಪೋರ್ಚುಗೀಸರಿಗೂ ಮತ್ತು ಸಾವಂತರಸರಿಗೂ ಉತ್ತಮ ರಾಜಕೀಯ ಸಂಬಂಧವಿದ್ದಿತು. ಈ ರಾಜಕೀಯ ಸಂಬಂಧವನ್ನು ಕೆಳದಿನಾಯಕರ ವಿರುದ್ಧ ಕಾರ್ನಾಡಿನ ರಾಣಿ

ಉಪಯೋಗಿಸಲು ಪ್ರಯತ್ನಿಸಿದಳಾದರೂ ಆದು ಯಶಸ್ವಿಯಾಗಲಿಲ್ಲ.[129] ಕ್ರಿ.ಶ.1705ರಲ್ಲಿ ಪೋರ್ಚುಗೀಸರು ಮೂಲಿಕೆಯಲ್ಲಿ ಬರುವ ಆಮದು ಮತ್ತು ರಫ್ತುಗಳ ತೆರಿಗೆ ಪಡೆಯುವ ಅಧಿಕಾರವನ್ನು ಕೆಳದಿನಾಯಕನಿಂದ ಪಡೆದರು.[130] ಇದು ಇಲ್ಲಿ ವ್ಯಾಪಾರ ವೃದ್ಧಿಗೆ ಸಹಕಾರಿಯಾಯಿತು. ಆದರೂ ಪೋರ್ಚುಗೀಸರು ಇಲ್ಲಿ ಆಗಿಂದಾಗ್ಗೆ ಲೂಟಿ ನಡೆಸುತ್ತಿದ್ದರು. ಉದಾಹರಣೆಗೆ ಕ್ರಿ.ಶ.1713ರಲ್ಲಿ ಪೋರ್ಚುಗೀಸ್ ನೌಕಾಪಡೆಯ ಅಧಿಕಾರಿ ಜೋಸೆಫ್ ಬ್ರಿತು ಮೂಲ್ಕಿ ರೇವಿಗೆ ಬಂದು ಇಲ್ಲಿಯ ಕೋಟೆಯನ್ನು ವಶಕ್ಕೆ ಪಡೆದು ಅಕ್ಕಪಕ್ಕದಲ್ಲಿದ್ದ ವಾಸಸ್ಥಳಗಳನ್ನು ಸುಟ್ಟುಹಾಕಿದ.[131] ಮುಂದೆ ಡಚ್ಚರು ಮತ್ತು ಇಂಗ್ಲೀಷ್ ವ್ಯಾಪಾರ ಚಟುವಟಿಕೆಗಳು ಬಲಿಷ್ಠವಾಗುತ್ತಿದ್ದುದರಿಂದ ಪೋರ್ಚುಗೀಸರ ಪ್ರಭಾವವು ಕ್ರಮೇಣ ಇಲ್ಲಿ ಇಳಿಮುಖವಾಯಿತು. ಕ್ರಿ.ಶ.1743ರಲ್ಲಿ ಡಚ್ಚರು ಮೂಲಿಕೆ ರೇವಿನಲ್ಲಿ ವ್ಯಾಪಾರ ಮಾಡಿಕೊಂಡಿದ್ದರು.[132] ಕೆಳದಿಯರಸರಿಗೆ ಸಾಮಂತರಾಗಿದ್ದ ಮೂಲ್ಕಿಯರಸರು ಒಂದೆರಡು ಉದಾಹರಣೆಗಳನ್ನು ಬಿಟ್ಟರೆ ಅವರಿಗೆ ವಿಧೇಯರಾಗಿದ್ದು ಉಳಿದ ವಿದೇಶೀ ಶಕ್ತಿಗಳೊಂದಿಗೂ ಹೊಂದಾಣಿಕೆಯ ರಾಜಕೀಯದಲ್ಲಿ ಕಾಲಕಳೆದರು.

**ವೇಣೂರಿನ ಅಜಿಲರು:** ದ.ಕ.ಜಿಲ್ಲೆಯ ವೇಣೂರು, ಅಳದಂಗಡಿ, ಕೇಳ ಮತ್ತು ಬರಾಯ ಹೀಗೆ 4 ಸ್ಥಳಗಳಲ್ಲಿ ಅರಮನೆಗಳನ್ನು ಹೊಂದಿ ವೇಣೂರನ್ನು ಪ್ರಧಾನ ಕೇಂದ್ರವನ್ನಾಗಿ ಹೊಂದಿ ಆಳ್ವಿಕೆ ಮಾಡಿದವರು ಅಜಿಲ ಅರಸರು. ಹೊಯ್ಸಳರು, ವಿಜಯನಗರದರಸರು ಹಾಗೂ ಕೆಳದಿ ಅರಸರ ಕೆಳಗೆ ಸಾಮಂತರಾಗಿ ಆಳಿದವರು. ಅಜಿಲರ ಆಶ್ರಯದಲ್ಲಿ ಬರೆಯಲ್ಪಟ್ಟ ಪದ್ಮನಾಭ ಕವಿಯ ವೇಣೂರು ಭುಜಬಲಿ ಚರಿತ್ರೆ, ಅಜಿಲರ ಚರಿತ್ರೆಯಲ್ಲದೆ ಆ ಕಾಲದ ಸಾಮಾಜಿಕ, ಧಾರ್ಮಿಕ ವಿಚಾರ ತಿಳಿಯಲು ಸಹಕಾರಿಯಾಗಿದೆ.

ಕ್ರಿ.ಶ.1550ರಿಂದ–1620ರವರೆಗೆ ಆಳಿದ ತಿಮ್ಮಣ್ಣ ಅಜಿಲನು ಈ ರಾಜಮನೆತನದ ಪ್ರಮುಖ ಅರಸ. ಕ್ರಿ.ಶ.1604ರಲ್ಲಿ ವೇಣೂರಿನ ಬಾಹುಬಲಿಯನ್ನು ಪ್ರತಿಷ್ಠಾಪಿಸಿದವನು ಇದೇ ಅರಸನಾಗಿದ್ದನು.[133] ಇವನ ಕಾಲದಲ್ಲಿಯೇ ಕೆಳದಿ ವೆಂಕಟಪ್ಪ ನಾಯಕನು ತುಳುನಾಡಿನ ಮೇಲೆ ದಾಳಿನಡೆಸಿದ್ದು, ಅವನು ಅಜಿಲರನ್ನು ಸೇರಿದಂತೆ ಎಲ್ಲಾ ಅರಸರನ್ನು ಸೋಲಿಸಿರುವುದಾಗಿ ಲಿಂಗಣ್ಣ ಕವಿ ತನ್ನ ಕೆಳದಿ ನೃಪ ವಿಜಯದಲ್ಲಿ ತಿಳಿಸುತ್ತಾನೆ. ಪೋರ್ಚುಗೀಸರ ನೇತೃತ್ವದಲ್ಲಿ ರಚಿತವಾದ ಒಕ್ಕೂಟದಲ್ಲಿ ಅಜಿಲರೂ ಸೇರಿರುವುದಾಗಿ ಕ್ರಿ.ಶ.1613ರ ದಾಖಲೆ ತಿಳಿಸುತ್ತದೆ. ಆದರೆ ಈ ಒಕ್ಕೂಟವನ್ನು ಕೆಳದಿ ವೆಂಕಟಪ್ಪನಾಯಕನು ಸಂಪೂರ್ಣವಾಗಿ ಸೋಲಿಸಿದ್ದ.[134]

ಕೆಳದಿ ವೆಂಕಟಪ್ಪನಾಯಕನು ಅಜಿಲರ ರಾಜ್ಯವನ್ನು ವಶಪಡಿಸಿಕೊಂಡ ನಂತರ ಅಜಿಲರ ಆಡಳಿತ ಕೊನೆಗೊಂಡಿರಬೇಕೆಂಬ ಅಭಿಪ್ರಾಯವನ್ನು ಅಜಿಲ ವಂಶದ ಶಂಕರ ದೇವಿಗೆ ಸಂಬಂಧಿಸಿದ ಕ್ರಿ.ಶ.1720ರ ಶಾಸನ ಹಾಗೂ ಕ್ರಿ.ಶ.1750ರ ಮೂಡಬಿದ್ರಿಯ ಶಾಸನ ಅಲ್ಲಗಳೆಯುತ್ತದೆ.[135] ಈ ಶಾಸನಗಳು ಅಜಿಲರ ಆಡಳಿತ ಆ ಕಾಲದಲ್ಲಿಯೂ ಮುಂದುವರೆದಿರುವುದಕ್ಕೆ ಸಾಕ್ಷಿಯಾಗಿವೆ. ಕ್ರಿ.ಶ.1763ರಲ್ಲಿ ಹೈದರಾಲಿಯು ಅಜಿಲರ ಪ್ರಾಂತ್ಯವನ್ನು ತನ್ನ ಸಾಮ್ರಾಜ್ಯಕ್ಕೆ ಸೇರ್ಪಡೆ ಮಾಡಿಕೊಳ್ಳುವುದರೊಂದಿಗೆ ಅವರ ಆಡಳಿತವು

ಕೊನೆಗೊಂಡಿತ್ತು. ಆದರೆ ಮುಂದೆ ಸಾಂಪ್ರದಾಯಿಕವಾದ ಕಟ್ಟುಕಟ್ಟಳೆಯೊಂದಿಗೆ ಈ ರಾಜಮನೆತನವು ಇಂದಿಗೂ ಅಳದಂಗಡಿಯಲ್ಲಿ ಮುಂದುವರಿಯುತ್ತಿದೆ.

**ಕಾರ್ಕಳದ ಭೈರರಸ ಒಡೆಯರು:** ಭೈರರಸ ಒಡೆಯರು ಆಳಿದ ಪ್ರದೇಶವನ್ನು ಕಳಸ–ಕಾರ್ಕಳ ರಾಜ್ಯವೆಂದು ಉಲ್ಲೇಖಿಸಲಾಗಿದೆ. ಘಟ್ಟದ ಮೇಲಿನ ಕಳಸ ಸೀಮೆ ಮತ್ತು ಘಟ್ಟದ ಕೆಳಗಿನ ಕಾರ್ಕಳ ಸೀಮೆ ಈ ವಂಶದವರ ಆಡಳಿತಕ್ಕೊಳಪಟ್ಟಿತ್ತು. ಕ್ರಿ.ಶ.12ನೇ ಶತಮಾನದಿಂದ 17ನೇ ಶತಮಾನದವರೆಗೆ ತುಳುನಾಡಿನ ಕಾರ್ಕಳದ ಸುತ್ತಮುತ್ತ ಮತ್ತು ಘಟ್ಟದ ಮೇಲಿನ ಒಂದಿಷ್ಟು ಭಾಗವನ್ನು ಒಟ್ಟಾಗಿ ಆಳಿದ ಭೈರರಸರು, ಕಳಸದಿಂದ ಈ ಕಡೆಗೆ ಬಂದ ಮೇಲೆ ಕೆರವಾಸೆ ಮತ್ತು ಕಾರ್ಕಳವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದರು.

ವಿಜಯನಗರದ ಪತನಾ ನಂತರ ಕೆಳದಿಯರಸರು ಈ ಪ್ರದೇಶಗಳನ್ನು ಆಕ್ರಮಿಸಿದಾಗ, ಕಾರ್ಕಳದ ಭೈರರಸರಿಗೂ ಕೆಳದಿ ಅರಸರಿಗೂ ಯುದ್ಧಗಳಾದವು. ವೆಂಕಟಪ್ಪ ನಾಯಕನು ಭೈರರಸರಿಂದ ಕೊಪ್ಪ, ಬೆಳ್ಳಾರೆ ಮೊದಲಾದ ಪ್ರದೇಶಗಳನ್ನು ವಶಪಡಿಸಿಕೊಂಡ. ಮಾತ್ರವಲ್ಲದೆ ಭೈರರಸರಿಂದ ಕಪ್ಪ ಪಡೆದ.[136] ಸುಳ್ಯ ತಾಲೂಕಿನ ಬೆಳ್ಳಾರೆಯಲ್ಲಿ ವೆಂಕಟಪ್ಪ ನಾಯಕ ನಿರ್ಮಿಸಿದ್ದ ಕೋಟೆಯ ಪಳೆಯುಳಿಕೆಗಳನ್ನು ಇಂದಿಗೂ ನೋಡಬಹುದಾಗಿದೆ. ಇಲ್ಲಿ ಬೆಳ್ಳಾರೆ ಬಲ್ಲಾಳನಿಗೆ ಸೇರಿದ್ದ ಬೀಡು, ಪಾಳುಬಿದ್ದ ಬಸದಿಯಿದ್ದು, ಇದರ ಅವನತಿಗೆ ಸ್ಪಷ್ಟ ಕಾರಣ ತಿಳಿಯದಿದ್ದರೂ ವೆಂಕಟಪ್ಪನ ದಾಳಿಯಿಂದ ಈ ಭಾಗದಲ್ಲಿ ಬಲ್ಲಾಳರು ಹೆಗ್ಗಡೆಗಳು ನಾಶವಾಗಿರಬೇಕೆಂದು ಕೆಳದಿ ನೃಪ ವಿಜಯ ಸುಳಿವನ್ನು ನೀಡುತ್ತದೆ.[137] ಪೋರ್ಚುಗೀಸ್ ದಾಖಲೆಗಳ ಪ್ರಕಾರ ಬಂಗವಾಡಿಯ ಅರಸನು ತನ್ನ ವಿರುದ್ಧ ಯುದ್ಧ ನಡೆಸುತ್ತಿದ್ದ 'ಪರ್ವತರಾಜ ಅಥವಾ ಕಳಸ ಕಾರ್ಕಳದ ಭೈರರಸನ ವಿರುದ್ಧ ಸಹಾಯ ಬೇಕೆಂದು ಆಹ್ವಾನಿಸಿದಾಗ ವೆಂಕಟಪ್ಪನು ಬಹಳ ಉತ್ಸಾಹದಿಂದ ಈ ಕೆಲಸವನ್ನು ಮಾಡಿ ಮುಗಿಸಿದನು.[138] ಮುಂದೆ ಬಂಗರಾಜನು ವೆಂಕಟಪ್ಪನಾಯಕನ ವಿರುದ್ಧ ಪೋರ್ಚುಗೀಸರ ಸಹಾಯ ಯಾಚಿಸಿದಾಗ, ಅವರು ಬಹಿರಂಗವಾಗಿ ಅವನ ಬೆಂಬಲಕ್ಕೆ ನಿಲ್ಲಲು ಹಿಂಜರಿದು, ವೆಂಕಟಪ್ಪನ ವಿರುದ್ಧ ಗಹಸ್ಯವಾಗಿ ಒಂದು ಒಕ್ಕೂಟವನ್ನು ಏರ್ಪಡಿಸಲು ಪ್ರಯತ್ನಿಸಿದರು. ಈ ಕೂಟದಲ್ಲಿ ಬಂಗವಾಡಿಯ ರಾಜ ಕಾರ್ನಾಡಿನ ರಾಣಿಯೊಂದಿಗೆ ಕಳಸ ಕಾರ್ಕಳದ ಭೈರರಸನೂ ಸೇರಿದ್ದ.[139] ಆದರೆ ಪೋರ್ಚುಗೀಸರ ಬೆಂಬಲವಿಲ್ಲದ ಕಾರಣದಿಂದ ಈ ಯುದ್ಧ ನಡೆಯಲಿಲ್ಲ. ಕ್ರಿ.ಶ.1616ರಲ್ಲಿ ಬಂಗರಾಜ ಮತ್ತು ಉಳ್ಳಾಲದ ರಾಣಿಯ ಮಧ್ಯೆ ಮನಸ್ತಾಪ ಉಂಟಾದಾಗ, ಬಂಗರಾಜನು ಭೈರರಸರ ಸಹಾಯದಿಂದ ಅವಳ ಒಂದು ಕೋಟೆಯನ್ನು ಹೊರತುಪಡಿಸಿ ಉಳಿದ ಸ್ಥಳಗಳನ್ನೆಲ್ಲ ವಶಪಡಿಸಿಕೊಂಡಿದ್ದನು.[140] ಈ ಎಲ್ಲಾ ಮಾಹಿತಿಗಳು ಹೇಗೆ ಸ್ಥಳೀಯ ಅರಸರು ತಮ್ಮೊಳಗೆ ತಿಕ್ಕಾಟದಲ್ಲಿ ತೊಡಗಿದ್ದರು ಮತ್ತು ಹೇಗೆ ಇವರ ಸಂಬಂಧಗಳು ಪದೇ ಪದೇ ಬದಲಾಗುತ್ತಿದ್ದವು ಎಂದು ತಿಳಿಸುತ್ತವೆ.

ವೀರಭದ್ರ ನಾಯಕನ ಕಾಲದಲ್ಲಿ ಪರ್ವತರಾಜ (ಕಳಸ ಕಾರ್ಕಳದ ಭೈರರಸ)ನು ಸ್ವತಃ ಇಕ್ಕೇರಿ

ರಾಜ್ಯದ ಮೇಲೆ ದಂಡೆತ್ತಿ ಹೋದನೆಂದು ಹೇಳಲಾಗಿದೆ. ಈತ ವೀರಭದ್ರನ ದಂಡನಾಯಕನನ್ನು ಸೋಲಿಸಿ, ಬಹುಸಂಖ್ಯಾತ ಸೈನಿಕರನ್ನು ಕೊಂದು, ಒಂದು ಆನೆ ಹಾಗೂ ಹಲವು ಕುದುರೆಗಳನ್ನು ವಶಪಡಿಸಿಕೊಂಡ. ಅವನ ವಿರುದ್ಧ ವೀರಭದ್ರ ನಾಯಕ ಇನ್ನೊಂದು ಸೇನೆಯನ್ನು ಕಳುಹಿಸಿದರೂ ಅದು ಸೋತುಹೋಯಿತು. ಇದೇ ಸಂದರ್ಭದಲ್ಲಿ ಬಂಗರಾಜ, ಉಳ್ಳಾಲದ ರಾಣಿ, ಕಾರ್ನಾಡಿನ ರಾಣಿ ಹಾಗೂ ತುಳುನಾಡಿನ ಇತರ ಅರಸರೂ ಕೆಳದಿಯ ವಿರುದ್ಧ ದಂಗೆಯೆದ್ದರು.[141] ಬಂಗಾಡಿ, ಕಾರ್ನಾಡು ಮತ್ತು ಕಳಸ ಕಾರ್ಕಳದ ರಾಜರು ವೀರಭದ್ರನ ವಿರುದ್ಧ ಪೋರ್ಚುಗೀಸರ ಸಹಾಯ ಕೇಳಿದರು. ಮತ್ತು ಅವರಿಗೆ ಸಹಾಯ ಮಾಡಬೇಕೆಂದೂ ಪೋರ್ಚುಗೀಸರು ನಿರ್ಧರಿಸಿದ್ದರು.[142] ಗಂಗೊಳ್ಳಿಯಲ್ಲಿ ಪೋರ್ಚುಗೀಸರು ಕಟ್ಟಿಸುತ್ತಿದ್ದ ಕೋಟೆಯ ಎದುರಿಗೆ ವೀರಭದ್ರನು ಕೋಟೆ ಕಟ್ಟಿಸಲು ಪ್ರಾರಂಭಿಸಿದಾಗ ಭೈರರಸರ ದಂಡನಾಯಕ 'ಮಲ್ಲಸೇನನು' ಒಂದು ಸಾವಿರ ಸೈನಿಕರನ್ನು ಒದಗಿಸುವುದಾಗಿ ಹೇಳಿ ವೀರಭದ್ರನ ಕೋಟೆಯ ಕೆಲಸವನ್ನು ನಿಲ್ಲಿಸುವಂತೆ ಮಾಡಲು ಅವರಿಗೆ ಸಲಹೆ ನೀಡಿದ್ದನು.[143] ಚೆನ್ನಮ್ಮಾಜಿಯ ಕಾಲದಲ್ಲಿಯೂ ಭೈರರಸರು ಕೆಳದಿಯರಸರನ್ನು ವಿರೋಧಿಸಿದರಾದರೂ ಅದರಲ್ಲಿ ವಿಫಲರಾದರು.[144] ಈ ಒಕ್ಕೂಟ ವೀರಭದ್ರನನ್ನು ಮಣಿಸುವಲ್ಲಿ ಯಶಸ್ವಿಯಾಗಲಿಲ್ಲ. ಕೆಳದಿಯರಸರೊಂದಿಗಿನ ನಿರಂತರ ಸಂಘರ್ಷದಿಂದಾಗಿ ಭೈರರಸರು ತಮ್ಮ ಪ್ರಾಬಲ್ಯವನ್ನು ಸಂಪೂರ್ಣವಾಗಿ ಕಳೆದುಕೊಂಡರು.



**ಸೂರಾಲಿನ ತೋಳಹರು:** ಹೆಬ್ರಿ ಸಮೀಪದ ಸೂರಾಲನ್ನು ರಾಜಧಾನಿಯಾಗಿಸಿ ಆಳಿದ ತೋಳಹರ ಮತ್ತು ಕೆಳದಿಯರಸರ ನಂಟಿನ ಮೊದಲ ಉಲ್ಲೇಖ ದೊರಕುವುದು, ಕ್ರಿ.ಶ. ಸುಮಾರು 1555ರಿಂದ 1580ರವರೆಗೆ ಆಳಿದನೆನ್ನಲಾಗುವ ಚೆನ್ನಯರಸ ತೋಳಹನ ಕಾಲದ ಶಾಸನದಲ್ಲಿ. ಹಟ್ಟಿಯಂಗಡಿಯ ಈ ಶಾಸನದ ಪ್ರಕಾರ ಬಂಕಿಯರಸ ಹೊನ್ನಯ ಕಂಬಳಿ ಒಡೆಯ, ಚೆನ್ನಯರಸ ತೋಳಹ ಹಾಗೂ ಇಕ್ಕೇರಿಯ ದೊರೆ, ಹಾರುನಾಡು ಸೀಮೆಯನ್ನು ಕಣಜಿಯಾಗಿ ಆಳುತ್ತಿದ್ದರು.[145] ತುಳುನಾಡಿನ ವಾಣಿಜ್ಯ ಕೇಂದ್ರವಾದ ಬಸ್ರೂರು, ತೋಳಹರ ನಿಯಂತ್ರಣದಲ್ಲಿತ್ತು. ಆದರೆ ಅದನ್ನು ಪೋರ್ಚುಗೀಸರು ವಶಪಡಿಸಿಕೊಂಡರು. ಆಗ ತೋಳಹರು ಹೊಸಂಗಡಿ ಕಂಬಳಿ ಅರಸರ ಸಹಾಯದಿಂದ ಪೋರ್ಚುಗೀಸರನ್ನು ಸೋಲಿಸಿದರೆಂದು ಹೇಳಲಾಗಿದೆ. ಆದರೆ ಅದು ತಾತ್ಕಾಲಿಕ ಯಶಸ್ಸಾಗಿತ್ತು. ಪೋರ್ಚುಗೀಸರು ಪುನಃ ಬಸ್ರೂರನ್ನು ವಶಪಡಿಸಿಕೊಂಡರು. ತೋಳಹರು ಅವರೊಂದಿಗೆ ಒಪ್ಪಂದ ಮಾಡಿಕೊಳ್ಳುವ ಅನಿವಾರ್ಯತೆ ಉಂಟಾಯಿತು.[146] ಮದನದೇವಿ ತೊಳಹಾರತಿ ಕ್ರಿ.ಶ.1691ರ ಹೊತ್ತಿಗೆ ಅಧಿಕಾರದಲ್ಲಿದ್ದ ಮಾಹಿತಿ ಸುರಾಲು ತಾಮ್ರ ಶಾಸನದಲ್ಲಿದ್ದು,[147] ತದ ನಂತರ ಈ ಪ್ರದೇಶ ಕೆಳದಿ ನಾಯಕರ ಹಿಡಿತದಲ್ಲಿತ್ತು. ವೀರಶೈವ ಧರ್ಮ ಈ ವಂಶದ ಆಳ್ವಿಕೆಯ ಕಾಲದಲ್ಲಿ ರಾಜಾಶ್ರಯವನ್ನು ಪಡೆಯಿತು. ಕೆಳದಿಯ ಅರಸ ವೆಂಕಟಪ್ಪ ನಾಯಕನಿಂದ ಪ್ರಾರಂಭಿಸಿ ಹಲವು ವರ್ಷಗಳ ಕಾಲ ತೋಳಹರು ಕೆಳದಿಯರಸರನ್ನು ಪ್ರತಿಭಟಿಸಲು ಪ್ರಯತ್ನಿಸಿದರಾದರೂ ಅದರಲ್ಲಿ ಯಶಸ್ಸನ್ನು ಕಾಣಲಿಲ್ಲ.

**ಹೊಸಂಗಡಿಯ ಹೊನ್ನೆಯ ಕಂಬಳಿಯರಸರು:** ತಮ್ಮ ಆಳ್ವಿಕೆಯುದ್ದಕ್ಕೂ ವಿಜಯನಗರ ಮತ್ತು ಕೆಳದಿ ರಾಜರೊಂದಿಗೆ ಸ್ನೇಹದಿಂದಲೇ ವರ್ತಿಸಿದ ಈ ಅರಸರು ತಮ್ಮ ಶಾಸನಗಳಲ್ಲೂ ಕೆಳದಿಯರಸರನ್ನು ಸ್ಮರಿಸಿದ್ದಾರೆ.[148] ಕೆಳದಿ ಅರಸರುಗಳಾದ ಸದಾಶಿವ ನಾಯಕನಿಂದ ಹಿಡಿದು ರಾಮರಾಜ ನಾಯಕನವರೆಗೆ ಕೆಳದಿ ಮತ್ತು ಹೊನ್ನೆಯ ಕಂಬಳಿ ಅರಸರ ಸಂಬಂಧ ಉತ್ತಮವಾಗಿತ್ತು. ಆದರೆ ಶಂಕರಭಟ್ಟನೆಂಬ ಮಂತ್ರಿಯಿಂದಾಗಿ ಹಿರಿಯ ವೆಂಕಟಪ್ಪ ನಾಯಕ ಹಾಗೂ ಹೊನ್ನೆಯ ಕಂಬಳಿಯರಸರ ನಡುವೆ ವಿರಸ ತಲೆದೋರಿತು. ತದನಂತರ ಹಿರಿಯ ವೆಂಕಟಪ್ಪನಾಯಕನು ಕೋಟೆಯನ್ನು ಬಹು ಪ್ರಯಾಸದಿಂದ ಸುಮಾರು 6 ತಿಂಗಳ ಕಾಲ ಹೋರಾಟ ನಡೆಸಿ ಕೈವಶ ಮಾಡಿಕೊಂಡು ಶಂಕರಭಟ್ಟನನ್ನು ಬಂಧಿಸಿ ನಂತರ ಹೊನ್ನೆಯ ಕಂಬಳಿಯರಸರನ್ನು ಸೋಲಿಸಿದ.[149] ಈ ದಾಳಿಯು ಉಳ್ಳಾಲದ ರಾಣಿ ಅಬ್ಬಕ್ಕನ ಆಹ್ವಾನದ ಮೇರೆಗೆ ಅವಳಿಗೆ ಸಹಾಯ ಮಾಡಲೆಂದು ವೆಂಕಟಪ್ಪ ನಾಯಕ ಸೈನ್ಯ ಸಹಿತ ಬಂದಾಗ ನಡೆದಿರಬೇಕು. ಈ ದಾಳಿಯ ನಂತರ ಹೊಸಂಗಡಿಯು ಹೊನ್ನೆಯ ಕಂಬಳಿಯರಸರ ಸಂಸ್ಥಾನದ ಆಡಳಿತ ಅವರ ಕೈತಪ್ಪಿ ಕೆಳದಿ ನಾಯಕರ ಹಿಡಿತದಲ್ಲಿ ಬಂದಿತು.

**ಚೌಟರಸರು:** ಮೂಡಬಿದಿರೆ, ಉಲ್ಲಾಳ, ಪುತ್ತಿಗೆಯಿಂದ ಆಳಿದ ಚೌಟರಸರಲ್ಲಿ ರಾಣಿ ಅಬ್ಬಕ್ಕ ಮತ್ತು ಕೆಳದಿ ಅರಸರುಗಳ ಪರಸ್ಪರ ಸಂಬಂಧ ಇಲ್ಲಿ ಮಹತ್ವಪೂರ್ಣ ಎನಿಸುತ್ತದೆ. ಎಷ್ಟು ಜನ ಅಬ್ಬಕ್ಕ ಹೆಸರಿನ ರಾಣಿಯರಿದ್ದರೆಂಬ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿವೆ. ಆದರೆ ದಾಖಲೆಗಳನ್ನು ಪರಿಶೀಲಿಸಿ, ಒಟ್ಟು 4 ಅಬ್ಬಕ್ಕ ರಾಣಿಯರನ್ನು ಗುರುತಿಸಲಾಗಿದೆ. ಕ್ರಿ.ಶ.1554 ರಿಂದ 1588ರವರೆಗೆ ಆಳ್ವಿಕೆ ನಡೆಸಿದ ಅಬ್ಬಕ್ಕದೇವಿ ಚೌಟರ ಸಾಮ್ರಾಜ್ಯವನ್ನು ಆಳ್ವಿಕೆ ಮಾಡಿದ್ದ ಮೊದಲ ಮಹಾರಾಣಿ. ಇವಳ ಕುರಿತಾದ ಮೊದಲ ಉಲ್ಲೇಖ ಕ್ರಿ.ಶ.1555ರಲ್ಲಿ ಬರುವುದರಿಂದ ಹೆಚ್ಚು ಕಡಿಮೆ ಆ ಕಾಲದಲ್ಲಿ ಅವಳ ಆಳ್ವಿಕೆ ಪ್ರಾರಂಭವಾಗಿರಬೇಕು.[150] ಈಕೆಯೇ ಪೋರ್ಚುಗೀಸರೊಂದಿಗೆ ಯುದ್ಧ ಪ್ರಾರಂಭಿಸಿ ಇತಿಹಾಸದಲ್ಲಿ ಪ್ರಸಿದ್ಧಳಾದವಳು. ಪೋರ್ಚುಗೀಸರು ಉಲ್ಲಾಳದ ಮೇಲೆ ದಾಳಿ ಮಾಡಿದರಾದರೂ ಅಬ್ಬಕ್ಕನ ಪ್ರತಿರೋಧದಿಂದ ಅವರು ಉಳ್ಳಾಲದಲ್ಲಿ ಕೋಟೆ ಕಟ್ಟುವ ನಿರ್ಧಾರವನ್ನು ಬದಲಿಸಿ ತಮಗೆ ಅನುಕೂಲಕರವಾದ ಮಂಗಳೂರಿನಲ್ಲಿ ಕೋಟೆ ಕಟ್ಟಿಸಿದರು. ಇವಳನ್ನು ಲಕ್ಷ್ಮಪ್ಪರಸ ಬಂಗರಾಜ ಮದುವೆಯಾಗಿದ್ದನು. ಅಬ್ಬಕ್ಕನ ನಂತರ ಅವಳ ಮಗಳು ತಿರುಮಲಾದೇವಿಯು ಪಟ್ಟಕ್ಕೆ ಬಂದಳು. ತಿರುಮಲಾದೇವಿಯನ್ನು ಕಾರ್ಕಳದ ದಾವಣಿ ಇಮ್ಮಡಿ ಭೈರವರಾಯನ ಸೇನಾಪತಿ ಸೋಲಿಸಿ ಶಿರಚ್ಛೇದನ ಮಾಡಿದ. ಅವಳ ನಂತರ ಅಧಿಕಾರಕ್ಕೆ ಬಂದವನು, ಅವಳ ಮಗನಾದ ಒಂದನೇ ಚಂದ್ರಶೇಖರ ಚಿಕ್ಕರಾಯ ಎನ್ನಲಾಗಿದೆ.[151] ಇವನು ಪಟ್ಟಕ್ಕೆ ಬಂದ ಕೂಡಲೇ ತನ್ನ ತಾಯಿಯನ್ನು ಕೊಂದ ಭೈರವರಸ ಒಡೆಯನ ಮೇಲೆ ಸೇಡು ತೀರಿಸಿಕೊಳ್ಳಲು ನಿರ್ಧರಿಸಿದ. ತನ್ನ ಕುಟುಂಬದವರಾದ ಸುರಾಲ ತೋಳಹರಲ್ಲಿಗೆ ತನ್ನ ಪ್ರಧಾನಿಯನ್ನು ಕಳುಹಿಸಿ ಸಹಾಯ ಯಾಚಿಸಿ ತೋಳಹರ ಅರಸನು ಇಕ್ಕೇರಿಯ ವೆಂಕಟಪ್ಪ ನಾಯಕನ ಸಹಾಯದಿಂದ ಈ ಭೈರವರಸನನ್ನು ಕೊಲ್ಲಲು ನಿರ್ಧರಿಸಿ ಈರ್ವರೂ

ಸೇರಿ ತಮ್ಮ ರಾಯಭಾರಿಯನ್ನಾಗಿ ಕಾಶಿ ಗಣಪತಿಯನ್ನು ಇಕ್ಕೇರಿಗೆ ಕಳುಹಿಸಿ ಸಹಾಯ ಯಾಚಿಸಿದರು. ವೆಂಕಟಪ್ಪ ನಾಯಕ ಇದಕ್ಕೆ ಒಪ್ಪಿಗೆ ಸೂಚಿಸಿದ ಮೇಲೆ ತೋಳಹರ ಮತ್ತು ಹೊಸಂಗಡಿಯ ಹೊಸ್ನೆಯ ಕಂಬಳಿ ಅರಸರು ಘಟ್ಟದ ಮಾರ್ಗವನ್ನು ಸರಿಪಡಿಸಿ ವೆಂಕಟಪ್ಪನಾಯಕನು ದೊಡ್ಡ ಸೈನ್ಯದೊಡನೆ ಇಳಿದುಬರಲು ಅಗತ್ಯವಿರುವ ಸಿದ್ದತೆಯನ್ನು ಮಾಡಿದರು. ಕ್ರಿ.ಶ.1608ರಲ್ಲಿ ವೆಂಕಟಪ್ಪ ನಾಯಕನು ತನ್ನ ಸೈನ್ಯದೊಡನೆ ಹೊಸಂಗಡಿ ಕಣಿವೆಯ ಮಾರ್ಗವಾಗಿ ಕಾರ್ಕಳಕ್ಕೆ ಬಂದನು. ಚಿಕ್ಕರಾಯನ ಸೈನ್ಯವೂ ಸೇರಿಕೊಂಡು ಯುದ್ಧದಲ್ಲಿ ಧಾವಣಿ ಇಮ್ಮಡಿ ಭೈರವರಾಯನು ಮಡಿದನು. ಕಾರ್ಕಳ ಸೀಮೆಯು ವೆಂಕಟಪ್ಪ ನಾಯಕನ ಸ್ವಾಧೀನಕ್ಕೆ ಬಂದ ಮೇಲೆ ವೆಂಕಟಪ್ಪ ನಾಯಕನು, ತಿರುಮಲ ದೇವಿಯನ್ನು ಕೊಂದ ಸ್ಥಳವಾದ ಸಾಣೂರು ಗ್ರಾಮವನ್ನು ಚಿಕ್ಕರಾಯನಿಗೆ ಉಂಬಳಿಯಾಗಿ ಬಿಟ್ಟನು ಎನ್ನಲಾಗಿದೆ.[152] ಆಮೇಲೆ ಚಿಕ್ಕರಾಯನು ವೆಂಕಟಪ್ಪ ನಾಯಕನೊಂದಿಗೆ ಮಂಗಳೂರಿಗೆ ಹೋದನು. ಅಲ್ಲಿ ಬಂಗರಾಜ, ವೇಣೂರಿನ ಅಜಿಲ, ವಿಟ್ಲದ ಡೊಂಬ ಹೆಗ್ಗಡೆ, ಕುಂಬಳೆಯ ದೇಶಿಂಗ ಅರಸ, ಬೈಲಂಗಡಿ ಮೂಲರಸರು ಚಿಕ್ಕರಾಯ ಚೌಟನ ಮುಖಾಂತರ ವೆಂಕಟಪ್ಪ ನಾಯಕನೊಡನೆ ಒಪ್ಪಂದ ಮಾಡಿಕೊಂಡು ತಮ್ಮ ಪಾಲಿನ ಕಪ್ಪದ ಹಣ ನಿಗದಿ ಮಾಡಿಕೊಂಡರು. ಚಿಕ್ಕರಾಯ ಮತ್ತು ವೆಂಕಟಪ್ಪ ನಾಯಕನು ಮಂಗಳೂರಿನಿಂದ ಮೂಲ್ಕಿಗೆ ಹೋಗುವಾಗ ಮೂಲ್ಕಿ ಸಾವಂತನ ಸೈನ್ಯವು ತಡೆಯೊಡ್ಡಿತಾದರೂ ಸಾವಂತನನ್ನು ಯುದ್ಧದಲ್ಲಿ ಸೋಲಿಸಲು, ಅವನು ವೆಂಕಟಪ್ಪ ನಾಯಕನೊಡನೆ ಒಪ್ಪಂದ ಮಾಡಿಕೊಂಡ. ಮೂಲ್ಕಿಯಿಂದ ಹೊರಟ ಇವರಿಬ್ಬರು ನಂತರ ಬಾರ್ಕೂರಿಗೆ ಹೋಗಿ ಸುರಾಲ ತೋಳಹರರೊಂದಿಗೆ ಒಪ್ಪಂದ ಮಾಡಿ ಹಿಂತಿರುಗಿದರು. ಕೊನೆಗೆ ವೆಂಕಟಪ್ಪನು ತನಗೆ ಸಹಾಯ ಮಾಡಿದ ಚಿಕ್ಕರಾಯನಿಗೆ ಪಟ್ಟೆಗ್ರಾಮ ಮತ್ತು ಹೆಜಮಾಡಿ ಮಾಗಣೆಯನ್ನು ಉಂಬಳಿಯಾಗಿ ನೀಡಿ ಹಿಂತಿರುಗಿದ. ಹೀಗಾಗಿ ಚಿಕ್ಕರಾಯನ ಆಳ್ವಿಕೆಯ ಕಾಲದಲ್ಲಿ ಚೌಟರ ಸೀಮೆಯು ಬಹಳ ವಿಸ್ತಾರವಾಯಿತು.[153] ಈ ಎಲ್ಲಾ ವಿಚಾರಗಳನ್ನು ಪ್ರಸ್ತುತ ಪಡಿಸಿರುವ ಐಗಳ್ ಅವರ  ಬರಹಕ್ಕೆ ಮೂಲ ಯಾವುದು ಎಂಬುದು ತಿಳಿದಿಲ್ಲ. ಆದರೆ ಪೋರ್ಚುಗೀಸ್ ದಾಖಲೆಗಳನ್ನು ಅಧ್ಯಯನ ಮಾಡಿದ ವಿದ್ವಾಂಸರ ಪ್ರಕಾರ, ವೆಂಕಟಪ್ಪ ನಾಯಕನನ್ನು ತುಳುನಾಡಿಗೆ ಬರಮಾಡಿಕೊಂಡವಳು ಅಬ್ಬಕ್ಕನೇ ಹೊರತು ಚಿಕ್ಕರಾಯನಲ್ಲ.[154] ಹಾಗಾಗಿ ಚಿಕ್ಕರಾಯನ ಅಲ್ಪಾವಧಿಯ ಆಳ್ವಿಕೆಯ ನಂತರ ಎರಡನೆಯ ಅಬ್ಬಕ್ಕ ಅಧಿಕಾರಕ್ಕೆ ಬಂದಿರಬೇಕು. ಇವಳ ಕುರಿತಾಗಿ ಪಿಯತ್ರೋ ಡೆಲ್ಲಾ ವಲ್ಲೆ ಸವಿಸ್ತಾರವಾಗಿ ವಿವರಿಸಿದ್ದಾನೆ.

ಪುತ್ತಿಗೆಯಿಂದ ಆಳ್ವಿಕೆ ನಡೆಸಿದ 3ನೇ ಭೋಜರಾಯ ಇಕ್ಕೇರಿಗೆ ನೀಡಬೇಕಾದ ಕಪ್ಪವನ್ನು ಸಲ್ಲಿಸದೆ ಇದ್ದುದರಿಂದ ವೀರಭದ್ರ ನಾಯಕನು, ಇವನನ್ನು ಇಕ್ಕೇರಿಗೆ ಕರೆಸಿ ಸೆರೆಯಲ್ಲಿಟ್ಟನು. ಆಗ ಅಮ್ಮೆಂಬಳ ಮಾಗಣೆಯವರು ಕಪ್ಪವನ್ನು ನೀಡಿ ಭೋಜರಾಯನನ್ನು ಬಿಡಿಸಿಕೊಂಡು ಬಂದರು. ಮುಂದಿನ ವರ್ಷದಿಂದ ವಾರ್ಷಿಕ 4050 ವರಹ $41^{1}/_{2}$ ಹಣವನ್ನು ಕಪ್ಪವಾಗಿ ನೀಡಬೇಕೆಂದು, ಸೈನ್ಯದ ಖರ್ಚು ಕಡಿಮೆ ಮಾಡಿ.

ರಾಜ ಮರ್ಯಾದೆಗೆ ಬೇಕಾದ 10 ಕುದುರೆಗಳನ್ನು 100 ಮಂದಿ ಊಳಿಗದವರನ್ನು, ಪಲ್ಲಕ್ಕಿ, ದಂಡಿಗೆ, ಬಿರುದು ಬಾವಲಿ ಹಿಡಿಮುಕೊಳ್ಳುವ ಜನರನ್ನು ಪಾತಕರನ್ನು ಮಾತ್ರ ಇಟ್ಟುಕೊಳ್ಳಬೇಕೆಂದು ವೀರಭದ್ರ ನಾಯಕನು ಅಪ್ಪಣೆಕೊಟ್ಟು, ಒಪ್ಪಂದ ಮಾಡಿ ಭೋಜರಾಯನನ್ನು ಮತ್ತೆ ಪುತ್ತಿಗೆಗೆ ಹಿಂದೆ ಕಳುಹಿಸಿಕೊಟ್ಟ. ಮುಂದೆ, ಸೋಮೇಶ್ವರ ಗ್ರಾಮವನ್ನು ಮಾತ್ರ ಚೌಟ ಅರಸರಿಗೆ ಬಿಟ್ಟು, ಉಳ್ಳಾಲ ಮಾಗಣೆಯನ್ನು ಬೊಳುಮೆ (ಬೊಳ್ಮ) ಗ್ರಾಮವನ್ನು ಇಕ್ಕೇರಿಯವರು ತಮ್ಮ ಸ್ವಾಧೀನವಿಟ್ಟುಕೊಂಡರು.[155]

ಇಕ್ಕೇರಿಯ ಅರಸ ಸೋಮಶೇಖರ ನಾಯಕನು ತುಳುನಾಡಿಗೆ ಬಂದು ಮೂಡಬಿದಿರೆಯ ಪೊನ್ನಚಾರು ವೀರಶೈವ ಮಠದಲ್ಲಿರುವಾಗ 3ನೇ ಅಬ್ಬಕ್ಕದೇವಿಯು ಅವನನ್ನು ಭೇಟಿ ಮಾಡಿದ್ದಳು. (ಕ್ರಿ.ಶ.1726–1749) ಸೋಮಶೇಖರನು ಪದ್ಧತಿ ಪ್ರಕಾರ ಮರ್ಯಾದೆ ಕೊಟ್ಟು ಉಡುಗೊರೆಗಳನ್ನು ಕೊಟ್ಟ ಮೇಲೆ ಅವರಿಗೆ ಪರಸ್ಪರ ಸಂಭಾಷಣೆಯಲ್ಲಿ ಮನಸ್ತಾಪ ಉಂಟಾಯಿತು. ಅಬ್ಬಕ್ಕನನ್ನು ಬಿದನೂರಿಗೆ ಕರೆದುಕೊಂಡು ಹೋಗಬೇಕೆಂದು ಸೋಮಶೇಖರ ನಿರ್ಧರಿಸಿದುದರಿಂದ ಅಬ್ಬಕ್ಕ ಬೇಸರಗೊಂಡಳು. ತನ್ನ ಮಗಳಾದ ಚನ್ನಮ್ಮದೇವಿ, ಮೊಮ್ಮಗ ಚಿಕ್ಕರಾಯನನ್ನು ಮತ್ತು ಸ್ವಲ್ಪ ಸೈನಿಕರನ್ನು ಜೊತೆಯಲ್ಲಿ ಕರೆದುಕೊಂಡು ಪಡುಬಿದ್ರಿಯ ಬಂದರಿನಿಂದ ಹಡಗಿನ ಮೂಲಕ ಮಲಬಾರು ತೀರದ ಚರಕಲ್ಲಿಗೆ ಹೋಗಿ ನಿಂತಳು. ಈ ಸಂದರ್ಭದಲ್ಲಿ ರಾಜ್ಯಭಾರವನ್ನು ಮಂತ್ರಿ, ಸೇನಾಧಿಪತಿಗಳೇ ಮಾಡುತ್ತಿದ್ದರು. ವಾರ್ಷಿಕ ಕಪ್ಪವನ್ನು ಮಂಗಳೂರಿನಲ್ಲಿರುವ ಇಕ್ಕೇರಿ ಅಧಿಕಾರಿಗೆ ಕೊಡುತ್ತಿದ್ದರು. ಕ್ರಿ.ಶ.1746ರಲ್ಲಿ ಇಕ್ಕೇರಿ ಅರಸರು ಈ ಸೀಮೆಯನ್ನು ವಶಪಡಿಸಿ ಮುದ್ರಾಡಿ ಅನಂತಯ್ಯನನ್ನು ಚೌಟರ ಸೀಮೆಗೆ ಅಧಿಪತಿಯನ್ನಾಗಿಸಿಕೊಂಡು ಆಳುತ್ತಿದ್ದಾರೆ ಎಂಬ ಸುದ್ದಿಯನ್ನು ಕೇಳಿದ ಅಬ್ಬಕ್ಕ ಕೋಲತ್ತಿರಿ ಅರಸನ ಸೈನ್ಯದ ಸಹಾಯದಿಂದ ಕೆನರಾ ಜಿಲ್ಲೆಯ ದಕ್ಷಿಣಭಾಗದ ಮೇಲೆ ಪ್ರಾಬಲ್ಯ ಹೊಂದಿ ಹಣ ಸಂಗ್ರಹಿಸುತಿದ್ದಳು.[156] ಕ್ರಿ.ಶ.1749ರಲ್ಲಿ ಯೋಗ್ಯರಾದ ಸಮಾಜದ ಹಿರಿಯರನ್ನು ಕೆಳದಿಯರಸ ಬಸಪ್ಪನಲ್ಲಿಗೆ ಕಳುಹಿಸಿ ತನ್ನ ಸೀಮೆಯನ್ನು ಮರಳಿ ಪಡೆಯಲು ನಾಯಕರ ಒಪ್ಪಿಗೆ ದೊರೆಯಿತಾದರೂ ಚರಕಲ್ಲಿನಿಂದ ಮತ್ತೆ ತನ್ನ ರಾಜ್ಯದತ್ತ ಬರುವಾಗ ಮಾರ್ಗ ಮಧ್ಯದಲ್ಲಿ ಅಬ್ಬಕ್ಕ ನಿಧನಳಾದಳು. ಆಕೆಯ ಮಗಳು ಚನ್ನಮ್ಮದೇವಿಯು, ಮೊಮ್ಮಗ ಚಿಕ್ಕರಾಯನು ಪರಿವಾರ ಸಹಿತರಾಗಿ ಮೂಡಬಿದಿರೆಗೆ ಬಂದರು. ಕ್ರಿ.ಶ.1749ರಲ್ಲಿ ಅರಮನೆಯನ್ನು ಜೀರ್ಣೋದ್ಧಾರ ಮಾಡಿಸಿ ಚಂದ್ರಶೇಖರ ಚಿಕ್ಕರಾಯನಿಗೆ ಪಟ್ಟವಾಯಿತು. ಮೂರನೇ ಚಂದ್ರಶೇಖರ ಚಿಕ್ಕರಾಯನ (ಕ್ರಿ.ಶ.1749–1769) ಪಟ್ಟಾಭಿಷೇಕಕ್ಕೆ ಬಸವಪ್ಪನಾಯಕನು ಮೂಡಬಿದಿರೆಗೆ ಬಂದಾಗ ಅವನಿಗೆ ಒಂದು ಆನೆಯನ್ನು ಕಾಣಿಕೆಯನ್ನಾಗಿ ನೀಡಲಾಯಿತು. ಬಸವಪ್ಪ ನಾಯಕನು 10 ದಿನ ಮೂಡಬಿದಿರೆಯಲ್ಲಿ ನಿಂತು ಸೀಮೆಯ ಲೆಖ್ಖ ತನಿಖೆ ಮಾಡಿ 13,792 ವರಹ $1^1/_2$ ಹಣ ಕಪ್ಪ ಕೊಡಬೇಕೆಂದು ನಿಶ್ಚಯಿಸಿ ಅದರಲ್ಲಿ ದೇವತಾ ಉತ್ತಾರ, ದೈವ ಉತ್ತಾರ, ಆಜಿಲ ಉತ್ತಾರ ಪುರವರ್ಗ ಉತ್ತಾರ ಮುಂತಾದ್ದನ್ನು ಕಳೆದು 7779 ವರಹ $2^1/_4$ ಹಣ $1^1/_4$ ಹಾಗವನ್ನು ಕಪ್ಪವಾಗಿ ಕೊಟ್ಟು ಸೀಮೆಯನ್ನು ಆಳಿಕೊಂಡು ಬರಬಹುದೆಂದು ಚಿಕ್ಕರಾಯನಿಗೆ

ಅಪ್ಪಣೆ ಕೊಟ್ಟನು.[157]

ಮುಂದೆ ಹೈದರಾಲಿ ಬಿದನೂರನ್ನು ಆಕ್ರಮಿಸಿದ ಮೇಲೆ ಚೌಟರ ಪ್ರಾಂತ್ಯ ಹೈದರ್‌ನ ಕೆಳಗೆ ಬಂತು. ಸುಮಾರು 300 ವರ್ಷಗಳಿಗಿಂತಲೂ ಹೆಚ್ಚು ಕಾಲ ಆಳಿದ ಚೌಟ ಅರಸರು ತುಳುನಾಡಿನ ಇತಿಹಾಸದಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದ್ದಾರೆ. ತುಳುನಾಡಿನ ಬಂಗರಸರು ಮತ್ತು ಭೈರವರಸರಿಗೆ ಹೋಲಿಸಿದರೆ, ಚೌಟರಸರು ಕೆಳದಿ ರಾಜರ ಆಪ್ತ ಸಾಮಂತರಾಗಿ ವಾರ್ಷಿಕ ಕಪ್ಪ ಕಾಣಿಕೆಗಳನ್ನು ನೀಡಿ ವಿಧೇಯತೆಯಿಂದಲೇ ನಡೆದುಕೊಂಡಿದ್ದರು.

## 2.5 ಕೆಳದಿಯರಸರು ಮತ್ತು ಯುರೋಪಿಯನ್ನರು (ಡಚ್ಚರು–ಫ್ರೆಂಚರು ಮತ್ತು ಬ್ರಿಟೀಷರು)

**ಕರಾವಳಿಯಲ್ಲಿ ಡಚ್ಚರು:** ಕ್ರಿ.ಶ.1602ರಲ್ಲಿ ಡಚ್ ಈಸ್ಟ್ ಇಂಡಿಯಾ ಕಂಪೆನಿಯ ಮೂಲಕ ಭಾರತದಲ್ಲಿ ವ್ಯಾಪಾರ ಪ್ರಾರಂಭಿಸಿದ ಡಚ್ಚರು ತುಳುನಾಡಿನ ಪಶ್ಚಿಮಕ್ಕಿರುವ ರೇವುಗಳ ಮೇಲೂ ನಿಯಂತ್ರಣ ಹೊಂದಲು ಪ್ರಯತ್ನಿಸಿದರು. ಕೆಳದಿ ರಾಜ್ಯದ ಬಗ್ಗೆ ಡಚ್ಚರ ಪ್ರವರ್ತಕನಾದ ಲಿನ್ ಸ್ಕೋಟಿನ್‌ನ ವರದಿಗಳಿಂದ ಡಚ್ಚರಿಗೆ ಹೆಚ್ಚಿನ ಮಾಹಿತಿ ತಿಳಿದು ಬಂದಿತು.[158] ಪೋರ್ಚುಗೀಸರ ಏಕಸ್ವಾಮ್ಯವನ್ನು ಡಚ್ಚರು ವಿರೋಧಿಸುತ್ತಿದ್ದರು ಹಾಗೂ ಅವರ ಹಿತಾಸಕ್ತಿಗೆ ವಿರುದ್ಧವಾಗಿ ಕೆಲಸ ಮಾಡುತ್ತಿದ್ದರು.[159] ಆದರೆ ಕೆಳದಿ ನಾಯಕರು ಪೋರ್ಚುಗೀಸರನ್ನು ಶಾಶ್ವತ ಶತ್ರುಗಳೆಂದು ಪರಿಗಣಿಸಿದ ಕಾರಣ ಡಚ್ಚರಿಗೆ ಕರ್ನಾಟಕದ ಕರಾವಳಿಯಲ್ಲಿ ಬೆಂಬಲ ಸಿಕ್ಕಿರಲಿಲ್ಲ. ಶಿವಪ್ಪನಾಯಕನ ಕಾಲದಲ್ಲಿ ಕರಾವಳಿಯ ಮೇಲೆ ಹಿಡಿತ ಸಾಧಿಸಲು ನಿರ್ಧರಿಸಿ ಪೋರ್ಚುಗೀಸರೊಂದಿಗೆ ಡಚ್ಚರೂ ಸ್ಪರ್ಧೆಗಿಳಿದಿರುವುದನ್ನು ಕಾಣಬಹುದಾಗಿದೆ.[160] ಶಿವಪ್ಪನಾಯಕನು ತನ್ನ ಅಧಿಕಾರಾವಧಿಯಲ್ಲಿ ಈ ವಿದೇಶಿಯರಿಗೆ ಸ್ವಂತ ಕೋಟೆ ನಿರ್ಮಿಸಿಕೊಳ್ಳಲು ಹಾಗೂ ಕರಾವಳಿ ವ್ಯಾಪಾರದ ಮೇಲೆ ಅಧಿಕಾರ ಚಲಾಯಿಸಲು ಅವಕಾಶ ನೀಡಲಿಲ್ಲ. ಡಚ್ಚರ ಪ್ರವೇಶದಿಂದಾಗಿ ಕೆಳದಿ ರಾಜ್ಯದಲ್ಲಿ ಪೋರ್ಚುಗೀಸರು ಹಾಗೂ ಡಚ್ಚರು ಈ ಇಬ್ಬರು ವಿದೇಶಿಯರು ವ್ಯಾಪಾರಕ್ಕಾಗಿ ಕೆಳದಿಯ ಜೊತೆ ಸ್ನೇಹ ಬೆಳೆಸಲು ಪ್ರಾರಂಭಿಸಿದರು. ಡಚ್ಚರು ಶಿವಪ್ಪ ನಾಯಕನೊಂದಿಗೆ ಸ್ನೇಹ ಸಂಪಾದಿಸುವ ಸಲುವಾಗಿ ಸ್ಥಳೀಯ ಅರಸರು ಕೆಳದಿಯ ವಿರುದ್ಧ ದಂಗೆ ಎದ್ದಾಗ ಕೆಳದಿಗೆ ಸಹಾಯ ಮಾಡಲು ಬಂದರು. ಕರಾವಳಿ ಕರ್ನಾಟಕದಲ್ಲಿ ತಮ್ಮ ನೌಕಾ ನೆಲೆಯನ್ನು ಸ್ಥಾಪಿಸುವುದು ಅವರ ಉದ್ದೇಶವಾಗಿತ್ತು ಹಾಗೂ ಕೆಳದಿ ನಾಯಕರು ಪೋರ್ಚುಗೀಸರಿಂದ ದೂರ ಉಳಿದರೆ ಆ ಪ್ರದೇಶದ ಆರ್ಥಿಕ ಚಟುವಟಿಕೆಗಳನ್ನು ತಾವು ಹತೋಟಿಯಲ್ಲಿಟ್ಟುಕೊಳ್ಳಬಹುದೆಂದು ಡಚ್ಚರು ನಂಬಿದ್ದರು. ಶಿವಪ್ಪ ನಾಯಕನು ತನ್ನ ಅವಧಿಯಲ್ಲಿ ಪೋರ್ಚುಗೀಸರಿಂದ ಎಲ್ಲಾ ಬಂದರುಗಳನ್ನು ವಶಪಡಿಸಿಕೊಂಡಿದ್ದನು. ಇದೇ ವೇಳೆಯಲ್ಲಿ ಡಚ್ಚರು ಶಿವಪ್ಪ ನಾಯಕನೊಂದಿಗೆ ಸ್ನೇಹದಿಂದಿದ್ದರು. ಶಿವಪ್ಪ ನಾಯಕನ ಆಳ್ವಿಕೆಯ ಅಂತ್ಯದ ನಂತರ ಕರಾವಳಿ ಕರ್ನಾಟಕದ ಬಂದರುಗಳನ್ನು ಒಂದೊಂದಾಗಿ ಪುನಃ ಪೋರ್ಚುಗೀಸರು ಪಡೆದುಕೊಂಡರು. ಡಚ್ಚರು

ಕುಂದಾಪುರ ಮತ್ತು ಗಂಗೊಳ್ಳಿ ಬಂದರುಗಳನ್ನು ತಮ್ಮ ವಶಕ್ಕೆ ಕೊಡಬೇಕೆಂದು ಪೋರ್ಚುಗೀಸರನ್ನು ಒತ್ತಾಯಿಸಿದರು. ಏಕೆಂದರೆ ಶಿವಪ್ಪ ನಾಯಕನು ಪೋರ್ಚುಗೀಸರೊಂದಿಗೆ ವಿರೋಧ ಕಟ್ಟಿಕೊಂಡಾಗ ಆ ಬಂದರುಗಳನ್ನು ತಮಗೆ ಕೊಡುವುದಾಗಿ ಒಪ್ಪಂದ ಮಾಡಿಕೊಂಡಿರುವುದಾಗಿ ಡಚ್ಚರು ತಿಳಿಸಿದರು. ಆದರೆ ಈ ಸಂದರ್ಭದಲ್ಲಿ ಒಪ್ಪಂದದಲ್ಲಿ ಭಾಗವಹಿಸಿದವರು ಜೀವಂತವಾಗಿ ಇಲ್ಲದಿರುವುದರಿಂದ ಈ ಸಮಸ್ಯೆ ಕಗ್ಗಂಟ್ಟಾಗಿಯೇ ಉಳಿಯಿತು.[161] ಪೋರ್ಚುಗೀಸರು ಅನೇಕ ವಾದಗಳನ್ನು ಮುಂದಿಟ್ಟು ಆ ಪ್ರದೇಶಗಳನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡಿದ್ದರು.

ಸೋಮಶೇಖರ ನಾಯಕನ ಆಳ್ವಿಕೆಯ ಸಂದರ್ಭದಲ್ಲಿ ರಾಜಪ್ರತಿನಿಧಿ ನಾರಾಯಣ ಮಲ್ಯ ಮತ್ತು ಪೋರ್ಚುಗೀಸ್ ಸೈನಿಕ ಅಧಿಕಾರಿ ಮನುವೆಲನ ನೇತೃತ್ವದಲ್ಲಿ ಸಂಧಾನದ ಮಾತುಕತೆಗಳು ನಡೆಯುತ್ತಿದ್ದವು. ಕ್ರಿ.ಶ. 1664 ನವೆಂಬರ್ ತಿಂಗಳಲ್ಲಿ ಮಾತುಕತೆ ನಡೆಸಿ ಗಂಗೊಳ್ಳಿ, ಕುಂದಾಪುರ ಮತ್ತು ಮಂಗಳೂರುಗಳನ್ನು ಕೆಳದಿಯರಸರು ಪೋರ್ಚುಗೀಸರಿಗೆ ಹಿಂತಿರುಗಿಸುವುದೆಂದು ನಿಶ್ಚಯಿಸಲಾಯ್ತು.[162] ನವೆಂಬರ್ 13ರಂದು ಮನುವೆಲನು ಗಂಗೊಳ್ಳಿಯನ್ನು ಸ್ವಾಧೀನಪಡಿಸಿಕೊಂಡನು. ಆದರೆ ಮರುದಿನ ಕುಂದಾಪುರವನ್ನು ಸ್ವಾಧೀನಪಡಿಸಿಕೊಳ್ಳಲು ವ್ಯವಸ್ಥೆ ನಡೆಸುತ್ತಿದ್ದಾಗ ಡಚ್ಚರ 2 ಹಡಗುಗಳು ಬಂದು ಪೋರ್ಚುಗೀಸರ ಯುದ್ಧ ಸಲಕರಣೆಗಳ ಹಡಗನ್ನು ಮುತ್ತಿದವು. ಡಚ್ಚರ ಮುಖ್ಯಸ್ಥನು ದೂತನನ್ನು ಕಳುಹಿಸಿ, ಕ್ರಿ.ಶ.1663 ನೇ ನವೆಂಬರ್ 12ರಂದು ಡಚ್ಚರ ಮತ್ತು ಪೋರ್ಚುಗೀಸರ ನಡುವೆ ಆದ ಒಪ್ಪಂದದ ಪ್ರಕಾರ ಡಚ್ಚರ ವ್ಯಾಪಾರ ಕೇಂದ್ರವಿದ್ದ ಸ್ಥಳದಲ್ಲಿ ಪೋರ್ಚುಗೀಸರು ಕೋಟೆಯನ್ನಾಗಲಿ ವ್ಯಾಪಾರ ಕೇಂದ್ರವನ್ನಾಗಲಿ ಸ್ಥಾಪಿಸಬಾರದೆಂದಿದ್ದ ಕಾರಣ ಹಾಗೂ ಸೋಮಶೇಖರನು ಡಚ್ಚರಿಗೆ ಕುಂದಾಪುರದಲ್ಲಿ ಮತ್ತು ಬಸ್ರೂರಿನಲ್ಲಿ ವ್ಯಾಪಾರ ಕೇಂದ್ರವನ್ನು ತೆರೆಯಲು ಅನುಮತಿ ಕೊಟ್ಟಿರುವುದರಿಂದ ಪೋರ್ಚುಗೀಸರು ಗಂಗೊಳ್ಳಿಯನ್ನಾಗಲಿ, ಕುಂದಾಪುರವನ್ನಾಗಲಿ ವಶಪಡಿಸಿಕೊಳ್ಳಬಾರದೆಂದು ತಿಳಿಸಿದನು. ಕರಾವಳಿಯ ಕೋಟೆಗಳು ಯಾರ ಸ್ವಾಧೀನವಿರಬೇಕೆಂಬ ವಿಚಾರದಲ್ಲಿ ಪತ್ರ ಮುಖೇನ ಚರ್ಚೆ ನಡೆದು ಡಚ್ ಮೇಲಾಧಿಕಾರಿಯು ಬರುವವರೆಗೆ ಯಥಾಸ್ಥಿತಿ ಕಾಪಾಡಲು ಇಬ್ಬರೂ ಒಪ್ಪಿಕೊಂಡರು.[163] ಕ್ರಿ.ಶ. 1664ರ ಡಿಸೆಂಬರ್ 24ರ ಪೋರ್ಚುಗೀಸ್ ದಾಖಲೆಯ ಪ್ರಕಾರ, ಮಂಗಳೂರನ್ನು ತಮಗೆ ವಹಿಸಿಕೊಡುವಂತೆ ಡಚ್ಚರು ಕೇಳಿರುವುದನ್ನು ಪೋರ್ಚುಗೀಸ್ ನೌಕಾಧಿಕಾರಿ ನಿರಾಕರಿಸಿದ್ದನು. ಡಚ್ಚರು ಉಲ್ಲಾಳ ರಾಣಿಯೊಂದಿಗೆ ಸ್ನೇಹ ಸಂಪಾದಿಸಿದ್ದಾರೆ ಹಾಗೂ ಕೆನರಾ ಬಂದರುಗಳಿಗೆ ಪೋರ್ಚುಗೀಸರು ಪ್ರವೇಶಿಸಬೇಕಾದರೆ ಡಚ್ಚರ ಒಪ್ಪಿಗೆ ಪಡೆಯಬೇಕೆಂದು ಒತ್ತಾಯಿಸುತ್ತಿದ್ದಾರೆ ಎಂದು ಆ ಪತ್ರದಲ್ಲಿ ತಿಳಿಸಲಾಗಿದೆ.[164] ಮುಂದೆ ಮಂಗಳೂರು ಕೋಟೆ ಕೂಡ ಪೋರ್ಚುಗೀಸರಿಗೆ ಸಿಕ್ಕದಂತೆ ಮಾಡಲು ಡಚ್ಚರು ಶಕ್ತರಾದರು. ಡಚ್ಚರ 4 ಹಡಗುಗಳು ಮಂಗಳೂರಿಗೆ ಬಂದಾಗ ಅವುಗಳನ್ನು ಎದುರಿಸಲು ಕುಂದಾಪುರದಿಂದ ತನ್ನ ಹಡಗುಗಳನ್ನು ಕಳುಹಿಸಲು ಮನುವೆಲನು ಹಿಂಜರಿದನು.[165] ಸೋಮಶೇಖರನಿಂದ ಸೂಕ್ತ ಸಹಯೋಗ ಸಿಗದ ಕಾರಣದಿಂದ ಗಂಗೊಳ್ಳಿ ಮಾತ್ರ

ಪೋರ್ಚುಗೀಸರ ಕೈಯಲ್ಲಿ ಉಳಿಯಿತು. ಡಚ್ಚರನ್ನು ಎದುರಿಸಿ ಕುಂದಾಪುರ ಅಥವಾ ಮಂಗಳೂರನ್ನು ಪಡೆಯಲು ಅಸಾಧ್ಯವಾಗಿತ್ತು.[166] ಇವೆಲ್ಲವನ್ನು ಗಮನಿಸಿದಾಗ ಡಚ್ಚರು ಕೆಳದಿಯರಸರೊಂದಿಗೆ ಸ್ನೇಹದಿಂದಿದ್ದು ಪೋರ್ಚುಗೀಸರೊಂದಿಗಿನ ಘರ್ಷಣೆಯಲ್ಲೇ ಹೆಚ್ಚು ಕಾಲ ಕಳೆದರು ಎಂಬುದಾಗಿ ತಿಳಿದುಬರುತ್ತದೆ. ಮುಂದೆ ಡಚ್ಚರು ಸಿಲೋನ್‌ನಲ್ಲಿ ತಮ್ಮ ವ್ಯಾಪಾರವನ್ನು ಕೇಂದ್ರೀಕರಿಸಿದ ಕಾರಣ ಕರಾವಳಿಯಲ್ಲಿ ಸಕ್ರಿಯವಾಗಿ ಕಾಣಿಸಿಕೊಳ್ಳಲಿಲ್ಲ. ಕರಾವಳಿಯಲ್ಲಿ ಡಚ್ಚರ ಚಟುವಟಿಕೆಗಳು ಅಲ್ಪಾವಧಿಯದಾಗಿದ್ದು, ಕೆಳದಿನಾಯಕರು ಡಚ್ಚರಿಗಿಂತ ಪೋರ್ಚುಗೀಸರೊಂದಿಗೇ ಹೆಚ್ಚು ಆರ್ಥಿಕ ಸಂಬಂಧವಿರಿಸಿಕೊಂಡಿರುವುದನ್ನು ಗಮನಿಸ ಬಹುದಾಗಿದೆ.

**ಫ್ರೆಂಚರು:** ಕೆಳದಿ ನಾಯಕರಿಗೂ ಹಾಗೂ ಫ್ರೆಂಚರಿಗೂ ವ್ಯಾಪಾರದಲ್ಲಿ ನಿಕಟ ಸಂಪರ್ಕವೇನೂ ಇರಲಿಲ್ಲ. ಮಾಹೆ ಸೇರಿದಂತೆ ಪಶ್ಚಿಮ ಕರಾವಳಿಯಲ್ಲಿ ಫ್ರೆಂಚರಿಗೆ ವ್ಯಾಪಾರ ಕೇಂದ್ರಗಳಿದ್ದವು. ಕೆಳದಿಯ ಮೆಣಸಿನ ವ್ಯಾಪಾರದ ಬಗ್ಗೆ ಫ್ರೆಂಚರಿಗೆ ಆಸಕ್ತಿಯಿದ್ದರೂ, ಅದರಲ್ಲಿ ಭಾಗವಹಿಸಲು ಸರಿಯಾದ ಸಂದರ್ಭ ಬಂದಿರಲಿಲ್ಲ. ಫ್ರೆಂಚರು ಕೆಳದಿ ಸಾಮ್ರಾಜ್ಯದ ಚಟುವಟಿಕೆಗಳಲ್ಲಿ ದೊಡ್ಡ ಮಟ್ಟದಲ್ಲಿ ಭಾಗವಹಿಸಿದ ಯಾವುದೇ ನಿದರ್ಶನಗಳು ಕಂಡು ಬರುವುದಿಲ್ಲ. ಫ್ರೆಂಚ್ ವರ್ತಕರು ಬಾರಕೂರಿನ ನಾರಾಯಣ ಮಲ್ಯನೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿದ್ದರು ಎಂದು ಕ್ರಿ.ಶ.1668ರ ಸೆಪ್ಟೆಂಬರ್ 16ರ ಒಂದು ಪತ್ರ ತಿಳಿಸುತ್ತದೆ.[167]

ಫ್ರೆಂಚರು ಮಲಬಾರಿಗಳ ಮೂಲಕ ಕೆಳದಿಯರಸರೊಂದಿಗೆ ವ್ಯವಹರಿಸಬೇಕಾಯಿತು. ಆದರೆ ಅದು ಮಿತ್ರತ್ವದ ನೆಲೆಯಲ್ಲಿರದೆ ವಿರೋಧಿ ನೆಲೆಯಲ್ಲಿತ್ತು. ಕ್ರಿ.ಶ.1751ರ ಅಕ್ಟೋಬರ್‌ನಲ್ಲಿ ಇಮ್ಮಡಿ ಬಸವಪ್ಪನು ಕೊಚ್ಚಿಯ ವಿರುದ್ಧ ಯುದ್ಧ ಪ್ರಾರಂಭಿಸಿದನು. ಡಿಸೆಂಬರ್‌ನೊಳಗಾಗಿ ಮಾಹೆಯಲ್ಲಿದ್ದ ಫ್ರೆಂಚರು ಬಸವಪ್ಪನ ವಿರುದ್ಧ ಮಲಬಾರಿಗರೊಡನೆ ಸೇರಿಕೊಂಡರು. ಮಲಬಾರಿಗಳು ಫ್ರೆಂಚರ ಸಹಾಯದಿಂದ ಬಸವಪ್ಪನನ್ನು ಸೋಲಿಸಿದರು.[168] ಈ ಸಂದರ್ಭದಲ್ಲಿ ಅವನು ಪೋರ್ಚುಗೀಸರ ಸಹಾಯ ಕೇಳಿದನಾದರೂ, ಅವನಿಗೆ ಪೋರ್ಚುಗೀಸರು ಸಹಾಯ ಮಾಡಲಿಲ್ಲ. ಕ್ರಿ.ಶ.1752ನೇ ಜನವರಿಯಲ್ಲಿ ಬಸವಪ್ಪನು ಪುನಃ ಸೋಲಿಸಲ್ಪಟ್ಟನು.[169] ಫ್ರೆಂಚರ ಮತ್ತು ಬಸಪ್ಪನ ನಡುವೆ ಸಂಧಾನದ ಪ್ರಕ್ರಿಯೆಗಳು ಮುಂದುವರೆದಿರುವಂತೆ ಮಲಬಾರಿಗಳು ಬಸವಪ್ಪನನ್ನು ಕೆಲ ಬಾರಿ ಸೋಲಿಸಿ ಅವನಿಂದ ಚಂದ್ರಗಿರಿ ಕೋಟೆಯನ್ನು ವಶಪಡಿಸಿಕೊಂಡರು.[170] ಯುದ್ಧ ಸಾಮಾಗ್ರಿಗಳನ್ನು ಪೂರೈಕೆ ಮಾಡುವಂತೆ ಅವನು ಕೇಳಿಕೊಂಡಾಗ ಪೋರ್ಚುಗೀಸರು ಕೊನೆಗೆ ಒಪ್ಪಿ ಅವನಿಗೆ ಸಾಮಾಗ್ರಿಗಳನ್ನು ಪೂರೈಸಿದರು.[171] ಮುಂದೆ ಚಂದ್ರಗಿರಿ ಬಸವಪ್ಪನಿಗೆ ಸಿಕ್ಕಿದರೂ ಬಿದನೂರು ರಾಜ್ಯದ ಗಡಿ ಅಲ್ಲಿಗೇ ಮುಕ್ತಾಯವಾಯಿತು. ನೌಕಾ ಬಲದಲ್ಲಿ ದುರ್ಬಲನಾಗಿದ್ದ ಬಸವಪ್ಪ ನಾಯಕ ಫ್ರೆಂಚರಿಗೆ ಸೋತನು. ಪೋರ್ಚುಗೀಸರು ಫ್ರೆಂಚರನ್ನು ಎದುರು ಹಾಕಿಕೊಳ್ಳಲು ಇಚ್ಚಿಸಲಿಲ್ಲ. ಹಾಗೆಂದು ಸಂಪೂರ್ಣವಾಗಿ ಬಸವಪ್ಪನ ಕೈಬಿಡಲಿಲ್ಲ. ಏಕೆಂದರೆ ಮಲಬಾರಿಗರನ್ನು ಮಟ್ಟಹಾಕುವುದು ಪೋರ್ಚುಗೀಸರಿಗೂ ಅಗತ್ಯವಾಗಿತ್ತು. ಆ ಮೂಲಕ ತಮ್ಮ ಆರ್ಥಿಕ

ಸಾಮ್ರಾಜ್ಯವನ್ನು ಬಲಗೊಳಿಸಲು ಅವರು ಬಹಳ ಎಚ್ಚರಿಕೆಯ ಹೆಜ್ಜೆಯನ್ನಿಡುತ್ತಿದ್ದರೆಂದು ಈ ಘಟನೆಯಿಂದ ತಿಳಿದುಬರುತ್ತದೆ.

**ಇಂಗ್ಲೀಷರು:** ಇಂಗ್ಲೀಷರು ಕೆಳದಿ ರಾಜರೊಂದಿಗೆ ಉತ್ತಮವಾದ ಸಂಬಂಧ ಹೊಂದಿರದಿದ್ದರೂ ವೈರತ್ವ ಕಟ್ಟಿಕೊಂಡ ಉದಾಹರಣೆಗಳು ಕಡಿಮೆ. ಕ್ರಿ.ಶ.17ನೇ ಶತಮಾನದಲ್ಲಿ ಕೆಳದಿ ರಾಜ್ಯದಲ್ಲಿ ದೊರೆಯುತ್ತಿದ್ದ ಮೆಣಸಿಗೆ ಮತ್ತು ಅಕ್ಕಿಗೆ ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ಬಹಳ ಬೇಡಿಕೆಯಿರುವುದರಿಂದ ಕೆಳದಿ ರಾಜ್ಯದ ಜೊತೆ ವ್ಯಾಪಾರ ಆರಂಭಿಸಿದರು. ಇದಕ್ಕಾಗಿ ಅವರು ಭಟ್ಕಳದಲ್ಲಿ ಚಿಕ್ಕ ವ್ಯಾಪಾರ ಕೇಂದ್ರವನ್ನು ಆರಂಭಿಸಿದರು. ಈ ಸಂದರ್ಭದಲ್ಲಿ ಕೆಳದಿಯ ಅರಸನಾಗಿದ್ದ ವೆಂಕಟಪ್ಪ ನಾಯಕನು ಅವರೊಂದಿಗೆ ಸಂಪರ್ಕವಿಟ್ಟುಕೊಳ್ಳುವ ಪ್ರಯತ್ನ ಮಾಡಿದನು.[172]

ವೆಂಕಟಪ್ಪ ನಾಯಕನು ಇಂಗ್ಲೀಷರೊಂದಿಗೆ ಸ್ನೇಹ ಸಂಬಂಧ ಬೆಳೆಸಿದ ನಂತರ ತನಗೆ ಎರಡು ಹಡಗುಗಳನ್ನು ನೀಡಿದರೆ, ಅದಕ್ಕೆ ಪರ್ಯಾಯವಾಗಿ ಮೆಣಸನ್ನು ಕೊಡುವುದಾಗಿ ತಿಳಿಸಿದನು. ಅದರಂತೆಯೇ ಇಕ್ಕೇರಿಗೆ ಆಂಗ್ಲರ ಪ್ರತಿನಿಧಿಯೊಬ್ಬ ಹೋಗಿ ಭಟ್ಕಳದಲ್ಲಿ ಮೆಣಸನ್ನು ಕೊಳ್ಳಲು ಅನುಮತಿ ಪಡೆದನೆಂದು ಕ್ರಿ.ಶ.1691ರ ಇಂಗ್ಲೀಷರ ದಾಖಲೆಯೊಂದರಲ್ಲಿ ತಿಳಿಸಲಾಗಿದೆ.[173] ಪೋರ್ಚುಗೀಸರ ಏಕಸ್ವಾಮ್ಯದ ನಡುವೆಯೂ ವೆಂಕಟಪ್ಪ ನಾಯಕನು ಇಂಗ್ಲೀಷರಿಗೆ ಭಟ್ಕಳಕ್ಕೆ ಆಹ್ವಾನ ನೀಡಲು ಕಾರಣವೆಂದರೆ ಆತ ಪೋರ್ಚುಗೀಸರ ನಡುವಳಿಕೆಯಿಂದ ಅಸಂತುಷ್ಟನಾಗಿದ್ದನು ಎಂದು ತಿಳಿಯುತ್ತದೆ.[174] ಆದರೆ ಪೋರ್ಚುಗೀಸರಿಗೆ ಕೆಳದಿ ನಾಯಕರು ಇಂಗ್ಲೀಷರ ಜೊತೆ ಸಂಬಂಧ ಬೆಳೆಸುವುದು ಇಷ್ಟವಿರಲಿಲ್ಲ.[175] ಆದ್ದರಿಂದ ಪೋರ್ಚುಗೀಸರು ಕೆಲವು ಒಪ್ಪಂದಗಳನ್ನು ಮಾಡಿಕೊಂಡರು. ಈ ರೀತಿಯ ಒಪ್ಪಂದಗಳ ನಡುವೆಯೂ ಇಂಗ್ಲೀಷರು ವೆಂಕಟಪ್ಪ ನಾಯಕನೊಂದಿಗೆ ಸಂಬಂಧ ಬಲಪಡಿಸಿಕೊಂಡರು.[176] ಇಂಗ್ಲೀಷರು ಕೆಳದಿ ರಾಜ್ಯದ ಮೆಣಸಿಗೆ ಪೋರ್ಚುಗೀಸರು ಕೊಡುವ ಹಣಕ್ಕಿಂತಲೂ ಜಾಸ್ತಿ ಹಣ ಕೊಡುವುದಾಗಿ ತಿಳಿಸಿದ್ದರು. ಅಲ್ಲಿನ ವರ್ತಕರಿಗೆ ತಾಮ್ರ, ಸೀಸ ಇತರ ವಿದೇಶಿ ವಸ್ತುಗಳನ್ನು ಒದಗಿಸುವುದಾಗಿ ತಿಳಿಸಿದ್ದರು.[177]

ಇದರಿಂದ ಅಸಮಾಧಾನಗೊಂಡ ಪೋರ್ಚುಗೀಸರು ಇಂಗ್ಲೀಷರ ಹಡಗುಗಳಿಗೆ ಕರಾವಳಿ ಬಂದರುಗಳಿಗೆ ಪ್ರವೇಶ ನಿಷೇಧಿಸಿದರು. ಆದರೂ ವೀರಭದ್ರ ನಾಯಕನು ಅವರನ್ನು ಆತ್ಮೀಯವಾಗಿ ಬರಮಾಡಿಕೊಂಡು ಅವರಿಗೆ ಒಂದು ಹಡಗು ತುಂಬುವಷ್ಟು ಮೆಣಸನ್ನು ಕೊಡುವುದಾಗಿ ತಿಳಿಸಿದನು. ಆದರೆ ಕಡಲುಗಳ್ಳರ ಭೀತಿಯಿಂದ ಹಾಗೂ ಪೋರ್ಚುಗೀಸರ ವಿರೋಧದಿಂದ ಮೆಣಸು ಅವರಿಗೆ ಸುಲಭವಾಗಿ ಸಿಗುತ್ತಿರಲಿಲ್ಲ. ಇದರಿಂದಾಗಿ ಅವರು ಕೆಳದಿಯ ನಾಯಕರೊಂದಿಗೆ ಒಪ್ಪಂದ ಮಾಡಿಕೊಳ್ಳಲು ನಿರ್ಧರಿಸಿ ತಮ್ಮ ಪ್ರತಿನಿಧಿಗಳನ್ನು ಕೆಳದಿಗೆ ಕಳುಹಿಸಿದರು. ಥಾಮಸ್ ರಾಜಿನ್, ಪೀಟರ್ ಮಂಡಿ ಹಾಗೂ ಇತರರು ವೀರಭದ್ರ ನಾಯಕನನ್ನು ಭೇಟಿ ಮಾಡಲು ಇಕ್ಕೇರಿಗೆ ಬಂದರು. ಈ ವಿಚಾರವಾಗಿ ಪೀಟರ್ ಮಂಡಿಯು ತನ್ನ ಪ್ರವಾಸ ಕಥನದಲಿ ದಾಖಲಿಸಿದ್ದಾನೆ.[178] ಭಟ್ಕಳದ ಸಮೀಪದಲ್ಲಿ ಇಂಗ್ಲೀಷರಿಗೆ ಕೋಟೆಯನ್ನು

ಕಟ್ಟಿಕೊಳ್ಳಲು ಅವಕಾಶ ನೀಡಿ ಅವರಿಗೆ ಬೇಕಾದಂತಹ ಕೂಲಿಗಳನ್ನು ಹಾಗೂ ಮರಗಳನ್ನು ವೀರಭದ್ರನಾಯಕನು ಒದಗಿಸಿದನು. ಇದಕ್ಕೆ ಬೇಕಾದ ಹಣವನ್ನು ಇಂಗ್ಲೀಷರು ನೀಡಿದರು. ಇದಕ್ಕೆ ಪ್ರತಿಯಾಗಿ ಇಂಗ್ಲೀಷರು ಅಪೂರ್ವ ವಸ್ತುಗಳನ್ನು ಹಾಗೂ ಅರೇಬಿಯಾದ ಕುದುರೆಗಳನ್ನು ಕೊಡಬೇಕೆಂದು ವೀರಭದ್ರನಾಯಕನು ತಿಳಿಸಿದನು.[179] ಕ್ರಿ.ಶ.1648ರಲ್ಲಿ ಇಂಗ್ಲೀಷರ ದಂಡನಾಯಕನು ಡ್ರೇಗನ್ ಎಂಬ ಹಡಗನ್ನು ಭಟ್ಕಳಕ್ಕೆ ತಂದು ನಿಲ್ಲಿಸಿ ಮೆಣಸನ್ನು ಕೊಳ್ಳಲು ನಿರ್ಧರಿಸಿದನು. ಆದರೆ ಆತನಿಗೆ ಮೆಣಸನ್ನು ಮಾರಲು ಸ್ಥಳೀಯರು ನಿರಾಕರಿಸಿದರು.[180] ಆದರೆ ಮುಂದೆ ಇಂಗ್ಲೀಷರು, ಪೋರ್ಚುಗೀಸರ ಒತ್ತಡ ಹಾಗೂ ಕಂಪನಿಯ ನಿರ್ಲಕ್ಷ್ಯದಿಂದ ಭಟ್ಕಳದ ಬಗ್ಗೆ ಆಸಕ್ತಿ ಕಳೆದುಕೊಂಡರು. ಮುಂದೆ ಮಂಗಳೂರು ಹಾಗೂ ಬಸರೂರಿನ ಪ್ರದೇಶದಲ್ಲಿ ವ್ಯಾಪಾರ ಮುಂದುವರಿಸಿದರು. ಈ ಪ್ರದೇಶದಲ್ಲಿ ಹೇರಳವಾಗಿ ದೊರೆಯುತ್ತಿದ್ದ ಅಕ್ಕಿಯನ್ನು ಪಡೆದುಕೊಳ್ಳುವುದು ಅವರ ಪ್ರಮುಖ ಆದ್ಯತೆಯಾಗಿತ್ತು ಮತ್ತು ಅವರು ಅದರಲ್ಲಿ ಬಹುಮಟ್ಟಿಗೆ ಯಶಸ್ವಿಯಾದರು.

ಶಿವಪ್ಪ ನಾಯಕನು ಪೋರ್ಚುಗೀಸರ ಬಂದರುಗಳನ್ನು ವಶಪಡಿಸಿಕೊಂಡು ಇಂಗ್ಲೀಷರೊಂದಿಗೆ ಸಂಪರ್ಕ ಸಾಧಿಸಲು ಯತ್ನಿಸಿದನು. ಕ್ರಿ.ಶ.1649ರಲ್ಲಿ ಇಂಗ್ಲೀಷರ ದಂಡನಾಯಕನಾದ ಜಾನ್ ಡೆರ್ಸನ್‌ನು ಕೆಳದಿಯ ದಂಡನಾಯಕನಾದ ಅರಸಪ್ಪ ನಾಯಕನನ್ನು ಸೆರೆ ಹಿಡಿದಾಗ ಶಿವಪ್ಪ ನಾಯಕನು ತನ್ನ ರಾಯಭಾರಿಯಾಗಿ ದೇವರಸ ಶೆಣೈನನ್ನು ಕಳುಹಿಸಿ ಬಿಡುಗಡೆಗೆ ಕೋರಿದನು.[181] ಆ ಸಂದರ್ಭದಲ್ಲಿ ಅವರ ಮೇಲೆ ದಾಳಿ ನಡೆಸಬಹುದಾಗಿದ್ದರೂ ಹಾಗೇ ಮಾಡದೆ ಇಂಗ್ಲೀಷರೊಂದಿಗೆ ಸಂಪರ್ಕ ಬೆಳೆಸಲು ನಿರ್ಧರಿಸಿದ್ದನೆಂಬುದನ್ನು ಇದರಿಂದ ತಿಳಿಯಬಹುದು. ಇವರು ಇಲ್ಲಿಂದ ಮೆಣಸು ಕೊಳ್ಳುವುದನ್ನು ಹದಿನೆಂಟನೇ ಶತಮಾನದ ಅವಧಿಯಲ್ಲೂ ಮುಂದುವರೆಸಿದ್ದು ಕೆಳದಿ ನಾಯಕರ ಜೊತೆಗಿನ ಉತ್ತಮ ಸಂಬಂಧವನ್ನು ತಿಳಿಸುತ್ತದೆ. ಕ್ರಿ.ಶ.1737ರಲ್ಲಿ ಈಸ್ಟ್ ಇಂಡಿಯಾ ಕಂಪೆನಿಯು ಮಂಗಳೂರಿನ ಕೆಳದಿಯರಸರ ಜನರಲ್ ಸೂರಪ್ಪಯ್ಯನೊಂದಿಗೆ ಒಪ್ಪಂದವನ್ನು ಮಾಡಿಕೊಂಡಿತು.[182] ಆ ಒಪ್ಪಂದದ ಪ್ರಕಾರ ಅದಲಾಮಿ ಎನ್ನುವ ತೆರಿಗೆಯಿಲ್ಲದೆ ಬ್ರಿಟೀಷರು ಅಕ್ಕಿಯನ್ನು ಮಂಗಳೂರಿನಿಂದ ರಫ್ತು ಮಾಡಬಹುದಾಗಿತ್ತು. ಆದರೆ ಮುಂದೆ ಸೋಮಶೇಖರ ನಾಯಕ ಅದಕ್ಕೆ ಅವಕಾಶ ಮಾಡಿಕೊಡಲಿಲ್ಲ. ಪೋರ್ಚುಗೀಸರ ಏಕಸ್ವಾಮ್ಯದ ನಡುವೆಯೂ, ಡಚ್ಚರ ತೊಂದರೆಗಳ ಮಧ್ಯದಲ್ಲಿಯೂ, ಇಂಗ್ಲೀಷರೊಂದಿಗೆ ಆರ್ಥಿಕ ಸಂಬಂಧವಿಟ್ಟುಕೊಂಡು ಕೆಳದಿ ನಾಯಕರು ರಾಜ್ಯದ ಬೊಕ್ಕಸಕ್ಕೆ ಆದಾಯ ಹೆಚ್ಚುವಂತೆ ಮಾಡಿದರು.

ಒಟ್ಟಿನಲ್ಲಿ ಈ ಮೇಲ್ಕಂಡಂತೆ ಎಲ್ಲಾ ಐರೋಪ್ಯರು ಕೆಳದಿಯೊಂದಿಗೆ ಸಂಬಂಧವಿರಿಸಿಕೊಳ್ಳಲು ಪ್ರಯತ್ನಿಸಿದರು. ಅದಕ್ಕೆ ಮುಖ್ಯವಾಗಿ ಇಲ್ಲಿನ ಕರಿಮೆಣಸಿನ, ಅಕ್ಕಿಯ ವ್ಯಾಪಾರ ಮತ್ತು ಇಲ್ಲಿಯ ಮರಗಳಿಗೆ ಇದ್ದ ಬೇಡಿಕೆ ಕಾರಣವಾಗಿತ್ತು. ಮೊದಲೇ ಇಲ್ಲಿಗೆ ಬಂದ ಪೋರ್ಚುಗೀಸರು ತಮ್ಮ ಪ್ರಭಾವವನ್ನು ಬೆಳೆಸಿ ಈ ಪ್ರದೇಶದೊಂದಿಗೆ ಹಿಡಿತ ಸಾಧಿಸಿದ್ದರು. ನಂತರ ಈ ಪ್ರದೇಶಕ್ಕಾಗಿ ಉಳಿದ ಐರೋಪ್ಯರ ಪೈಪೋಟಿ ಉಂಟಾಯಿತು. ಕೆಳದಿ ನಾಯಕರು ಯಾರೊಂದಿಗೆ ಬೇಕಾದರೂ ಸಂಬಂಧ ಬೆಳೆಸಲು ಸಿದ್ಧರಾಗಿದ್ದರೆಂಬುದು

ಗಮನಾರ್ಹ. ಆದರೆ ಕರಾವಳಿಯಲ್ಲಿ ಪ್ರಮುಖರಾಗಿದ್ದ ಪೋರ್ಚುಗೀಸರು, ಬ್ರಿಟೀಷರು ಫ್ರೆಂಚರು ಡಚ್ಚರು ಇವರಾರೊಂದಿಗೂ ಯುದ್ಧ ಮಾಡದೆ ಈ ಪ್ರದೇಶವನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡಿರುವುದನ್ನು ನೋಡಬಹುದಾಗಿದೆ. ಶಿವಪ್ಪನಾಯಕನ ಕಾಲದಲ್ಲಿ ಐರೋಪ್ಯರು ಸಂಪೂರ್ಣವಾಗಿ ಕೆಳದಿಯ ಹಿಡಿತದಲ್ಲಿದ್ದರು. ಪೋರ್ಚುಗೀಸರು ಕೆಳದಿಗೆ ಪೂರ್ಣ ಪ್ರಮಾಣದಲ್ಲಿ ಸಹಾಯ ಮಾಡದೆ ಲಾಭಕ್ಕಾಗಿ ಮಾತ್ರ ಇವರ ಜೊತೆ ಸಂಬಂಧವಿರಿಸಿಕೊಂಡಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ. ಫ್ರೆಂಚರಿಂದ ಕೆಳದಿಗೆ ಹೆಚ್ಚು ಹಾನಿಯಾದುದು ಕಂಡು ಬರುವುದಿಲ್ಲ. ಡಚ್ಚರು ಹಾಗೂ ಪೋರ್ಚುಗೀಸರು ಕೆಲವು ಕಾಲ ಘರ್ಷಣೆಗಿಳಿದಿರುವುದನ್ನು ನೋಡಬಹುದಾಗಿದೆ. ಈ ಐರೋಪ್ಯರ ಘರ್ಷಣೆಯಿಂದಾಗಿ ಕೆಳದಿ ರಾಜ್ಯದ ಬೊಕ್ಕಸಕ್ಕೆ ಲಾಭವಾಯಿತು. ಇದರಿಂದ ಕೆಳದಿಯ ಆರ್ಥಿಕತೆಯು ಉತ್ತಮವಾಗಲು ಕಾರಣವಾಯಿತು. ಅಂತಾರಾಷ್ಟ್ರೀಯ ವ್ಯಾಪಾರದಿಂದಾಗಿ ಮಾರುಕಟ್ಟೆಗಳು ವೃದ್ಧಿಗೊಂಡು ತೆರಿಗೆಗಳು ಹೆಚ್ಚಿ ಬೊಕ್ಕಸಕ್ಕೆ ಹೆಚ್ಚಿನ ಆದಾಯ ಹರಿದು ಬರಲು ಕಾರಣವಾಯ್ತು.

ಕೆಳದಿ ಅರಸರ ಕಾಲದ ತುಳುನಾಡಿನ ರಾಜಕೀಯ ಸ್ಥಿತಿಗತಿಗಳ ಅಧ್ಯಯನದಿಂದ ಹಲವು ವಿಚಾರಗಳು ಸ್ಪಷ್ಟವಾಗುತ್ತವೆ.

1. ತುಳುನಾಡಿನ ಎಲ್ಲಾ ರಾಜಮನೆತನಗಳು ಕೆಳದಿ ಸಂಸ್ಥಾನದ ಆಳ್ವಿಕೆಯನ್ನು ಪದೇ ಪದೇ ವಿರೋಧಿಸಿದಾದರೂ ಕೆಳದಿಯರಸರಿಂದ ದೀರ್ಘಕಾಲ ಉಪಟಳಕ್ಕೆ ಒಳಗಾದವರೆಂದರೆ ಬಂಗರಸರಾಗಿದ್ದಾರೆ. ಕೆಳದಿಯ ವಿರೋಧಿ ನೆಲೆಯಲ್ಲಿ ಬಂಗರಸರು ಕಾಣಿಸಿಕೊಳ್ಳಲು ಪ್ರಮುಖ ಕಾರಣ ಅವರ ಮಂಗಳೂರಿನ ಕೋಟೆ ಮತ್ತು ಆ ಕೋಟೆಯ ಸಂಬಂಧೀ ಆರ್ಥಿಕ ಚಟುವಟಿಕೆಗಳು. ಬಂಗರ ರಾಜ್ಯ ವ್ಯಾಪ್ತಿ ಮಂಗಳೂರಿನ ಸುತ್ತಮುತ್ತಲಿರುವುದೇ ಅವರ ಸಂಘರ್ಷಕ್ಕೆ ಕಾರಣವಾಯಿತು. ಉಳಿದ ಎಲ್ಲಾ ರಾಜಮನೆತನಗಳು ಕೆಲವೊಂದು ಸಂದರ್ಭಗಳಲ್ಲಿ ಪ್ರತಿಭಟಿಸಿದರಾದರೂ ಅದರಿಂದ ಯಶಸ್ಸು ಕೈಗೂಡಲಿಲ್ಲ.
2. ಇನ್ನು ವಿಶಾಲವಾದ ತುಳುನಾಡಿನಲ್ಲಿ ಹತ್ತಾರು ರಾಜಮನೆತನಗಳಿದ್ದರೂ ತಮ್ಮೊಳಗಿನ ಒಳಜಗಳದಿಂದ ಅವರು ಒಗ್ಗಟ್ಟಾಗಲು ಸಾಧ್ಯವಾಗಲಿಲ್ಲ. ಅವರೆಂದೂ ಸ್ವತಂತ್ರ ರಾಜರಾಗಿ ಬಲಿಷ್ಠರಾಗಲು ಸಾಧ್ಯವಾಗಲಿಲ್ಲ. ಹಿರಿಯ ವೆಂಕಟಪ್ಪ ನಾಯಕನ, ವೀರಭದ್ರ ನಾಯಕನ ಮತ್ತು ಚೆನ್ನಮ್ಮಾಜಿಯ ಕಾಲದಲ್ಲಿ ಕೆಲವು ಮನೆತನಗಳು ಒಟ್ಟಾಗಿ ಕೆಳದಿಯರಸರನ್ನು ತುಳುನಾಡಿನಿಂದ ಹೊರದೂಡಲು ಪ್ರಯತ್ನಿಸಿದರಾದರೂ ಅದು ಸಮರ್ಥ ನಾಯಕತ್ವದ ಕೊರತೆಯಿಂದ ಸಾಧ್ಯವಾಗಲಿಲ್ಲ. ನೂರಾರು ಮೈಲಿ ದೂರವಿದ್ದ ಕೆಳದಿಯರಸರು ಪೋರ್ಚುಗೀಸರ ಪಿತೂರಿಯ ನಡುವೆಯೂ ತುಳುನಾಡಿನಲ್ಲಿ ಯಶಸ್ವಿಯಾಗಲು ಸ್ಥಳೀಯ ರಾಜರುಗಳ ನಿರಂತರ ಮತ್ಸರ, ಒಳಜಗಳದ ರಾಜಕಾರಣಗಳೇ ಕಾರಣವಾಯ್ತು.

3. ‘ಕೆಳದಿ ನೃಪವಿಜಯ’ ಉಲ್ಲೇಖಿಸುವಂತೆ ಕೆಳದಿಯ ರಾಜರು ತುಳುನಾಡಿನ ಹಲವು ಬಲ್ಲಾಳ ಹೆಗ್ಗಡೆಗಳ ಸೊಕ್ಕು ಮುರಿದು ತಮಗೆ ಶರಣಾಗುವಂತೆ ಮಾಡಿದ್ದರು. ಹೆಗ್ಗಡೆ ಬಲ್ಲಾಳರು ತುಳುನಾಡಿನಲ್ಲಿದ್ದರೆಂಬುದಕ್ಕೆ ತುಳುನಾಡಿನಾದ್ಯಂತ ಇಂದೂ ಕಂಡುಬರುವ ಬೀಡುಗಳೇ ಸಾಕ್ಷಿ. ಆದರೆ ಇಂದು ಹಲವು ಬೀಡುಗಳು ಜೈನರ ವಶದಲ್ಲಿರದೆ ಅನ್ಯರ ವಶದಲ್ಲಿದೆ. ಆದರೆ ಆ ಬೀಡಿನ ಪಳೆಯುಳಿಕೆಗಳು ಮತ್ತು ಅದಕ್ಕೆ ನಿಕಟವಾಗಿರುವ ಬಸದಿಗಳ ಪಳೆಯುಳಿಕೆಗಳು ಇದಕ್ಕೆ ಮೂಕ ಸಾಕ್ಷಿಯಾಗಿವೆ. ತುಳುನಾಡಿನ ಸ್ಥಳೀಯ ರಾಜರುಗಳ ಕೆಳಗೆ ಇಂತಹ ಹತ್ತಾರು ಬಲ್ಲಾಳರುಗಳು ಅಥವಾ ಹೆಗ್ಗಡೆಗಳಿದ್ದು ಅವರು ತಮ್ಮ ಒಡೆಯರಾದ ಬಂಗ, ಅಜಿಲ, ಚೌಟ, ಸಾಮಂತ ಮೊದಲಾದ ಅರಸರ ಹಾಗೆ ಈ ಕಾಲದಲ್ಲಿ ಇಳಿಗಾಲವನ್ನು ಕಂಡಿರಬೇಕು ಮತ್ತು ನಾಮಾವಶೇಷವಾಗಿರಬೇಕು. ತುಳುನಾಡಿನ ಇಂದಿನ ಸ್ಥಿತಿಗತಿಗಳನ್ನು ನೋಡಿದರೆ ಸುಳ್ಯ, ಪುತ್ತೂರು ತಾಲೂಕಿನ ಆ ಭಾಗದಲ್ಲಿ ಈ ಅಧಪತನ ಅತ್ಯಂತ ತೀವ್ರವಾಗಿರುವುದು ಕಂಡುಬರುತ್ತದೆ. ಒಟ್ಟಿನಲ್ಲಿ ಸ್ಥಳೀಯ ರಾಜರ ಅಧಃಪತನಕ್ಕೆ ಕೆಳದಿರಾಜರ ರಾಜಕೀಯ ನೀತಿಯ ಜೊತೆಯಲ್ಲಿ ಈ ರಾಜರ ಪರಸ್ಪರ ಸಂಘರ್ಷಗಳೂ ಕಾರಣವಾಗಿದ್ದುವೆಂದು ತಿಳಿಯಬಹುದು.

4. ಪೋರ್ಚುಗೀಸ್ ದಾಖಲೆಗಳಲ್ಲಿ ಉಲ್ಲೇಖಿಸಿರುವ ‘ಪರ್ವತ ರಾಜ’ ಯಾರು ಎಂಬ ಜಿಜ್ಞಾಸೆ ಇತಿಹಾಸಕಾರರಲ್ಲಿದೆ. ಈ ಪರ್ವತರಾಜ ಕಣ್ಣನೂರಿನ ರಾಜ ಎಂಬುದಾಗಿ ಅಭಿಪ್ರಾಯಗಳಿವೆ.[183] ಅವರು ಕಳಸ, ಕಾರ್ಕಳದ ಭೈರವರಸರು ಎಂಬುದಾಗಿ ಬಿ.ಎಸ್.ಶಾಸ್ತ್ರಿ ಅಭಿಪ್ರಾಯ ಪಡುತ್ತಾರೆ.[184] ಸಮಕಾಲೀನ ಘಟನೆಗಳನ್ನು ಅವಲೋಕಿಸಿದಾಗ ಈ ಪರ್ವತ ರಾಜನ ಉಲ್ಲೇಖ ಎಂಬುದು ಕಳಸ ಕಾರ್ಕಳದ ಭೈರವರಸನಿಗೇ ಹೆಚ್ಚು ಅನ್ವಯವಾಗುತ್ತದೆ. ಉದಾಹರಣೆಗೆ ಹಿರಿಯ ವೆಂಕಟಪ್ಪ ನಾಯಕನ ಕಾಲದಲ್ಲಿ ನಾಯಕನನ್ನು ನೇರವಾಗಿ ಎದುರಿಸಲಾರದ ಪೋರ್ಚುಗೀಸರು ಬಂಗರಾಜ, ಪರ್ವತರಾಜ ಮತ್ತು ಕಾರ್ನಾಡಿನ ರಾಣಿಯನ್ನು ಒಟ್ಟು ಸೇರಿಸುವ ಪ್ರಯತ್ನ ಮಾಡುತ್ತಾರೆ.[185] ಇವರೊಂದಿಗೆ ಮುಂದೆ ಅಜಿಲರು ಕೊಂಡಗೆರೆಯ ರಾಜ ಮತ್ತು ಉಳ್ಳಾಲದ ರಾಣಿ ಸೇರಿಕೊಳ್ಳುತ್ತಾರೆ. ಅಂದರೆ ಇದು ತುಳುನಾಡಿನ ರಾಜರ ಒಕ್ಕೂಟವಾಗಿರಬೇಕೇ ಹೊರತು ಕೇರಳದ ರಾಜನೊಬ್ಬ ಇದರಲ್ಲಿ ಸೇರುವ ಸಾಧ್ಯತೆ ಕಡಿಮೆ. ಈ ನಿಟ್ಟಿನಲ್ಲಿ ಪರ್ವತಗಳಿಂದ ಕೂಡಿದ್ದ ಕಳಸ ಕಾರ್ಕಳವನ್ನು ಆಳುತ್ತಿದ್ದ ಭೈರರರಸನನ್ನೇ ಇದು ಉಲ್ಲೇಖಿಸಿರಬೇಕು. ಬಿ.ಎಸ್. ಶಾಸ್ತ್ರಿಯವರ ಗೋವಾ–ಕೆನರಾ ಪೋರ್ಚುಗೀಸ್ ರಿಲೇಶನ್ಸ್ ಕೃತಿಯಲ್ಲಿ ವೀರಭದ್ರನೊಂದಿಗೆ ಹೋರಾಟ ಮಾಡಿದ ಪರ್ವತ ರಾಜ ಕಣ್ಣನೂರಿನ ರಾಜ ಎಂದಿದೆ.[186] ಆದರೆ ಅದೇ ಘಟನೆಯನ್ನು ಉಲ್ಲೇಖಿಸಿರುವ ಕೆಳದಿ ಅರಸರು ಹಾಗೂ ಪೋರ್ಚುಗೀಸರು ಕೃತಿಯಲ್ಲಿ,[187] ಅವನು ಕಾರ್ಕಳದ ರಾಜನೆಂದು ಊಹಿಸಿದ್ದಾರೆ. ಶಾಸ್ತ್ರಿಯವರು ಊಹಿಸಿದಂತೆ ಅತ ಕಾರ್ಕಳದ ಭೈರವರಸನೇ ಎನ್ನುವುದು ಹೆಚ್ಚು ಸೂಕ್ತ.

5. ಒಂದು ಕಡೆಯಲ್ಲಿ ಸ್ಥಳೀಯ ರಾಜರು ಪೋರ್ಚುಗೀಸರ ಜೊತೆಯಲ್ಲಿ ಕಾಣಿಸಿಕೊಂಡರೆ, ಆರ್ಥಿಕ ರಾಜಕಾರಣದ ಭಾಗವಾಗಿ ಇತರ ಯುರೋಪಿಯನ್ನರಾದ ಡಚ್ಚರು, ಬ್ರಿಟೀಷರು ಮತ್ತು ಫ್ರೆಂಚರೊಂದಿಗೆ ಕೆಳದಿಯರಸರು ಹೆಚ್ಚು ಕಡಿಮೆ ಮೈತ್ರಿಯಿಂದಿದ್ದರು. ಅಲ್ಲದೆ ಸ್ಥಳೀಯರೂ ಲಾಭದ ವಿಚಾರ ಬಂದಾಗ ಯಾರ ಪರವಹಿಸಲೂ ಸಿದ್ಧರಿದ್ದರು. ಹಾಗಾಗಿ ಬದಲಾಗುತ್ತಿದ್ದ ಈ ಸಂಬಂಧಗಳಿಗೆ ಆರ್ಥಿಕ ಲಾಭವೇ ಪ್ರಮುಖ ಹಿನ್ನೆಲೆಯಾಗಿತ್ತು.

**2.6 ಕೆಳದಿ – ತುಳುನಾಡು ಆಡಳಿತ ನಿಯಂತ್ರಣದ ಸ್ವರೂಪ**

ವಿಜಯನಗರದ ಅರಸರ ಕೆಳಗೆ ಸಾಮಂತರಾಗಿದ್ದ ತುಳುನಾಡಿನ ಸ್ಥಳೀಯ ಅರಸರು ಕೆಳದಿಯ ಆಳ್ವಿಕೆಯ ಕಾಲದಲ್ಲಿಯೂ ಅದೇ ವ್ಯವಸ್ಥೆಯಲ್ಲಿ ಮುಂದುವರಿಯುವ ಅನಿವಾರ್ಯತೆಯುಂಟಾಯಿತು. ಹಾಗಾಗಿ ಕೆಳದಿಯರಸರ ಆಳ್ವಿಕೆಯ ಕಾಲಘಟ್ಟದಲ್ಲಿ ಎರಡು ಬಗೆಯ ಆಡಳಿತ ಕ್ರಮವನ್ನು ನೋಡಬಹುದಾಗಿದೆ. ಒಂದು ಸ್ಥಳೀಯ ಆಡಳಿತ ಕ್ರಮ. ಇದು ಸ್ಥಳೀಯವಾಗಿ ರೂಪುಗೊಂಡಿರುವ ತುಳುನಾಡಿನಲ್ಲಿ ಹಿಂದಿನಿಂದ ಬಂದ ಕ್ರಮ. ಎರಡನೆಯದು ಈ ಪ್ರದೇಶವನ್ನು ಗೆದ್ದು ಅಧಿಕಾರ ಸ್ಥಾಪಿಸಿದ ಕೆಳದಿಯರಸರ ಆಡಳಿತ ಕ್ರಮ. ಇದು ಇಡೀ ರಾಜ್ಯಕ್ಕೆ ಏಕರೂಪದ್ದಾಗಿರುತ್ತದೆ. ಆದರೆ ಸ್ಥಳೀಯ ಆಡಳಿತದೊಂದಿಗೆ ಉತ್ತಮ ಸಂಬಂಧವನ್ನು ಇಟ್ಟುಕೊಳ್ಳದೆ ಸಾರ್ವಭೌಮರಾದ ಕೆಳದಿಯರಸರು ಉತ್ತಮ ಆಡಳಿತ ನೀಡಲು ಸಾಧ್ಯವಿರಲಿಲ್ಲ. ಅದೇ ರೀತಿ ಈ ಕಾಲಘಟ್ಟದಲ್ಲಿ ಕರಾವಳಿಯಲ್ಲಿ ಬೇರೂರಿದ ಪೋರ್ಚುಗೀಸರೇ ಮೊದಲಾದ ಯುರೋಪಿಯನ್ನರು ತುಳುನಾಡಿನ ಕೆಲವು ಬಂದರು ಪಟ್ಟಣಗಳ ಮೇಲೆ ತಮ್ಮ ಹಿಡಿತವನ್ನು ಸಾಧಿಸಿದರು. ಈ ಹಿನ್ನೆಲೆಯಲ್ಲಿ ಕೆಳದಿಯರಸರ ಮತ್ತು ತುಳುನಾಡಿನ. ಕೇಂದ್ರ–ರಾಜ್ಯ ಸಂಬಂಧ ಕುತೂಹಲಕಾರಿಯಾಗಿದ್ದು ಇಲ್ಲಿಯ ಆಡಳಿತ ನಿಜವಾಗಿಯೂ ಯಾರ ಉಸ್ತುವಾರಿಯಲ್ಲಿತ್ತು ಮೊದಲಾದ ವಿಚಾರಗಳನ್ನು ಇಲ್ಲಿ ವಿಮರ್ಶಾತ್ಮಕವಾಗಿ ಚರ್ಚಿಸಲಾಗಿದೆ.

ಮೊದಲು ರಾಜ್ಯಪಾಲರ ನೆಲೆಯಲ್ಲಿ ತುಳುನಾಡಿನೊಂದಿಗೆ ನಂಟು ಹೊಂದಿದ್ದ ಕೆಳದಿಯರಸರು ನಂತರ ಅಮರ ಮಾಗಣೆಯ ರೂಪದಲ್ಲಿ ಅದನ್ನು ಪಡೆದರು. ಆದರೆ ತಾಳಿಕೋಟೆ ಯುದ್ಧದ ನಂತರ ಸಹಜವಾಗಿ ಈ ಭಾಗದಲ್ಲಿ ಕೆಳದಿ ಅರಸರು ಪ್ರಭಾವಶಾಲಿಗಳಾದರು. ವೆಂಕಟಪ್ಪ ನಾಯಕನ ಕಾಲದಲ್ಲಿ ಸಾರ್ವಭೌಮರ ನೆಲೆಯಲ್ಲಿ ತುಳುನಾಡಿನ ಮೇಲೆ ನಿಯಂತ್ರಣವನ್ನು ಹೊಂದಿದರು. ವಿಜಯನಗರದ ಕಾಲದಲ್ಲಿದ್ದಂತೆ ಕೆಳದಿ ಆಳ್ವಿಕೆಯಲ್ಲೂ ತುಳುನಾಡು ಮಂಗಳೂರು ರಾಜ್ಯ ಮತ್ತು ಬಾರ್ಕೂರು ರಾಜ್ಯಗಳಾಗಿ ಮುಂದುವರೆದಿತ್ತು. ದಕ್ಷಿಣಕ್ಕೆ ಮಂಗಳೂರು ರಾಜ್ಯ,[188] ಉತ್ತರಕ್ಕೆ ಬಾರ್ಕೂರು ರಾಜ್ಯ,[189] ಅಲ್ಲಿಂದ ಉತ್ತರಕ್ಕೆ ಸಮುದ್ರ ಕಿನಾರೆಯಲ್ಲಿ ಭಟ್ಕಳ ಪ್ರಾಂತ್ಯದ ಕೇಂದ್ರವಾದ ಭಟ್ಕಳ ಪಟ್ಟಣ ಅಲ್ಲಿಂದ ಮುಂದುವರೆದರೆ ಹೊನ್ನಾವರ ಮತ್ತು ಮಿರ್ಜಾನ್. ಇವುಗಳಿಗೆ ತಾಗಿಕೊಂಡಂತೆ ಒಳನಾಡಿನಲ್ಲಿ ಅರಗ ಗುತ್ತಿ ರಾಜ್ಯ. ಹೀಗೆ

ಒಟ್ಟು ಆರು ಪ್ರಾಂತ್ಯಗಳಿದ್ದರೂ ಅವಶ್ಯಕತೆಗೆ ಅನುಗುಣವಾಗಿ ಈ ಪ್ರಾಂತ್ಯಗಳಲ್ಲಿ ಕೆಳದಿಯರಸರು ಸಣ್ಣ ಪುಟ್ಟ ಬದಲಾವಣೆಗಳನ್ನ ಮಾಡಿಕೊಂಡಿದ್ದರು. ವಿಶಾಲವಾದ ಅರ್ಥದಲ್ಲಿ ಘಟ್ಟದ ಕೆಳಗಿನ ಪ್ರದೇಶವನ್ನು ತುಳುರಾಜ್ಯವೆಂದೂ ಹಾಗೂ ಘಟ್ಟದ ಮೇಲಿನ ಪ್ರದೇಶವನ್ನು ಮಲೆರಾಜ್ಯವೆಂದೂ ಪರಿಗಣಿಸಿದ್ದರು.[190]

ಕೆಳದಿ ರಾಜರುಗಳು ಆಡಳಿತದ ಅನುಕೂಲಕ್ಕಾಗಿ ಸಾಮ್ರಾಜ್ಯವನ್ನು ಅನೇಕ ವಿಭಾಗಗಳಾಗಿ ವಿಂಗಡಿಸಿದ್ದರು. ರಾಜ್ಯ, ಸೀಮೆ ಮೊದಲಾದ ವಿಂಗಡಣೆಗಳು ವಿಜಯನಗರ ಕಾಲದಲ್ಲಿದ್ದು ಅದು ಈ ಕಾಲದಲ್ಲಿಯೂ ಮುಂದುವರೆದಿತ್ತು. ವಿಶಾಲವಾದ ಕೆಳದಿ ರಾಜ್ಯದ ಆಡಳಿತದ ಸ್ವರೂಪವನ್ನು ಗಮನಿಸಿದರೆ, ರಾಜ್ಯವು ಅತ್ಯಂತ ದೊಡ್ಡ ಆಡಳಿತದ ವಿಭಾಗವಾಗಿತ್ತು. ರಾಜ್ಯವನ್ನು ಅನೇಕ ಸೀಮೆಗಳಾಗಿ ವಿಭಾಗಿಸಲಾಗಿತ್ತು. ಸೀಮೆಗಳು ಅನೇಕ 'ಪಾಲ್'ಗಳನ್ನು ಒಳಗೊಂಡಿರುತಿದ್ದವು.[191] ವಿಜಯನಗರದ ಕಾಲದಲ್ಲಿದ್ದ 'ವೆಂಟೆ' ಬಹಳ ಅಪರೂಪದಲ್ಲಿ ಕೆಳದಿ ಕಾಲದಲ್ಲಿ ಕಾಣಿಸಿಕೊಂಡಿದೆ. ಹಾಗೆಯೇ ಕಂಪಣ, ಹೋಬಳಿ ಮತ್ತು ನಾಡು ಕೂಡ ಆಡಳಿತ ಘಟಕಗಳಾಗಿದ್ದವು. ಕೆಳದಿನಾಯಕರ ಕಾಲದ ಶಾಸನಗಳು ಮಂಡಲವನ್ನೂ ಉಲ್ಲೇಖಿಸುತ್ತವೆ.[192] ಹಾಗೆಯೇ ವಿಜಯನಗರ ಕಾಲದ ಚಾವಡಿ ಮತ್ತು ಸ್ಥಳ ಎನ್ನುವ ಆಡಳಿತದ ವಿಭಾಗ ಈ ಕಾಲದಲ್ಲಿ ಕಾಣಿಸಿಕೊಳ್ಳುವುದಿಲ್ಲ.[193] ಇವುಗಳೊಂದಿಗೆ, ತುಳುನಾಡಿನಲ್ಲಿ ಸ್ಥಳೀಯವಾದ ಕೆಲವು ಆಡಳಿತಾತ್ಮಕ ವಿಭಾಗಗಳನ್ನೂ ಗುರುತಿಸಬಹುದು. ಒಟ್ಟಾಗಿ ಹೇಳುವುದಾದರೆ ರಾಜ್ಯ, ಕಂಪಣ, ಹೋಬಳಿ, ನಾಡು, ವೆಂಟೆ(Venthe), ಸೀಮೆ, ಮಾಗಣೆ, ಗುತ್ತು, ಪೇಟೆ ಮತ್ತು ಗ್ರಾಮ ಕೆಳದಿ ನಾಯಕರ ಕಾಲದಲ್ಲಿ ಕನ್ನಡ ಕರಾವಳಿ ಪ್ರದೇಶದ ಆಡಳಿತ ವಿಭಾಗಗಳಾಗಿದ್ದವು.

ಈ ಕಾಲದಲ್ಲಿ ಅಧಿಕಾರ ನಿರ್ವಹಿಸುತ್ತಿದ್ದ ಪ್ರಮುಖ ಅಧಿಕಾರಿ ವರ್ಗಗಳನ್ನು ಕೆಳದಿಯರಸರೇ ನೇಮಿಸುತ್ತಿದ್ದರು. ನಿಯೋಗಿ(ರಾಯಭಾರಿ), ಆಸ್ಥಾನ ವ್ಯಾಪಾರಸ್ಥ, ಕಿಲ್ಲೆದಾರ, ಚಿನ್ನ ಭಂಡಾರಿ, ಪಾರುಪತ್ತೆಗಾರ, ಹೋಬಳಿ ಕರಣಿಕ, ಸ್ಥಳಸೇನಬೋವ ಮುಂತಾದ ಅಧಿಕಾರವರ್ಗಗಳು ಅಸ್ತಿತ್ವದಲ್ಲಿದ್ದವು.[194] ಕುಂದಾಪುರ ತಾಲೂಕಿನ ಕಾವ್ರಾಡಿ ಮನೆ ಅಥವಾ ಹಲಸನಾಡು ಮನೆತನದವರು ಕೆಳದಿಯರಸರ ಕೆಳಗೆ ಆಸ್ಥಾನ ಕರಣಿಕರಾಗಿದ್ದರು. ಕ್ರಿ.ಶ.1745ರಲ್ಲಿ ಕೆಳದಿ ಬಸಪ್ಪ ನಾಯಕನು ಹಲ್ಸನಾಡು ನಾಗಪ್ಪಯ್ಯನನ್ನು "ಆಸ್ಥಾನ ಕರಣಿಕ" ಹುದ್ದೆಗೆ ನೇಮಿಸಿದ್ದ ಮೂಲ ರಾಜಾಜ್ಞೆಯ ಪ್ರತಿ ಇತ್ತೀಚೆಗೆ ದೊರೆತಿದೆ.[195] ಸಚಿವಾಲಯದಲ್ಲಿ ಪ್ರಧಾನ ಅಧಿಕಾರಿಯಾಗಿದ್ದ ಕರಣಿಕ, ರಾಜ್ಯದ ಎಲ್ಲ ಲೆಕ್ಕಪತ್ರಗಳನ್ನು ಮತ್ತು ಪತ್ರ ವ್ಯವಹಾರಗಳನ್ನು ಸಹಾಯಕರ ಮೂಲಕ ಕಡತದ ಚಾವಡಿಗೆ ಒಪ್ಪಿಸಿ ಕಾರ್ಯನಿರ್ವಹಿಸುತ್ತಿದ್ದನು. ಸ್ಥಳಸೇನ ಭೋವಿಕೆಯನ್ನು ಊರ ಪ್ರಮುಖ ಮತ್ತು ನಾಡದೇಸಿಗ ವರ್ತಕರ ಬಿನ್ನಹ ಕೇಳಿ ನಾಯಕರು ನೇಮಿಸುತ್ತಿದ್ದರೆಂದು ಶಿರೂರಿನ ತಾಮ್ರ ಶಾಸನದಿಂದ ತಿಳಿದುಬರುತ್ತದೆ.[196] ಸೇನಬೋವ ಗ್ರಾಮದ ಮತ್ತೊಬ್ಬ ಅಧಿಕಾರಿಯಾಗಿದ್ದು ಅವನು 'ಸೇನಬೋವ ಕಡತ'[197] ಎನ್ನುವ ದಾಖಲೆಯನ್ನು ನೋಡಿಕೊಳ್ಳುತ್ತಿದ್ದ. ಇದರಲ್ಲಿ ರಾಜರಿಂದ ನೀಡಲ್ಪಟ್ಟ ದಾನ ದತ್ತಿಗಳನ್ನು ದಾಖಲಿಸಲಾಗುತ್ತಿತ್ತು. ಅದೇ ರೀತಿ ಸ್ಥಳೀಯವಾಗಿ ಹಲವು ಕರ್ತವ್ಯಗಳನ್ನು

ಅವನು ನಿಭಾಯಿಸುತ್ತಿದ್ದ. ಗ್ರಾಮ ಆಡಳಿತದ ಅತ್ಯಂತ ಸಣ್ಣ ವಿಭಾಗವಾಗಿತ್ತು. ಅದನ್ನು ನೋಡಿಕೊಳ್ಳಲು ಬೇರೆ ಬೇರೆ ಅಧಿಕಾರಿಗಳಿದ್ದರು. ಅವರಲ್ಲಿ ಪಾರುಪತ್ಯಗಾರನೂ ಒಬ್ಬ.[198] ಅವನು ಕೆಲಸಕಾರ್ಯಗಳ ಉಸ್ತುವಾರಿ ನೋಡಿಕೊಳ್ಳುವ ಕಾರ್ಯನಿರ್ವಹಣಾಧಿಕಾರಿಯಾಗಿದ್ದ. ಅವನು ರಾಜನ ಪ್ರತಿನಿಧಿಯಾಗಿ ಗ್ರಾಮದ ಅಥವಾ ನಿರ್ದಿಷ್ಟ ಸ್ಥಳದ ಕೆಲಸಗಳನ್ನು ನೋಡಿಕೊಳ್ಳುತ್ತಿದ್ದ. ಸ್ಥಳೀಯ ತೆರಿಗೆಗಳನ್ನು ಸಂಗ್ರಹಿಸುವ, ರಾಜನ ದಾನ ದತ್ತಿಗಳ ನಿರ್ವಹಣೆಯ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದ. ಇವನಿಗೆ ರಾಜನ ಸಂಪರ್ಕವಿರುತ್ತಿತ್ತು.

ತೆರಿಗೆಯನ್ನು ವಿಧಿಸುತ್ತಿದ್ದ ಮತ್ತು ಸಂಗ್ರಹಿಸುವ ಅಧಿಕಾರದ ನೆಲೆಯಲ್ಲಿಯೂ ಆಡಳಿತ ನಿಯಂತ್ರಣದ ಸ್ವರೂಪವನ್ನು ತಿಳಿಯಬಹುದಾಗಿದೆ. ಕ್ರಿ.ಶ.1615ರ ಶಾಸನ ಮಹಂತಲೆ ಸೀಮೆಯಲ್ಲಿ ಕೆಳದಿ ನಾಯಕರೇ ತೆರಿಗೆ ಹೇರುತ್ತಿದ್ದರೆಂಬ ಮಾಹಿತಿ ನೀಡುತ್ತದೆ.[199] ಕ್ರಿ.ಶ.1623ರ ಶಾಸನ ನೀಡುವ ಮಾಹಿತಿಯಂತೆ, ಬಾರ್ಕೂರು ಸೀಮೆಯ ಮಾಸ್ಕಿ ಗ್ರಾಮದಲ್ಲಿ ತೆಂಗು, ಬೊಕ್ಕ ಮತ್ತು ಅಡಿಕೆ ಮರಗಳ ಕಂದಾಯ ವೆಂಕಟಪ್ಪ ನಾಯಕನಿಗೆ ಸಲ್ಲುತ್ತಿತ್ತು.[200] ಇದು ಆ ಪ್ರದೇಶದ ತೆರಿಗೆ ನೇರವಾಗಿ ಕೆಳದಿಯರಸರಿಗೇ ಸಲ್ಲಿಕೆಯಾಗುತ್ತಿದ್ದ ಉದಾಹರಣೆಯಾಗಿದೆ. ಕ್ರಿ.ಶ.1708ರ ಮಂಜೇಶ್ವರ ದೇವಳದ ಕಡತ ನೀಡುವ ಮಾಹಿತಿಯಂತೆ,[201] ಕೆಳದಿ ನಾಯಕರು ಕಾಸರಗೋಡು ಪ್ರದೇಶದಲ್ಲಿ ಭೂಮಿಯ ಫಲವತ್ತತೆಯನ್ನು ನೋಡಿ ಕಂದಾಯ ಹೇರುತ್ತಿದ್ದರೆಂದು ತಿಳಿಯುತ್ತದೆ. ಕ್ರಿ.ಶ.1622–23ರಲ್ಲಿ ಮಂಗಳೂರಿನ ಮೂಲಕ ಸಾಗಿದ ಪಿಯತ್ರೋ ಡೆಲ್ಲಾ ವಲ್ಲೆ ವಿಶಾಲವಾದ ಭೂಮಿಯನ್ನು ಹೊಂದಿದ್ದ ಕದ್ರಿಯ ಜೋಗಿಗಳು ನಾಯಕನ ತೀವ್ರವಾದ ತೆರಿಗೆ ಹೆಚ್ಚಳದಿಂದ ಬಡತನಕ್ಕಿಳಿಯ ಬೇಕಾಯಿತು ಎಂಬ ಮಾಹಿತಿ ನೀಡುತ್ತಾನೆ.[202] ಈ ಮಾಹಿತಿಗಳು ಮಂಗಳೂರು ಪರಿಸರದಲ್ಲಿ ಕೆಳದಿಯರಸರ ತೆರಿಗೆಯ ಪರಿಣಾಮವನ್ನು ವಿವರಿಸುತ್ತವೆ.

ಕೆಳದಿಯರಸರ ಸುಂಕ ಠಾಣೆಗಳು ತುಳುನಾಡಿನಲ್ಲಿದ್ದುದೂ ಸಹ ಅವರ ಆಡಳಿತ ನಿಯಂತ್ರಣಕ್ಕೆ ಸಾಕ್ಷಿಯಾಗಿದೆ. ಕ್ರಿ.ಶ.1641ರ ದಾಖಲೆಯೊಂದು ಕೆಳದಿ ವೀರಭದ್ರ ಈ ಕೆಳಗಿನ ಸ್ಥಳಗಳಿಂದ ಸುಂಕವನ್ನು ಸಂಗ್ರಹಿಸುತ್ತಿದ್ದ ಎಂಬ ಮಾಹಿತಿ ನೀಡುತ್ತದೆ.[203] ಕೊಡಿಯಾಲ(ಮಂಗಳೂರು) ಮಂಜೇಶ್ವರ(600ಗ) ಉಪ್ಪಿನಂಗಡಿ(300ಗ) ಬೆಳ್ತಂಗಡಿ(240) ಬಂಗಾಡಿ(200ಗ) ಹೀಗೆ ಒಟ್ಟು 1340 ಗದ್ಯಾಣಗಳನ್ನು ಇಲ್ಲಿಂದ ಸಂಗ್ರಹಿಸಲಾಗಿತ್ತು. ಅದೇ ರೀತಿ ಇನವಳಿ(ಇನೋಳಿ) ಬಂಟ್ವಾಳ ಮತ್ತು ಪಾಣೆಮಂಗಳೂರುಗಳಲ್ಲಿಯೂ ಸುಂಕ ಸಂಗ್ರಹಿಸಲಾಗುತ್ತಿತ್ತು. ಪಿಯತ್ರೋ ಡೆಲ್ಲಾ ವಲ್ಲೆ ಬೆಂಗ್ರೆಯ ಮೂಲಕ ಮಣೇಲ್‌ಗೆ ಹಾದುಹೋಗುವಾಗ ಸರಕು ತಂಬಿದ ದೋಣಿಗಳು ಎಡಗಡೆಯಲ್ಲಿರುವ ವೆಂಕಟಪ್ಪನ ಮಂತ್ರಿಗಳಿಗೆ(ಅಧಿಕಾರಿಗಳಿಗೆ) ಅಲ್ಲಿರುವ ಸುಂಕ ಠಾಣೆಗಳಲ್ಲಿ ಸುಂಕವನ್ನು ನೀಡಬೇಕಾಗಿತ್ತು ಮತ್ತು ಸುತ್ತಲೂ ಇರುವ ಪ್ರದೇಶ ಅವನಿಗೆ ಸೇರಿತ್ತು ಎಂದು ಹೇಳುತ್ತಾನೆ. ಈ ಸುಂಕ ಠಾಣೆ ಗುರುಪುರ ನದಿಯ ತೀರದಲ್ಲಿತ್ತು. ಆದರೆ ಅಲ್ಲಿಂದ ನದಿಯಲ್ಲಿ ಮುಂದುವರೆದರೆ ಎರಡೂ ಕಡೆ ಉಲ್ಲಾಳದ ರಾಣಿಯ ನಾಡು. ಅಂತೆಯೇ ಮಣೇಲಿನಿಂದ ಮಂಗಳೂರಿಗೆ ದೋಣಿಯಲ್ಲಿ ಹೋಗುವ ಸ್ಥಳದಲ್ಲಿ ಎಡಭಾಗದಲ್ಲಿ ರಾಣಿಯ ಸುಂಕದ ಠಾಣೆ ಇದ್ದು, ಇಲ್ಲಿಂದ ಹೋಗುವ

ಅಕ್ಕಿಯ ಮತ್ತು ಬರುವ ಉಪ್ಪಿನ ಮೇಲೆ ಸುಂಕ ವಸೂಲಿ ಮಾಡಲಾಗುತ್ತಿತ್ತು ಎಂದಿದ್ದಾನೆ.[204] ಇದನ್ನು ಗಮನಿಸಿದಾಗ ತುಳುನಾಡಿನ ಪ್ರದೇಶಗಳು ಸ್ಥಳೀಯ ಅರಸರು ಮತ್ತು ಕೆಳದಿಯರಸರ ನಡುವೆ ಹಂಚಿ ಹೋಗಿದ್ದುದು ತಿಳಿದುಬರುತ್ತದೆ.

ಕೆಳದಿ ರಾಜರು ತುಳುನಾಡಿನ ಗೇಣಿದಾರರ ವಿಚಾರದಲ್ಲೂ ಗಮನ ನೀಡುತ್ತಿದ್ದರು. ಕಾರ್ಕಳ ಮತ್ತು ಮಂಗಳೂರಿನಲ್ಲಿ ಗೇಣಿದಾರರ ಚಟುವಟಿಕೆಗಳು ಕೃಷಿ ಕಾರ್ಯದಲ್ಲಿ ಗೊಂದಲ ಮೂಡಿಸಿದಾಗ ಕೆಳದಿ ಶಿವಪ್ಪ ನಾಯಕ ಗೇಣಿದಾರರನ್ನು ಶಿಕ್ಷಿಸಿದ್ದ.[205] ಕ್ರಿ.ಶ.1624, 1656, 1691ರ ಶೃಂಗೇರಿ ಮಠದ ಶಾಸನಗಳು ಮಂಗಳೂರು ಮತ್ತು ಕಾರ್ಕಳ ಪ್ರದೇಶದ ಗೇಣಿದಾರರು ಮಠಕ್ಕೆ ಗೇಣಿ ನೀಡದೆ ಕೃಷಿ ಕಾರ್ಯಗಳನ್ನು ಮುಂದುವರೆಸಿರುವುದು ಮತ್ತು ಕೆಳದಿ ನಾಯಕರು ಗೇಣಿದಾರರ ಮತ್ತು ಮಠದ ಅಧಿಕಾರಿಗಳ ನಡುವಿನ ಸಮಸ್ಯೆಯನ್ನು ಬಗೆಹರಿಸಿದ ಮಾಹಿತಿ ನೀಡುತ್ತವೆ.[206]

ಕ್ರಿ.ಶ.16ನೇ ಶತಮಾನದ ಕೊನೆಯಲ್ಲಿ ತುಳುನಾಡಿನಲ್ಲಿ 'ದಾಸೋಹ' ಎನ್ನುವ ತೆರಿಗೆಯನ್ನು ಕೆಳದಿ ರಾಜರುಗಳು ಸಂಗ್ರಹಿಸುತ್ತಿದ್ದರು. ಸೇವೆಯನ್ನು ಮಾಡುವ ದತ್ತಿ ಕೇಂದ್ರಗಳಿಗಾಗಿ ಈ ತೆರಿಗೆಯನ್ನು ಸಂಗ್ರಹಿಸಲಾಗುತ್ತಿತ್ತು. ಶಾಸನಗಳ ಉಲ್ಲೇಖದಂತೆ ಕೆಳದಿ ನಾಯಕರು 'ದಾಸೋಹವನ್ನು' ತುಳುನಾಡಿನ ಕೆಲವು ಪ್ರಮುಖ ಸ್ಥಳಗಳಲ್ಲಿ ಸಂಗ್ರಹಿಸುತ್ತಿದ್ದರು.[207] ಆದರೆ ಈ ತೆರಿಗೆಯನ್ನು ಸ್ಥಳೀಯ ರಾಜರೂ ಸಂಗ್ರಹಿಸುತ್ತಿದ್ದರು ಎನ್ನುವುದಕ್ಕೆ ದಾಖಲೆಗಳಿವೆ. ವಿಟ್ಲದ ರಾಜ ಡೊಂಬಹೆಗ್ಗಡೆ ಕ್ರಿ.ಶ.1644ರಲ್ಲಿ ದಾಸೋಹವನ್ನು ವಿಧಿಸಿದ್ದ. ಇದನ್ನು ಪರಮೇಶ್ವರ ಸೇನಭೋವ ಖಜಾನೆಗೆ ನೀಡಬೇಕಾಗಿತ್ತು.[208] ಹಾಗಾಗಿ ದಾಸೋಹ ಎನ್ನುವ ತೆರಿಗೆಯನ್ನು ಸ್ಥಳೀಯರಸರು ಹಾಗು ಕೆಳದಿಯರಸರೂ ಸಂಗ್ರಹಿಸುತ್ತಿದ್ದರು ಎನ್ನುವುದು ಸ್ಪಷ್ಟವಾಗುತ್ತದೆ. ಈ ಕಾಲದಲ್ಲಿ ರಾಜನ ಖಜಾನೆಗೆ ಕಾಣಿಕೆಯ ರೂಪದ ತೆರಿಗೆಯನ್ನು ನೀಡಿ ಹೊಸ ಭೂಮಿಯನ್ನು ಖರೀದಿಸಲಾಗುತ್ತಿತ್ತು. ಉದಾಹರಣೆಗೆ ಕ್ರಿ.ಶ.1670ರಲ್ಲಿ ನಾರಾಯಣ ಕಮತಿ ಎನ್ನುವವನು ಸೋಮಶೇಖರ ನಾಯಕನ ಖಜಾನೆಗೆ 120 ವರಹಗಳನ್ನು ನೀಡಿ ಸಜಿಪದ ಮಾಗಣೆ ಮಂಜೆ ಗ್ರಾಮದ ನೂಜಿ ಭೂಮಿಯನ್ನು ಮಂಜೇಶ್ವರದ ಶ್ರೀ ಮದನಂತೇಶ್ವರ ದೇವಾಲಯಕ್ಕೆ ದಾನ ನೀಡಿದ್ದನು.[209] ಇದು ಅರಮನೆ ಕಾಣಿಕೆ ಕೇಂದ್ರಕ್ಕೆ ಸಲ್ಲಿಕೆಯಾಗುತ್ತಿದ್ದ ಉದಾಹರಣೆಯಾಗಿದೆ. ಹಾಗೂ ಸ್ಥಳೀಯರಸರ ಸೀಮಿತ ಅಧಿಕಾರ ವ್ಯಾಪ್ತಿಯನ್ನು ಸೂಚಿಸುತ್ತದೆ. ಹಾಗೆ ನೀಡಿದ ಭೂಮಿಯನ್ನು ಧಾರ್ಮಿಕ ಸಂಸ್ಥೆಗಳ ಮುಖಂಡರು ಅಡವು ಇಡಬಹುದಾಗಿತ್ತು. ಅಡಮಾನ ಭೂಮಿಯನ್ನು ಖರೀದಿಸಿದವನು ಸರಕಾರಕ್ಕೆ ಆ ಬೆಲೆಯನ್ನು ನೀಡಿ ಅಡಮಾನದ ಶಾಸನಕ್ಕೆ ಬದಲಾಗಿ ಹೊಸ ಶಾಸನವನ್ನು ಸ್ವೀಕರಿಸಬಹುದಾಗಿತ್ತು. ಉದಾಹರಣೆಗೆ ವಿಟ್ಲದ ಪರಮೇಶ್ವರ ಭಟ್ಟ ಎಂಬವನು ಪೆನ್ನಾರ್ ಮೊಗರುವಿನಲ್ಲಿಯ ಭೂಮಿಯನ್ನು ಮಂಜೇಶ್ವರದ ದೇವಳಕ್ಕೆ ಅಡಮಾನವಿರಿಸಿದ್ದನು. ಮುಂದೆ ಅದನ್ನು ಆ ದೇವಳಕ್ಕೆ ಮಾರಲಾಯಿತು. ದೇವಳದ ಪ್ರಧಾನ ಅರ್ಚಕ ನರಸಿಂಹ ಭಟ್ಟ ಆ ಕ್ರಯಪತ್ರವನ್ನು ವಿಟ್ಲದ ರಾಜ ಡೊಂಬ ಹೆಗ್ಗಡೆಗೆ ತೋರಿಸಿದಾಗ ಕ್ರಿ.ಶ.1754ರಲ್ಲಿ ರಾಜ, ನರಸಿಂಹ

ಭಟ್ಟರಿಗೆ ಎಲ್ಲಾ ಹಕ್ಕುಗಳೊಂದಿಗೆ ಹೊಸದಾದ ಶಾಸನವನ್ನು ಬರೆಸಿ ನೀಡಿದ. ಈ ಲಕ್ಷಣಗಳು ಕುಂಬಳೆ ಮತ್ತು ವಿಟ್ಲದ ಸಂಸ್ಥಾನಗಳಲ್ಲಿ ಪ್ರಚಲಿತದಲ್ಲಿತ್ತು.[210] ಇಲ್ಲಿ ಎರಡು ವಿಚಾರಗಳು ಸ್ಪಷ್ಟವಾಗುತ್ತದೆ. ಒಂದು ಕೆಳದಿಯರಸರಿಗೆ ಈ ಪ್ರದೇಶದಿಂದ ತೆರಿಗೆ ಸಂದಾಯವಾಗುತ್ತಿದ್ದ ವಿಚಾರ. ಇನ್ನೊಂದು ವಿಟ್ಲದ ಅರಸರ ಅಧಿಕಾರ ವ್ಯಾಪ್ತಿ. ಕೆಳದಿಯರಸರ ಆಳ್ವಿಕೆಯ ಕಾಲದಲ್ಲಿ ವಿಟ್ಲದ ಅರಸ ಕ್ರಯ ಪತ್ರಕ್ಕೆ ಹೊಸದಾದ ಶಾಸನವನ್ನು ಬರೆಸಿ ಕೊಟ್ಟಿರುವುದು ಅಷ್ಟರಮಟ್ಟಿಗೆ ಅವನು ಸ್ವತಂತ್ರನಾಗಿದ್ದ ಎನ್ನುವುದನ್ನು ತಿಳಿಸುತ್ತದೆ.

ಕ್ರಿ.ಶ 1730ರ ತಾಳಿಪ್ಪಾಡಿ ಇಗರ್ಜಿಯ ತಾಳೆವೋಲೆಯ ದಾಖಲೆಯಂತೆ ಸಾಂತಮೇರಿ ಇಗರ್ಜಿಯನ್ನು ಕಟ್ಟಲು ತಾಳಿಪಾಡಿಯಲ್ಲಿ ಕಾಡುಕಂಬಳವೆಂಬ ಸ್ಥಳವನ್ನು ಸಾವಂತರಸ ನೀಡಿ, ಈ ಸ್ಥಳದ ತೆರಿಗೆಯನ್ನು ಮನ್ನಾ ಮಾಡಿದಂತೆ ಈ ದಾಖಲೆಯಲ್ಲಿ ಹೇಳಲಾಗಿದೆ.[211] ಅಂದರೆ ಒಂದು ಕಡೆಯಲ್ಲಿ ಚರ್ಚು ನಿರ್ಮಾಣಕ್ಕೆ ಕೆಳದಿಯರಸರ ಒಪ್ಪಿಗೆ ಬೇಕಿದ್ದರೆ ಇನ್ನು ಕೆಲವು ಸಂದರ್ಭಗಳಲ್ಲಿ ಸ್ಥಳೀಯರಸರು ತೆರಿಗೆ ರಿಯಾಯತಿ ತೋರಿಸುವಷ್ಟು ಸ್ವತಂತ್ರರಾಗಿದ್ದರು. ಒಟ್ಟಿನಲ್ಲಿ ಕಂದಾಯ ವಿಧಿಸುವ ಮತ್ತು ಕಂದಾಯ ಸಂಗ್ರಹಿಸುವ ಅಧಿಕಾರದ ನೆಲೆಯಲ್ಲಿ ಕೆಳದಿ ಅರಸರ ತುಳುನಾಡಿನ ವಿಚಾರವನ್ನು ವಿಮರ್ಶಿಸಬೇಕಾಗುತ್ತದೆ. ಹೆಚ್ಚಿನ ಸಂದರ್ಭಗಳಲ್ಲಿ ಕೆಳದಿಯರಸರ ನೇರ ಸಂಪರ್ಕವನ್ನು ಕಾಣಬಹುದಾಗಿದೆ. ಇದು ತೆರಿಗೆ ವಿಧಿಸುವ ಸಂಗ್ರಹಿಸುವ ರೂಪದಲ್ಲಿರಬಹುದು ಅಥವಾ ತಪ್ಪಿತಸ್ಥರನ್ನು ಶಿಕ್ಷಿಸುವ ವಿಚಾರದಲ್ಲಿರಬಹುದು. ಹಾಗೆಯೇ ಇನ್ನು ಕೆಲವು ಸಂದರ್ಭಗಳಲ್ಲಿ ಸ್ಥಳೀಯ ಸಾಮಂತರಸರು ತೆರಿಗೆ ವಿಧಿಸುತ್ತಿದ್ದ ಮತ್ತು ತೆರಿಗೆ ರಿಯಾಯತಿ ನೀಡುತ್ತಿದ್ದ ಉದಾಹರಣೆಗಳಿವೆ.

ವಿಜಯನಗರದರಸರ ಕಾಲದಲ್ಲಿದ್ದಂತೆ ಕೆಳದಿಯ ಆಳ್ವಿಕೆಯಲ್ಲಿಯೂ 2 ರೀತಿಯ ಪ್ರಾಂತ್ಯದ ಆಳ್ವಿಕೆಯನ್ನು ತುಳುನಾಡಿನಲ್ಲಿ ಗುರುತಿಸಬಹುದು.

1. ರಾಜ್ಯಪಾಲರುಗಳ ಮೂಲಕ ಆಳ್ವಿಕೆ
2. ಸಾಮಂತರಸರ ಆಳ್ವಿಕೆ

ತುಳುನಾಡಿನ ಉತ್ತರ ಭಾಗ ನಾಯಕರ ನೇರ ಪರಿಣಾಮಕಾರಿ ಆಳ್ವಿಕೆಗೆ ಒಳಪಟ್ಟರೆ, ಮಂಗಳೂರು ಮತ್ತು ಕಾಸರಗೋಡು ಪ್ರದೇಶಗಳು ಸ್ಥಳೀಯ ರಾಜರುಗಳ ಮೂಲಕ ಆಳ್ವಿಕೆಗೆ ಒಳಪಟ್ಟಿತ್ತು. ಕೆಳದಿ ನಾಯಕರು ಈ ಮುಖ್ಯಸ್ಥರ ಮೇಲೆ ಪರಿಣಾಮಕಾರಿ ಮೇಲ್ವಿಚಾರಣಾ ವ್ಯವಸ್ಥೆಯನ್ನು ಹೊಂದಿದ್ದರು. ಕೆಳದಿಯರಸರು ನೇಮಿಸುತ್ತಿದ್ದ ಆಡಳಿತಾಧಿಕಾರಿಗಳಿಗೆ ಮೇಲುಸ್ತರದಲ್ಲಿದ್ದವರು ರಾಜ್ಯಪಾಲರುಗಳು. ಮಂಗಳೂರು ಹೊನ್ನಾವರ ಭಟ್ಕಳ ಮತ್ತು ಮಿರ್ಜಾನ್ ಪ್ರದೇಶಗಳಿಗೆ ರಾಜ್ಯಪಾಲರ ನೇಮಕವನ್ನು ಕೆಳದಿ ರಾಜರೇ ಮಾಡಿದ್ದರು.[212] ಹಾಗೆಯೇ ಬಾರ್ಕೂರಿಗೂ ರಾಜ್ಯಪಾಲರ ನೇಮಕ ಮಾಡುತ್ತಿದ್ದರು. ಮಂಗಳೂರು, ಭಟ್ಕಳ, ಮತ್ತು ಹೊನ್ನಾವರಗಳ ಮೂಲಕ ವಿದೇಶೀ ವ್ಯಾಪಾರ ಭರದಿಂದ ಸಾಗುತ್ತಿದ್ದ ಕಾರಣ ಈ ಪ್ರದೇಶದ ವೈಸ್‌ರಾಯಿಗಳಿಗೆ ಅಧಿಕ ಅಧಿಕಾರವನ್ನು ನೀಡಲಾಗಿತ್ತು ಮತ್ತು ಯೋಗ್ಯರಾದವರನ್ನು

ಮಾತ್ರ ಇಲ್ಲಿಗೆ ನಿಯೋಜಿಸಲಾಗುತ್ತಿತ್ತು. ವಿಜಯನಗರದರಸರು ಕೆಳದಿ ಸದಾಶಿವ ನಾಯಕನಿಗೆ ಬಾರಕೂರಿನ ಆಡಳಿತದ ಜವಾಬ್ದಾರಿಯನ್ನು ವಹಿಸಿದ್ದರು. ಕ್ರಿ.ಶ.1564ರ ಶಾಸನಾಧಾರದಂತೆ ಸದಾಶಿವನಾಯಕನು ಬಾರಕೂರಿಗೆ ಕಲೆಯೆಲ್ಲಪ್ಪ ಒಡೆಯನನ್ನು ರಾಜ್ಯಪಾಲನನ್ನಾಗಿ ನೇಮಿಸಿದ ವಿಚಾರವನ್ನು ತಿಳಿಯಬಹುದು.[213] ಅಚ್ಚಪ್ಪ ಒಡೆಯ, ಕಲೆಯೆಲ್ಲಪ್ಪ, ಮಲೆದಂಡನಾಯಕ, ರಘುನಾಥ ರಾವ್, ಸೂರಪ್ಪಯ್ಯ, ರಾಮಕೃಷ್ಣಪ್ಪ ಒಡೆಯರು ಮುಂತಾದ ತುಳುನಾಡಿನ ರಾಜ್ಯಪಾಲರ ಕುರಿತಾಗಿ ಹಲವು ಮಾಹಿತಿಗಳು ಲಭ್ಯವಿದೆ. ರಘುನಾಥ್ ತನ್ನ ಕರ್ತವ್ಯ ನಿಷ್ಠೆಯಿಂದ 2 ಬಾರಿ ಕೆನರಾದ ಸೈನ್ಯದ ಜನರಲ್ ಆಗಿ ಮರು ನೇಮಕಗೊಂಡಿದ್ದ.[214] ಈ ಪ್ರಾಂತ್ಯಗಳ ರಾಜ್ಯಪಾಲರು ರಾಜರ ಪರವಾಗಿ ಒಪ್ಪಂದಗಳನ್ನು ಮಾಡಬೇಕಾಗಿತ್ತು. ಉದಾಹರಣೆಗೆ ಮಂಗಳೂರಿನ ರಾಜ್ಯಪಾಲ ಸೂರಪ್ಪಯ್ಯ ಇಮ್ಮಡಿ ಸೋಮಶೇಖರನ ಪರವಾಗಿ ಬ್ರಿಟೀಷರೊಂದಿಗೆ ಒಪ್ಪಂದವೊಂದಕ್ಕೆ ಸಹಿ ಮಾಡಿದ.[215] ಆದರೆ ಈ ಒಪ್ಪಂದಗಳನ್ನು ರಾಜ ಊರ್ಜಿತಗೊಳಿಸದೆ ಅವುಗಳಿಗೆ ಮಾನ್ಯತೆ ಇರಲಿಲ್ಲ. ಅದೇ ರೀತಿ ರಾಜ್ಯಪಾಲರಿಗೆ ಇನ್ನೊಂದು ವಿಶೇಷ ಅಧಿಕಾರವಿತ್ತು. ಅದೇನೆಂದರೆ ಈ ಹಿಂದೆ ಕೆಳದಿ ರಾಜರುಗಳು ಮತ್ತು ಇತರ ರಾಜ್ಯಗಳ ನಡುವೆ ನಡೆದಿರುವ ಒಪ್ಪಂದವನ್ನು ಮುಂದುವರೆಸುವ ಅಧಿಕಾರ. ಕ್ರಿ.ಶ.1737 ಸಪ್ಟೆಂಬರ್ ತಿಂಗಳಲ್ಲಿ ಸೂರಪ್ಪಯ್ಯ, ಕೆಳದಿಯರಸರು ಮತ್ತು ಕೊಲತ್ತಿರಿ ಅರಸರ ನಡುವೆ ನಡೆದಿದ್ದ ಒಪ್ಪಂದವನ್ನು ಊರ್ಜಿತಗೊಳಿಸಿದ್ದ. ಬಹುಶಃ ಬಹಳ ದೂರದಲ್ಲಿದ್ದ ಈ ಎರಡೂ ರಾಜ್ಯಗಳ ಮುಖಂಡರು ಆಗಾಗ ಭೇಟಿ ಮಾಡಿ ಒಪ್ಪಂದ ಊರ್ಜಿತಗೊಳಿಸಲು ಸಾಧ್ಯವಿಲ್ಲದೇ ಇದ್ದಾಗ ಈ ವ್ಯವಸ್ಥೆಗಳಾಗಿರಬೇಕು. ಅದೇ ರೀತಿ ಪ್ರಾಂತೀಯ ಕೇಂದ್ರಗಳಲ್ಲಿ ಕೆಲವು ಅಧಿಕಾರಿಗಳೂ ಇದ್ದ ಮಾಹಿತಿ ದೊರೆಯುತ್ತದೆ. ವೀರಭದ್ರಯ್ಯ, ಸೂರಣ್ಣ ಮತ್ತು ಮಹದೇವಪುರದ ದೇವಪ್ಪಯ್ಯ, ಸೂರಪ್ಪಯ್ಯನ ಕೆಳಗೆ ಇದ್ದ ಇಂತಹ ಅಧಿಕಾರಿಗಳು.[216] ರಾಜರು ವಿದೇಶೀ ವ್ಯಾಪಾರಿಗಳಿಗೆ ಸಂಬಂಧಿಸಿದಂತೆ ಕೆಲವು ಫರ್ಮಾನುಗಳನ್ನು ಜಾರಿಗೊಳಿಸಿದಾಗ ಮತ್ತು ಅವುಗಳನ್ನು ಈ ರಾಜ್ಯಪಾಲರ ಬಳಿಗೆ ತಂದಾಗ ರಾಜ್ಯಪಾಲರು ಇಂತಹ ಅಧೀನ ಅಧಿಕಾರಿಗಳ ಸಹಾಯದಿಂದ ಆ ಫರ್ಮಾನುಗಳನ್ನು ಜಾರಿಗೆ ತರುತ್ತಿದ್ದರು. ಮಂಗಳೂರಿನ ರಾಜ್ಯಪಾಲನ ಆಯ್ಕೆಯಲ್ಲಿ ರಾಜರು ಎಚ್ಚರವಹಿಸುತ್ತಿದ್ದ ಇನ್ನೊಂದು ಕಾರಣ ಮಂಗಳೂರು, ಮಲಬಾರ್ ಮತ್ತು ಕೊಲತ್ತಿರಿ ಅರಸರ ರಾಜ್ಯಕ್ಕೆ ತಾಗಿಕೊಂಡಿರುವುದು. ಇವರೊಂದಿಗೆ ಕೆಳದಿಯರಸರು ಹಲವು ಬಾರಿ ಸಂಘರ್ಷಕ್ಕೆ ಇಳಿದುದು ಹಾಗೂ ತುಳುನಾಡಿನ ರಾಜರೊಂದಿಗೆ ನಿಕಟ ಬಾಂಧವ್ಯವನ್ನು ಹೊಂದಬೇಕಾದದ್ದು ಈ ಎಲ್ಲಾ ಕಾರಣಕ್ಕೆ ವಿಶೇಷ ವ್ಯಕ್ತಿಯನ್ನು ಆ ಸ್ಥಾನಕ್ಕೆ ನೇಮಿಸಲಾಗುತ್ತಿತ್ತು. ಹಾಗೆ ನೇಮಕಗೊಂಡ ಮಂಗಳೂರಿನ ರಾಜ್ಯಪಾಲನಿಗೆ ಹೆಚ್ಚಿನ ಅಧಿಕಾರವನ್ನ ನೀಡಲಾಗಿತ್ತು ಹಾಗಾಗಿ ಸೂರಪ್ಪಯ್ಯ ಈ ಭಾಗದಲ್ಲಿ ಕೆಳದಿ ಸೈನ್ಯದ ಮುಖ್ಯಸ್ಥನೂ ಆಗಿದ್ದ.[217]

ರಾಜ್ಯಪಾಲರು ತಮ್ಮ ವ್ಯಾಪ್ತಿಯ ಅಧಿಕಾರವನ್ನು ಹೊಂದಿದ್ದರೂ ವಾಣಿಜ್ಯ ವ್ಯವಹಾರಗಳು ಮತ್ತು ಇನ್ನಿತರ ಕೆಲವು ವಿಷಯಗಳಲ್ಲಿ ರಾಜ ಸ್ವತಃ ನಿಗಾ ವಹಿಸುತಿದ್ದ. ಈ ವ್ಯವಹಾರಗಳಲ್ಲಿ ನುರಿತವರಾಗಿದ್ದ

ಮಂಗೆ ನಾಯ್ಕ, ವೆಂಕಟಮಲ್ಯ, ಹರಿ ಕಾಮತ್, ಉಪೇಂದ್ರ ಕಾಮತ್ ಮುಂತಾದವರನ್ನು ಈ ಸಂಬಂಧದಲ್ಲಿ ಗಮನಿಸಬಹುದು. ಬ್ರಿಟೀಷರೊಂದಿಗೆ ವ್ಯವಹರಿಸಲು ವೀರಭದ್ರ ನಾಯಕ, ಭಟ್ಕಳದಲ್ಲಿ ಮಂಗೆ ನಾಯ್ಕನಿಗೆ ಜವಾಬ್ದಾರಿಯನ್ನು ನೀಡಿದ್ದ.[218] ರಾಜ್ಯಪಾಲರ ಅಥವಾ ಅಧಿಕಾರಿಗಳ ವರ್ಗಾವಣೆಯ ಕುರಿತಾಗಿ ನಮಗೆ ಯಾವುದೇ ಮಾಹಿತಿ ಲಭ್ಯವಾಗುವುದಿಲ್ಲ.

ಕೇಂದ್ರ ಸರಕಾರ ನೇಮಕಗೊಳಿಸಿದ ಈ ರಾಜ್ಯಪಾಲರಲ್ಲದೆ ಕೆಳದಿ ರಾಜ್ಯದಲ್ಲಿ 2ನೇ ವರ್ಗದ ಪ್ರಾಂತ್ಯದ ಆಡಳಿತಗಾರರಾಗಿದ್ದರು. ಅವರು ತುಳುನಾಡಿನ ಸ್ಥಳೀಯ ಸಾಮಂತರಸರು, ಬಲ್ಲಾಳರು ಮತ್ತು ಹೆಗ್ಗಡೆಯವರು. ಈ ಕಾಲಘಟ್ಟದಲ್ಲಿ ಅಜಿಲರು, ಬಂಗರು, ಭೈರವರಸರು, ಸಾವಂತರಸರು, ಚೌಟರಸರು ಮೊದಲಾದ ಸ್ಥಳೀಯರಸರು ಕೆಳದಿಯರಸರಿಗೆ ಅಧೀನರಾಗಿ ಸಾಮಂತರಾಗಿ ತಮ್ಮ ತಮ್ಮ ಪ್ರಾದೇಶಿಕ ವ್ಯಾಪ್ತಿಯಲ್ಲಿ ಆಳ್ವಿಕೆಮಾಡುತ್ತಿದ್ದರು. ಇಕ್ಕೇರಿಯರಸರು ಬಲಿಷ್ಠರಾಗಿದ್ದಾಗ ಈ ಸ್ಥಳೀಯರಸರನ್ನು ತಮ್ಮ ಅಧೀನದಲ್ಲಿರಿಸಿ ಅವರಿಂದ ವಾರ್ಷಿಕ ಕಪ್ಪಕಾಣಿಕೆಗಳನ್ನು ಸ್ವೀಕರಿಸಿ ಆಡಳಿತವನ್ನು ನಡೆಸುತ್ತಿದ್ದರು. ಗುರುಪುರ ನದಿಯ ದಡದಲ್ಲಿ ಸಾಲೆ ಎನ್ನುವ ಊರು ರಾಮೊರಾವ್ ಎನ್ನುವ ಅರಸನಿಗೆ ಸೇರಿದ್ದು ಅವನು 800 ಪಗೋಡಗಳನ್ನು ವೆಂಕಟಪ್ಪ ನಾಯಕನಿಗೆ ನೀಡಬೇಕಾಗಿತ್ತು ಎಂಬುದಾಗಿ ಪಿಯಾತ್ರೋ ಡೆಲ್ಲಾ ವಲ್ಲೆ ಉಲ್ಲೇಖಿಸುತ್ತಾನೆ.[219] ನಿರ್ದಿಷ್ಟವಾದ ಕಪ್ಪ ನೀಡಲಿಲ್ಲ ಎನ್ನುವ ಕಾರಣಕ್ಕೆ ಬಂಗರು, ವಿಟ್ಲದರಸರು, ಮುಂತಾದ ಸಾಮಂತರನ್ನು ಕೆಳದಿಯರಸರು ಹಲವು ಬಾರಿ ಬಂಧಿಸಿದ್ದರು. ಹಾಗಾಗಿ ಸ್ಥಳೀಯರಾಗಿ ತುಳುನಾಡಿನ ಪ್ರಾದೇಶಿಕ ಮುಖ್ಯಸ್ಥರಿದ್ದರೂ ಆಡಳಿತವು ಕೆಳದಿಯರಸರ ನಿಯಂತ್ರಣದಲ್ಲಿತ್ತು. ಅವರು ಸಾಮಾನ್ಯವಾಗಿ ಕೆಳದಿಯರಸರ ಸಾರ್ವಭೌಮತ್ವವನ್ನು ಒಪ್ಪಿಕೊಂಡು ವಾರ್ಷಿಕ ಕಪ್ಪ ಕಾಣಿಕೆಗಳನ್ನು ನೀಡುತ್ತಿದ್ದರು. ಒಟ್ಟಿನಲ್ಲಿ ಕೆಳದಿನಾಯಕರ ಮತ್ತು ತುಳುನಾಡಿನ ಸಂಬಂಧ ಕೇವಲ ವಾಣಿಜ್ಯಕ್ಕೆ ಸೀಮಿತವಾಗಿರದೆ ರಾಜ್ಯಪಾಲರ ಮೂಲಕ ಪ್ರತ್ಯಕ್ಷ ಆಳ್ವಿಕೆ ಹಾಗೂ ಸಾಮಂತರ ಮೂಲಕ ಪರೋಕ್ಷ ಆಳ್ವಿಕೆ ನಡೆಸುತ್ತಿದ್ದರೆಂದು ಹೇಳಬಹುದು.

ಹಾಗೆಯೇ ಸ್ಥಳೀಯ ರಾಜರು ಕೆಳದಿಯರಸರಿಗೆ ಮಾತ್ರವಲ್ಲದೆ ಪೋರ್ಚುಗೀಸರಿಗೂ ಕಪ್ಪ ನೀಡುತ್ತಿದ್ದುದು ಗಮನಾರ್ಹವಾಗಿದೆ. ಪೋರ್ಚುಗೀಸರೊಂದಿಗೆ ವೆಂಕಟಪ್ಪ ನಾಯಕ ಮಾಡಿದ ಪತ್ರ ವ್ಯವಹಾರದಲ್ಲಿ ಉಳ್ಳಾಲದ ರಾಣಿ ಈ ಹಿಂದೆ ಪೋರ್ಚುಗೀಸರಿಗೆ ಕಪ್ಪ ಕಾಣಿಕೆಗಳನ್ನು ಸಲ್ಲಿಸುತ್ತಿದ್ದಳೆಂದು ಸ್ಪಷ್ಟವಾಗುತ್ತದೆ.[220] ಇನ್ನು ಪೋರ್ಚುಗೀಸರು ಹೊನ್ನಾವರ, ಭಟ್ಕಳ, ಕುಂದಾಪುರ ಮತ್ತು ಮಂಗಳೂರು ರೇವುಗಳೊಂದಿಗೆ ನೇರ ಸಂಪರ್ಕ ಸಾಧಿಸಿದ್ದರು. ಸ್ಥಳೀಯ ರಾಜರಿಂದ ವಾರ್ಷಿಕ ಕಪ್ಪವನ್ನು ಅಕ್ಕಿ ಅಥವಾ ಕರಿಮೆಣಸಿನ ರೂಪದಲ್ಲಿ ಪಡೆದುಕೊಳ್ಳುತ್ತಿದ್ದರು. ಕೊಡಬೇಕಾದ ಕಪ್ಪ ಕೊಡಲಿಲ್ಲ ಎಂದು ಅಥವಾ ಅಧಿಕಾರ ಪತ್ರವಿಲ್ಲದೆ ಜಲಯಾನ ಮಾಡಿದರೆಂಬ ಕಾರಣಕ್ಕೆ ಅನೇಕ ಬಾರಿ ತುಂಡರಸರನ್ನು ಹಾಗೂ ವ್ಯಾಪಾರಿಗಳನ್ನು ತೊಂದರೆಗೆ ಒಳಪಡಿಸಿದ್ದರು.[221] ಕ್ರಿ.ಶ.1608ರಲ್ಲಿ ಇಕ್ಕೇರಿ ಮತ್ತು ಗೋವಾ ಸರಕಾರಗಳ ನಡುವೆ ಒಪ್ಪಂದವೊಂದು

ಏರ್ಪಟ್ಟಿತ್ತು. ಅದರಂತೆ ರಾಜ್ಯಪಾಲನಾದ ಡಿ.ಫ್ರೆ ಅಲೆಕ್ಸೊ ಡಿ ಮಿನೇಸಸ್, ಕ್ರಿ.ಶ.1570ರ ನಂತರ ಮುಚ್ಚಲ್ಪಟ್ಟಿದ್ದ ಬಸ್ರೂರಿನ ಸುಂಕ ಠಾಣೆಯನ್ನು ಪುನರ್‌ಚಾಲನೆಗೆ ತಂದು ಅಲ್ಲಿ ಉತ್ತರದ ಗೋವಾದಿಂದ, ದಕ್ಷಿಣದ ಕೊಚ್ಚಿನ್ನಿಂದ ಮತ್ತು ಆರ್ಮುಜ್ ಕೊಲ್ಲಿಯಿಂದ ಬರುವ ಮತ್ತು ಹೊರಹೋಗುವ ವಸ್ತುಗಳಿಗೆ ಶೇ.6 ಸುಂಕವನ್ನು ವಿಧಿಸುವ ವ್ಯವಸ್ಥೆಯಿತ್ತು.[222] ಅಂತೆಯೇ ಕ್ರಿ.ಶ.1671, ಫೆಬ್ರವರಿ 14ರಲ್ಲಿ ಸೋಮಶೇಖರ ನಾಯಕ ಪೋರ್ಚುಗೀಸರಿಗೆ ಬರೆದ ಪತ್ರದಿಂದ ಕೆಲವು ವಿಚಾರಗಳು ಸ್ಪಷ್ಟವಾಗುತ್ತದೆ. ಅದೇನೆಂದರೆ (1) ಬಂದರುಗಳಲ್ಲಿ ಸಾಮಾನು ಹಾಕುವ ಮತ್ತು ತೆಗೆಯುವ ಕೆಲಸ ನಾಯಕನ ತೆರಿಗೆ ಅಧಿಕಾರಿಗಳ ಸಮ್ಮುಖದಲ್ಲಿ ನಡೆಯಬೇಕೆಂದು ಅವನು ಅಪೇಕ್ಷಿಸುತ್ತಿದ್ದನು. (2) ಪೋರ್ಚುಗೀಸ್ ವ್ಯಾಪಾರಿಗಳ ಹಡಗುಗಳು ನಾಯಕನ ಬಂದರುಗಳಿಗೆ ಬಂದು ಸಾಮಾನು ಮಾರಿದಾಗ ಅವರು ವಿಕ್ರಯ ತೆರಿಗೆ ಕೊಟ್ಟಲ್ಲಿ ಅವುಗಳನ್ನು ನಿರಾತಂಕವಾಗಿ ಹಿಂತಿರುಗಲು ಬಿಡಲಾಗುವುದು. (3) ಪೋರ್ಚುಗೀಸರು ಕೊಟ್ಟ ಜಲಯಾನಾಧಿಕಾರ ಪತ್ರವಿದ್ದ ಬಿದನೂರು ಹಡಗುಗಳನ್ನು ಅವರು ತಡೆಯಬಾರದು (4) ಬಿದನೂರು ರಾಜ್ಯದ ಹಡಗುಗಳು ಪೋರ್ಚುಗೀಸ್ ಅಧಿಕಾರ ಪತ್ರಗಳನ್ನು ಪಡೆದು, ಅವರಿಗೆ ಸಲ್ಲುವ ತೆರಿಗೆಗಳನ್ನು ಕೊಡುವುದು.[223] ಈ ಪತ್ರದಿಂದ ತಿಳಿಯುವುದೇನೆಂದರೆ ಕರಾವಳಿಯ ಬಂದರುಗಳು ಪೋರ್ಚುಗೀಸರ ಮತ್ತು ಕೆಳದಿಯರಸರ ನಡುವೆ ಹಂಚಿ ಹೋಗಿತ್ತು. ಪೋರ್ಚುಗೀಸರ ಬಂದರುಗಳಿಗೆ ಬರುವ ಇತರ ಹಡಗುಗಳು ಅವರಿಗೆ ತೆರಿಗೆ ನೀಡಬೇಕಾಗಿತ್ತು. ಬಿದನೂರಿಗೆ ಸಂಬಂಧಿಸಿದ ಬಂದರುಗಳಲ್ಲಿ ಅವರ ತೆರಿಗೆ ಅಧಿಕಾರಿಗಳಿದ್ದು ಅವರು ಅಲ್ಲಿಗೆ ಬರುವ ಹೋಗುವ ಸರಕುಗಳಿಂದ ತೆರಿಗೆ ವಸೂಲಿ ಮಾಡುತ್ತಿದ್ದರು.

ಕರಾವಳಿ ತೀರದಲ್ಲಿ ಪೋರ್ಚುಗೀಸರು ಮೇಲುಗೈ ಪಡೆಯಲು ಮತ್ತು ಆ ಮೂಲಕ ಅವರ ನಿಯಂತ್ರಣ ಬಿಗಿಯಾಗಲು ಅವರು ಬಳಸಿದ 2 ಅಸ್ತ್ರಗಳೆಂದರೆ ಕಾರ್ಟೇಸ್ ಮತ್ತು ಖಫಿಲ್. ಕಾರ್ಟೇಜ್ ಎಂದರೆ ಸಮುದ್ರ ಮಾರ್ಗದಲ್ಲಿ ಹಡಗುಗಳು ಸಂಚರಿಸಲು ಪೋರ್ಚುಗೀಸ್ ಸರಕಾರ ಗೋವಾದಲ್ಲಿ ನೀಡುತ್ತಿದ್ದ ಜಲಯಾನಾಧಿಕಾರ ಪರವಾನಿಗೆ. ಹಾಗೆಯೇ ಪರವಾನಿಗೆ ಪಡೆದು ಸಂಚರಿಸುತ್ತಿರುವ ಹಡಗುಗಳಿಗೆ ಕಡಲುಗಳ್ಳರ ದಾಳಿಯಿಂದ ರಕ್ಷಿಸಲು ಪೋರ್ಚುಗೀಸರ ಬೆಂಗಾವಲು ನೌಕೆಗಳ ಪದ್ಧತಿಯನ್ನು ಖಫಿಲ್ ಎಂದು ಕರೆಯಲಾಗಿದೆ. ಕ್ರಿ.ಶ.1621 ಡಿಸೆಂಬರ್‌ನಲ್ಲಿ ವೆಂಕಟಪ್ಪ ನಾಯಕ ತನ್ನ ನಿಕಟವರ್ತಿಯಾದ ವಿಠಲ ಶೆಣೈಯನ್ನು ಗೋವಾದ ವೈಸ್‌ರಾಯಿಯಲ್ಲಿಗೆ ಕಳುಹಿಸಿದ್ದ. ಅದರ ಉದ್ದೇಶ ಅವನು ಮೆಕ್ಕಾಗೆ (ಜಿಡ್ಡಾ) ಭಟ್ಕಳದಿಂದ ಕಳುಹಿಸಲು ಉದ್ದೇಶಿಸಿದ್ದ ವ್ಯಾಪಾರದ ಹಡಗಿಗೆ ಪೋರ್ಚುಗೀಸರ ಕಾರ್ಟೇಜ್‌ನ್ನು ಪಡೆಯುವುದಾಗಿತ್ತು.[224] ವೆಂಕಟಪ್ಪ ನಾಯಕ ಮತ್ತು ಅವನ ಉತ್ತರಾಧಿಕಾರಿಗಳು ಕಾರ್ಟೇಜ್‌ನ್ನು ಪಡೆಯಲು ಮಾತ್ರವಲ್ಲದೆ ಸುಂಕ ರಹಿತವಾಗಿ ಕುದುರೆಗಳನ್ನು ಆಮದು ಮಾಡಿಕೊಳ್ಳಲು ಪೋರ್ಚುಗೀಸರ ಪರವಾನಿಗೆ ಬೇಕಾಗಿತ್ತು. ಬಸ್ರೂರಿನ ಸಾರಸ್ವತ ವ್ಯಾಪಾರಿಗಳು, ಬಂಗರಾಜ ಇವರೆಲ್ಲರೂ ಹಡಗು ವ್ಯಾಪಾರಕ್ಕಾಗಿ ಪರವಾನಿಗೆ ಪಡೆದುಕೊಳ್ಳಬೇಕಾಗಿತ್ತು.[225] ಶಿವಪ್ಪ ನಾಯಕನ ಆಳ್ವಿಕೆಯ ಕಾಲದಲ್ಲೂ ಪೋರ್ಚುಗೀಸರು

ಜಲ ಯಾನಾಧಿಕಾರ ಪತ್ರ ಕೊಡುವ ಅಧಿಕಾರವನ್ನು ಹೊಂದಿದ್ದರು.[226] ಈ ಎಲ್ಲಾ ವಿಚಾರಗಳು ತುಳುನಾಡಿನ ಕರಾವಳಿಯಲ್ಲಿ ಪೋರ್ಚುಗೀಸರ ಹಿಡಿತವನ್ನು ದೃಢಪಡಿಸುತ್ತವೆ,

ಅದೇ ರೀತಿ ಕೆಳದಿಯರಸರು, ಪೋರ್ಚುಗೀಸರು ಮತ್ತು ಸ್ಥಳೀಯ ರಾಜರ ಅಧಿಕಾರ ವ್ಯಾಪ್ತಿಯ ನಡುವೆ ಕೆಲವೊಂದು ಸ್ಥಳೀಯಾಡಳಿತ ಸಭೆಗಳೂ ತಮ್ಮದೇ ಆದ ಅಧಿಕಾರವನ್ನು ಹೊಂದಿದ್ದರು. ಉದಾಹರಣೆಗೆ ಗಂಗೊಳ್ಳಿ ಪರ್ಯಾಯ ದ್ವೀಪವನ್ನು ತಮ್ಮದಾಗಿಸಿಕೊಳ್ಳಲು ಹವಣಿಸಿದ ಪೋರ್ಚುಗೀಸರು ಕೆಳದಿ ವೀರಭದ್ರನ ಕಾಲದಲ್ಲಿ, ಗಂಗೊಳ್ಳಿಯ ಮೇಲೆ ನ್ಯಾಯಬದ್ದ ಹಕ್ಕು ಇರುವಂತಾಗಲು ಬಸರೂರಿನ ಸ್ಥಳೀಯಾಡಳಿತ ಸಂಸ್ಥೆಯಿಂದ ದಾನಪತ್ರ ಪಡೆಯಲು ನಿರ್ಧರಿಸಿದರು. ಹಾಗೂ ಅದರಲ್ಲಿ ಸಫಲರಾದರು.[227] ಹಾಗಾಗಿ ಈ ಕಾಲಘಟ್ಟದಲ್ಲಿ ತುಳುನಾಡು ಒಂದು ಕಡೆಯಿಂದ ಕೆಳದಿಯರಸರ ಅಧಿಕಾರ ವ್ಯಾಪ್ತಿಯಲ್ಲಿದ್ದರೆ, ಇನ್ನೊಂದು ಕಡೆಯಿಂದ ಪೋರ್ಚುಗೀಸರ ಪ್ರಾಬಲ್ಯವನ್ನೂ ಕಾಣಬೇಕಾಯಿತು. ಸ್ಥಳೀಯ ರಾಜರುಗಳು ಸ್ಥಳೀಯಾಡಳಿತದ ಸಂಸ್ಥೆಗಳೂ ತಮ್ಮದೇ ನೆಲೆಯಲ್ಲಿ ತಮ್ಮ ತಮ್ಮ ಅಧಿಕಾರವನ್ನು ಹೊಂದಿದ್ದರು.

ಇನ್ನು ಯಾವ ನಾಣ್ಯ ಚಲಾವಣೆಯಲ್ಲಿತ್ತು ಎಂಬ ಆಧಾರದಲ್ಲಿಯೂ ಕೇಂದ್ರ ಪ್ರಾಂತ್ಯದ ಆಡಳಿತ ನಿಯಂತ್ರಣ ಸ್ವರೂಪವನ್ನು ಗುರುತಿಸಬಹುದಾಗಿದೆ. ಈ ಕಾಲದಲ್ಲಿ ಕೆಳದಿಯರಸರ ವರಹಗಳೇ ಪ್ರಧಾನ ನಾಣ್ಯಗಳಾಗಿತ್ತು. ತುಳುನಾಡಿನ ಕರಾವಳಿ ತೀರಗಳಲ್ಲಿ ವ್ಯಾಪಾರಕ್ಕೆ ಸುಲಭವಾಗುವಂತೆ ಪೋರ್ಚುಗೀಸ್ ವ್ಯಾಪಾರಿಗಳು ತಮ್ಮದೇ ನಾಣ್ಯಗಳನ್ನು ಬಿಡುಗಡೆಗೊಳಿಸಿದರು. ಅವುಗಳೆಂದರೆ ಸಾವೊ ತೋಮ್ಸ್(Sao tomes) ಜೆರಾಫಿಮ್(xirafim) ಮತ್ತು ಕುಜರಾತ್.(cuzrat)[228] ಕೆಳದಿಯರಸರ ಆಳ್ವಿಕೆಯ ಕಾಲದಲ್ಲಿ ತುಳುನಾಡಿನಲ್ಲಿ ಹಲವಾರು ಸ್ಥಳೀಯ ಸಾಮಂತ ಅರಸು ಮನೆತನಗಳು ಆಳ್ವಿಕೆ ನಡೆಸುತ್ತಿದ್ದರೂ ಇವರು ಯಾರು ಕೂಡ ತಮ್ಮದೆ ಆದ ನಾಣ್ಯವನ್ನ ಛಾಪಿಸುವ ಕೆಲಸಕ್ಕೆ ಕೈ ಹಾಕಲಿಲ್ಲ. ಹಾಗಾಗಿ ಇದು ಸ್ಥಳೀಯ ಅರಸರ ಸೀಮಿತ ಅಧಿಕಾರ ವ್ಯಾಪ್ತಿಯನ್ನು ತೋರಿಸುತ್ತದೆ. ಸ್ಥಳೀಯ ಅರಸರು ಕೆಳದಿಯರಸರ ವಿರುದ್ಧ ಹಲವು ಬಾರಿ ದಂಗೆಯೆದ್ದರೂ ಕೆಳದಿ ನಾಣ್ಯಗಳನ್ನೇ ತಮ್ಮ ವ್ಯವಹಾರದಲ್ಲಿ ಮುಂದುವರೆವರೆಸಿದ್ದು ಗಮನಾರ್ಹವಾಗಿದೆ.

ಈ ಎಲ್ಲಾ ಹಿನ್ನೆಲೆಗಳಲ್ಲಿ ತುಳುನಾಡಿನಲ್ಲಿ ಕೆಳದಿ ಪ್ರಭುತ್ವ ಎಷ್ಟರಮಟ್ಟಿಗೆ ಇತ್ತು ಎನ್ನುವ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಬಹುದಾಗಿದೆ. ವಿಜಯನಗರದರಸರ ನಂತರ ತುಳುನಾಡಿನ ಜನ ಕೆಳದಿಯರಸರನ್ನು ತಮ್ಮ ಮಹಾರಾಜರೆಂದು ಒಪ್ಪಿಕೊಂಡರು. ಹಾಗಾಗಿಯೇ ಕೆಳದಿಯರಸರು ತಮ್ಮ ರಾಜ್ಯಪಾಲರ ಮೂಲಕ ಈ ಭಾಗದಲ್ಲಿ ತಮ್ಮ ನಿಯಂತ್ರಣವನ್ನು ಹೊಂದಲು ಸಾಧ್ಯವಾಯಿತು. ರಾಜ್ಯಪಾಲರ ಮೂಲಕ ಆಡಳಿತ ನಡೆಸುತ್ತಿದ್ದ ಕೆಳದಿಯರಸರು ತುಳುನಾಡಿನ ಕೆಲವು ಪ್ರದೇಶಗಳ ಮೇಲೆ ನೇರ ಹತೋಟಿ ಹೊಂದಿದ್ದರೆಂದು ತೋರುತ್ತದೆ. ಅಲ್ಲಿಯ ತೆರಿಗೆಯನ್ನು ತಾವೇ ನೇರವಾಗಿ ಸಂಗ್ರಹಿಸುತ್ತಿದ್ದರು. ಇನ್ನುಳಿದ ಪ್ರದೇಶಗಳಲ್ಲಿ ಸ್ಥಳೀಯ ರಾಜರುಗಳ ಆಡಳಿತವಿದ್ದು ಅವರೆಲ್ಲರೂ ಕೆಳದಿಯ ಸಾರ್ವಭೌಮತ್ವವನ್ನು ಒಪ್ಪಿಕೊಂಡವರೆಂದು

ಸ್ಪಷ್ಟವಾಗುತ್ತದೆ. ಹಲವು ಬಾರಿ ದಂಗೆ ಎದ್ದರಾದರೂ ಅವರು ಅದರಲ್ಲಿ ಯಶಸ್ವಿಯಾಗಲಿಲ್ಲ. ತಮ್ಮ ತಮ್ಮ ರಾಜ್ಯದ ವ್ಯಾಪ್ತಿಯಲ್ಲಿ ಅಧಿಕಾರ ನಡೆಸುತ್ತಾ ಬಂದರಾದರೂ ಕೆಳದಿಯ ನಾಣ್ಯಗಳನ್ನೇ ವ್ಯವಹಾರದಲ್ಲಿ ಮುಂದುವರೆಸಿ ಕೆಳದಿಯ ರಾಜರಿಗೆ ನಿಯಮಿತವಾಗಿ ಕಪ್ಪ ಕಾಣಿಕೆಯನ್ನು ನೀಡುತ್ತಾ ಬಂದರು. ಕನ್ನಡ ಮಾತಾಡುವ ಕರಾವಳಿ ಪ್ರದೇಶಗಳಲ್ಲಿದ್ದ ಪಾಳೆಯಗಾರರು ಮೂಲೆ ಗುಂಪಾಗಿ ಇಲ್ಲಿ ಕೆಳದಿ ನಾಯಕರ ಪ್ರತ್ಯಕ್ಷ ಆಡಳಿತ ಬಂತು. ಕೆಳದಿನಾಯಕರು ನೇಮಿಸಿದ್ದ ಆಡಳಿತವರ್ಗವೇ ರಾಜ್ಯಾಡಳಿತದಲ್ಲಿ ಹೆಚ್ಚಿನ ಪಾತ್ರ ವಹಿಸಿತ್ತೆಂದೂ ಆ ಕಾಲದ ದಾಖಲೆ ಪತ್ರಗಳು ಮತ್ತು ಪ್ರವಾಸಿಗರ ವರದಿಗಳಿಂದ ತಿಳಿದುಬರುತ್ತವೆ. ಮತ್ತೊಂದು ಕಡೆಯಲ್ಲಿ ಬೇರೆ ಬೇರೆ ಬಂದರುಗಳಲ್ಲಿ ಆಮದು, ರಫ್ತು ವ್ಯವಹಾರಕ್ಕೆ ಪೋರ್ಚುಗೀಸರು ಪಡೆಯುತ್ತಿದ್ದ ತೆರಿಗೆಯನ್ನಾಗಲೀ ಅಥವಾ ಜಲಯಾನಾಧಿಕಾರ ಪತ್ರಕ್ಕಾಗಲೀ ವಿರೋಧಿಸುವುದು ಸಾಮಂತರಸರಿಗೆ ಅಥವಾ ಕೆಳದಿಯರಸರಿಗೆ ಸಾಧ್ಯವಾಗಲಿಲ್ಲ. ಕೆಲವು ಸಂದರ್ಭಗಳಲ್ಲಿ ಪೋರ್ಚುಗೀಸರು ಅಕ್ಕಿ ಅಥವಾ ಕರಿಮೆಣಸಿನ ರೂಪದಲ್ಲಿ ಕಪ್ಪವನ್ನೂ ಸಂಗ್ರಹಿಸುತ್ತಿದ್ದರು. ಹಾಗಾಗಿ ತುಳುನಾಡಿನಲ್ಲಿ ಈ ಕಾಲದಲ್ಲಿ ಒಂದು ರೀತಿಯ ಸಮ್ಮಿಶ್ರ ವ್ಯವಸ್ಥೆ ಅಸ್ತಿತ್ವದಲ್ಲಿದ್ದು ಅದರ ನೇತೃತ್ವವನ್ನು ಕೆಳದಿಯರಸರು ಹೊಂದಿದ್ದರೆಂದು ತಿಳಿಯಬಹುದು. ಇಲ್ಲಿ ಕೆಳದಿಯ ಆಳ್ವಿಕೆ ಎಂದರೆ ನೇರವಾದ ಆಳ್ವಿಕೆ ಎಂಬರ್ಥವಲ್ಲ. ಹಾಗೆಂದು ನೇರ ಆಳ್ವಿಕೆ ಇರಲಿಲ್ಲವೇ ಎಂದರೆ ಇರಲಿಲ್ಲ ಎಂದೂ ಹೇಳುವ ಹಾಗಿಲ್ಲ. ಹಾಗಿತ್ತು ಅಂದಿನ ತುಳುನಾಡಿನ ಸ್ಥಿತಿಗತಿ. ಬಂಗರು, ಚೌಟರು, ಅಜಿಲರು, ಸಾವಂತರು, ಭೈರವರಸರು, ಡೊಂಬ ಹೆಗ್ಗಡೆಯಂತಹ ಸ್ಥಳೀಯ ಅರಸರ ಆಳ್ವಿಕೆ ಒಂದು ಕಡೆಯಾದರೆ ಇವರೆಲ್ಲರಿಗೆ ಸಾರ್ವಭೌಮರ ರೂಪದಲ್ಲಿ ತಮ್ಮ ಅಧಿಕಾರವನ್ನು ಪ್ರತಿಷ್ಠಾಪಿಸಿದ ಕೆಳದಿಯರಸರು, ಹಾಗೆಯೇ ರಾಜಕೀಯ ಆರ್ಥಿಕ ಮೇಲಾಟಕ್ಕೆ ಪ್ರಯತ್ನಿಸುತ್ತಿದ್ದ ಪೋರ್ಚುಗೀಸರು ಹೀಗೆ ವಿವಿಧ ನೆಲೆಗಳಲ್ಲಿ ಈ ಕಾಲಘಟ್ಟದ ಆಡಳಿತ ನಿಯಂತ್ರಣ ಸ್ವರೂಪವನ್ನು ಗುರುತಿಸಬಹುದಾಗಿದೆ.

**ಅಡಿಟಿಪ್ಪಣಿಗಳು**

1. ಹೆರಂಜೆ ಕೃಷ್ಣ ಭಟ್, ಮುರಳೀಧರ ಉಪಾಧ್ಯ,(ಸಂ) 1995, ಗೋವಿಂದ ಪೈ ಸಂಶೋಧನ ಸಂಪುಟ(ಲೇ) ಮಂಜೇಶ್ವರ ಗೋವಿಂದ ಪೈ. ತುಳುನಾಡು ಪೂರ್ವಸ್ಮೃತಿ, ರಾ.ಕ.ಗೋ.ಪೈ.ಸಂ.ಕೇ. ಉಡುಪಿ, ಪು.584,85
2. ಅದೇ, ಪು.584
3. ಮೋಹನಕೃಷ್ಣ ರೈ, 2012, ತುಳುನಾಡು ಕನ್ನಡನುಡಿ, ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. ಪು.59
4. S.I.I. Vol.VII. No.207
5. ಹೈವೆ ಪ್ರದೇಶವು, ಉತ್ತರದಲ್ಲಿ ಕುಮಟಾ ತಾಲೂಕಿನ ಅಘನಾಶಿನಿ ನದಿಯಿಂದ ದಕ್ಷಿಣದಲ್ಲಿ ಭಟ್ಕಳ ತಾಲೂಕು, ಪೂರ್ವದಲ್ಲಿ ಪಶ್ಚಿಮ ಘಟ್ಟದಿಂದ ಪಶ್ಚಿಮದಲ್ಲಿ ಅರಬ್ಬೀ ಸಮುದ್ರದವರೆಗೆ ಹಬ್ಬಿತ್ತು; ಗಣಪತಿ ಗೌಡ, ಎಸ್, 2008, ಸಿಸುಗಲಿ ಪಾಂಡ್ಯರು ಮತ್ತು ಚಂದಾವರ ಕಾದಂಬರು, ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ, ಧಾರವಾಡ ಪು.15
6. ಸಪ್ತ ಕೊಂಕಣ ವ್ಯಾಪ್ತಿಯ ಕುರಿತು ಚರ್ಚೆಗಳಿದ್ದರೂ ಇಂದಿನ ಕಾರವಾರದಿಂದ ಭಟ್ಕಳದವರೆಗಿನ ತೀರ ಪ್ರದೇಶವನ್ನು ಕೊಂಕಣ–900 ಎಂದು ಪರಿಗಣಿಸಬಹುದು; ಗಣಪತಿ ಗೌಡ.ಎಸ್, ಅದೇ, ಪು.13
7. K.I.Vol 3, pt I, No.79,
8. K.I.Vol. I, Nos.62,63,64,67,68,69. K.I.Vol 3 part I No.72 ,79,
9. A.R.No..528 for 1928-29.
10. S.I.I.Vol.VII.Nos.309,310,315,340,350
11. M.A.R.for 1928-29.

12. ಕ್ಷೇತ್ರಕಾರ್ಯ; ಪಂಜುರ್ಲಿ ಪಾಡ್ದನದಲ್ಲಿ ಭೋಜ ಅಜಲ ಅಡ್ತಲೆ; ಮೋಹನ ಕೃಷ್ಣ ರೈ ಪೂರ್ವೋಕ್ತ, ಪು.56
13. ಕ್ಷೇತ್ರಕಾರ್ಯ; ಪಂಜುರ್ಲಿ ಪಾಡ್ದನದಲ್ಲಿ ಭೋಜ ಅಜಲ ಅಡ್ತಲೆ; ಮೋಹನ ಕೃಷ್ಣ ರೈ ಪೂರ್ವೋಕ್ತ, ಪು.56
14. ನಾಗೇಗೌಡ ಎಚ್.ಎಲ್, 1966, ಪ್ರವಾಸಿ ಕಂಡ ಇಂಡಿಯಾ ಸಂ.2, ಪ್ರಸಾರಾಂಗ, ಮೈವಿವಿ, ಪು.280
15. ಮೋಹನಕೃಷ್ಣ ರೈ, ಪೂರ್ವೋಕ್ತ, ಪು.52, ಪು.39
16. Gururaj Bhat p.1975,Studies in Tuluva History and Culture, Manipal, P.19
17. ಮೋಹನಕೃಷ್ಣ ರೈ, ಪೂರ್ವೋಕ್ತ, ಪು.41
18. Edward Grey, 1892,( translated )The Travelle of Pietro Della valle in India, London, Vol.II. pp.220-22
19. ಗಂಗಾನಾಯಕ್(ಸಂ), ಕೆಳದಿ ಅರಸರ ಶಾಸನ ಸಂಪುಟ. ಅದೇ, ಪು.81
20. ಮೋಹನ ಕೃಷ್ಣ ರೈ. ಅದೇ, ಪು.49
21. ಮೋಹನ ಕೃಷ್ಣ ರೈ. ಅದೇ, ಪು.49
22. Suryanath kamath,(ed) 1983, Karnataka state Gazetteer, Banglore, p.14.
23. ಗುಂಡಾ ಜೋಯಿಸ ಕೆಳದಿ, 1973, ಲಿಂಗಣ್ಣ ಕವಿ ಕೆಳದಿ ನೃಪವಿಜಯ, ಕ.ಸಾ.ಪ.ಬೆಂ, ಪು.14
24. Dames (1918), (translated) Barbosa, The Book of Duarte Barbosa: An account of the countries boardering on the Indian Ocean and their inhabitants I, p.199.
25. Edward Grey, Op.cit, pp.220-22
26. ಶಾಸ್ತ್ರಿ ಬಿ.ಎಸ್, 1972, ಕೆಳದಿ ಅರಸರು ಹಾಗೂ ಪೋರ್ಚುಗೀಸರು ಕರ್ನಾಟಕ ವಿ.ವಿ ಧಾರವಾಡ, ಪು.65
27. ಶೆಟ್ಟಿ ಎಸ್.ಡಿ.(ಸಂ) ಚದುರ ಚಂದ್ರಮ, ಕಾರ್ಕಳ ಗೊಮ್ಮಟೇಶ್ವರ ಚರಿತ್ರೆ, ಧರ್ಮಸ್ಥಳ, ಪು.8.9.
28. Vasantha madhava K.G,1991, Western Karnataka Its Agrarian relations, Delhi, p.5
29. Kanara, Gazetteer of Bombay presidency,p.125
30. John Sturrock,1864, Madras District Manuals, South canara,2 volumes, Madras, P.229.
31. E.C.Vol.VII Sh No.7; MAR,1933, No,30,p.195;Francis Buchanan, 1870, Journey from Madras through the countries of Mysore, Canara and Malabar, II edition, Madras, p.249
32. ARSIE, 1939,Ap.A, No. 1.
33. Robert Sewell, 1894, A Forgotten empire, New Delhi, p.229
34. Sreedhar Menon, 1922 (ed) Cannanore District Gazetteer, Trevendrum, p.8
35. ಗುಂಡಾ ಜೋಯಿಸ ಕೆಳದಿ, 1977, ಗದ್ಯಾನುವಾದ–ಲಿಂಗಣ್ಣ ಕವಿಯ ಕೆಳದಿ ನೃಪ ವಿಜಯ, ಕಸಾಪ ಬೆಂಗಳೂರು, ಪು.103
36. ಕ್ಷೇತ್ರ ಕಾರ್ಯದ ಮಾಹಿತಿ
37. Buchanan,II, Op.cit, pp. 212-213
38. Buchanan II, Op.cit, p. 213
39. Edward Grey, Op. Cit, P.353
40. ಕೆ.ಜಿ. ವಸಂತ ಮಾಧವ, 1988, ಮೂಲಿಕೆ ಇತಿಹಾಸ, ಮೂಲ್ಕಿ, ಪು74,75: Vasantha madhava. K.G, 1991, Western Karnataka Its Agrarian relations, Delhi ಪು. 13, 14
41. ಶಾಸ್ತ್ರಿ ಬಿ.ಎಸ್, 1975, ಕೆಳದಿಯ ಅರಸರು ಹಾಗೂ ಪೋರ್ಚುಗೀಸರು, ಧಾರವಾಡ, ಪು.144
42. Vasantha Madhava, K.G, Op.Cit, PP,13,14
43. Buchanan, II, Op.cit, p.272
44. ನಾಗೇಗೌಡ ಎಚ್.ಎಲ್. ಪೂರ್ವೋಕ್ತ, ಪು.257,58
45. Heras Henry, The expansion of wars of Venkatappa Nayaka of Ikkeri,1928, PIHRC, XI.p.108-113
46. Buchanan,II, Op.cit, p.275
47. ARSIE,1939, Ap A No.1
48. Buchanan,II, Op.cit, p.277
49. Buchanan,II, Op.cit, p.274
50. ವಿವೇಕ ರೈ. ಬಿ.ಎ, (ಸಂ) 2007, ತುಳುಸಾಹಿತ್ಯ ಚರಿತ್ರೆ, ಲೇ ಮೋಹನ ಕೃಷ್ಣ ರೈ. ತುಳುನಾಡಿನ ಭೌಗೋಳಿಕ ಎಲ್ಲೆ ಕಟ್ಟುಗಳು. ಪು.32 ಪ್ರಸಾರಾಂಗ ಕ.ವಿ.ವಿ.ಹಂಪಿ, ಪು.3.
51. ಮೋಹನ ಕೃಷ್ಣ ರೈ. ಅದೇ, ಪು.68
52. ARSIE, 1930-31, No.351; ರಮೇಶ್.ಕೆ.ವಿ, 1978, ತುಳುನಾಡಿನ ಶಾಸನಗಳು, ರಾ.ಕ.ಗೋ.ಪೈ.ಸಂ.ಕೇ. ಉಡುಪಿ. ಪು.42,
53. ಗಣಪತಿ ರಾವ್ ಐಗಳ್, 1924, ಮಂಜೇಶ್ವರ, ಕುಂಬಳೆ ಸೋಮನಾಥರಸರ ಶಾಸನ. ಪು.23
54. Gururaj Bhat p,1975, Op.Cit, p. 142
55. B.A Saletore,1936, Ancient Karnataka,Vol.I, History of Tuluva, poona p.56; Gururaj Bhat p, Op.Cit, p.18

56. ರಮೇಶ್, ಕೆ.ವಿ, 1968, ತುಳುನಾಡಿನ ಇತಿಹಾಸ. ಮೈಸೂರು. ಪು.26
57. ಈ ಕುರಿತು ಹಲವು ಶಾಸನಗಳು ಉಲ್ಲೇಖಿಸುತ್ತವೆ. ಇತ್ತೀಚೆಗೆ ಪೊಳಲಿಯಲ್ಲಿ ದೊರೆತ ಆಳುಪರ ಶಾಸನ'. ಆಳ್ವಖೇಡ 6000'ವನ್ನು ಉಲ್ಲೇಖಿಸಿದ ತುಳುನಾಡಿನಲ್ಲಿ ದೊರೆತ ಮೊದಲ ಶಾಸನ.
58. Gururaj Bhat.Op. Cit, p 25-41
59. Ramesh, K.V, 1970, A History of South Canara – Karnataka University Dharwar.PP. 47-48
60. Ibid. P-31, 68
61. ರಮೇಶ್ ಕೆ.ವಿ ಮತ್ತು ಎಂ.ಜೆ.ಶರ್ಮ, 1985, ತುಳುನಾಡಿನ ಅರಸು ಮನೆತನಗಳು, ಪು.2,5,7
62. Ramesh, K.V, OP. Cit .PP -148-149
63. EC,Vol.V,Pt I, Bl.No, 58, 71.
64. EC,Vol.V,Part I, Hn.69
65. Ramesh, K.V, OP. Cit . PP -138-139, ARSIE 1928-29, No 492: Ibid in 1931-32, No 262.
66. Gururaj Bhat p, Op. Cit, PP 46-50
67. ವೆಂಕಟೇಶ್ ಜೋಯಿಸ್ ಕೆಳದಿ, 1979, ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಕ.ಸಾ.ಪ. ಬೆಂಗಳೂರು, ಪು.4
68. ಅದೇ, ಪು.2, 3
69. S.I.I,IX, pt II, No.655, 659
70. S.I.I, IX, pt,II No.674
71. ARSIE 1930-31, . Nos 331, 562, 564
72. ಗಂಗಾನಾಯಕ್(ಸಂ), ಕೆಳದಿ ಅರಸರ ಶಾಸನ ಸಂಪುಟ. ಪೂರ್ವೋಕ್ತ, ಸಂಖ್ಯೆ 12, ARSIE, 1930-31, No 348,
73. ಗಂಗಾನಾಯಕ್, (ಸಂ), ಕೆಳದಿ ಅರಸರ ಶಾಸನ ಸಂಪುಟ. ಪೂರ್ವೋಕ್ತ, ಸಂ. 10,
74. ಗಂಗಾನಾಯಕ್, (ಸಂ), ಕೆಳದಿ ಅರಸರ ಶಾಸನ ಸಂಪುಟ. ಪೂರ್ವೋಕ್ತ, ಸಂ. 26, 28.
75. S.I.I, VOL.VII, No.366
76. ಗುಂಡಾ ಜೋಯಿಸ ಕೆಳದಿ, ಪೂರ್ವೋಕ್ತ, ಪು. 99–105
77. ಜೋಯಿಸ ಗುಂಡಾ ಕೆಳದಿ, ಪೂರ್ವೋಕ್ತ, ಪು. 105
78. ನಾಗೇಗೌಡ, ಪೂರ್ವೋಕ್ತ, 217–18
79. ಶಾಸ್ತ್ರಿ ಬಿ.ಎಸ್, ಕೆಳದಿ ಅರಸರು ಮತ್ತು ಪೋರ್ಚುಗೀಸರು, 1972 ಪು.12 ಕರ್ನಾಟಕ ವಿಶ್ವವಿದ್ಯಾನಿಲಯ ಧಾರವಾಡ
80. DRI, II P.294
81. ಶಾಸ್ತ್ರಿ ಬಿ.ಕೆ, ಕೆಳದಿ ಅರಸರು ಮತ್ತು ಪೋರ್ಚುಗೀಸರು, 1972 ಪು.41 ಕರ್ನಾಟಕ ವಿಶ್ವವಿದ್ಯಾನಿಲಯ ಧಾರವಾಡ
82. Heras, Henry, Op. cit P.5
83. Heras Henry ,Op. cit pp.5-7
84. Pissurlencer, P.S.S., Vol- I, PP. 513,14
85. Pissurlencer, P.S.S, Op.Cit,Vol- I, PP. 536-41
86. Biker, J.E.J collecedeao de tratados & concertos de pages I, PP, 277
87. Pissurlencer, P.S.S, Assentos I, Op. Cit, PP 391-3
88. Pissurlencer, P.S.S, Assentos I, Op. Cit, PP -569-71
89. Pissurlencer, P.S.S, Assentos I, Op. Cit, PP -561-2
90. ಗುಂಡಾ ಜೋಯಿಸ ಕೆಳದಿ, ಕೆನ್ಯಎ. ಪೂರ್ವೋಕ್ತ, ಪುಟ 136
91. Pissurlencer, P.S.S, Assentos, III, Op. Cit, PP-211-2.
92. Pissurlencer, P.S.S, Assentos, III, Op. Cit, P.559
93. Fcster and Fawcett Charles, (Oxford New series1936,1954.) Vol.I and III English Factories in India, 1661-1664, P-342
94. Pissurlencer, P.S.S, Assentos, IV, Op. Cit, PP. 552-3
95. Pissurlencer, P.S.S, Assentos, IV, Op. Cit, PP 537-38
96. Pissurlencer, P.S.S, Assentos, IV, Op. Cit, PP 545-7
97. Pissurlencer, P.S.S, Assentos, IV, Op. Cit, PP 564-5
98. ವೆಂಕಟೇಶ್ ಜೋಯಿಸ್ ಕೆಳದಿ, ಪೂರ್ವೋಕ್ತ, ಪು.57
99. Pissurlencer, P.S.S, Assentos, IV, Op. Cit, PP 226
100. Pissurlencer, P.S.S, Assentos, IV, Op. Cit, PP 314-5
101. ಶಾಸ್ತ್ರಿ ಬಿ.ಎಸ್, ಕೆಳದಿ ಅರಸರು ಮತ್ತು ಪೋರ್ಚುಗೀಸರು, ಪೂರ್ವೋಕ್ತ, ಪು.131
102. Moncoes, No.73, fl.1; Apo-BP, pp.453-6
103. Shastry.B.S, Goa –kanara- Portuguese Relations, OP. Cit, p.227

104. APO (BP) Op. Cit, pt II PP 79-80
105. APO (BP), op.cit; pt,.II,PP 90-4
106. APO (BP) OP Cit; PP-97-106
107. ಗಣಪತಿ ರಾವ್ ಐಗಳ್ ಎಂ, 2004, ದ.ಕ. ಜಿಲ್ಲೆಯ ಪ್ರಾಚೀನ ಇತಿಹಾಸ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ (ದ್ವಿತೀಯ ಮುದ್ರಣ) ಅ.ಸಂ16, ಪು.333
108. Danvers F.C, The portuguese in India II, P.423.
109. LCC, II 1747-1769 FLS.I 41-2
110. LCC, II 1747-1769 FLS.I
111. LCC, II 1747-1769 FLS
112. ಚಿನ್ನಸ್ವಾಮಿ ಸೋಸಲೆ, ಎನ್ (ಸಂ) ಕರಾವಳಿ ಕರ್ನಾಟಕದ ಜೈನ ಅರಸು ಮನೆತನಗಳು–ಸಾಂಸ್ಕೃತಿಕ ಅಧ್ಯಯನ, 2014, ಪ್ರಸಾರಾಂಗ ಕವಿವಿ.ಹಂಪಿ, ಲೇ, ರವಿರಾಜ ಬಲ್ಲಾಳ, ಪು. 452
113. ಚಿನ್ನಸ್ವಾಮಿ ಸೋಸಲೆ. ಎನ್.(ಸಂ) ಪೂರ್ವೋಕ್ತ, ಪು.452
114. ಹೆರಂಜೆ ಕೃಷ್ಣ ಭಟ್, ಎಸ್.ಡಿ.ಶೆಟ್ಟಿ(ಸಂ) 2000, ತುಳು ಕರ್ನಾಟಕ ಅರಸು ಮನೆತನಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.ಪು.78
115. ಪೂವಪ್ಪ ಕಣಿಯೂರು, 2017, ಕುಕ್ಕೆಯಲ್ಲಿ ನಾಗರ ಮಡಿಕೆ, ತರಂಗಿಣಿ ಪ್ರಕಾಶನ ಸುಳ್ಯ, ಪು.16
116. ಪೂವಪ್ಪ ಕಣಿಯೂರು, ಅದೇ.
117. ರಾಮ ಭಟ್ ಉಪ್ಪಂಗಳ, 1994. ಗಡಿನಾಡು ಕಾಸರಗೋಡು, ಅಕಲಂಕ ಪ್ರಕಾಶನ, ಉಡುಪಿ, ಪು.33
118. ಗುಂಡಾ ಜೋಯಿಸ ಕೆಳದಿ, ಪೂರ್ವೋಕ್ತ, ಪು. 103
119. ಚಿನ್ನಸ್ವಾಮಿ ಸೋಸಲೆ. ಎನ್. (ಸಂ) ಪೂರ್ವೋಕ್ತ, ಪು.310,
120. ಚಿನ್ನಸ್ವಾಮಿ ಸೋಸಲೆ. ಎನ್. (ಸಂ) ಪೂರ್ವೋಕ್ತ, ಪು.310, ಲೇ.ಉಪ್ಪಂಗಳ ರಾಮ ಭಟ್, ಕುಂಬಳೆ ಅರಸು ಮನೆತನ, ಪು.268
121. ಚಿನ್ನಸ್ವಾಮಿ ಸೋಸಲೆ. ಎನ್. (ಸಂ) ಅದೇ,ಪು.269
122. ಗುಂಡಾ ಜೋಯಿಸ ಕೆಳದಿ, ಕೆನ್ನವಿ. ಪೂರ್ವೋಕ್ತ, ಪು.163
123. ಗಣಪತಿ ರಾವ್ ಐಗಳ್, ಪೂರ್ವೋಕ್ತ, ಪು. 303
124. Chitinis K.N, 1974, keladi polity, –Dharwar P.50
125. Gururaj Bhat, op.cit.P.134
126. ಗಣಪತಿರಾವ್ ಐಗಳ್, ಪೂರ್ವೋಕ್ತ, ಪು.362
127. ಚಿನ್ನಸ್ವಾಮಿ ಸೋಸಲೆ. ಎನ್. (ಸಂ) ಪೂರ್ವೋಕ್ತ, ಲೇ, ಕೆ.ಜಿ.ವಸಂತ ಮಾಧವ, ಪು.431
128. ಗುಂಡಾ ಜೋಯಿಸ ಕೆಳದಿ, ಕೆನ್ನವಿ. ಪೂರ್ವೋಕ್ತ, ಪು.71. Heras Henry, Op. Cit, pp.108-113
129. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.13–14; Edward Grey,The Travells, Op.cit,Vol II,352-353
130. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.144
131. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.144
132. G.M. Moreas, 1927, Manglore-A Historical sketch, p.38
133. SII.Vol.VII.Nos, 249, 250
134. Vasantha madhava K.G,1976, Political History of canara 1565-1763; Unpublished P.hd. Thesis Karnataka university , P.210.
135. Umanath Shenoy, 1997 An article,Gopalakrishna Temple Copper Plate inscription of Shankaradevi Ajila, Journal of Mythic society,Vol.LXXXVIII. PP.43-44; ಮೂಡಬಿದ್ರಿ ಜೈನ ಮಠದ ತಾಮ್ರ ಶಾಸನ
136. ಗುಂಡಾ ಜೋಯಿಸ ಕೆಳದಿ, ಕೆನ್ನವಿ. ಪೂರ್ವೋಕ್ತ, ಪು.101
137. ಗುಂಡಾ ಜೋಯಿಸ ಕೆಳದಿ, ಕೆನ್ನವಿ. ಪೂರ್ವೋಕ್ತ, ಪು.105
138. Pissurlencer,P.S.S, Assentos, IV, Op. Cit. 552-3
139. D–AB, I.P.40-1
140. D–AB,11, P-471
141. Heras. Henry, Op. cit PP-111
142. Pissurlencer,P.S.S, Assentos, I, Op. Cit PP. 391-3
143. Pissurlencer,P.S.S, Assentos, I, Op. Cit 448-50; 559-60
144. ಗುಂಡಾ ಜೋಯಿಸ ಕೆಳದಿ, ಕೆನ್ನವಿ. ಪೂರ್ವೋಕ್ತ, ಪು. 162
145. ARSIE,1929-30, No. 562.
146. ಗಣಪತಿರಾವ್ ಐಗಳ್, ಪೂರ್ವೋಕ್ತ, 350, 351
147. ARSIE 1931-32, No.A-4
148. ಹೆರಂಜೆ ಕೃಷ್ಣ ಭಟ್, ಎಸ್.ಡಿ.ಶೆಟ್ಟಿ, (ಸಂ) ಪೂರ್ವೋಕ್ತ, ಪು.141
149. ಹೆರಂಜೆ ಕೃಷ್ಣ ಭಟ್, ಎಸ್.ಡಿ.ಶೆಟ್ಟಿ, (ಸಂ) ಪೂರ್ವೋಕ್ತ, ಪು.141

150. Heras Henry, 1927, Araveedu Dynasty of Vijayanagara Vol I, Madras, pp,189.
151. ಹೆರಂಜೆ ಕೃಷ್ಣ ಭಟ್, ಎಸ್.ಡಿ.ಶೆಟ್ಟಿ (ಸಂ) ಪೂರ್ವೋಕ್ತ, ಪು.161
152. ಚಿನ್ನಸ್ವಾಮಿ ಸೋಸಲೆ. ಎನ್. (ಸಂ) ಪೂರ್ವೋಕ್ತ, ಲೇ, ಪೀಟರ್ ವಿಲ್ಸನ ಪ್ರಭಾಕರ್, ಪುತ್ತಿಗೆ ಮೂಡಬಿದಿರೆಯ ಚೌಟ ಅರಸರು. ಪು.376
153. ಚಿನ್ನಸ್ವಾಮಿ ಸೋಸಲೆ. ಎನ್.(ಸಂ) ಅದೇ, ಪು.377
154. ವಸಂತ ಮಾಧವ ಕೆ.ಜಿ, ಅಬ್ಬಕ್ಕ ದೇವಿಯರು, ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಪು.41
155. ಚಿನ್ನಸ್ವಾಮಿ ಸೋಸಲೆ. ಎನ್. (ಸಂ) ಪೂರ್ವೋಕ್ತ, ಪು.380
156. Pissurlencer,P.S.S, Assentos,II, Op.Cit, P.50; B.S.Shastry,The Portuguese in canara, p.76
157. ಹೆರಂಜೆ ಕೃಷ್ಣ ಭಟ್, ಎಸ್.ಡಿ.ಶೆಟ್ಟಿ,(ಸಂ) ಪೂರ್ವೋಕ್ತ, ಪು.141
158. Panikkar, K.M, India and the Indian Ocean Publisher, p.56
159. Panikkar, K.M, India and the Indian Ocean, p.56
160. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, 85
161. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, 85
162. Pissurlencer,P.S.S, Assentos, IV Op.Cit, PP, 552-3
163. Pissurlencer,P.S.S, Assentos, IV, Op.Cit, PP-540-1
164. Indo Lustiyana,1975, - 5, ed 12, No. 1, P.45
165. Foster and Fawcett Charles, Op.Cit, P 350; Pissurlencer, P.S.S, Assentos, IV, Op. Cit, P.543
166. Pissurlencer, P.S.S, Assentos, IV, Op.Cit, PP-549-52;Alvares Arnest, 1930, The nayakas of Ikkeri, Mumbai University , p.197
167. ಶಾಸ್ತ್ರಿ ಬಿ.ಎಸ್, ಕೆ.ಅ.ಹಾ.ಪೋ. ಪೂರ್ವೋಕ್ತ, ಪು.172
168. Lcc .11-fls-76-7
169. Lcc .11-fls-77-8
170. Lcc .11.- fls-98-9
171. Lcc .11.- .- fls-107
172. Foster, English Factories in India. 1618-21, Op. Cit, PP. 61-70
173. ಶಾಸ್ತ್ರಿ ಬಿ.ಎಸ್, ಕೆ.ಅ.ಹಾ.ಪೋ, ಪೂರ್ವೋಕ್ತ, ಪುಟ.20
174. Alvarese, Nayakas of Ikkeri, Op. Cit, p.197
175. Peter Mundy, The travels of Peter Mundy in Europe and Asia, Vol III Pt I, A new account of the East Indies, Haklyut Society London,1919. P.72, 73-85Foster, English Factories in India, 1637-41P 6
176. Peter Mundy, Ibid
177. Peter Mundy, Ibid, PP105-106
178. Peter Mundy, Ibid, P, 74
179. Foster and Fawcett, English Factories in India,1646-50, P. 74
180. Foster, English Factories in India. 1618-21 P.1
181. Pissurlencer, P.S.S, Assentos, IV PP-540-1
182. Abhishankar.k, 1973, Karnataka State Gazetteers, South Kanara District, Bangalore –.p.61.
183. (ಪಣಿಕ್ಕರ್) ಕಣ್ಣನೂರಿನ ರಾಜ
184. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.12
185. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.121
186. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.151
187. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.48
188. ARSIE,1928-29, No.487, p.46
189. ARSIE,1928-29, No.487, p.46
190. ಗಂಗಾ ನಾಯಕ್, (ಸಂ) ಕೆಅಶಾಸಂ. ಪೂರ್ವೋಕ್ತ, ಪು.81,
191. Chitnis.K.N. 1974, Keladipolity, Dharwar – p,88
192. ವೆಂಕಟೇಶ್ ಜೋಯಿಸ್ ಕೆಳದಿ, ಪೂರ್ವೋಕ್ತ, ಪು.151
193. Chitnis. K.N.Op.Cit, p.88, 89.
194. ವಸಂತ ಮಾಧವ. ಕೆ.ಜಿ, 1999, ಕಕರಾಇಸಂ, ನಮ್ಮ ಅನಂತ ಪ್ರಕಾಶನ ಪಾವಂಜೆ, ಪು.116
195. ವೆಂಕಟೇಶ್ ಜೋಯಿಸ್ ಕೆಳದಿ (ಲೇ), 2005, ಇತಿಹಾಸ ದರ್ಶನ ಸಂ.20, ಪು.224–236.
196. ಅಪ್ರಕಟಿತ ತಾಮ್ರ ಶಾಸನದ ಮಾಹಿತಿ, Vasantha madhava k.g, op.cit, PP.200.
197. EC,Vol.VII,sa.17, A.K.Shastry,2001,The Records of The Sringeri Matha relating to keladi, Keladi museum, p.43

198. EC,Vol.VIII, sb.301
199. EC, VIII Ti No, 97 p.544
200. EC.Vol.VII, Ti.No.83, p.522
201. ಗಣಪತಿ ರಾವ್ ಐಗಳ್ ಎಂ, ಪೂರ್ವೋಕ್ತ, ಅ.ಸಂ.8,
202. Edward Grey, Op.cit, P.346
203. ಗಣಪತಿ ರಾವ್ ಐಗಳ್ ಎಂ, ಪೂರ್ವೋಕ್ತ, ಪು.284
204 ನಾಗೇಗೌಡ, ಪೂರ್ವೋಕ್ತ, ಪು.283
205. Shastry. A.K.2001, Op.Cit, PP.24, 25
206. E.C.VI, sg, Nos,11,12,5; M.A.R, 1916, pp 66-7
207. M.A.R,1933, No.30, p.190; EC.VI, KP 46; Ibid, VII, sk 210.
208. ಗಣಪತಿ ರಾವ್ ಐಗಳ್ ಎಂ, ಪೂರ್ವೋಕ್ತ, ಅ.ಸಂ.17, 18, ಪು.335
209. ಗಣಪತಿ ರಾವ್ ಐಗಳ್ ಎಂ, ಪೂರ್ವೋಕ್ತ, ಅ.ಸಂ.3
210. ಗಣಪತಿ ರಾವ್ ಐಗಳ್ ಎಂ, ಪೂರ್ವೋಕ್ತ, ಅ.ಸಂ.8,9,20
211. Vasantha madhava k.g .1991, Western Karnataka Its Agrarian relations, Delhi, PP, 111,112
212. Chitnis op.cit p.94. Logan, Op.cit; pt.I, XXXiii, p.31
213. S.I.I.VOL.VII. No.366
214. K.N. Chitnis, op.cit, p.168
215. Logan, Malabar manual; pp.31-32
216. Logan, op. cit.XLIII, p.42
217. Logan, op.cit; pt,XXXVII, p.34
218. Peter mundy, OP. Cit, pp.92-93.
219. ಹೆಚ್.ಎಲ್. ನಾಗೇಗೌಡ, ಸುದರ್ಶನ, (ಲೇ) ಪ್ರವಾಸಿ ಕಂಡ ದಕ್ಷಿಣ ಕನ್ನಡ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ಸುದರ್ಶನ ಪು.94
220. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.34. Assentos I pp 107-10.
221. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.6
222. Sanjay Subrahmanyam,1990, The Political Economy of Commerce Southern India1500-1650, Cambridge University Press, p.245.
223. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ ಪು.–126
224. Sanjay Subrahmanyam, Op. Cit, p.245
225. Assentos I p.201; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ ಪು.40, 55
226. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.102
227. Assentos pp.256-58; ಶಾಸ್ತ್ರಿ ಬಿ.ಎಸ್, ಕೆ.ಅ.ಹಾ.ಪೋ, ಪೂರ್ವೋಕ್ತ, ಪು.51
228. Vasantha Madhava K.G, op.cit, p.183

ಅಧ್ಯಾಯ – 3

# ಕೆಳದಿ ಆಳ್ವಿಕೆಯ ಕಾಲದ ತುಳುನಾಡಿನ ಆರ್ಥಿಕ ವ್ಯವಸ್ಥೆ

ಆರ್ಥಿಕ ಇತಿಹಾಸವು, ಜೀವನದ ಭೌತಿಕ ಮೂಲಕ್ಕೆ ಸಂಬಂಧಪಟ್ಟ ವಾಸ್ತವಿಕ ಮಾನವ ಪರಿಪಾಠದ ಅಥವಾ ರೂಢಿಯ ಕಾರ್ಯಗಳ ಚರಿತ್ರೆಯಾಗಿದೆ ಎಂಬುದಾಗಿ ಸರ್ ವಿಲಿಯಂ ಆಶ್ಲೆ ನಿರೂಪಿಸುತ್ತಾರೆ.[1] ಎನ್.ಎಸ್.ಬಿ. ಗ್ರಾಸ್‌ರವರ ಪ್ರಕಾರ, ಆರ್ಥಿಕ ಇತಿಹಾಸವು ಮಾನವನು ಜೀವನೋಪಾಯವನ್ನು ಪಡೆಯಲು ಬಳಸಿದ ಅನೇಕ ಕ್ರಮಗಳ ಕಥೆಯಾಗಿದೆ.[2] ಕಾರ್ಲ್ ಮಾರ್ಕ್ಸನು ಇತಿಹಾಸಕಾರರಿಗೆ ಭೌತಿಕ ವಿವರಣೆಯನ್ನು ಪ್ರತಿಪಾದಿಸಿದ ನಂತರ, ಒಂದು ನೂತನ ದೃಷ್ಟಿಕೋನ ಈ ಕ್ಷೇತ್ರದಲ್ಲಿ ಬೆಳೆಯಿತು. ತನ್ನ ದಿನನಿತ್ಯದ ಜೀವನಾಧಾರವನ್ನು ಗಳಿಸುವುದರಲ್ಲಿ ಮಾನವನು ತೋರುತ್ತಾ ಬಂದಿರುವ ಜಾಣ್ಮೆ ಹಾಗೂ ಕೈಚಳಕ, ಸಾರಿಗೆ ಹಾಗೂ ಸಂಪರ್ಕ ಮಾಧ್ಯಮ, ಉತ್ಪಾದನೆ, ವಿತರಣೆ, ಅನುಭೋಗ, ವರ್ಗಕಲಹ, ಜನಸಂಖ್ಯಾಭಿವೃದ್ಧಿ, ಕೃಷಿ, ಕೈಗಾರಿಕೆ, ಕಲೆ, ಕೈ ಕಸುಬು, ವಾಣಿಜ್ಯೋದ್ಯಮ, ವ್ಯಾಪಾರ, ತೆರಿಗೆ ಮುಂತಾದ ಅನೇಕ ಗತಕಾಲದ ಆರ್ಥಿಕ ಕಾರ್ಯರೂಪಗಳು ಇಂದು ಅಧ್ಯಯನದ ಪ್ರಧಾನ ವಸ್ತುಗಳಾಗಿವೆ. ಯುದ್ಧ, ಆಕ್ರಮಣ, ವಸಾಹತು ಸ್ಥಾಪನೆ, ಸಾಮ್ರಾಜ್ಯಶಾಹಿ, ಪ್ರಭುತ್ವ ಮುಂತಾದ ಯಾವುದೇ ಐತಿಹಾಸಿಕ ಚಟುವಟಿಕೆಯ ಹಿಂದೆ ಆರ್ಥಿಕ ಉದ್ದೇಶಗಳಿವೆ. ಗುಲಾಮಗಿರಿ, ಊಳಿಗಮಾನ್ಯ ಪದ್ಧತಿ, ಸಾರ್ವಭೌಮತ್ವ, ಸಮತಾವಾದ, ಸಮಷ್ಟಿವಾದ ಮುಂತಾದ ಸಿದ್ಧಾಂತವನ್ನು ಕೂಡ ಇಂದು ಆರ್ಥಿಕ ಧ್ಯೇಯೋದ್ದೇಶಗಳ ಪರಿಭಾಷೆಯಲ್ಲಿ ವಿವರಿಸಲಾಗುತ್ತಿದೆ.

ಪ್ರಾಚೀನ ಕಾಲದಿಂದಲೂ ಭಾರತ ಕೃಷಿ ಪ್ರಧಾನ ದೇಶವಾಗಿದೆ. ಕೈಗಾರೀಕರಣದ ಇಂದಿನ ದಿನಗಳಲ್ಲಿಯೂ ಭಾರತದ ಬಹುಸಂಖ್ಯಾತರು ಕೃಷಿಯನ್ನೇ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಅನುಸರಿಸುತ್ತಿರುವುದು ಇಲ್ಲಿಯ ವೈಶಿಷ್ಟ್ಯತೆಯಾಗಿದೆ. ಇತಿಹಾಸ ಕಾಲದಲ್ಲಿ ಒಂದು ಪ್ರದೇಶದಲ್ಲಿದ್ದ ಆರ್ಥಿಕ ಇತಿಹಾಸವೆಂದರೆ ಅದು ಭೂ ಮತ್ತು ಭೂ ಸಂಬಂಧೀ ಇತಿಹಾಸವಾಗಿದೆ. ಅಷ್ಟರಮಟ್ಟಿಗೆ ಆರ್ಥಿಕತೆಗೆ ಕೃಷಿ ಪೂರಕವಾಗಿತ್ತು. ಕೆಳದಿಯರಸರ ಆಳ್ವಿಕೆಯ ಕಾಲದಲ್ಲಿಯೂ ಕೆಳದಿ ರಾಜರ ಆರ್ಥಿಕ ನೀತಿ ಭೂಮಿಯನ್ನು ಪ್ರಧಾನವಾಗಿ ಒಳಗೊಂಡಿದ್ದಲ್ಲದೆ, ಕೃಷಿ, ಮತ್ತು ಕೃಷಿ ಸಂಬಂಧೀ ವ್ಯಾಪಾರ ಈ ಕಾಲದ ಆರ್ಥಿಕತೆಯಲ್ಲಿ ಪ್ರಧಾನಪಾತ್ರ ವಹಿಸಿತ್ತು. ಗ್ರಾಮಗಳೇ ಪ್ರಧಾನವಾಗಿದ್ದ ಆ ಕಾಲದಲ್ಲಿ ವ್ಯಾಪಾರ ವ್ಯವಹಾರಗಳ ಹೆಚ್ಚಳದಿಂದಾಗಿ ನಗರಗಳ ಬೆಳವಣಿಗೆಯನ್ನು ಈ ಕಾಲಘಟ್ಟದಲ್ಲಿ ಗುರುತಿಸಬಹುದು. ಹಾಗೆಯೇ ದೇಶೀಯ ವ್ಯಾಪಾರದ ಜೊತೆಯಲ್ಲಿ ವಿದೇಶೀ ವ್ಯಾಪಾರಕ್ಕೂ ವಿಶೇಷವಾದ ಪ್ರಾಮುಖ್ಯತೆ ಈ ಕಾಲದಲ್ಲಿ ಸಿಕ್ಕಿತ್ತು. ಕೆಳದಿ ಅರಸರು ವಿಜಯನಗರದ ಆರ್ಥಿಕ ಹಿನ್ನೆಲೆಯ ಪ್ರಭಾವ ಹೊಂದಿದವರಾಗಿದ್ದರು. ವಿಜಯನಗರದ

ಆರ್ಥಿಕ ನೀತಿಗಳು ಹೆಚ್ಚಾಗಿ ಕೆಳದಿಯ ಕಾಲದಲ್ಲಿಯೂ ಮುಂದುವರೆಸಲ್ಪಟ್ಟವು. ವಿಜಯನಗರ ಮತ್ತು ಕೆಳದಿ ಕಾಲಗಳೆರಡರಲ್ಲಿಯೂ ಅವರ ಆರ್ಥಿಕ ನೀತಿಗಳು ತುಳುನಾಡಿನ ಜನರ ಮೇಲೆ ಪ್ರಭಾವವನ್ನು ಬೀರಿತ್ತು. ಉದಾಹರಣೆಗೆ ವಿಜಯನಗರ ಮತ್ತು ಆ ನಂತರ ಕೆಳದಿ ಕಾಲದ ಆಡಳಿತ ಪ್ರಕ್ರಿಯೆಯಲ್ಲಿ ತೆರಿಗೆಯ ಸ್ವರೂಪ ಮತ್ತು ಅದನ್ನು ಸಂಗ್ರಹಿಸುವ ಪ್ರಕ್ರಿಯೆಯಲ್ಲಿ ಬಾರ್ಕೂರು ಮತ್ತು ಮಂಗಳೂರಿನ ರಾಜ್ಯಪಾಲರು, ಸ್ಥಳೀಯ ತುಂಡರಸರು, ಅವರ ಕೆಳಗೆ ಆಳ್ವಿಕೆಯಲ್ಲಿದ್ದ ಬೀಡು ಬಲ್ಲಾಳರು, ಹೆಗ್ಗಡೆಯವರು, ಗುತ್ತು ಬಾಳಿಕೆಗಳು ಮುಂತಾದ ಸ್ಥಳೀಯ ಮುಖ್ಯಸ್ಥರು ಪ್ರಮುಖ ಪಾತ್ರವಹಿಸುತ್ತಿದ್ದರು. ಕೆಳದಿಯ ತೆರಿಗೆ ನೀತಿಯಿಂದ ಬ್ರಾಹ್ಮಣರು, ಜೈನರು ಹಾಗೂ ಬಂಟರು ಮೊದಲಾದ ಉನ್ನತ ವರ್ಗದ ಶೂದ್ರರೂ ತುಳುನಾಡಿನಲ್ಲಿ ಭೂಮಿಯ ಒಡೆಯರಾಗಿದ್ದರು. ಅದರಲ್ಲಿಯೂ ಬ್ರಾಹ್ಮಣರು ಮತ್ತು ಅವರ ಆಸ್ತಿ ಪಾಸ್ತಿಗಳಿಗೆ ಈ ಕಾಲದಲ್ಲಿಯೂ ವಿಶೇಷವಾದ ರಕ್ಷಣೆಯಿತ್ತು. ಇನ್ನು ಕೆಳದಿನಾಯಕರ ಉದಾರವಾದ ನೀತಿಯಿಂದ ವೀರಶೈವರು, ಗೌಡ ಸಾರಸ್ವತರು, ಒಕ್ಕಲಿಗ ಗೌಡರು ಮತ್ತು ಗೋವಾದಿಂದ ಆಗಮಿಸಿದ ಕ್ರೈಸ್ತರು ತುಳುನಾಡಿನಲ್ಲಿ ಭೂ ಹಿಡುವಳಿದಾರರಾದರು. ವೀರಶೈವ ಮತ್ತು ಇನ್ನು ಅನೇಕ ಧಾರ್ಮಿಕ ಸಂಸ್ಥೆಗಳಿಗೆ ಕೆಳದಿಯ ರಾಜರು ತೆರಿಗೆ ರಹಿತವಾಗಿ ಅಥವಾ ತೆರಿಗೆ ರಿಯಾಯಿತಿಯ ಭೂಮಿಗಳನ್ನು ದಾನ ಮಾಡುತ್ತಿದ್ದರು. ನಿರ್ವಾಣಯ್ಯ, ಗುರು ಬಸವಪ್ಪನಂತಹ ವೀರಶೈವ ಪ್ರಮುಖರು ದಾನ ದತ್ತಿಗಳಲ್ಲಿ ಪ್ರಮುಖ ಪಾತ್ರವಹಿಸಿದ್ದನ್ನು ಕಾಣುತ್ತೇವೆ. ಅದೇ ರೀತಿ ಕೆಳದಿ ರಾಜರ ಕಾಲದ ವ್ಯಾಪಾರ ವ್ಯವಹಾರಗಳು ವರ್ತಕ ಶ್ರೇಣಿಗಳು ವಿಜಯನಗರದ ಕಾಲದಲ್ಲಿದ್ದಂತೆ ಮುಂದುವರೆದವಾದರೂ ವಿಶೇಷವಾಗಿ ಸಾಗರೋತ್ತರ ವ್ಯಾಪಾರ ಈ ಕಾಲದಲ್ಲಿ ಹೆಚ್ಚು ಪ್ರಾಮುಖ್ಯತೆಯನ್ನು ಗಳಿಸಿತು.

ಕೆಳದಿ ಕಾಲದ ತುಳುನಾಡಿನ ಆರ್ಥಿಕ ಅಧ್ಯಯನ ಬಹಳ ವಿಶಾಲ ವ್ಯಾಪ್ತಿಯನ್ನು ಹೊಂದಿದ್ದು ಅದರಲ್ಲಿ, ಭೂ ಸಂಬಂಧಿ ಚಟುವಟಿಕೆಗಳು, ವ್ಯಾಪಾರ ಮತ್ತು ತೆರಿಗೆ ಪದ್ಧತಿ ಮತ್ತು ಆರ್ಥಿಕ ಸಂಘರ್ಷಗಳು, ಈ ವಿಚಾರಗಳನ್ನು ಅಧ್ಯಯನಕ್ಕೆ ಒಳಪಡಿಸುವುದರ ಮೂಲಕ ತುಳುನಾಡಿನ ಆರ್ಥಿಕ ವ್ಯವಸ್ಥೆಯ ಸ್ಥೂಲ ಚಿತ್ರಣ ನೀಡಬಹುದು.

**ಭೂ ಸಂಬಂಧಿ ಚಟುವಟಿಕೆಗಳು**

### 3.1 ಭೂ ನಿಯಂತ್ರಣದ ಸ್ವರೂಪ

ಕ್ರಿ.ಶ. 16ನೇ ಶತಮಾನದ ಮಧ್ಯಭಾಗದಿಂದ 18ನೇ ಶತಮಾನದ ಉತ್ತರಾರ್ಧದವರೆಗೆ ತುಳುನಾಡಿನಲ್ಲಿ ಕೆಳದಿ ಅರಸರ ಕೆಳಗೆ ಸ್ಥಳೀಯ ಅರಸರು, ಬಲ್ಲಾಳರು, ಗುತ್ತು ಮಾಗಣೆಯ ಮಟ್ಟದ ಅಧಿಕಾರಿಗಳು ಕಾಣಿಸಿಕೊಳ್ಳುತ್ತಾರೆ. ಈ ಕಾಲಘಟ್ಟದ ತುಳುನಾಡಿನಲ್ಲಿ ಭೂ ನಿಯಂತ್ರಣ ಮತ್ತು ಜಾತಿಯ ಸಂಬಂಧವನ್ನು ಇಲ್ಲಿ ಚರ್ಚಿಸಲಾಗಿದೆ. ಇಲ್ಲಿನ ಜನಸಂಖ್ಯೆ ಪ್ರಧಾನವಾಗಿ ಗ್ರಾಮೀಣ ಲಕ್ಷಣವನ್ನೇ ಮೈಗೂಡಿಸಿಕೊಂಡಿತ್ತು.

ಇಲ್ಲಿಯ ಸಾಮಾಜಿಕ ಸ್ತರಗಳು, ಜಾತಿ, ಸಂಪತ್ತು ಮತ್ತು ಭೂ ಹಿಡುವಳಿಯನ್ನು ಅವಲಂಬಿಸಿತ್ತು. ಈ ರೀತಿಯ ಭೂ ನಿಯಂತ್ರಣ ಮತ್ತು ಜಾತಿ ಸ್ವರೂಪ, ಮುಖ್ಯವಾಗಿ ಕೃಷಿ ಆರ್ಥಿಕತೆಯ ಮೇಲೆ ಪರಿಣಾಮವನ್ನು ಬೀರಿತ್ತು. ಶಾಸನಗಳು, ಕಡತಗಳು ಮತ್ತು ಪಾಡ್ದನಗಳು ತುಳುನಾಡಿನಲ್ಲಿದ್ದ ಭೂ ನಿಯಂತ್ರಣ ಮತ್ತು ಜಾತಿ ಸ್ವರೂಪವನ್ನು ವಿವರಿಸುತ್ತದೆ. ಶಾಸನಗಳು ಹಾಗೂ ಕಡತಗಳು ಮುಖ್ಯವಾಗಿ ದಾನ ದತ್ತಿಗಳ ಬಗ್ಗೆ, ಗ್ರಾಮದಲ್ಲಿ ವಿವಿಧ ಸಮುದಾಯಗಳ ಭೂ ಹಿಡುವಳಿಗಳ ಬಗ್ಗೆ ಹಾಗೂ ಗೇಣಿ ವ್ಯವಸ್ಥೆಯನ್ನು ತಿಳಿಸಿದರೆ, ಪಾಡ್ದನಗಳು ತುಳುನಾಡಿನ ಗ್ರಾಮಗಳಲ್ಲಿದ್ದ ಜಾತಿ ಸ್ವರೂಪದ ಮೇಲೆ ಬೆಳಕು ಚೆಲ್ಲುತ್ತವೆ. ಬ್ರಾಹ್ಮಣರು ತುಳುನಾಡಿನ ದೇವಾಲಯಗಳ ಪರಿಸರದಲ್ಲಿ ತಮ್ಮ ವಾಸಸ್ಥಾನವನ್ನು ಹೊಂದಿದ್ದು,[3] ದಾನ ರೂಪದಲ್ಲಿ ಬಂದಂತಹ ಫಲವತ್ತಾದ ಭೂಮಿಯನ್ನು ಹೊಂದಿದ್ದರು. ದೇವಳದ ವಿಧಿ ವಿಧಾನಗಳಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದರೆನ್ನುವ ಕಾರಣಕ್ಕೆ ಅವರು ರಾಜರುಗಳಿಂದ ಮತ್ತು ಹಲವು ವ್ಯಕ್ತಿಗಳಿಂದ ಪಟ್ಟಿ ಮಾನ್ಯ, ಸರ್ವಮಾನ್ಯ, ಉಂಬಳಿ, ಬ್ರಹ್ಮಸ್ವಂ ಮತ್ತು ಪುರೋಹಿತ ಸ್ಥಳ ಇತ್ಯಾದಿ ವಿವಿಧ ರೀತಿಯ ದಾನ ದತ್ತಿಗಳನ್ನು ಸ್ವೀಕರಿಸುತ್ತಿದ್ದರು. ಈ ಭೂಮಿಯನ್ನು ಅವರು ಅಷ್ಟ ಭೋಗತೇಜಸಾಂಮ್ಯ[4] ಅಂದರೆ 8 ಹಕ್ಕುಗಳ ಸಂಪೂರ್ಣ ಹಕ್ಕುದಾರರಾಗಿ ಸ್ವೀಕರಿಸುತ್ತಿದ್ದರು. ಕಾಲ ಕಳೆದಂತೆ ದಾನವಾಗಿ ಪಡೆದ ಭೂಮಿಯನ್ನು ಬ್ರಾಹ್ಮಣರು ತಮ್ಮ ಹಕ್ಕಿನ ಭೂಮಿಯನ್ನಾಗಿ ಪರಿವರ್ತಿಸಿಕೊಂಡದ್ದನ್ನು ಹಲವಾರು ಶಾಸನಗಳು ದೃಢಪಡಿಸಿವೆ. ರಾಜರು ಮತ್ತು ಇತರ ವ್ಯಕ್ತಿಗಳೂ ಬ್ರಾಹ್ಮಣರ ಭೂಮಿಯ ಹಕ್ಕನ್ನು ಗೌರವಿಸಿದರು.[5] ಕರಾವಳಿಯ ಮಧ್ಯಕಾಲದ ಇತಿಹಾಸವನ್ನು ನೋಡಿದಾಗ ಬ್ರಾಹ್ಮಣ ಸಮಿತಿಗಳಾದ ಮಹಾಜನ, ಜಗತು, ಜನನಿ–ಉರು ಇತ್ಯಾದಿಗಳು ಬೆಳೆದು ಬಂದಿರುವುದು ತಿಳಿಯುತ್ತದೆ. ಇದು ಕೆಳದಿಯ ಕಾಲದಲ್ಲಿಯೂ ಮುಂದುವರೆದವು. ಬಾರ್ಕೂರಿನ ರಾಜ್ಯಪಾಲ ಮಲೆದಂಡನಾಯಕ ಕ್ರಿ.ಶ.1598ರಲ್ಲಿ ತಾನು ಖರೀದಿಸಿದ್ದ ಭೂಮಿಯನ್ನು ವರಂಬಳಿಯ ಮಹಾಜನರಿಗೆ ಬಹುಮಾನವಾಗಿ ನೀಡಿದ.[6] ಬ್ರಾಹ್ಮಣರು ಬಹಳಷ್ಟು ಭೂಮಿಯನ್ನು ಈ ಭಾಗದಲ್ಲಿ ಹೊಂದಿರುವುದು ದೇವಾಲಯದ ಮೂಲಕವೇ ಆಗಿದೆ. ಭೂ ದಾನಗಳು ದೇವಾಲಯಕ್ಕೆ ನೀಡಲ್ಪಟ್ಟಾಗ ಆ ಭೂಮಿಯನ್ನು ದೇವಳದ ಆಡಳಿತ ಸಮಿತಿಯವರು ತಮ್ಮೊಳಗೆ ಹಂಚಿಕೊಳ್ಳುತ್ತಿದ್ದರು. ಸಾಮಾನ್ಯವಾಗಿ ದೇವಳದ ಸಮಿತಿಯವರು ಬ್ರಾಹ್ಮಣರಾಗಿರುತ್ತಿದ್ದರು ಎಂಬುದಾಗಿ ಕೆ.ಜಿ.ವಸಂತ ಮಾಧವರು ಅಭಿಪ್ರಾಯಪಡುತ್ತಾರೆ.[7] ಆದರೆ ಇದಕ್ಕೆ ವ್ಯತಿರಿಕ್ತವಾಗಿ ಅರಮನೆ, ಬೀಡು, ಗುತ್ತಿನ ಮಟ್ಟದ ಅಧಿಕಾರಿಗಳಾದ ಬಲ್ಲಾಳ, ಹೆಗ್ಗಡೆ ಮುಂತಾದ ಬ್ರಾಹ್ಮಣೇತರರೇ ದೇವಳದ ಆಡಳಿತದ ಮುಂಚೂಣಿಯಲ್ಲಿದ್ದುದನ್ನು ಪಾಡ್ದನಗಳಲ್ಲಿಯೂ ಗಮನಿಸಬಹುದಾಗಿದೆ. ಹಾಗೆಯೇ ವರ್ತಮಾನದಲ್ಲಿಯೂ ಆ ಪರಂಪರೆ ಮುಂದುವರೆದಿದೆ. ದೇವಾಲಯಗಳಲ್ಲಿ ಪ್ರಮುಖ ಭೂಮಿಯ ಹಕ್ಕನ್ನು ಬ್ರಾಹ್ಮಣರಿಗೆ ನೀಡಿ ಕೆಳಹಂತದ ಹಕ್ಕುಗಳನ್ನು ಶೂದ್ರರಿಗೆ ನೀಡುತ್ತಿದ್ದರು.[8] ಹಾಗಾಗಿ ದೇವಳಗಳು ಪರಸ್ಪರ ಅವಲಂಬಿತ ಮತ್ತು ಒಂದುಗೂಡಿಸುವ ಸಮಾಜ ನಿರ್ಮಾಣದ ಪ್ರಾತಿನಿಧಿಕ ಸಂಸ್ಥೆಗಳಾಗಿ ಕೆಲಸ ಮಾಡುತ್ತಿದ್ದವು. ಕಾಲ

ಕ್ರಮೇಣ ಬ್ರಾಹ್ಮಣರು ಅನೇಕ ಸಂದರ್ಭಗಳಲ್ಲಿ ಅಡಮಾನ ಭೂಮಿಗಳನ್ನು (ಅರುವರ ಭೂಮಿ) ಉನ್ನತ ಜಾತಿಯ ಶೂದ್ರರಿಂದ ಪಡೆದ ಅನೇಕ ಉದಾಹರಣೆಗಳಿವೆ. ಬಸ್ರೂರು, ಕುಂಭಾಶಿ, ಕೋಟೇಶ್ವರ, ಕಾರ್ಕಳ, ಮೂಡಬಿದ್ರಿ ಮತ್ತು ಮಂಗಳೂರಿನ ಶಾಸನಗಳು ಈ ಮಾಹಿತಿ ನೀಡುತ್ತವೆ.[9] ಆ ಮೂಲಕವೂ ಬ್ರಾಹ್ಮಣರು ಭೂ ಹಿಡುವಳಿದಾರರಾದರು.

ಕೆಳದಿ ನಾಯಕರ ಕಾಲದಲ್ಲಿ ಭೂದಾನ ವ್ಯವಸ್ಥೆ ಮುಂದುವರಿದಿತ್ತು. ಕೆಲವು ಸಂದರ್ಭಗಳಲ್ಲಿ ರಾಜರುಗಳೂ ಹಣ ನೀಡಿ ಬ್ರಾಹ್ಮಣರ ಕೈಯಿಂದ ಇಂತಹ ಭೂಮಿಗಳನ್ನು ಖರೀದಿಸಬೇಕಾಯ್ತು. ಉದಾಹರಣೆಗೆ ಕೆಳದಿ ವೀರಭದ್ರನಾಯಕ ಬಾರ್ಕೂರು ಹೋಬಳಿಯ ಶಿವಳ್ಳಿ ಸೀಮೆಯ ಕರೊಂಬಳಿ ಗ್ರಾಮದಲ್ಲಿ ಕ್ರಿ.ಶ. 1639ರಲ್ಲಿ ಕೊಣಪ್ಪ ಕೊಳ್ಳಾಲ ಎನ್ನುವವನಿಂದ ನೂರು ಗದ್ಯಾಣಗಳಿಗೆ ಭೂಮಿಯನ್ನು ಖರೀದಿಸಿದ್ದ.[10] ಕ್ರಿ.ಶ. 1712ರಲ್ಲಿ ಕೆಳದಿ ಬಸವಪ್ಪ ನಾಯಕ ತುಳುನಾಡಿನಲ್ಲಿ ಘಟ್ಟ ಪ್ರದೇಶಕ್ಕೆ ತಾಗಿಕೊಂಡಿರುವ ಹೆರತಾಳ ಸೀಮೆಯಲ್ಲಿ, ವಿಶ್ವನಾಥಪುರ ಅಗ್ರಹಾರದ ಬ್ರಾಹ್ಮಣರಿಂದ $266^3/_4$ ವರಹಗಳನ್ನು ನೀಡಿ ಭೂಮಿಯನ್ನು ಖರೀದಿಸಿದ.[11] ಹಾಗೆಯೇ ಶಿಕ್ಷಣ ನೀಡಿದ ಕಾರಣಕ್ಕಾಗಿಯೂ ಇವರಿಗೆ ದಾನ ದತ್ತಿಗಳನ್ನು ನೀಡಲಾಗಿತ್ತು. ಕೆಲವು ನಿರ್ದಿಷ್ಟ ಸ್ಥಳಗಳನ್ನು ಬ್ರಾಹ್ಮಣರಿಗೆ ನೀಡಲಾಗಿತ್ತು ಮತ್ತು ಆ ಪ್ರದೇಶಗಳಲ್ಲಿ ಪೂರ್ತಿಯಾಗಿ ಅವರು ನೆಲೆಯಾಗಿದ್ದರು. ಅವುಗಳನ್ನು ಅಗ್ರಹಾರಗಳೆಂದು ಕರೆಯಲಾಗಿದೆ. ಕೆಳದಿ ಸೋಮಶೇಖರ ನಾಯಕನು ಕ್ರಿ.ಶ.1736ರಲ್ಲಿ ತನ್ನ ಪ್ರಧಾನಿಯಾದ ಕೊಳಾಲದ ವೆಂಕಟಯ್ಯನಿಂದ ಬಂಟ್ವಾಳ ತಾಲೂಕಿನ ಶಂಭೂರಲ್ಲಿ ಸೋಮಶೇಖರಪುರವೆಂಬ ಅಗ್ರಹಾರವನ್ನು ಕಟ್ಟಿಸಿದನು. ನಾವೂರು ಗ್ರಾಮದಲ್ಲಿ ತನ್ನ ಪತ್ನಿ ಬಸವಮ್ಮಾಜಿಯ ಹೆಸರಲ್ಲಿ ಬಸವಾಂಬಾಪುರವೆಂಬ ಅಗ್ರಹಾರವನ್ನು ಕಟ್ಟಿಸಿದನು.[12] ಬಂಟ್ವಾಳ ಸಮೀಪದ ನಾಟಿ ಸರಪಾಡಿಗಳಲ್ಲಿಯೂ ಈ ಕಾಲದಲ್ಲಿ ಅಗ್ರಹಾರಗಳು ನಿರ್ಮಾಣವಾದವು. ಕುಂದಾಪುರದ ಶಂಕರನಾರಾಯಣ ಸಮೀಪದ ಸಾಂಬ ಸದಾಶಿವ ದೇವಳದ ಸಮೀಪದ ಹೊಸ ಹಾಗೂ ಹಳೆಯ ಅಗ್ರಹಾರಗಳು,[13] ಮುಂತಾದ ಅಗ್ರಹಾರಗಳು ಕೆಳದಿಯ ಕಾಲದಲ್ಲಿ ನಿರ್ಮಾಣವಾದವು.

ಕ್ರಿ.ಶ. 16ನೇ ಶತಮಾನದ ಮಧ್ಯಭಾಗದಲ್ಲಿ ಈ ಪ್ರದೇಶಕ್ಕೆ ಮಹಾರಾಷ್ಟ್ರದಿಂದ ವಲಸೆ ಬಂದ ಚಿತ್ಪಾವನ ಬ್ರಾಹ್ಮಣರು ಕೃಷಿ ಸಂಬಂಧಿತ ವಿಚಾರಗಳಲ್ಲಿ ಪ್ರಮುಖ ಪಾತ್ರವಹಿಸಿದಂತೆ ತೋರುತ್ತದೆ. ಇವರು ಕರಾವಳಿ ಹಾಗೂ ಕರಾವಳಿಯ ಒಳನಾಡಿನ ಪ್ರದೇಶಗಳಲ್ಲಿ ಅಡಿಕೆ ಕೃಷಿಯನ್ನು ಪ್ರಾರಂಭಿಸಿದರು. ಉದಾಹರಣೆಗೆ ಇವರು ಕಾರ್ಕಳ ಸಮೀಪದ ಗುಡ್ಡ ಪ್ರದೇಶಗಳಲ್ಲಿ ಸ್ಥಳೀಯ ಅರಸರಿಂದ ಭೂಮಿಯನ್ನು ಪಡೆದು ಅಲ್ಲಿ ಅಡಿಕೆ ಕೃಷಿಯನ್ನು ಮಾಡಿದರು.[14] ಕಾಲ ಕ್ರಮೇಣ ಇತರ ಬ್ರಾಹ್ಮಣರಾದ ಹವ್ಯಕರು ಮತ್ತು ಹಬ್ಬುಗಳು ತೆಂಗು, ಅಡಿಕೆ ತೋಟಗಳನ್ನು ಮಾಡಿ ಸಹ್ಯಾದ್ರಿಯ ತಪ್ಪಲಿನಲ್ಲಿ ತೆಂಗಿನ ತೋಟದ ಒಡೆಯರಾದರು.[15] ತುಳು ಪಾಡ್ದನಗಳು ಬ್ರಹ್ಮ ಪೊಲಿ(ಬ್ರಾಹ್ಮಣರಿಂದ ಬೇಸಾಯ ಮಾಡಲ್ಪಡುವ ಭೂಮಿಯು) ಬಗ್ಗೆ ಹೇಳಿದರೂ ನಿಜವಾಗಿ ಭೂಮಿಯನ್ನು ಉಳುಮೆ ಮಾಡುವವರು ಕೃಷಿ ಜೀತದಾಳುಗಳಾಗಿದ್ದರು.[16]

ಆದರೆ ಕಾರವಾರ ಪ್ರದೇಶದಲ್ಲಿ ಹಬ್ಬು ಬ್ರಾಹ್ಮಣರು ಅವರ ಭೂಮಿಯನ್ನು ಅವರೇ ಬೇಸಾಯ ಮಾಡುತ್ತಿದ್ದರು ಹಾಗಾಗಿ ಅವರನ್ನು ಇತರ ಬ್ರಾಹ್ಮಣರು ಕೆಳ ಹಂತದವರಾಗಿ ಕಂಡರು. ಒಟ್ಟಿನಲ್ಲಿ ಬ್ರಾಹ್ಮಣರು ಕೇವಲ ತಮ್ಮ ಸಂಸ್ಕೃತಿಯ ಹಿರಿಮೆ ಮಾತ್ರವಲ್ಲದೆ ಭೂಮಿಯ ಒಡೆತನದ ಕಾರಣದಿಂದಲೂ ತುಳುನಾಡಿನ ಸಮಾಜದಲ್ಲಿ ಮೇಲ್ಮೆಯನ್ನು ಹೊಂದಿದ್ದರು.

ತುಳುನಾಡಿನಲ್ಲಿ ಅಳುಪರ ಅವನತಿಯ ನಂತರ ವಿಜಯನಗರದ ಆಳ್ವಿಕೆಯ ಕಾಲದಲ್ಲಿ ಜೈನ ಸಾಮಂತ ರಾಜರುಗಳ ಉಗಮ ಈ ಭಾಗದಲ್ಲಿ ಭೂ ನಿಯಂತ್ರಣ ವಿಚಾರದಲ್ಲಿ ಒಂದು ಮೈಲುಗಲ್ಲನ್ನು ನಿರ್ಮಾಣ ಮಾಡಿತು. ಈ ಪ್ರಾದೇಶಿಕ ಮುಖ್ಯಸ್ಥರು ತಮ್ಮ ಪ್ರದೇಶಗಳಲ್ಲಿ ರಾಜರಾಗಿದ್ದು ಅರಸೊತ್ತಿಗೆಯ ಭೂಮಿಯ ಒಡೆಯರಾಗಿದ್ದರು. ಅವರು ಬಸದಿ ನಿರ್ಮಾಣದ ಮೂಲಕ ಕಾರ್ಕಳ, ಬೈಂದೂರು, ವೇಣೂರು ಹಾಗೂ ಮೂಡಬಿದ್ರಿಯಂತಹ ಜೈನ ಕೇಂದ್ರಗಳಲ್ಲಿ ಜೈನ ಯತಿಗಳಿಗೆ ಭೂದಾನ ಮಾಡುವ ಮೂಲಕ ಜೈನ ಧರ್ಮಕ್ಕೆ ಪ್ರೋತ್ಸಾಹ ನೀಡಿದರು. ಹಾಗೆಯೇ ಕೆಲವು ಪ್ರಮುಖ ವ್ಯಕ್ತಿಗಳು ಈ ರಾಜರಿಂದ ಭೂಮಿಯನ್ನು ಖರೀದಿಸಿ ಜೈನ ಧಾರ್ಮಿಕ ಸಂಸ್ಥೆಗಳಿಗೆ ದಾನ ನೀಡಿದರು.[17] ಈ ಎಲ್ಲಾ ಕಾರಣದಿಂದ ಜೈನ ಧಾರ್ಮಿಕ ಸಂಸ್ಥೆಗಳು ಬಹಳಷ್ಟು ಭೂಮಿಯ ಒಡೆತನವನ್ನು ಪಡೆದವು. ಈ ಆಸ್ತಿಯನ್ನು ಜೈನರಲ್ಲಿ ಉನ್ನತ ವರ್ಗದವರು ನೋಡಿಕೊಳ್ಳುತ್ತಿದ್ದರು.[18] ಪುರೋಹಿತ ವರ್ಗದವರಾಗಿದ್ದ ಇಂದ್ರರು ಭೂದಾನದ ಮೂಲಕ ಪಡೆದ ಭೂಮಿಯ ಒಡೆಯರಾದರು ಮತ್ತು ಇತರರಿಗೆ ಭೂಮಿಯನ್ನು ಗೇಣಿಗೆ ನೀಡುತ್ತಿದ್ದರು.[19] ಆದರೆ ಬ್ರಾಹ್ಮಣರು ದಾನ ಪಡೆದ ಮಟ್ಟದಲ್ಲಿ ಇವರು ರಾಜರಿಂದ ಭೂದಾನ ಪಡೆಯಲಿಲ್ಲ. ಜೈನ ಸಾಮಂತ ಅರಸರು ಪ್ರತಿಯೊಂದು ಮಾಗಣೆಗೆ ಬಲ್ಲಾಳರನ್ನು ನೇಮಕ ಮಾಡುವ ಪರಿಪಾಠವಿತ್ತು.[20] ಪ್ರತೀ ಮಾಗಣೆಗಳಲ್ಲಿ ಈ ಬಲ್ಲಾಳರು ಭೂ ನಿಯಂತ್ರಣ ವ್ಯವಸ್ಥೆಯಲ್ಲಿ ಭೂಮಿಯ ವಾರಸುದಾರರಾಗಿದ್ದು, ಗೇಣಿ ವ್ಯವಸ್ಥೆಯ ಮೂಲಕ ಭೂವ್ಯವಸಾಯ ಮಾಡಿಸುತಿದ್ದರು. ಈ ವ್ಯವಸ್ಥೆಯಲ್ಲಿ ತಳಸಮುದಾಯದವರೇ ಗೇಣಿದಾರರಾಗಿರುತ್ತಿದ್ದರು. ಸುಳ್ಯ ಪ್ರದೇಶದಲ್ಲಿ ಬಲ್ಲಾಳ್ತಿಯರು ಆಡಳಿತ ಮಾಡುತ್ತಿದ್ದು ಅವರು ಅಪಾರ ಆಸ್ತಿಯನ್ನು ಹೊಂದಿದ್ದರು. ಅವರ ಸಂತತಿ ನಿಸ್ಸಂತತಿಯಾದಾಗ ಈ ಭೂಮಿಯನ್ನು ಧರ್ಮಸ್ಥಳಕ್ಕೆ ಹಸ್ತಾಂತರಿಸಲಾಗಿತ್ತು. ಕ್ರಿ.ಶ.1673ರ ಸುಬ್ರಹ್ಮಣ್ಯ ತಾಮ್ರ ಶಾಸನದಲ್ಲಿ ಶಂಕರದೇವಿ ಬಲ್ಲಾಳ್ತಿ ಕೊಲ್ಲಮೊಗರುವಿನಲ್ಲಿ ಭೂ ಒಡತಿಯಾಗಿದ್ದ ಮಾಹಿತಿ ದೊರೆಯುತ್ತದೆ.[21]

ಜೈನ ಧರ್ಮೀಯರಾಗಿದ್ದ ಹಲರು, ಸೆಟ್ಟಿಕಾರರು, ಎಳಮೆಗಳು ಹಾಗೂ ಬಸ್ತಿಕಾರರು ಮುಂತಾದವರು ಬಸದಿಗಳಿಗೆ ಭೂ ದಾನ ಮಾಡುವುದರೊಂದಿಗೆ ಭೂ ನಿಯಂತ್ರಣ ವ್ಯವಸ್ಥೆಯ ಭಾಗವಾಗಿದ್ದರು. ಹೆಚ್ಚಿನ ಸಂದರ್ಭಗಳಲ್ಲಿ ಇವರ ಒಪ್ಪಿಗೆಯಿಂದಲೇ ಭೂದಾನವನ್ನು ಮಾಡಲಾಗುತ್ತಿತ್ತು. ಅನೇಕ ಸಂದರ್ಭಗಳಲ್ಲಿ ಭೂಮಿಗಳ ಜವಾಬ್ದಾರಿಯನ್ನು ಭೂಮಿಯನ್ನು ದಾನ ಮಾಡಿದವರೇ ವಹಿಸಿಕೊಳ್ಳುತ್ತಿದ್ದರು. ಕೆಲವು ಸಂದರ್ಭದಲ್ಲಿ ಇವರ ಒಪ್ಪಿಗೆಯಿಲ್ಲದೆ ಭೂಮಿಯ ಖರೀದಿ ಅಥವಾ ದಾನ ಮಾಡಲು ಸಾಧ್ಯ ಇರಲಿಲ್ಲ.

ಹಲರು, ಸಮಸ್ತ ಹಲರು. ನಖರಗಳು, ಸೆಟ್ಟಿಕಾರರು ಮತ್ತು ಎಳಮೆಗಳು, ಕಾರ್ಕಳ, ವೇಣೂರು, ಪಡುಬಿದ್ರಿ, ಮೂಡುಬಿದ್ರಿ, ಪಡು ಪಣಂಬೂರು ಮುಂತಾದ ಬಸದಿಗಳ ದಾನ ದತ್ತಿಗಳ ನಂಟು ಹೊಂದಿದ್ದರು.[22] ಕ್ರಿ.ಶ.17ನೇ ಶತಮಾನದ ಪೂರ್ವಾರ್ಧದಲ್ಲಿ ಜೈನರಸರ ಮತ್ತು ಕೆಳದಿಯ ಸಂಘರ್ಷದಿಂದ ಜೈನರ ಪ್ರಾಬಲ್ಯ ಕಡಿಮೆಯಾಗಿ ಕ್ರಮೇಣ ಅವರು ಕೇವಲ ಭೂ ಹಿಡುವಳಿದಾರರಾಗಿ ಮಾರ್ಪಾಡಾಗಬೇಕಾಯಿತು.

ಕ್ರಿ.ಶ.16ನೇ ಶತಮಾನದ ನಂತರ ಈ ಭಾಗದಲ್ಲಿ ಗೌಡ ಸಾರಸ್ವತರ ಧಾರ್ಮಿಕ ಸಂಸ್ಥೆಗಳೂ ರಾಜರ ದಾನದ ಮುಖೇನ ಭೂ ಆಸ್ತಿಯನ್ನು ಹೊಂದಿದ್ದವು. ಹಾಗಾಗಿ ಗಂಗೊಳ್ಳಿ, ಬಸ್ರೂರು, ಮಂಗಳೂರು, ಪುತ್ತೂರು, ಬಂಟ್ವಾಳ, ಮಂಜೇಶ್ವರ ಮುಂತಾದ ಸ್ಥಳಗಳಲ್ಲಿ ಗೌಡ ಸಾರಸ್ವತರ ಧಾರ್ಮಿಕ ಕೇಂದ್ರಗಳು ಭೂಮಿಯನ್ನು ಪಡೆದವು.[23] ಇವರು ಸಾಮಾನ್ಯವಾಗಿ ವ್ಯಾಪಾರ ಹಾಗೂ ಕಛೇರಿ ಕೆಲಸಗಳಲ್ಲಿ ಹೆಚ್ಚಾಗಿ ನಿಯುಕ್ತಿಗೊಂಡಿರುವುದರಿಂದ ಇವರ ಭೂಮಿಯನ್ನು ವಾರ್ಷಿಕ ಗೇಣಿಗಾಗಿ ಗೇಣಿದಾರರರಿಗೆ ನೀಡಲಾಗುತ್ತಿತ್ತು. ಇವರಲ್ಲಿ ಇನ್ನೊಂದು ಪಂಗಡವಾದ ರಾಜಸ್ವತ ಸಾರಸ್ವತರು ಕೃಷಿ ಕೆಲಸಗಳಲ್ಲಿ ತಮ್ಮನ್ನು ನೇರವಾಗಿ ತೊಡಗಿಸಿಕೊಂಡರು. ಈ ಕಾರಣಕ್ಕಾಗಿ ಗೌಡ ಸಾರಸ್ವತರು ಇವರನ್ನು ತಮಗಿಂತ ಕೆಳಗಿನವರೆಂದು ಪರಿಗಣಿಸಿದ್ದರು.

ಕ್ರಿ.ಶ.17 ಮತ್ತು !8ನೇ ಶತಮಾನದ ಮಧ್ಯಭಾಗದಲ್ಲಿ ತುಳುನಾಡಿನಲ್ಲಿ ವೀರಶೈವ ಧಾರ್ಮಿಕ ಸಂಸ್ಥೆಗಳು ಪ್ರಬಲವಾಗಿ ಬೆಳೆದವು. ಕೋಟೇಶ್ವರ, ಬಸ್ರೂರು, ಬಾರ್ಕೂರು, ಬಗ್ಗುಂಜೆ, ಗುರುಪುರ, ಸಿದ್ದಾಪುರ, ಉಡುಪಿ, ಕಲ್ಯಾಣಪುರ ಮುಂತಾದ ವೀರಶೈವ ಮಠಗಳು ಭೂದಾನವನ್ನು ಪಡೆದವು.[24] ಈ ಮಠಗಳು ಗೇಣಿದಾರರ ಮೂಲಕ ಕೃಷಿ ಕೆಲಸಗಳನ್ನು ನಡೆಸುತ್ತಿದ್ದರು. ಇಲ್ಲಿ ವೀರಶೈವ ಸಮುದಾಯದವರು ಕೃಷಿ ಸಿಬ್ಬಂದಿಗಳಾಗಿ ಕೃಷಿ ಕಾರ್ಯಗಳನ್ನು ನಡೆಸುತ್ತಿದ್ದರು.[25] ವೀರಶೈವರ ಈ ರೀತಿ ಕೃಷಿಯ ಯಾಜಮಾನ್ಯ ಪರಂಪರೆ ಕೆಳದಿ ಸಾಮ್ರಾಜ್ಯದ ಪತನದೊಂದಿಗೆ ಹಿನ್ನಡೆಯನ್ನು ಕಂಡಿತು.

ಕ್ರಿ.ಶ.14ನೇ ಶತಮಾನದಿಂದ ಮುಸ್ಲಿಂರ ವಾಣಿಜ್ಯ ಸಂಘಟನೆ "ಹಂಜಮಾನರು" ಕರಾವಳಿ ಕರ್ನಾಟಕದಲ್ಲಿ ಕೃಷಿ ವ್ಯವಸ್ಥೆಯ ನಿಕಟ ಸಂಪರ್ಕದಲ್ಲಿತ್ತು. ಕೆಲವು ಸಂದರ್ಭಗಳಲ್ಲಿ ಭೂದಾನ (ಅರುವರ)ವನ್ನು ಜಾರಿಗೆ ತರುವಲ್ಲಿ ಮತ್ತು ಭೂ ವಿವಾದವನ್ನು ಬಗೆಹರಿಸುವಲ್ಲಿ ಇವರ ಪಾತ್ರವನ್ನು ಗಮನಿಸಬಹುದು.[26] ಕ್ರಿ.ಶ.16 ಮತ್ತು 17ನೇ ಶತಮಾನದಲ್ಲಿ ತುಳುನಾಡಿನಲ್ಲಿ ಮುಸಲ್ಮಾನರ ಕೃಷಿ ಸಂಬಂಧಗಳಲ್ಲಿ ಕೆಲವೊಂದು ಬದಲಾವಣೆಗಳನ್ನು ಗಮನಿಸಬಹುದು. ಉಳ್ಳಾಲ, ಮಿರ್ಜಾನ್ ಮತ್ತು ಚಿತ್ತ ಕುಲದಂತಹ ಸ್ಥಳಗಳಲ್ಲಿ ಅವರು ದರ್ಗಾವನ್ನು ನಿರ್ಮಿಸಿದರು. ಬಿಜಾಪುರದ ಸುಲ್ತಾನರು ಅವುಗಳಿಗೆ ಭೂದಾನವನ್ನು ಮಾಡಿದರು.[27] ಅವುಗಳನ್ನು ಇನಾಮುಗಳೆಂದು ಕರೆಯಲಾಗಿದೆ. ಕರಾವಳಿ ಕರ್ನಾಟಕದ ಮುಸ್ಲಿಮರು ಅಕ್ಕಿ ವ್ಯಾಪಾರದಲ್ಲಿ ತೊಡಗಿದ್ದರು.[28] ಹಾಗಾಗಿ ಸ್ಥಳೀಯ ಅಕ್ಕಿ ಬೆಳೆಯುವ ರೈತರೊಂದಿಗೆ ಅವರು ಸಂಪರ್ಕವನ್ನು ಸಾಧಿಸಿರಬೇಕು. ಇದರ ಹೊರತಾಗಿ ಮುಸ್ಲಿಮರು ಕೃಷಿ ವ್ಯವಸ್ಥೆಯಲ್ಲಿ ಯಾವ ಯಾವ ರೀತಿಯ ನಂಟು ಹೊಂದಿದ್ದರೆಂಬ

ಮಾಹಿತಿ ಲಭ್ಯವಿಲ್ಲ. ವ್ಯಾಪಾರವೇ ಅವರ ಪ್ರಮುಖ ಆದ್ಯತೆಯಾಗಿದ್ದ ಕಾರಣದಿಂದ ಈ ಕಾಲದಲ್ಲಿ ತುಳುನಾಡಿನಲ್ಲಿ ಪ್ರಮುಖವಾಗಿ ಭೂ ಒಡೆಯರಾಗಿ ಅವರು ಕಾಣಿಸಿಕೊಳ್ಳುವುದಿಲ್ಲ.

ಕೆಳದಿ ಆಳ್ವಿಕೆಯ ಕಾಲಘಟ್ಟದಲ್ಲಿ ಕರಾವಳಿಯಲ್ಲಿ ಕ್ರೈಸ್ತರ ಜನಸಂಖ್ಯೆ ಅಧಿಕಗೊಂಡಿತ್ತು. ಇವರಲ್ಲಿ ಕೆಲವರು ಕೃಷಿಕರಾಗಿ ಆ ನಂತರ ಭೂಮಾಲಿಕರಾದರು. ಬಂಟ್ವಾಳ ತಾಲೂಕಿನ ಮೊಂಡಕಾಪುವಿನಲ್ಲಿ (ಮೊಡಂಕಾಪು) ಕ್ರಿಶ್ಚಿಯನ್ನರು ಬೇಸಾಯ ಮಾಡಿದ ವಿಚಾರ ಕ್ರಿ.ಶ 1587ರ ಶಾಸನದಲ್ಲಿದೆ.[29] ಕ್ರೈಸ್ತರ ತೆಂಗಿನ ಕೃಷಿಯ ಜ್ಞಾನದ ಕಾರಣಕ್ಕೆ ಕೆಳದಿಯ ನಾಯಕರು ಅವರನ್ನು ಕರಾವಳಿಗೆ ಬರಮಾಡಿಕೊಂಡರೆಂದು ಹೇಳಲಾಗಿದೆ.[30] ಪಿಯತ್ರೋ ಡೆಲ್ಲಾ ವಲ್ಲೆ ಹೇಳುವಂತೆ ಮಂಗಳೂರಿನ ಚರ್ಚಿಗೆ ಭೂ ಆಸ್ತಿ ಇದ್ದು, ಗೇಣಿದಾರರಿಂದ ಗೇಣಿ ಸಂದಾಯವಾಗುತ್ತಿತ್ತು.[31] ಹಾಗೆಯೇ ಕ್ರೈಸ್ತರ ಧಾರ್ಮಿಕ ಸಂಸ್ಥೆಗಳು ತಮ್ಮ ಭೂ ಆಸ್ತಿಯನ್ನೂ ಹಿರಿಯರ ಸಮಿತಿಯ ಮತ್ತು ಪಾದ್ರಿಗಳ ಮೂಲಕ ನಿರ್ವಹಿಸುತ್ತಿದ್ದರು. ಅವರು ತೆಂಗಿನ ತೋಟಗಳ ನಿರ್ವಹಣೆ ಹಾಗೂ ಲೆಕ್ಕಾಚಾರವನ್ನು ನೋಡುತ್ತಿದ್ದರು.[32] ಮಂಗಳೂರಿನ ಸುತ್ತಮುತ್ತ ಹಲವು ಬರಡು ಭೂಮಿಯನ್ನು ಕ್ರೈಸ್ತರು ಕೃಷಿ ಭೂಮಿಯನ್ನಾಗಿಸುವ ಮೂಲಕ ಭೂ ಹಿಡುವಳಿದಾರರಾಗಿ ಕಾಣಿಸಿಕೊಳ್ಳುತ್ತಾರೆ.[33] ಕ್ರಿ.ಶ.18ನೇ ಶತಮಾನದ ಕೊನೆಯಲ್ಲಿ ಮಂಜೇಶ್ವರ, ಮಂಗಳೂರು, ಮೂಲ್ಕಿ, ಕಲ್ಯಾಣಪುರ, ಬಸ್ರೂರು, ಹೊನ್ನಾವರ, ಅಂಕೋಲ ಮತ್ತು ಸುಂಕೇರಿ ಮೊದಲಾದ ಕಡೆಗಳಲ್ಲಿ ಕ್ರೈಸ್ತರ ಎಸ್ಟೇಟ್‌ಗಳು ಟಿಪ್ಪು ಸುಲ್ತಾನನ ದಾಳಿಯ ಪರಿಣಾಮವಾಗಿ ನಾಶವಾದವು ಎಂಬುದಾಗಿ ಬುಕಾನನ್ ಅಭಿಪ್ರಾಯಪಡುತ್ತಾನೆ.[34]

ತುಳುನಾಡಿನ ಶೂದ್ರವರ್ಗದಲ್ಲಿ ನಾಯರ್, ನಾಡವರು, ಶೆಟ್ಟಿಗಳು, ಮೊಗೇರರು, ಗೌಡರು, ಕುಂಬಾರರು ಮತ್ತು ನ್ಯಾಕರು ಭೂಮಿಯನ್ನು ಹೊಂದಿದ್ದು ಕೃಷಿ ಕೆಲಸವನ್ನು ನಿಭಾಯಿಸುತ್ತಿದ್ದರು.[35] ಭೂ ಗೇಣಿ ಮೇಲೆ ನಾಯರ್ ಸಮುದಾಯದ ಪ್ರಭಾವದ ಹೊರತಾಗಿಯೂ ಭೂ ನಿಯಂತ್ರಣ ವ್ಯವಸ್ಥೆಯಲ್ಲಿ ಅವರ ಪಾತ್ರ ಉಡುಪಿ, ಬಾರ್ಕೂರು, ಬ್ರಹ್ಮಾವರ, ಉಪ್ಪುಂದ ಮತ್ತು ಭಟ್ಕಳಕ್ಕೆ ಸೀಮಿತವಾಗಿರುವುದು ತಿಳಿದು ಬರುತ್ತದೆ.

ತುಳುನಾಡಿನಲ್ಲಿ ನಾಡವರು ಮತ್ತು ಸೆಟ್ಟಿಗಳನ್ನು ಭೂ ಒಡೆಯರೆಂಬುದಾಗಿ ಶಾಸನಗಳು ಹೆಸರಿಸಿವೆ. ಇಲ್ಲಿ ಸೆಟ್ಟಿಗಳೆಂದರೆ ಬಂಟ ಸಮುದಾಯವೇ ಅಥವಾ ಜೈನ ಸಮುದಾಯವೇ ಎಂಬ ಗೊಂದಲವನ್ನು ಗಣನೆಗೆ ತೆಗೆದುಕೊಂಡೇ ನಾವು ಮುಂದುವರಿಯಬೇಕಾಗುತ್ತದೆ. ಇವರು ಭೂ ಹಿಡುವಳಿದಾರರಾಗಿ, ಬೇಸಾಯಗಾರರಾಗಿ ಹಾಗೆಯೇ ಬ್ರಾಹ್ಮಣ ಮತ್ತು ಜೈನ ಧಾರ್ಮಿಕ ಕೇಂದ್ರಗಳಿಗೆ ಭೂ ದಾನಿಗಳಾಗಿಯೂ ಪರಿಗಣಿಸಲ್ಪಡುತ್ತಾರೆ.[36] ತುಳುನಾಡಿಗೆ ಇಂಗ್ಲೀಷರ ಆಗಮನವಾಗುವ ಸಂದರ್ಭದಲ್ಲಿ ಸೆಟ್ಟಿಗಳು ಮತ್ತು ನಾಡವರು ಕೃಷಿ ವ್ಯವಸ್ಥೆಯಲ್ಲಿ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿದ್ದರು. ತಮ್ಮನ್ನು ಭೂಮಿಯ ಒಡೆಯರನ್ನಾಗಿ ಪರಿವರ್ತಿಸಿಕೊಂಡು ಹೆಚ್ಚಿನ ಭೂಮಿಯ ಮಾಲಿಕರಾದರು.[37] ಬಂಟರನ್ನು 'ಬಾರಗರು' ಎಂದು ಕರೆಯುವ ರೂಢಿ ಇದೆ. ಭೂತದ ಉತ್ಸವಗಳಲ್ಲಿ ಅವರನ್ನು ಭೂತವು 'ಬಾರಗೆರೆ' ಎಂದು ಕರೆಯುತ್ತದೆ. ಈ

'ಬಾರಗ' ಎಂಬ ಶಬ್ದ 'ಭತ್ತದ ವಂಶದವರು' ಎಂಬ ಹಿನ್ನೆಲೆಯಲ್ಲಿ ಬಂದಿದೆ ಎಂದು ಅಭಿಪ್ರಾಯ ಪಡಲಾಗಿದೆ.[38] 'ಕೋಟಿ ಚೆನ್ನಯ' ಪಾಡ್ದನದಲ್ಲಿ ಬಂಟರಿಗೆ 'ಒಕ್ಕಲಾಯರು' ಎಂದೂ ಕರೆಯಲಾಗಿದೆ. 'ಒಕ್ಕೆಲಾಯ' ಎಂದರೆ 'ಒಕ್ಕಲಿಗ' ಅಂದರೆ ಬೇಸಾಯಗಾರ, ಕೃಷಿಕ ಎಂದು ಅರ್ಥ. ಸಿರಿ ಪಾಡ್ದನದಲ್ಲಿ ಉಲ್ಲೇಖಿತ ಬಿರ್ಮು ಆಳ್ವನು ದೊಡ್ಡ ಬೇಸಾಯಗಾರ. ಆದರೆ ಮಕ್ಕಳಿಲ್ಲದ ಅವನು ಹೇಳುವ ಮಾತು ಈ ರೀತಿ ಇದೆ. "ನನ್ನ ಸಾವಿರ ಮುಡಿ ಅಕ್ಕಿಯ ಹುಟ್ಟುವಳಿ ನನ್ನಿಂದ ಆರಂಭವಾಗಿ ನನ್ನಿಂದಲೇ ಅಂತ್ಯವಾಗುವ ಸ್ಥಿತಿ ಆಯಿತಲ್ಲಾ" ಎಂದಿದೆ.[39] ಇಲ್ಲಿ ಸಾವಿರ ಮುಡಿ ಹುಟ್ಟುವಳಿಯ ಗದ್ದೆಯವನು ಎಂದರೆ ಬಹಳ ದೊಡ್ಡ ಬೇಸಾಯಗಾರ ಎಂದು ಅರ್ಥ. ಹೀಗಾಗಿ ಬಂಟ ಸಮುದಾಯದವರು ಈ ಕಾಲಘಟ್ಟದಲ್ಲಿ ವಿಶಾಲವಾದ ಭೂ ಆಸ್ತಿಯನ್ನು ಹೊಂದಿದ್ದು ತುಳುನಾಡಿನ ಆರ್ಥಿಕ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರವಹಿಸಿದ್ದರು.

ತುಳುನಾಡಿನಲ್ಲಿ ಇಂದು ಪ್ರಧಾನ ಸಮುದಾಯಗಳಲ್ಲಿ ಒಂದಾಗಿರುವ ಗೌಡರು ಕೆಳದಿಯ ಕಾಲಘಟ್ಟದಲ್ಲಿ ತುಳುನಾಡಿಗೆ ಆಗಮಿಸಿದರು ಎಂದು ಹೇಳಲಾಗಿದೆ. ಇಂದು ಅವರು ಭೂಮಾಲೀಕರಾಗಿದ್ದು ಈ ಭೂ ಆಸ್ತಿ ಬಲ್ಲಾಳರ ಕಾಲದಲ್ಲಿ ತಮಗೆ ಉಂಬಳಿಯಾಗಿ ಬಂದಿದೆ ಎಂದು ಹೇಳುತ್ತಾರೆ.[40] ಇದನ್ನು ಗಮನಿಸಿದಾಗ ಸುಬ್ರಹ್ಮಣ್ಯ, ಕಡಬ, ಕೂಜುಗೋಡು, ಕಂದ್ರಪ್ಪಾಡಿ, ಸುಳ್ಯ ಮೊದಲಾದ ಪ್ರದೇಶಗಳಲ್ಲಿ ಗೌಡರು ಪಸರಿಸಿದಾಗ ಈ ಭಾಗದಲ್ಲಿ ಜೈನ ಬಲ್ಲಾಳರು ಬೀಡು ಮನೆಗಳಲ್ಲಿ ನೆಲೆಯೂರಿ ಅಧಿಕಾರ ಸ್ಥಾನದಲ್ಲಿದ್ದರು. ಆದರೆ ಯಾವಾಗ ಬೀಡು ಬಲ್ಲಾಳರು ತಮ್ಮ ಅಸ್ತಿತ್ವವನ್ನು ಕಳೆದುಕೊಂಡರೋ ಆಗ ಗೌಡರು ಭೂ ಯಜಮಾನಿಕೆಯನ್ನು ಹೊಂದಿ ಪ್ರಭಾವಶಾಲಿಗಳಾದರು. ಇನ್ನುಳಿದಂತೆ, ಮೊಗೇರರು, ಗಾಣಿಗರು, ಕುಂಬಾರರು ಮೊದಲಾದವರು ಭೂಮಿಯ ಒಡೆಯರಾಗಿ ಹಾಗೂ ಬೇಸಾಯಗಾರರಾಗಿ ಕೆಲವು ಶಾಸನಗಳಲ್ಲಿ ಹೆಸರಿಸಲ್ಪಟ್ಟಿದ್ದಾರೆ.[41]

### ಕೆಳ ಸ್ತರದ ಜನ ಮತ್ತು ಭೂ ನಿಯಂತ್ರಣ

ತುಳುನಾಡಿನ ಬಿಲ್ಲವರು, ಹಳೆಪೈಕದವರು ಮಲೆಕುಡಿಯರು, ಕೊರಗರು, ಹೊಲೆಯರು ಪಂಬದರು ವಿವಿಧ ರೀತಿಯಲ್ಲಿ ಭೂಮಿಯ ನಂಟು ಹೊಂದಿದ್ದರು. ತುಳು ಪಾಡ್ದನ ಹೇಳುವಂತೆ ಸುಳ್ಯ ತಾಲೂಕಿನ ಪೆರುಮಲೆಯ ಬಲ್ಲಾಳ, ಇಬ್ಬರು ಬಿಲ್ಲವ ವೀರರಾದ ಕೋಟಿ ಚೆನ್ನಯರಿಗೆ ಮತ್ತು ಬುದ್ಧಿವಂತನಿಗೆ(ಬುದ್ಯಂತ) ಬೇಸಾಯಕ್ಕಾಗಿ ಗದ್ದೆಗಳನ್ನು ನೀಡಿದ್ದ. ಕೋಟಿ ಚೆನ್ನಯ ಪಾಡ್ದನದಲ್ಲಿ ಬುದ್ಯಂತನು ಕೋಟಿ ಚೆನ್ನಯರಲ್ಲಿ "ಸಾಗುವಳಿ ಕೆಲಸ ನಿಮಗೆ ಬಿಲ್ಲವರ ಹುಡುಗರಿಗೆ ಯಾರು ಕೊಟ್ಟದ್ದು?" ಎಂದು ಕೇಳುತ್ತಾನೆ.[42] ಇಲ್ಲಿ ಬುದ್ಯಂತನ ಮಾತಿನ ಮೂಲಕ ಬಿಲ್ಲವರು ಸಾಂಪ್ರದಾಯಿಕವಾಗಿ ಮೂಲ ಬೇಸಾಯಗಾರರಾಗಿದ್ದರೋ ಇಲ್ಲವೋ ಎನ್ನುವ ಪ್ರಶ್ನೆ ಉದ್ಭವಿಸುತ್ತದೆ. ಆದರೆ ಕೋಟಿ ಚೆನ್ನಯರು ಬಲ್ಲಾಳ ನೀಡಿದ ಗದ್ದೆಯನ್ನು ಬೇಸಾಯ ಮಾಡುತ್ತಿದ್ದರು. ಹಾಗಾಗಿ ಬಿಲ್ಲವರೂ ಕೆಲವು ಸಂದರ್ಭಗಳಲ್ಲಿ ಬೇಸಾಯಗಾರರಾಗಿದ್ದರು ಎನ್ನುವುದು ತಿಳಿಯುತ್ತದೆ. ಆದರೆ ಈ ಬೇಸಾಯ ಹೆಚ್ಚಿನ ಸಂದರ್ಭಗಳಲ್ಲಿ ಭೂ ನಿಯಂತ್ರಣದ ನೆಲೆಯಲ್ಲಿರದೆ

ಭೂ ಗೇಣಿದಾರರ ನೆಲೆಯಲ್ಲಿರಬೇಕು. ಏಕೆಂದರೆ ಅದೇ ಪಾಡ್ದನ ಹೇಳುವಂತೆ ಜಿಲ್ಲವರು ಉತ್ತಮ ರೀತಿಯಲ್ಲಿ ಬೇಸಾಯ ಮಾಡುವ ಕ್ರಮವನ್ನು ಬಲ್ಲವರಾಗಿದ್ದರು.[43] ಕ್ರಿ.ಶ.17 ಮತ್ತು 18ನೇ ಶತಮಾನದ ಮಧ್ಯಭಾಗದಲ್ಲಿ ಜಿಲ್ಲವರು ಹಾಗೂ ತುಳುನಾಡಿನ ಉತ್ತರಕ್ಕಿರುವ ಹಳೆಪೈಕದವರು ಕರಾವಳಿ ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಭೂ ಒಡೆಯರಾಗಿದ್ದುದು ತಿಳಿದುಬರುತ್ತದೆ.[44]

ಮಲೆಕುಡಿಯರು ಗುಡ್ಡ ಪ್ರದೇಶಗಳಲ್ಲಿ ಬೇಸಾಯ ಮಾಡುತ್ತಿದ್ದರು. ಅವರು ತಮ್ಮ ಒಡೆಯರಿಗಾಗಿ ವರ್ಷದಲ್ಲಿ 10 ತಿಂಗಳು ದಿನದಲ್ಲಿ 8 ಗಂಟೆ ದುಡಿಯುತ್ತಿದ್ದರೆಂದು ಹೇಳಲಾಗಿದೆ.[45] ಗುಡ್ಡ ಪ್ರದೇಶದಲ್ಲಿ ಅವರು ಮಾಡುತ್ತಿದ್ದ ಕೃಷಿಯನ್ನು ಕುಮೇರ್ ಎಂದು ಕರೆಯಲಾಗುತ್ತಿತ್ತು. ಕ್ರಿ.ಶ.14ನೇ ಶತಮಾನದ ಮಧ್ಯಭಾಗದಿಂದ ಈ ಪ್ರದೇಶಗಳಲ್ಲಿ ಕುಮೇರ್ ಕೃಷಿ ಸಾಮಾನ್ಯವಾಗಿತ್ತು.[46] ಇನ್ನಿತರ ತಳಸಮುದಾಯದವರು ಭೂ ಒಡೆತನವನ್ನು ಹೊಂದಿರಲಿಲ್ಲ, ಬದಲಿಗೆ ಉನ್ನತ ವರ್ಗದವರ ಭೂ ಕಾರ್ಮಿಕರಾಗಿ, ಜೀತದಾಳುಗಳಾಗಿ, ಗುಲಾಮರಾಗಿ ಕೆಲಸ ಮಾಡುತ್ತಿದ್ದರು.

ಒಟ್ಟಿನಲ್ಲಿ ವಿವಿಧ ಜಾತಿ ಮತ್ತು ಸಮುದಾಯಗಳು ಕೆಳದಿ ಆಳ್ವಿಕೆಯ ತುಳುನಾಡಿನಲ್ಲಿ ಭೂಹಿಡುವಳಿದಾರರಾಗಿದ್ದನ್ನು ಗಮನಿಸಬಹುದು. ಈ ಅಧ್ಯಯನದಿಂದ ತಿಳಿದುಬರುವ ಅಂಶವೆಂದರೆ ಆರ್ಥಿಕ ಮತ್ತು ಸಾಮಾಜಿಕ ಶ್ರೇಣೀಕೃತ ವ್ಯವಸ್ಥೆಗೆ ಇತರ ಕಾರಣಗಳೊಂದಿಗೆ ಭೂ ಹಿಡುವಳಿಯೂ ಒಂದು ಪ್ರಮುಖ ಕಾರಣವಾಗಿತ್ತು. ಬ್ರಾಹ್ಮಣರ ಸಾಂಸ್ಕೃತಿಕ ಮೇಲ್ಮೆ, ಧಾರ್ಮಿಕ ಸಂಸ್ಥೆಗಳ ಮುಂಚೂಣಿ ಮುಂತಾದ ವಿಚಾರಗಳಿಂದ ಸಮಾಜದಲ್ಲಿ ಮೇಲುಸ್ತರದಲ್ಲಿ ಗುರುತಿಸಿಕೊಂಡಂತೆ, ಅವರಿಗೆ ದಾನ ರೂಪದಲ್ಲಿ ಬಂದಂತಹ ವಿಶಾಲವಾದ ಭೂ ಆಸ್ತಿಯೂ ಅವರ ಹಿರಿಮೆಗೆ ಕಾರಣವಾಗಿತ್ತು. ಬ್ರಾಹ್ಮಣರಿಗೆ ಪ್ರಭುತ್ವ ಬೆನ್ನೆಲುಬಾಗಿ ಇದ್ದ ಕಾರಣ ಜನರೂ ಅವರ ಆಸ್ತಿ ಪಾಸ್ತಿಗಳನ್ನು ಗೌರವಿಸುತ್ತಿದ್ದರು. ತೆರಿಗೆ ವಿನಾಯತಿ, ಅಪಾರ ಭೂ ಆಸ್ತಿಯ ಒಡೆತನ, ಧಾರ್ಮಿಕ ಸಂಸ್ಥೆಗಳ ಮತ್ತು ಅವುಗಳ ಆಸ್ತಿ ಪಾಸ್ತಿಗಳ ನಿರ್ವಹಣೆಯ ಅಧಿಕಾರವನ್ನೂ ಇವರು ಹೊಂದಿದ್ದರು. ಇನ್ನು ಶ್ರೇಷ್ಠಿಗಳಾಗಿ ವ್ಯಾಪಾರ ವ್ಯವಹಾರಗಳಲ್ಲಿ ತೊಡಗಿದ್ದ ಜೈನರು ತುಳುನಾಡಿನಲ್ಲಿ ಭೂಪಾಲಕರಾಗಿ ಭೂ ಹಿಡುವಳಿದಾರರಾಗಿ ಕಾರ್ಯನಿರ್ವಹಿಸಿದ್ದರು. ನಾಡವರೂ ಭೂಮಿಯ ಒಡೆತನದ ಕಾರಣಕ್ಕೆ ಮುಂಚೂಣಿಯಲ್ಲಿದ್ದರು. ಕೆಳದಿಯರಸರ ಕಾಲದಲ್ಲಿ ಭೂಹಿಡುವಳಿದಾರರಾದ ವೀರಶೈವರು ಕೆಳದಿಯ ಅವನತಿಯೊಂದಿಗೆ ರಾಜಾಶ್ರಯದ ಕೊರತೆಯಿಂದ ತಮ್ಮ ಇಳಿಗಾಲವನ್ನೂ ಕಾಣಬೇಕಾಯಿತು. ಇದಕ್ಕೆ ವಿರುದ್ಧವಾಗಿ ಭೂರಹಿತರಾಗಿದ್ದ ಗೌಡ ಸಮುದಾಯ, ಸಾರಸ್ವತರು, ಕ್ರೈಸ್ತರು, ಈ ಭಾಗಕ್ಕೆ ವಲಸೆ ಬಂದು ಭೂ ಹಿಡುವಳಿದಾರರಾದರು. ಸಮಾಜದ ಕೆಳಸ್ತರದಲ್ಲಿ ಗುರುತಿಸಿಕೊಂಡ ಸಮುದಾಯಗಳು ಭೂಮಿಯ ಒಡೆತನವಿಲ್ಲದೆ ಅದೇ ಸ್ಥಿತಿಯಲ್ಲಿ ಮುಂದುವರಿಯುವ ಅನಿವಾರ್ಯತೆ ಯುಂಟಾಯಿತು. ಹಾಗೆಯೇ ಪರಂಪರಾನುಗತವಾಗಿ ಭೂ ಹಿಡುವಳಿದಾರರಾಗಿದ್ದ ಸಮುದಾಯಗಳು ತಾವು ಕಾರ್ಮಿಕರ ನೆಲೆಯಲ್ಲಿ ಕೆಲಸ ಮಾಡದೆ, ಇನ್ನುಳಿದ ಕೆಳ ವರ್ಗದ ಸಮುದಾಯಗಳನ್ನು ಈ

ಕೆಲಸಗಳಿಗೆ ನಿಯೋಜಿಸುತ್ತಿದ್ದುದು ಗಮನಾರ್ಹವಾಗಿದೆ. ಈ ಕಾಲದಲ್ಲಿ ಕೇವಲ ಭೂ ಹಿಡುವಳಿದಾರರಿಗೆ ಮಾತ್ರ ವಿಶೇಷ ಸ್ಥಾನಮಾನಗಳಿತ್ತು. ಭೂಮಿಯಲ್ಲಿ ದುಡಿಯುತ್ತಿದ್ದವರು ಅಥವಾ ಗೇಣಿದಾರರನ್ನು ಕೆಳವರ್ಗದವರೆಂದು ಭಾವಿಸಲಾಗಿತ್ತು. ಈ ಅಧ್ಯಯನವು ಜಾತಿಯ ಮೇಲ್ಮೆ ಮತ್ತು ಭೂ ನಿಯಂತ್ರಣದ ನೇರ ಸಂಬಂಧವನ್ನು ಅನಾವರಣಗೊಳಿಸುತ್ತದೆ. ಇದಕ್ಕೆ ಉದಾಹರಣೆಯೆಂದರೆ ಬ್ರಾಹ್ಮಣರು ಅಥವಾ ಇನ್ನಿತರ ವರ್ಗಗಳಲ್ಲಿ ಯಾರು ನೇರವಾಗಿ ಕೃಷಿ ಕೆಲಸಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದರೋ ಅವರನ್ನು ಅದೇ ಜಾತಿಯ ಉಳಿದ ವರ್ಗಗಳು ತಮಗಿಂತ ಕೆಳಗಿನವರೆಂದು ಪರಿಗಣಿಸುತ್ತಿದ್ದರು. ಹೀಗೆ ಕೆಳದಿ ಕಾಲದ ತುಳುನಾಡಿನ ಆರ್ಥಿಕ ವ್ಯವಸ್ಥೆಯಲ್ಲಿ ಜಾತಿ ಮತ್ತು ಭೂಮಾಲಕತ್ವ ಒಂದಕ್ಕೊಂದು ಕೊಂಡಿಯಂತೆ ಕಾರ್ಯನಿರ್ವಹಿಸಿತ್ತು.

### 3.2 ಭೂ ಒಡೆತನದ ಸ್ವರೂಪ

ಕೆಳದಿಯರಸರ ಆಳ್ವಿಕೆಯ ಕಾಲದ ತುಳುನಾಡಿನಲ್ಲಿದ್ದ ಭೂಗೇಣಿ ಪದ್ಧತಿ ಈ ಭಾಗದ ಕೃಷಿ ವ್ಯವಸ್ಥೆಯನ್ನು ಅನಾವರಣಗೊಳಿಸುತ್ತದೆ. ಈ ಅಧ್ಯಯನವು ವಿವಿಧ ವರ್ಗಗಳು ಮತ್ತು ಸಂಸ್ಥೆಗಳು ಯಾವ ಪರಿಸ್ಥಿತಿಯಲ್ಲಿ ಭೂಮಿಯನ್ನು ಹೊಂದಿದ್ದವು ಎಂಬುದನ್ನು ವಿವರಿಸುತ್ತದೆ. ಈ ಕಾಲದ ದಾಖಲೆಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ, ಅಂದು ಅಸ್ತಿತ್ವದಲ್ಲಿದ್ದ ವಿವಿಧ ರೀತಿಯ ಭೂಮಾಲಕತ್ವ ಮತ್ತು ಭೂಗೇಣಿ ಪದ್ಧತಿ ಬಗ್ಗೆ ಮಾಹಿತಿ ಲಭ್ಯವಾಗುತ್ತದೆ.

**ಅರಸರ ಭೂಮಿ:** ತುಳುನಾಡಿನ ಹೆಚ್ಚಿನ ಗ್ರಾಮಗಳಲ್ಲಿ ಅರಸರಿಗೆ ಸಂಬಂಧಿಸಿದ ಭೂಮಿಗಳಿದ್ದವು. ಇಂದು ಸರಕಾರಿ ಭೂಮಿಗಳಿದ್ದಂತೆ ಅಂದು ಅರಸರ ಭೂಮಿಯಿತ್ತು. ಸಾಮಾನ್ಯವಾಗಿ ಅವು ಕೃಷಿ ಯೋಗ್ಯ ಅಥವಾ ಉಪಯೋಗವಿಲ್ಲದ ಅಥವಾ ಕಾಡು ಮತ್ತು ಖನಿಜ ಭೂಮಿಯಾಗಿದ್ದವು. ಶಾಸನಗಳು ಈ ಭೂಮಿಯನ್ನು ಅರಮನೆಯ ಭೂಮಿ, ಭಂಡಾರ ಸ್ಥಳ, ಅರಮನೆಯ ಹಿತ್ತಲು ಗದ್ದೆ, ಅರಮನೆಯ ಮೂಲ, ಅರಮನೆಯ ಭಂಡಾರ ಗದ್ದೆ[47] ಮೊದಲಾದ ಹೆಸರುಗಳಿಂದ ಗುರುತಿಸಿದೆ. ಕೃಷಿಗೆ ಸಂಬಂಧಿಸಿದಂತೆ ಗೊಂದಲ, ಅವ್ಯವಸ್ಥೆ ಅಥವಾ ಕೃಷಿ ವಿರೋದಿ ಚಟುವಟಿಕೆಗಳು ಆದಾಗ ಅರಸ ಮಧ್ಯ ಪ್ರವೇಶಿಸಿ ಸಮಸ್ಯೆ ಬಗೆಹರಿಸುತ್ತಿದ್ದನು.[48] ಕ್ರಿಶ 1750ರ ಮೂಡಬಿದ್ರೆ ಶಾಸನದ ಉಲ್ಲೇಖದಂತೆ,[49] ಪೆರಿಂಜೆ ಮಾಗಣೆಯ ಪಡುವಕೋಡಿ ಗ್ರಾಮದ ಪೊಣ್ಣುವಿನ ಬಾಳಿಕೆ ಭೂಮಿ(ಹಿರಿಯರ ಮೂಲಕ ಸ್ವೀಕರಿಸಿದ ಭೂಮಿ) ನಿರುಪಯೋಗಿಯಾದಾಗ ಇದನ್ನು ಅಜಿಲರ ಮುಖ್ಯಸ್ಥ, ಇಮ್ಮಡಿ ತಿಮ್ಮಣ್ಣ ಸರಿಪಡಿಸಿದ.

ರಾಜರುಗಳು ದಂಡಯಾತ್ರೆಗಳಲ್ಲದೆ, ಭೂ ಖರೀದಿ ಹಾಗು ಪ್ರಜೆಗಳಿಂದ ಅಡಮಾನದ ಮೂಲಕವೂ ಭೂಮಿಯನ್ನು ಪಡೆಯುತ್ತಿದ್ದರು. ಕ್ರಿ.ಶ.1562ರಲ್ಲಿ ಕೆಳದಿಯ ಸದಾಶಿವ ನಾಯಕ ಬಾರ್ಕೂರು ಮತ್ತು ಮಂಗಳೂರು ರಾಜ್ಯಗಳ ಆಡಳಿತಗಾರನಾಗಿ ವಿಜಯನಗರದ ದೊರೆ ಸದಾಶಿವರಾಯನ ಆಜ್ಞೆಯಂತೆ

ಶಂಕರನಾರಾಯಣ ಗ್ರಾಮದಲ್ಲಿ ವೀರಶೈವ ಮಠ ಸ್ಥಾಪನೆಗೆ ಬೇರೆ ಬೇರೆ ವ್ಯಕ್ತಿಗಳಿಂದ ಭೂಮಿಯನ್ನು ಖರೀದಿಸಿದ.[50] ಕ್ರಿ.ಶ 1639ರ ಶಾಸನದ ಉಲ್ಲೇಖದಂತೆ ವೀರಭದ್ರ ನಾಯಕ ಉಡುಪಿ ಕೃಷ್ಣ ದೇವಾಲಯದ ಖಜಾನೆಗೆ ದಾನ ನೀಡಲು ಬಾರ್ಕೂರು ಹೋಬಳಿಯ ಶಿವಳ್ಳಿ ಸೀಮೆಯ ಕೊನಪ್ಪ ಕೊಳ್ಳಾಲನಿಗೆ 100 ಗದ್ಯಾಣಗಳನ್ನು ನೀಡಿ ಒಂದಿಷ್ಟು ಭೂಮಿಯನ್ನು ಖರೀದಿಸಿದ.[51] ಕೆಳದಿ ಬಸವಪ್ಪ ಕ್ರಿ.ಶ 1712ರಲ್ಲಿ ಬಸವರಾಜಪುರವೆಂಬ ಗ್ರಾಮವನ್ನು 226 ವರಹಗಳಿಗೆ ಖರೀದಿಸಿದ.[52] ಈ ಪ್ರಕ್ರಿಯೆ ಕೆಳದಿ ಆಳ್ವಿಕೆಯ ಕೊನೆಯವರೆಗೂ ನಡೆದಿತ್ತು. ಕ್ರಿ.ಶ 1723ರ  ದಾಖಲೆಯೊಂದು ತಿಳಿಸುವಂತೆ, ಕೆಳದಿ ಸೋಮಶೇಖರನಾಯಕ ಮೆದು ಗ್ರಾಮದ ಕುರಿಯಾಳದಲ್ಲಿ ಭೂಮಿಯನ್ನು ಖರೀದಿಸಿದ.[53] ಕೆಲವು ಸಂದರ್ಭಗಳಲ್ಲಿ ತೆರಿಗೆ ಕಟ್ಟಲು ಅಸಮರ್ಥರಾದ ವ್ಯಕ್ತಿಗಳ ಅಡವು ಭೂಮಿಯನ್ನು ರಾಜ ವಶಪಡಿಸಿಕೊಳ್ಳುತ್ತಿದ್ದ. ಅದನ್ನು ಅರಮನೆಯ ಅಡವಿನ ಭೂಮಿ ಎಂದು ಕರೆಯಲಾಗಿದೆ. ಕೆಲವು ಸಂದರ್ಭಗಳಲ್ಲಿ ಉತ್ತಾರ ರೂಪದಲ್ಲಿ ನೀಡಿದ ಭೂಮಿಯನ್ನು ವಿನಿಮಯ ಮಾಡಿದ ಉದಾಹರಣೆಗಳಿವೆ. ಕ್ರಿ.ಶ 1723ರಲ್ಲಿ ಶೃಂಗೇರಿ ಸ್ವಾಮಿಗಳು 34 ವರಹ ಬೆಲೆಬಾಳುವ ಉತ್ತಾರ ಭೂಮಿಯನ್ನು ಕುಡೆಯಾಲ ಮಾಗಣೆಯ ಐದು ಮಲೆ ಗ್ರಾಮದಲ್ಲಿ ಸ್ವೀಕರಿಸಿದರು. ಈ ಭೂಮಿಯನ್ನು ಮಂಗಳೂರು ಹೋಬಳಿಯ ಬಂಟ್ವಾಳ ಸೀಮೆಯ ಮೆದು ಗ್ರಾಮದಲ್ಲಿರುವ ಉತ್ತಾರ ಭೂಮಿಗೆ ವಿನಿಮಯ ರೂಪದಲ್ಲಿ ಸ್ವೀಕರಿಸಿದ್ದರು. ಈ ಉತ್ತಾರದ ವಿನಿಮಯವನ್ನು ಅಲ್ಲಿಯ ಮುಖ್ಯಸ್ಥ ಜಾರಿಗೆ ತರುವಂತೆ ಸೋಮಶೇಖರ ನಾಯಕ ಸೂಚಿಸಿದ್ದ.[54]

ಸಾಮಾನ್ಯವಾಗಿ ಬಂಜರು, ಅರಣ್ಯ, ಖನಿಜ ಜೌಗು ಭೂಮಿಗಳು ರಾಜರ ಆಸ್ತಿಯಾಗಿತ್ತು. ಇದರ ಜೊತೆಗೆ ರಾಜ ಬೇಸಾಯ ಯೋಗ್ಯ ಭೂಮಿಯನ್ನು ಹೊಂದಿದ್ದು ಆ ಭೂಮಿ ರಾಜನ ಬೊಕ್ಕಸಕ್ಕೆ ಆದಾಯವನ್ನು ತರುತ್ತಿತ್ತು. ಶಂಕರನಾರಾಯಣ ಗ್ರಾಮದ ಶಾಸನ ಉಲ್ಲೇಖಿಸುವಂತೆ ಆ ಗ್ರಾಮದ ರಾಜರ ಭೂಮಿ 50ಮುಡಿ ಬೀಜವರಿಯಾಗಿದ್ದು ಅದನ್ನು 78 ಹೊನ್ನ ಮುಡಿಗಳಿಗೆ ಗುತ್ತಿಗೆಗೆ ವಹಿಸಿಕೊಡಲಾಗಿತ್ತು.[55] ಕ್ರಿ.ಶ. 1559ರಲ್ಲಿ ಉಡುಪಿ ತಾಲೂಕಿನ ಎರ್ಮಾಳುವಿನಲ್ಲಿ 2 ಲೆಕ್ಕದ ಮುಡಿಯ ಬಯಲು ಗದ್ದೆ ಅರಸರ ಭೂಮಿಯಾಗಿತ್ತು.[56] ಮಿಜಾರು ಮಾಗಣೆಯಲ್ಲಿ ಅರಸರ ಭೂಮಿ, ಬಯಲು, ಬೆಟ್ಟು ಮತ್ತು ಅಡಿಕೆ ತೋಟವನ್ನು ಒಳಗೊಂಡಿತ್ತು.[57]

ಪಟ್ಟದ ಭೂಮಿಯನ್ನು ಬಾಳಿಕೆಯಾಗಿ ಪಡೆದು ಗೇಣಿದಾರರು ಅಥವಾ ಬೇರೆ ಬೇರೆ ವ್ಯಕ್ತಿಗಳು ಬೇಸಾಯ ಮಾಡುತ್ತಿದ್ದರು. ಕ್ರಿ.ಶ.1549ರ ಶಾಸನದ ಮಾಹಿತಿಯಂತೆ ಎರ್ಮಾಳು ಗ್ರಾಮದ ಅರಸರ ಭೂಮಿಯನ್ನು ಗ್ರಾಮದ ಗೇಣಿದಾರರು ಕೃಷಿ ಮಾಡುತ್ತಿದ್ದರು.[58] ಕ್ರಿ.ಶ 1562ರಲ್ಲಿ ಕೋಟೇಶ್ವರ ಗ್ರಾಮದ ಗೋಪಾಡಿಯಲ್ಲಿ ಅರಸರ ಭೂಮಿಯನ್ನು ಅಣ್ಣಾ ಹಜ್ಞಾವರ ಎಂಬವರು ಬೇಸಾಯ ಮಾಡುತ್ತಿದ್ದರು.[59] ಮಂಗಳೂರು ಬಳಿಯ ಅಡ್ಯಾರಿನಲ್ಲಿ ಅರಸರ ಭೂಮಿಯನ್ನು ಸೆಟ್ಟಿಗಳು ಬೇಸಾಯ ಮಾಡುತ್ತಿದ್ದರು.[60] ಕ್ರಿ.ಶ.1750ರಲ್ಲಿ ದಕ್ಷಿಣ ಕನ್ನಡದ ಪಡುವಕೋಡಿ ಗ್ರಾಮದ ಅರಸ ಭೂಮಿ ಪೊಣ್ಣಪ್ಪನ ಬಾಳಿಕೆಯಾಗಿತ್ತು.[61]

ಈ ರೀತಿ ಅರಸರ ಭೂಮಿಯನ್ನು ಬೇಸಾಯ ಮಾಡುತ್ತಿದ್ದವರು ತೆರಿಗೆಯನ್ನು ಅಥವಾ ಸಾಂಕೇತಿಕ ಗೇಣಿಯನ್ನು ನೀಡುತ್ತಿದ್ದರು. ಪಟ್ಟದ ಭೂಮಿಯನ್ನು, ಇತರ ವ್ಯಕ್ತಿಗಳ ಭೂಮಿಯನ್ನು ಪ್ರತ್ಯೇಕವಾಗಿ ಗುರುತಿಸಲಾಗುತ್ತಿತ್ತು. ಪಟ್ಟದ ಭೂಮಿಯನ್ನು ನೀಡುವಾಗ ರಾಜನಿಗೆ ಸಂಪೂರ್ಣ ಅಧಿಕಾರವಿದ್ದರೂ, ಪ್ರಮುಖ ವ್ಯಕ್ತಿಗಳ ಗಮನಕ್ಕೆ ಅದನ್ನು ತಂದು ಅವರ ಅಥವಾ ಆ ಸಂಸ್ಥೆಗಳ ಮೂಲಕ ರಾಜ ಅದನ್ನು ನೀಡುತ್ತಿದ್ದ ದಾಖಲೆಗಳಿವೆ. ಕ್ರಿ.ಶ. 1571ರಲ್ಲಿ ಚೌಟ ರಾಣಿ ಮಿಜಾರು ಸೀಮೆಯ ಮರಕಟ್ಟ ಭೂಮಿಯನ್ನು ಮೂಡಬಿದಿರೆಯ ಬಸದಿಯಲ್ಲಿ ಪೋಷಣೆಗೆ ನೀಡಿದ್ದಳು. ಈ ದಾನವನ್ನು 8 ಸೆಟ್ಟಿಕಾರರು ಮತ್ತು ಸಂಘ ಸಮುದಾಯದ 4 ಎಳೆಮೆಗಳ ಸಮ್ಮುಖದಲ್ಲಿ ನೆರವೇರಿಸಲಾಯ್ತು.[62] ಕೆಲವು ಶಾಸನಗಳ ಅಧ್ಯಯನ ಕರಾವಳಿ ಕರ್ನಾಟಕದ ಹಲವು ಪ್ರಾದೇಶಿಕ ರಾಜರುಗಳು ಈ ರೀತಿ ನಡೆದುಕೊಳ್ಳುತ್ತಿದ್ದರು ಎಂದು ಸೂಚಿಸುತ್ತದೆ.[63]

ಅರಸರು ತಮ್ಮ ಭೂಮಿಯನ್ನು ಹಲವರಿಗೆ ಉಂಬಳಿಯಾಗಿ ಅಥವಾ ಗೇಣಿಗೆ ನೀಡಿದಂತೆ ಸೈನಿಕರಿಗೂ ನೀಡುತ್ತಿದ್ದರು. ಕ್ರಿ.ಶ. 1706ರಲ್ಲಿ ಮಲಬಾರಿನ ವಿರುದ್ಧ ಯುದ್ಧದಲ್ಲಿ ಸಹಕರಿಸಿದ್ದ ಪೊಕಚ್ಚು ಬ್ಯಾರಿಗೆ ಕೆಳದಿ ಬಸವಪ್ಪ, ಮಂಜೇಶ್ವರ ಮತ್ತು ವರ್ಕಾಡಿ ಮಾಗಣೆಯ ಹೊಸಬೆಟ್ಟು ಮತ್ತು ಪಾತೂರು ಗ್ರಾಮಗಳಲ್ಲಿ ಭೂಮಿಯನ್ನು ಉಂಬಳಿ ನೀಡಿದ.[64] ಭೂಮಿಯನ್ನು ಅಮರ ಮಾಗಣೆಯಾಗಿ ನೀಡುವುದನ್ನು ಈ ಕಾಲದಲ್ಲಿ ಕಾಣಬಹುದಾಗಿದೆ. ಇಲ್ಲಿ ಅಮರ ನಾಯಕರೆಂದರೆ ಸೈನ್ಯದ ಅಧಿಕಾರಿಯಾಗಿದ್ದು ರಾಜರಿಂದ ಭೂಮಿಯನ್ನು ಹೊಂದುತ್ತಿದ್ದರು. ಅವರು ರಾಜನ ಗೇಣಿದಾರರೆಂದೂ ಪರಿಗಣಿಸಬಹುದು. ಈ ವ್ಯವಸ್ಥೆಯಲ್ಲಿ ರಾಜನೇ ಭೂಮಿಯ ಒಡೆಯನಾಗಿರುತ್ತಿದ್ದ. ಆ ಭೂಮಿಯನ್ನು ಅಮರಮಾಗಣೆಯಾಗಿ ಸೇನಾಧಿಕಾರಿಗಳಿಗೆ ನಿಶ್ಚಿತ ಕಪ್ಪ ಕಾಣಿಕೆಯನ್ನು ನೀಡುವ ಅಥವಾ ಸೇನೆಯನ್ನು ಒದಗಿಸುವ ನಿರೀಕ್ಷೆಯಲ್ಲಿ ನೀಡಲಾಗುತ್ತಿತ್ತು.[65] ಶಿವತತ್ವರತ್ನಾಕರ ಮತ್ತು ಕೆಳದಿ ಶಾಸನಗಳು ಹೇಳುವಂತೆ ಕೆಳದಿ ಸದಾಶಿವನಾಯಕ ವಿಜಯನಗರದ ದೊರೆ ಸದಾಶಿವರಾಯನಿಂದ ಬಾರ್ಕೂರು ಮತ್ತು ಮಂಗಳೂರು ರಾಜ್ಯಗಳನ್ನು ಅಮರಮಾಗಣೆಯಾಗಿ ಪಡೆದಿದ್ದ.[66] ಇದು ಅವನು ಸಲ್ಲಿಸಿದ ಸೈನಿಕ ಸೇವೆಯ ಪ್ರತಿಫಲವಾಗಿತ್ತು. ಕೊಡಗು ರಾಜ ಹಾಲೇರಿ ದೊಡ್ಡ ವೀರಪ್ಪನಿಗೆ ಕೆಳದಿಯ ರಾಜ, ಅಮರ ಸುಳ್ಯ ಮಾಗಣೆಗಳನ್ನು ನೀಡಿದನೆಂದು ಹೇಳಲಾಗಿದೆ.[67] ಆದರೆ ಐತಿಹ್ಯದ ಪ್ರಕಾರ ಕೆಳದಿಯ ರಾಜ ಸದಾಶಿವ ನಾಯಕ ಕೊಡಗಿನ ಮುದ್ದುರಾಜನಿಗೆ ಈ ಅಮರಮಾಗಣೆಯನ್ನು ದಯಪಾಲಿಸಿದ್ದ.[68] ಹಾಗೆಯೇ ಕೊಡಗುರಾಜನ ಸೈನಿಕ ಸೇವೆಗಳಿಗೆ ಹೈದರಾಲಿ ಸಂತೋಷಗೊಂಡು ಪಂಜ, ಬೆಳ್ಳಾರೆ, ಸುಳ್ಯ ಪ್ರದೇಶಗಳನ್ನು ಅಮರಮಾಗಣೆಯಾಗಿ ನೀಡಿದ ಎಂಬುದಾಗಿ ಸೂರ್ಯನಾಥ ಕಾಮತ್ ಅಭಿಪ್ರಾಯಪಡುತ್ತಾರೆ.[69] ಆದರೆ ಈ ಹಿಂದೆ ಕೆಳದಿ ರಾಜರು ನೀಡಿದ ಉಂಬಳಿಯನ್ನೇ ಹೈದರಾಲಿ ಮುಂದುವರೆಸಿರಬೇಕೆಂದು ತೋರುತ್ತದೆ. ಕಾಲಾಂತರದಲ್ಲಿ ಈ ಅಮರನಾಯಕರು ತಾವು ಅಮರಮಾಗಣೆಯಾಗಿ ಪಡೆದ ಭೂಮಿಯ ಆಡಳಿತಗಾರರಾಗುತ್ತಿದ್ದರು. ಸದಾಶಿವ ನಾಯಕ

ಅಮರಮಾಗಣೆಯನ್ನು ಪಡೆದು ಸ್ಥಳೀಯ ರಾಜರನ್ನು ಸದೆಬಡಿದು. ತೆರಿಗೆಯನ್ನು ವಿಧಿಸಿ ತನ್ನ ಪ್ರಾಂತ್ಯದಲ್ಲಿ ಕಾನೂನು ಸುವ್ಯವಸ್ಥೆಯನ್ನು ಕಾಪಾಡಿದ.[70]

ಬೇರೆ ಬೇರೆ ಸಂದರ್ಭಗಳಲ್ಲಿ ರಾಜರ ಭೂಮಿಯ ಹಸ್ತಾಂತರ ಪ್ರಕ್ರಿಯೆ ನಡೆಯುತ್ತಿತ್ತು. ಈ ವ್ಯವಸ್ಥೆಯಲ್ಲಿ ಸರಕಾರಗಳು ಭೂಮಿಯ ಖಾಸಗಿ ಒಡೆತನವನ್ನು ಗೌರವಿಸುತ್ತಿದ್ದವು. ಇಲ್ಲಿ ದಾನ ಪಡೆದವನು ತಾನು ಪಡೆದ ಭೂಮಿಯನ್ನು ಮಾರಲು, ಅಡವು ಇಡಲು ಅಥವಾ ಕೊಟ್ಟು ಬಿಡಲು ಸಂಪೂರ್ಣ ಅಧಿಕಾರವನ್ನು ಹೊಂದಿದ್ದ. ಒಂದು ವೇಳೆ ರಾಜ ಜನಾವೃತವಾದ ಗ್ರಾಮಗಳನ್ನು ಹಸ್ತಾಂತರಿಸುವುದಿದ್ದರೆ ಆ ವ್ಯಕ್ತಿಗಳಿಂದ ಅದನ್ನು ಖರೀದಿಸಿದ ನಂತರ ದಾನ ಮಾಡುತ್ತಿದ್ದ.[71] ಅದೇ ಸಂದರ್ಭದಲ್ಲಿ ರಾಜನಿಗೆ ಗ್ರಾಮಗಳ ಮತ್ತು ಭೂಮಿಯ ಮೇಲೆ ಅಪರಿಮಿತ ಮತ್ತು ಸಂಪೂರ್ಣ ಒಡೆತನವಿದ್ದು ಅವನು ತನ್ನ ಇಷ್ಟ ಪ್ರಕಾರ ಅದನ್ನು ವಿಲೇವಾರಿ ಮಾಡಬಹುದಾಗಿತ್ತು.

**ಬಾಳಿಕೆ, ಮೂಲ ಬಾಳಿಕೆ, ಸಾದನಾಪಟ್ಟಿ ಮತ್ತು ಅದರ ಲಕ್ಷಣಗಳು:** ತುಳುನಾಡಿನಲ್ಲಿ ಭೂಮಿಯ ಖಾಸಗಿ ಒಡೆತನವನ್ನು ರಾಜರುಗಳು ಮನ್ನಿಸಿದ್ದರು. ಅಂತಹ ಭೂಮಿಗಳನ್ನು ವ್ಯಕ್ತಿಗಳು ಒಂದೋ ಖರೀದಿಸಬೇಕಾಗಿತ್ತು. ಅಥವಾ ಆ ಭೂಮಿ ಪೂರ್ವಜರಿಂದ ಬಂದವಾಗಿರಬೇಕಾಗಿತ್ತು. ಈ ಭಾಗದಲ್ಲಿ ಕೃಷಿಯೇ ಪ್ರಧಾನವಾಗಿದ್ದು ಭೂ ಆಸ್ತಿಯನ್ನು ಬಾಳಿಕೆ ಅಥವಾ ಬಾಳು ಎಂದು ತಿಳಿಯಲಾಗುತ್ತಿತ್ತು.[72] ಶಾಸನಗಳಲ್ಲಿ ಬಾಳು ಅಥವಾ ಬಾಳಿಕೆ, ಮೂಲ ಬಾಳಿಕೆ, ಮತ್ತು ಮೂಲ ಬಾಳಿಕೆ ಪಟ್ಟಿಯಂತಹ ವಿವರಣೆಗಳು ದೊರೆಯುತ್ತವೆ. ಮೂಲ ಬಾಳಿಕೆಯನ್ನು ವಂಶಪಾರಂಪರ್ಯವಾಗಿ ಬಂದ ಭೂಮಿ ಎಂದು ಗುರುತಿಸಲಾಗಿದೆ.[73] ದಾಖಲಿಸಲ್ಪಟ್ಟ ಮತ್ತು ವ್ಯವಹಾರದಲ್ಲಿ ಚಲಾವಣೆಗೊಂಡ ಭೂ ಆಸ್ತಿಯನ್ನು ಮೂಲಬಾಳಿಕೆ ಪಟ್ಟಿ ಎನ್ನಲಾಗಿದೆ.[74] ಮೂಲಬಾಳಿಕೆಯಲ್ಲಿ ಭತ್ತದ ಗದ್ದೆ, ಮನೆ, ಮನೆಯ ನಿವೇಶನಗಳು, ತೆಂಗು ಮತ್ತು ಅಡಿಕೆ ತೋಟಗಳಿರುತ್ತಿತ್ತು. ಬಸ್ರೂರಿನ ಶಾಸನದಲ್ಲಿ, ಮೂಲ ಬಾಳು ಭೂಮಿ, ದನದ ಕೊಟ್ಟಿಗೆ, ತೆಂಗು ಮತ್ತು ಹಲಸಿನ ಮರಗಳನ್ನು ಹೊಂದಿದ್ದಾಗಿ ಉಲ್ಲೇಖ ಬರುತ್ತದೆ.[75] ಇನ್ನೊಂದು ಶಾಸನ ಬಸ್ರೂರಿನಲ್ಲಿ ಗುಜ್ಜಾಡಿ ಗ್ರಾಮದ ಕೃಷ್ಣ ಕೊಡಂಚ ಎನ್ನುವವನ ಮೂಲ ಬಾಳು ಭೂ ಆಸ್ತಿ 12 ಮುಡಿ ಅಕ್ಕಿಯ ಬಯಲು, ಪಂಚಗಂಗಾವಳಿ ನದಿಯ ಸಮೀಪವಿರುವ ತೆಂಗಿನ ತೋಟವನ್ನು ಒಳಗೊಂಡಿರುವ ಮಾಹಿತಿ ನೀಡುತ್ತದೆ. ಅದೇ ಗ್ರಾಮದ ಸಂಕರ ಕೊಡಜನ ಮೂಲಬಾಳು ಭೂಮಿ ವಿವಿಧ ರೀತಿಯ ಭತ್ತದ ಗದ್ದೆಗಳು ಮತ್ತು ತೆಂಗಿನ ತೋಟವನ್ನು ಹೊಂದಿತ್ತು.[76] ಸಾಮಾನ್ಯವಾಗಿ ವ್ಯಕ್ತಿಗಳು ಖರೀದಿಯ ಮೂಲಕ ಅಥವಾ ಗುತ್ತಿಗೆಯ ಆಧಾರದಲ್ಲಿ ಅಥವಾ ಕಾಣಿಕೆಯ ಮೂಲಕ ಬಾಳಿಕೆ ಭೂಮಿಯನ್ನು ಹೊಂದುತ್ತಿದ್ದರು.[77] ಬಾಳಿಕೆ ಭೂಮಿಯನ್ನು ದಾಖಲೆ ಸಹಿತ ಸರಕಾರ ವ್ಯಕ್ತಿಗೆ ನೀಡಿದಾಗ ಬಹುಶಃ ಅದು ಮೂಲ ಬಾಳಿಕೆ ಅಥವಾ ಬಾಳಿಕೆ ಸಾಧನ ಎನಿಸುತ್ತದೆ. ಕ್ರಿ.ಶ. 1587 ಮತ್ತು 1653ರ ಶಾಸನಗಳು ಇದನ್ನು ದೃಢಪಡಿಸುತ್ತದೆ. ಬಂಗರು ಮತ್ತು ವಿಟ್ಲದ ಅರಸರು ಕ್ರಮವಾಗಿ ಪರಮೇಶ್ವರ ಹೊಳ್ಳನಿಗೆ ಮೊಂಡಕಾಪುವಿನಲ್ಲಿ ಮತ್ತು ಅನಂತಯ್ಯ ಎಂಬವನಿಗೆ

ಕರೊಂಪಾಡಿ ಗ್ರಾಮದಲ್ಲಿ ಭೂಮಿಯನ್ನು ಮೂಲಬಾಳಿಕೆ ಮತ್ತು ಬಾಳಿಕೆ ಸಾಧನವಾಗಿ ನೀಡಿದರು.[78] ಮೂಲಬಾಳಿಕೆ ಭೂಮಿಯನ್ನು ಭೂಮಿಯ ಒಡೆಯರು ಗೇಣಿದಾರರಿಗೆ ಗುತ್ತಿಗೆಯಾಗಿ ಬೇಸಾಯಕ್ಕೆ ನೀಡುತ್ತಿದ್ದರು.[79] ಬಾಳಿಕೆ ಭೂಮಿಯನ್ನು ಹೊಣೆಯಾಗಿರಿಸಿ ಮೈಸಾಲ ಪಡೆಯಬಹುದಾಗಿತ್ತು.[80] ಕೆಲವು ಸಂದರ್ಭಗಳಲ್ಲಿ ಧಾರ್ಮಿಕ ಸಂಸ್ಥೆಗಳು ಮತ್ತು ದೇವಾಲಯಗಳು ಬಾಳಿಕೆಯ ರೂಪದಲ್ಲಿ ಭೂಮಿಯನ್ನು ಪಡೆಯುತ್ತಿದ್ದವು.[81] ಕೆಲವು ಸಂದರ್ಭಗಳಲ್ಲಿ ವೃತ್ತಿ ಮತ್ತು ಉತ್ತಾರ ಭೂಮಿಗಳನ್ನು ಮೂಲ ಸಾಧನ ಪಟ್ಟಿಯಲ್ಲಿ ಸೇರಿಸಲಾಗುತ್ತಿತ್ತು.[82]

**ಮೂಲಿಕಾರ ಮೂಲಿವರ್ಗ ಮತ್ತು ಮೂಲಿಗ:** ಶಾಸನಗಳು ಮೂಲಿಕಾರ ಮೂಲಿವರ್ಗ ಮತ್ತು ಮೂಲಿಗ ಪದಗಳನ್ನು ಉಲ್ಲೇಖಿಸುತ್ತವೆ. ಮೂಲಿಕ(ಮೂಲಿಗ) ಎಂದರೆ ಸಾಮಾನ್ಯವಾಗಿ ಬೇಸಾಯದ ಭೂಮಿಯನ್ನು ಯಜಮಾನನಿಂದ ಖಾಯಂ ಆಗಿ ಗುತ್ತಿಗೆಗೆ ಪಡೆದು ಬೇಸಾಯ ಮಾಡುವವನು. ಕ್ರಿ.ಶ.1555ರ ಬಸ್ರೂರಿನ ಶಾಸನದ ಮಾಹಿತಿಯಂತೆ ಬ್ರಹ್ಮರ ಆದಿವಾಸ ಎನ್ನುವ ಸ್ಥಳದಲ್ಲಿದ್ದ ನಾರಾಯಣ ಕಾರ್ನಾಟರ ಮಗ ದೇವ ಕಾರ್ನಾಟ ಆ ಸ್ಥಳದ ಮೂಲಿಗನಾಗಿದ್ದ.[83] ಮೂಲಭೂಮಿಯನ್ನು ವಂಶ ಪಾರಂಪರ್ಯ ಆಸ್ತಿಯೆಂದು ಪರಿಗಣಿಸಲಾಗಿದ್ದು ಮೂಲಿಗಾರ ಆ ಭೂಮಿಯನ್ನು ಅವನ ಇಷ್ಟದಂತೆ ವಿಲೇವಾರಿ ಮಾಡಬಹುದಾಗಿತ್ತು. ಉದಾಹರಣೆಗೆ ಕ್ರಿ.ಶ.1562ರಲ್ಲಿ ಕುಂದಾಪುರ ತಾಲೂಕಿನ ಕುಪ್ಪರ ಗ್ರಾಮದ ಗೊರಚೆ ಎನ್ನುವಲ್ಲಿ ಕೇಶವ ಹೆಬ್ಬಾರ್ ಎನ್ನುವವನು ತನ್ನ ಮೂಲ ಭೂಮಿಯನ್ನು ಪಿತ್ರಾರ್ಜಿತ ಆಸ್ತಿ ಎನ್ನುವ ಹಿನ್ನೆಲೆಯಲ್ಲಿ ಅದರ ಎಲ್ಲಾ ಮೂಲ ಹಕ್ಕುಗಳೊಂದಿಗೆ ಶಂಕರನಾರಾಯಣ ದೇವಳಕ್ಕೆ ಮಾರಿದ.[84] ಭೂ ವ್ಯವಹಾರಗಳಲ್ಲಿ ಮೂಲಿ ಹಕ್ಕನ್ನು ಖರೀದಿಸಲು ಅವಕಾಶವಿತ್ತು. ಕ್ರಿ.ಶ.1554ರ ಬಸ್ರೂರಿನ ಶಾಸನದ ಮಾಹಿತಿಯಂತೆ ತಿಮ್ಮಿ ಶೆಟ್ಟಿ ಪಡುವ ಕೇರಿಯ ಭೂಮಿಯ ಮೂಲಿಹಕ್ಕನ್ನು ನಗರದ ಸೆಟ್ಟಿಕಾರರು ಮತ್ತು ಹಲರಿಂದ ಪಡೆದಿದ್ದನು.[85]

### 3.3 ಭೂ ವ್ಯವಹಾರಗಳು

ಕೆಳದಿ ಆಳ್ವಿಕೆಯ ಕಾಲದ ತುಳುನಾಡಿನ ಭೂ ವ್ಯವಹಾರಗಳು, ಮುಖ್ಯವಾಗಿ ಕ್ರಯ ದಾನ ಶಾಸನ, ಕ್ರಯದಾನ ಪಟ್ಟಿ, ಮಾರಾಟದ ಸ್ವರೂಪ, ಖರೀದಿ, ಉಂಬಳಿ, ಉತ್ತಾರ ಅಡವು ಮೊದಲಾದ ವಿಚಾರಗಳನ್ನು ಇಲ್ಲಿ ಚರ್ಚಿಸಲಾಗಿದೆ. ಪ್ರಾರಂಭದ ಹಂತದಲ್ಲಿ ಸರಳವಾಗಿದ್ದ ಈ ಭೂ ವ್ಯವಹಾರಗಳು ಆನಂತರದ ಕಾಲಘಟ್ಟದಲ್ಲಿ ಸಂಕೀರ್ಣವಾದವು ಎಂಬುದಾಗಿ ತಿಳಿದುಬರುತ್ತದೆ. ಕ್ರಿ.ಶ. 1600ರವರೆಗಿನ ಭೂಮಿಯ ಮಾರಾಟ, ಖರೀದಿ, ಮತ್ತು ಭೂ ದತ್ತಿ ಮುಂತಾದ ಪ್ರಕ್ರಿಯೆಗಳಲ್ಲಿ ಸರಕಾರದ ಹಸ್ತಕ್ಷೇಪವನ್ನು ಸ್ಪಷ್ಟವಾಗಿ ಗುರುತಿಸಬಹುದು. ಭೂಮಿಯ ಅಡವಿಗೆ ಸಂಬಂಧಿಸಿದಂತೆ ಶಾಸನಗಳಲ್ಲಿ ಅರುವರ, ಅಂಶದಾರುವಾರ ಮತ್ತು ಬೀಡುವರ ಅಥವಾ ಬಿಡರುವಾರ ಮುಂತಾದ ಪದಗಳು ದೊರೆಯುತ್ತವೆ.

ಆರುವಾರ ಎನ್ನುವುದು ಹಣಕಾಸಿನ ಉದ್ದೇಶಕ್ಕೆ ಭೂಮಿಯನ್ನು ಗುತ್ತಿಗೆಗೆ ನೀಡುವ ಅರ್ಥವನ್ನು ಕೊಡುತ್ತದೆ.[86] ತುಳುನಾಡಿನಲ್ಲಿ ಹಲವು ಶಾಸನಗಳು ಈ ಆರುವರ ಭೂಮಿಯ ಬಗ್ಗೆ ಮಾಹಿತಿ ನೀಡುತ್ತವೆ.[87] ಆರುವಾರ ವ್ಯವಸ್ಥೆಯಲ್ಲಿ ಮೂಲಿ ಹಕ್ಕು ಭೂಮಿಯ ಯಜಮಾನನಲ್ಲೇ ಇದ್ದು ಭೂಮಿಯ ಲಾಭಾಂಶಗಳು ಆರುವಾರವನ್ನು ಪಡೆದವನ ಪಾಲಾಗುತ್ತಿತ್ತು.[88] ಆರುವಾರ ಭೂಮಿಯ ಮೇಲೆ ಸಾಲ ಪಡೆಯುವುದನ್ನು ಅಂತರಾರುವರ ಎಂದು ಕರೆಯಲಾಗುತ್ತಿತ್ತು.[89] ಬಿಡರುವಾರ ಎಂದರೆ ಅಡವು ನೀಡಿದ ಭೂಮಿಯ ಮೇಲೆ ತೆರಿಗೆ ವಿಧಿಸುವುದು. ಆ ಭೂಮಿ ಕೃಷಿಯೋಗ್ಯವಾಗಿರಬೇಕು ಆದರೆ ಬೇಸಾಯ ಮಾಡುತ್ತಿರಲಿಲ್ಲ. ಈ ಮಾದರಿಯ ಭೂಮಿ ಬಸ್ರೂರು ಮತ್ತು ಪಡುವ ಪಣಂಬೂರು ಪ್ರದೇಶದಲ್ಲಿತ್ತು.[90]

ಕ್ರಿ.ಶ. 1600 ನಂತರ ತುಳುನಾಡಿನ ಭೂ ವ್ಯವಹಾರಗಳಲ್ಲಿ ಕ್ರಯದಾನ ಶಾಸನ ಅಥವಾ ಕ್ರಯದಾನ ಪಟ್ಟಿ ಜನಪ್ರಿಯವಾಗಿತ್ತು. ಕೆಳದಿ ವೀರಭದ್ರನಾಯಕ ಉಡುಪಿಯ ಕೃಷ್ಣ ದೇವಾಲಯಕ್ಕೆ ನೀಡಿದ ಕ್ರಯದಾನದ ಶಾಸನದಲ್ಲಿ, ನೀಡಿದ ಭೂಮಿ. ಅದರ ಮೌಲ್ಯ, ಅದರ ಸ್ಥಳ ಮತ್ತು ಗಡಿಗುರುತುಗಳು ದಾಖಲಾಗಿವೆ. ಕೋನಪ್ಪ ಕೊಳ್ಳಾಲನಿಂದ 100 ವರಹಗಳನ್ನ ಪಡೆದು ಕ್ರಯದಾನವನ್ನು ಜಾರಿಗೆ ತರಲಾಗಿದೆ.[91] ವರ್ಷಗಳು ಕಳೆದಂತೆ ಕ್ರಯದಾನದ ವಿಚಾರದಲ್ಲಿ ಕೆಲವೊಂದು ನಿರ್ದಿಷ್ಟ ಕ್ರಮಗಳನ್ನು ಅನುಸರಿಸಲಾಯ್ತು. ಕ್ರಯದಾನ ಪ್ರಕ್ರಿಯೆಯ ಸಂದರ್ಭದಲ್ಲಿ ಗ್ರಾಮದ ಪ್ರಮುಖರ ಸಮ್ಮುಖದಲ್ಲಿ ಸಂಬಂಧಿಸಿದ ಭೂಮಿಯ ಗಡಿಗುರುತು ಮಾಡಲಾಗುತ್ತಿತ್ತು. ಸೇನಬೋವ ಗಡಿಯಸ್ನು ಗುರುತಿಸಿ ಭೂಮಿಯ ಕಂದಾಯವನ್ನು ದಾಖಲಿಸಿ ದಾಖಲೆಗಳನ್ನು ಸಂರಕ್ಷಿಸಿ ಇಡಬೇಕಾಗಿತ್ತು.[92] ಕ್ರಿ.ಶ.1680ರಲ್ಲಿ ಕೆಳದಿ ಚೆನ್ನಮ್ಮಾಜಿ ಗಂಗೊಳ್ಳಿಯಲ್ಲಿ ಹೊಸದಾಗಿ ನಿರ್ಮಿಸಿದ ವೆಂಕಟ್ರಮಣ ದೇವಳದ ಪೂಜಾವಿಧಿ ವಿಧಾನಗಳಿಗೆ ರಾಮ ಪೈ ಎನ್ನುವವರಿಗೆ ಕ್ರಯದಾನವನ್ನು ನೀಡಿದ್ದಳು. ಗ್ರಾಮ ಪ್ರಮುಖರ ಸಮ್ಮುಖದಲ್ಲಿ ಸೇನಬೋವನು ಆ ಕ್ರಯದಾನವನ್ನು ಕ್ರಮಬದ್ಧಗೊಳಿಸಿದ.[93] ಈ ರೀತಿಯ ಕ್ರಯದಾನ ಪದ್ಧತಿ ತುಳುನಾಡು ಸೇರಿದಂತೆ ಕರಾವಳಿಯಲ್ಲಿ ಕೆಳದಿ ಸಾಮ್ರಾಜ್ಯದ ಅವನತಿಯ ನಂತರವೂ ಮುಂದುವರೆದಿತ್ತು.[94]

ಇವುಗಳಲ್ಲದೆ ಇತರ ವರ್ಗದ ಭೂ ವ್ಯವಹಾರಗಳು ಅಂದರೆ ಮಾರಾಟ, ಖರೀದಿ, ಅಡವು, ಉಂಬಳಿ, ಉಂಬಳಿ ಉತ್ತಾರ, ಮತ್ತು ಉತ್ತಾರ ಇವುಗಳೂ ತುಳುನಾಡಿನಲ್ಲಿ ಗಮನಾರ್ಹವಾಗಿದ್ದವು. ಈ ವ್ಯವಹಾರಗಳಲ್ಲಿ ಸರಕಾರ ಭೂ ಹಿಡುವಳಿದಾರನ ಹಕ್ಕನ್ನು ಮನ್ನಿಸಿತ್ತು. ಸಾಮಾನ್ಯವಾಗಿ ರಾಜರುಗಳ ಭೂಮಿಯನ್ನು ವ್ಯಕ್ತಿಗಳಿಗೆ ಮಾರಾಟ ಮಾಡಲಾಗುತ್ತಿತ್ತು ಅಥವಾ ಧಾರ್ಮಿಕ ಸಂಸ್ಥೆಗಳಿಗೆ ನೀಡಲಾಗುತ್ತಿತ್ತು. ಈ ಪ್ರಕ್ರಿಯೆಯಲ್ಲಿ ಸರಕಾರ ಕೆಲವು ನಿಯಮಗಳನ್ನು ಹೇರುತ್ತಿತ್ತು. ಮುಖ್ಯವಾಗಿ, ಭೂಮಿಯ ಫಲವತ್ತತೆಯನ್ನು ಹೆಚ್ಚಿಸಬೇಕು ಎನ್ನುವುದು ಒಂದು ಷರತ್ತಾಗಿತ್ತು. ಆ ಭೂಮಿಯಲ್ಲಿ ತೆಂಗು, ಅಡಿಕೆ, ಬೇಸಾಯ ಮಾಡಿ ಅದರ ಆದಾಯವನ್ನು ಧಾರ್ಮಿಕ ಉದ್ದೇಶಗಳಿಗೆ ಬಳಸಬೇಕೆಂದು ಸರಕಾರದಿಂದ ಸೂಚನೆ ನೀಡಲಾಗುತ್ತಿತ್ತು ಎಂಬುದಾಗಿ ಕೆಳದಿ ವೀರಭದ್ರ ನಾಯಕನ ಶಾಸನದಿಂದ ತಿಳಿಯುತ್ತದೆ.[95] ಕಿ.ಶ.1715ರಲ್ಲಿ ಮಂಜೇಶ್ವರದ

ಸುಬ್ರಾಯ ಭಟ್ಟ ಕೆಳದಿಯ ರಾಜ ಇಮ್ಮಡಿ ಸೋಮಶೇಖರನಾಯಕನಿಂದ ಭೂಮಿಯನ್ನು ಖರೀದಿಸಿ ಆ ಭೂಮಿಯಲ್ಲಿ ತೆಂಗಿನ ಮರವನ್ನು ಬೆಳೆಸಲಾಗುವುದು ಮತ್ತು ಅದರ ಆದಾಯವನ್ನು ಮಂಜೇಶ್ವರದ ನರಸಿಂಹ ದೇವರಿಗೆ ಪೂಜಾದಿಗಳಿಗೆ ವಿನಿಯೋಗಿಸಲಾಗುವುದು ಎಂಬುದಾಗಿ ಭರವಸೆ ನೀಡುತ್ತಾನೆ.[96] ಕುಂಬಳೆ ವಿಟ್ಲ ಪ್ರಾಂತ್ಯದಲ್ಲಿಯೂ ಈ ರೀತಿಯ ಭೂ ವ್ಯವಹಾರಗಳು ಸಾಮಾನ್ಯವಾಗಿತ್ತು.[97] ಭೂ ಖರೀದಿಯ ವ್ಯವಹಾರದಲ್ಲಿ ಖರೀದಿದಾರ ಒಂದು ಸಣ್ಣ ಮೊತ್ತವನ್ನು ಸರಕಾರದ ಖಜಾನೆಗೆ ಕಾಣಿಕೆಯ ರೂಪದಲ್ಲಿ ಸಲ್ಲಿಸಬೇಕಾಗಿತ್ತು. ಕ್ರಿ.ಶ.1670ರ ಮಂಜೇಶ್ವರದ ಕಾಗದದ ದಾಖಲೆಯೊಂದು ಸಜಿಪ ಮಾಗಣೆಯ ಮಂಜೆ ಗ್ರಾಮದ ನೂಜೆ ಎನ್ನುವ ಸ್ಥಳದಲ್ಲಿ ಭೂಮಿಯನ್ನು ಪಡೆಯುವಾಗ ನಾರಾಯಣ ಕಮತಿ ಎನ್ನುವವರು 120 ವರಹಗಳನ್ನು ಅರಮನೆಗೆ ಕಾಣಿಕೆಯಾಗಿ ಸಲ್ಲಿಸಿದ್ದರೆಂದು ತಿಳಿಸುತ್ತದೆ.[98] ಹಾಗೆಯೇ ಸ್ಥಳೀಯರಾದ ಬಂಗರಸರು ವಿಟ್ಲದರಸರು, ಕುಂಬಳೆಯರಸರು, ತೋಳಹರು, ಈ ರೀತಿಯ ಕಾಣಿಕೆಯನ್ನು ಸ್ವೀಕರಿಸುತ್ತಿದ್ದರು.[99]

ಭೂವ್ಯವಹಾರಗಳಲ್ಲಿ, ಉಂಬಳಿ, ಉಂಬಳಿ ಉತ್ತಾರ ಮತ್ತು ಉತ್ತಾರ ಭೂಮಿಗಳನ್ನು ಉತ್ತಾರ ನೀಡಲು ಉನ್ನತ ಸ್ಥಾನದಲ್ಲಿದ್ದ ವ್ಯಕ್ತಿಗಳು ಶಿಫಾರಸ್ಸು ಮಾಡುತ್ತಿದ್ದರು. ಹಾಗೆಯೇ ಉತ್ತಾರ ಭೂಮಿಯನ್ನು ವಿನಿಮಯ ಮಾಡುವ ಅವಕಾಶವೂ ಇತ್ತು.[100] ಉತ್ತಾರ ಭೂ ವ್ಯವಹಾರಗಳನ್ನು ಕಡತಗಳಲ್ಲಿ ದಾಖಲಿಸಲಾಗುತ್ತಿತ್ತು ಮತ್ತು ಗ್ರಾಮದ ಸೇನಬೋವ ಆ ಭೂಮಿಗೆ ಒಂದಿಷ್ಟು ಹಣ ವಿಧಿಸುತ್ತಿದ್ದ. ಉತ್ತಾರ ಭೂಮಿಗಳನ್ನು ಗ್ರಾಮದ ಮಹನೀಯರ ಸಮ್ಮುಖದಲ್ಲಿ ಗುರುತಿಸಲಾಗುತ್ತಿತ್ತು.[101]

**ಭೂ ಅಡವು:** ಧಾರ್ಮಿಕ ಸಂಸ್ಥೆಗಳ ಮುಂದಾಳುಗಳು ತಮ್ಮದೇ ಆದ ಭೂ ವ್ಯವಹಾರಗಳನ್ನು ನಡೆಸುತ್ತಿದ್ದರು. ಅವರು ರಾಜನ ಖಜಾನೆಗೆ ಕಾಣಿಕೆಯ ರೂಪದ ತೆರಿಗೆಯನ್ನು ನೀಡಿ ಹೊಸ ಭೂಮಿಯನ್ನು ಖರೀದಿಸಬಹುದಾಗಿತ್ತು. ದೇವಾಲಯಕ್ಕೆ ದಾನ ನೀಡಿದ ಭೂಮಿಯನ್ನು ಧಾರ್ಮಿಕ ಸಂಸ್ಥೆಗಳ ಮುಖಂಡರು ಅಡವು ಇಡಬಹುದಾಗಿತ್ತು. ಅಡವಿನ ಮೂಲಕ ತೆಗೆದುಕೊಂಡ ಅಸಲು ಮತ್ತು ಬಡ್ಡಿಯನ್ನು ನೀಡಲಾಗದಿದ್ದರೆ ಅವರು ಅಡಮಾನ ಭೂಮಿಯನ್ನು ಅಡವು ಇಟ್ಟವನ ಒಪ್ಪಿಗೆಯನ್ನು ಪಡೆದು ಮಾರಿ ಬಂದ ಹಣದಿಂದ ಅಸಲು ಮತ್ತು ಬಡ್ಡಿಯನ್ನು ಕಟ್ಟಬಹುದಾಗಿತ್ತು. ಅಡಮಾನ ಭೂಮಿಯನ್ನು ಖರೀದಿಸಿದವನು ಸರಕಾರಕ್ಕೆ ಆ ಬೆಲೆಯನ್ನು ನೀಡಿ ಅಡಮಾನದ ಹಕ್ಕುಪತ್ರಕ್ಕೆ ಬದಲಾಗಿ ಹೊಸ ಪತ್ರವನ್ನು ಪಡೆಯಬಹುದಾಗಿತ್ತು.[102] ಈ ಲಕ್ಷಣಗಳು ಕುಂಬಳೆ ಮತ್ತು ವಿಟ್ಲದ ಸಂಸ್ಥಾನಗಳಲ್ಲಿ ಪ್ರಚಲಿತದಲ್ಲಿತ್ತು.[103]

**ಭೂಮಿಯ ಜಂಟಿ ಮಾಲಕತ್ವ:** ಸೆಟ್ಟಿಗಾರರ ಗಡಿ, ಹಲರ ಗಡಿ, ಹೊಲೆಯರ ಗಡಿ, ಬಳೆಗಾರರ ಗಡಿ, ಕುಂಬಾರರ ಹಕ್ಕಲು, ಗಾಣಿಗರ ಬೆಟ್ಟು, ಮೊದಲಾದ ಶಾಸನೋಕ್ತ ಪದಗಳು ಈ ಕಾಲದಲ್ಲಿದ್ದ ಭೂಮಿಯ ಜಂಟಿ ಮಾಲಕತ್ವವನ್ನು ಸೂಚಿಸುತ್ತವೆ.[104] ಕ್ರಿ.ಶ.1519ರ ಶಾಸನ ಬಳೆಗಾರ ಸಮುದಾಯದವರ ಭೂಹಿಡುವಳಿಯನ್ನು ತಿಳಿಸುತ್ತದೆ.[105] ಉಪ್ಪುಂದದ ಶಾಸನ.[106] ಹನ್ನೆರಡು ಪ್ರಭು ಪ್ರಜೆಗಳ ಮಾಲಕತ್ವದ

ಭೂಮಿಯ ಕುರಿತಾಗಿ ತಿಳಿಸುತ್ತದೆ. ಬಸ್ರೂರಿನ ಹಲರು ಸೆಟ್ಟಿಕಾರರು ಜಂಟಿಯಾಗಿ ಅನುಭವಿಸುತ್ತಿದ್ದ ಭೂಮಿಯ ಕುರಿತಾಗಿ ಇಲ್ಲಿಯ ಕ್ರಿ.ಶ. 1554ರ ಶಾಸನ ಮಾಹಿತಿ ನೀಡುತ್ತದೆ.[107] ಸ್ಥಾನಿಕರು ಅನುಭವಿಸುತ್ತಿದ್ದ ಜಂಟಿ ಒಡೆತನದ ಭೂಮಿಯ ಮಾಹಿತಿಯೂ ಶಾಸನೋಕ್ತವಾಗಿದೆ.[108] ಹೀಗೆ ಹತ್ತಾರು ಶಾಸನಗಳು ಭೂಮಿಯ ಜಂಟಿ ಮಾಲಿಕತ್ವವನ್ನು ದೃಢಪಡಿಸುತ್ತವೆ. ಬಂಟ್ವಾಳದಲ್ಲಿ ದೊರೆತ ಕ್ರಿ.ಶ.1587ರ ತಾಮ್ರ ಶಾಸನದಿಂದ ಇಲ್ಲಿಯ ಮಣಿರಾಯ ಹೋಬಳಿಯ ಮಣಿಗ್ರಾಮದಲ್ಲಿ ಭತ್ತದ ಗದ್ದೆಯನ್ನು ಒಟ್ಟಾಗಿ ಬೇಸಾಯ ಮಾಡಲಾಗುತ್ತಿತ್ತೆಂದು ತಿಳಿಯುತ್ತದೆ.[109] ಕ್ರಿ.ಶ.1641ರ ಶಾಸನದಲ್ಲಿ ಬಸ್ರೂರಿನ ಆದಿನಾಥ ಬಸದಿ ಮತ್ತು 153 ಸೆಟ್ಟಿಕಾರರಿಗೆ ಮತ್ತು ಸಮಸ್ತ ಹಲರಿಗೆ ಸೇರಿದ್ದ ಜಾಗವನ್ನು ಬಸವಣ್ಣ ಎನ್ನುವವರಿಗೆ ಮಠ ಕಟ್ಟಲು ನೀಡಲಾಗಿತ್ತು ಎಂಬ ಮಾಹಿತಿ ದೊರೆಯುತ್ತದೆ.[110] ಆದರೆ ಕೆಳದಿಯ ಆಳ್ವಿಕೆಯ ಕಾಲಘಟ್ಟದಲ್ಲಿ ವೈಯಕ್ತಿಕ ಹಿಡುವಳಿಗಳು ಹೆಚ್ಚಾಗಿ ಜಂಟಿ ಒಡೆತನಗಳು ಕಡಿಮೆಯಾದವೆಂದು ಬುಕಾನನ್ ತಿಳಿಸುತ್ತಾನೆ.[111]

ಬ್ರಾಹ್ಮಣರಿಗೆ ಶಿಕ್ಷಣದ ಉದ್ದೇಶಗಳಿಗೆ ನೀಡಲಾದ ಭೂದಾನವನ್ನು ಬ್ರಹ್ಮದಾಯ ಅಥವಾ ಬ್ರಹ್ಮಸ್ವಂ ಎನ್ನಲಾಗಿದೆ. ವಿಜಯನಗರ ಕಾಲದಲ್ಲಿದ್ದ ಈ ದತ್ತಿಗಳು ಕೆಳದಿನಾಯಕರ ಕಾಲದಲ್ಲಿಯೂ ಮುಂದುವರೆಯಿತು. ಈ ಭೂಮಿ ಸರ್ವಮಾನ್ಯವಾಗಿರುತ್ತಿತ್ತು. ಬ್ರಾಹ್ಮಣ ಸಮಿತಿಗಳಾದ ಮಹಾಜನರು ಅಥವಾ ಜನ್ಮಿಗಳು ಭೂ ವ್ಯವಹಾರದಲ್ಲಿ ಪ್ರಭಾವಶಾಲಿಗಳಾಗಿದ್ದು ಇವುಗಳನ್ನು ಸ್ವೀಕರಿಸುತ್ತಿದ್ದರು.[112] ತಮಗೆ ದೊರೆತ ಭೂಮಿಯಲ್ಲಿ ಉತ್ಪತ್ತಿಯನ್ನು ಹೆಚ್ಚಿಸುವ ಹೊಣೆಗಾರಿಕೆ ಇವರಿಗಿರುತ್ತಿತ್ತು. ಉದಾಹರಣೆಗೆ ಕ್ರಿ.ಶ. 1672ರ ಉಡುಪಿಯ ತಾಮ್ರಶಾಸನದಂತೆ,[113] ನಡ ಮಾಗಣೆಯ ಬೆಣ್ಣರಬೆಟ್ಟು ಗ್ರಾಮದ ಭೂಮಿಯನ್ನು ಕೆಳದಿ ಭದ್ರಪ್ಪನಾಯಕ ಅಪ್ಪಾಜಿ ಪಂಡಿತನಿಗೆ ನೀಡಿ ಅದರಲ್ಲಿ ತೆಂಗು ಮತ್ತು ಇತರ ಬೆಳೆಗಳನ್ನು ಬೆಳೆಯಬೇಕೆಂದು ಸೂಚಿಸಿದ್ದ. ಬ್ರಾಹ್ಮಣರಿಗೆ ಉಚಿತವಾಗಿ ನೀಡಿದ ದತ್ತಿಗಳ ಆದಾಯದ ನಿರ್ವಹಣೆಯನ್ನು ವೃತ್ತಿ ಎನ್ನಲಾಗಿದೆ.[114] ವೃತ್ತಿಯನ್ನು ಸರ್ವಮಾನ್ಯವೆಂದು ಪರಿಗಣಿಸಲಾಗಿತ್ತು. ಕೆಳದಿ ಸದಾಶಿವನಿಗೆ ಒಳಿತಾಗಲು ಕೆಳದಿ ರಾಮರಾಜ ನಾಯಕ ಐದು ಗದ್ಯಾಣ ಆದಾಯದ ವೃತ್ತಿ ಭೂಮಿಯನ್ನು ಉಡುಪಿಯ ಕೃಷ್ಣ ದೇವರಿಗೆ ನೀಡಿದ್ದ.[115] ವೃತ್ತಿ ಭೂಮಿಯನ್ನು ಮಾರುವಂತಿರಲಿಲ್ಲ. ಮಾರುವುದಿದ್ದರೆ ರಾಜನಿಗೇ ಮಾರಬೇಕಿತ್ತು. ಆದರೆ ವೃತ್ತಿ ಭೂಮಿಯನ್ನು ವಿನಿಮಯ ಮಾಡಬಹುದಾಗಿತ್ತು.[116] ಕ್ರಿ.ಶ.18ನೇ ಶತಮಾನದಲ್ಲಿ ಈ ನಿಯಮ ಸ್ವಲ್ಪ ಬದಲಾದಂತೆ ತೋರುತ್ತದೆ. ರಾಜರು ವೃತ್ತಿ ಭೂಮಿಯನ್ನು ಬ್ರಾಹ್ಮಣರಿಗೆ ಮಾರಿದ ಉದಾಹರಣೆ ಸಿಗುತ್ತದೆ. ಆ ಸಂದರ್ಭದಲ್ಲಿ ಸಣ್ಣ ಮೊತ್ತದ ಕಾಣಿಕೆಯನ್ನು ಅರಮನೆಗೆ ನೀಡಬೇಕಾಗಿತ್ತು.[117]

ದೇವಾಲಯಕ್ಕೆ ಸಂಬಂಧಿಸಿದ ಭೂಮಿಯು, ದೇವಸ್ವಂ ಅಥವಾ ದೇವ ಪಟ್ಟಿ, ದೇವ ಸ್ವಸ್ತಿ, ದೇವರ ಗದ್ದೆ ಮತ್ತು ದೇವರ ಗ್ರಾಮ ಎಂದು ಕರೆಯಲ್ಪಡುತ್ತಿತ್ತು.[118] ಈ ಭೂಮಿಯನ್ನು ನೋಡಿಕೊಳ್ಳುವವರು ದೇವಳದ ಆಡಳಿತದವರಾಗಿದ್ದರು. ಈ ಭೂಮಿಯಲ್ಲಿ ಮನೆಯ ನಿವೇಶನವಿದ್ದರೆ ಅದನ್ನು ಬಿಡು ದೇವಸ್ವಂ ಎನ್ನುತ್ತಿದ್ದರು ಮತ್ತು ಅದು ದೇವ ಪಟ್ಟಿ ಎಂದು ಪರಿಗಣಿಸಲಾಗುತ್ತಿತ್ತು. ದೇವಸ್ವಂ ಅಥವಾ ಬಿಡು

ದೇವಸ್ವವನ್ನು ರಾಜರುಗಳು ನವೀಕರಿಸುತ್ತಿದ್ದರು. ಕ್ರಿ.ಶ.1546ರಲ್ಲಿ ಭಟ್ಕಳದ ಸಮಸ್ತ ಹಲರು ಸೆಟ್ಟಿಕಾರರು ಅಲ್ಲಿಯ ಪಾರ್ಶ್ವನಾಥ ಬಸದಿಗೆ ನೀಡಲಾದ ಬಿಡು ದೇವಸ್ವಂನ್ನು ಜಾರಿಗೆ ತಂದರು.[119] ದೇವಳಕ್ಕೆ ನಿರ್ದಿಷ್ಟ ಉದ್ದೇಶಕ್ಕೆ ನೀಡಿದ ದಾನವನ್ನು ದೇವ ಉತ್ತಾರ ಎಂದು ಕರೆಯಲಾಗುತ್ತಿತ್ತು. ಕ್ರಿ.ಶ.16ನೇ ಶತಮಾನದ ನಂತರ ಇದು ಹೆಚ್ಚಾದಂತೆ ತೋರುತ್ತದೆ. ಕ್ರಿ.ಶ.1680ರಲ್ಲಿ ಕೆಳದಿ ಚೆನ್ನಮ್ಮಾಜಿ 12 ವರಹ ಮತ್ತು 2 ಹಣ ಮೌಲ್ಯದ ದೇವ ಉತ್ತಾರವನ್ನು ಗಂಗೊಳ್ಳಿಯ ವೆಂಕಟರಮಣ ದೇವಾಲಯಕ್ಕೆ ನೀಡುತ್ತಾಳೆ. ಈ ಸ್ವಸ್ತಿಯನ್ನು ದೇವಳ ನಿರ್ಮಿಸಿದ ರಾಮಪೈಯವರ ವಿನಂತಿಯ ಮೇರೆಗೆ ನೀಡಲಾಗುತ್ತದೆ.[120]

ಒಟ್ಟಿನಲ್ಲಿ ಮೇಲಿನ ಎಲ್ಲಾ ಭೂ ವ್ಯವಹಾರಗಳಲ್ಲಿ ಸರಕಾರ ರೈತರ ಮಾಲಿಕತನವನ್ನು ಒಪ್ಪಿಕೊಂಡಿತ್ತು. ಎಲ್ಲಾ ವಿಧದ ಭೂ ವ್ಯವಹಾರಗಳನ್ನು ದಾಖಲಿಸಲಾಗುತ್ತಿತ್ತು. ಭೂಮಿಯ ಗಡಿ ಗುರುತಿಸುವಿಕೆ ಮುಂತಾದ ವಿಚಾರಗಳಲ್ಲಿ ಸೇನಬೋವ ಹಾಗೂ ಊಳಿಗದವ ಪ್ರಮುಖ ಪಾತ್ರವಹಿಸುತ್ತಿದ್ದ. ವರ್ಷಗಳು ಕಳೆಯುತ್ತಿದ್ದಂತೆ ಭೂ ವ್ಯವಹಾರಗಳ ನಿಯಮಗಳು ಸಂಕೀರ್ಣಗೊಂಡು ಭೂ ನಿಯಂತ್ರಿತ ಶಕ್ತಿಗಳು ಕೃಷಿ ವ್ಯವಸ್ಥೆಯಲ್ಲಿ ಪ್ರಬಲವಾಗಲು ಕಾರಣವಾಯ್ತು. ಹಾಗೆಯೇ ಕೆಳದಿ ಆಳ್ವಿಕೆಯ ಪ್ರಾರಂಭದಲ್ಲಿದ್ದ ಭೂಮಿಯ ಜಂಟಿ ಒಡೆತನ ಆಳ್ವಿಕೆಯ ಕೊನೆಯ ಕಾಲದಲ್ಲಿ ಕಡಿಮೆಯಾಗಿ ಖಾಸಗಿ ಒಡೆತನಗಳು ಹೆಚ್ಚಾದುದನ್ನು ಗಮನಿಸಬಹುದು. ಭೂ ವರ್ಗಾವಣೆಯ ಪ್ರಕ್ರಿಯೆಯಲ್ಲಿ ಅರಮನೆಗೆ ಕಾಣಿಕೆ ಸಲ್ಲಿಸುವ ಪದ್ಧತಿ, ಸರಕಾರಗಳು ಭೂವ್ಯವಹಾರಗಳಲ್ಲಿ ಸಂಪೂರ್ಣ ನಿಯಂತ್ರಣ ಹೊಂದಿದ್ದವು ಎಂದು ಸೂಚಿಸುತ್ತದೆ.

### 3.4. ಭೂ ಗೇಣಿ ಪದ್ಧತಿ

ಧಾರ್ಮಿಕ ಸಂಸ್ಥೆಗಳು, ಭೂಹಿಡುವಳಿದಾರರು ಮತ್ತು ಕೆಲವು ಸಂದರ್ಭಗಳಲ್ಲಿ ಸರಕಾರಗಳೂ ಭೂಮಿಯನ್ನು ಗುತ್ತಿಗೆಗೆ ಅಥವಾ ಗೇಣಿಗೆ ನೀಡುತ್ತಿದ್ದರು. ಇದನ್ನು ಒಕ್ಕಲುತನ ಸಾಗುವಳಿ ಎಂದು ಕರೆಯಲಾಗಿದೆ. ಗುತ್ತಿಗೆ ಪಡೆದ ಭೂಮಿಯನ್ನು ಕೃಷಿ ಮಾಡುವವರು ಒಕ್ಕಲುಗಳಾದರೆ ಅವರು ನೀಡುವ ಪ್ರತಿಫಲವನ್ನು ಗೇಣಿ ಎಂದು ಕರೆಯಲಾಗಿದೆ. ಕೆಳದಿ ಕಾಲದ ತುಳುನಾಡಿನಲ್ಲಿ ಈ ವ್ಯವಸ್ಥೆ ವ್ಯಾಪಕವಾಗಿತ್ತು. ಭೂ ಹಿಡುವಳಿದಾರರು ಭೂಮಿಯ ಮೂಲಹಕ್ಕನ್ನು ಹೊಂದಿದ್ದು ಅದರಲ್ಲಿ ಬರುವ ಆದಾಯವನ್ನು ಗೇಣಿದಾರರೊಂದಿಗೆ ಹಂಚಿಕೊಳ್ಳಲಾಗುತ್ತಿತ್ತು. ಹಿಡುವಳಿದಾರ ಮತ್ತು ಗೇಣಿದಾರರ ನಡುವಿನ ಒಪ್ಪಂದ, ಭೂಮಿಯ ಫಲವತ್ತತೆ ಮತ್ತು ಕೃಷಿಯ ಸ್ವರೂಪದ ಆಧಾರದಲ್ಲಿ ಗೇಣಿ ವ್ಯತ್ಯಯಗೊಳ್ಳುತ್ತಿತ್ತು. ಅಂತೆಯೇ ಗೇಣಿಯ ಪಾವತಿಯ ಪ್ರಮಾಣ ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಯಗೊಳ್ಳುತ್ತಿತ್ತು.[121] ಆದರೆ ಬೀಜವರಿಯ ಆಧಾರದಲ್ಲಿಯೇ ಹೆಚ್ಚಿನ ಸಂದರ್ಭಗಳಲ್ಲಿ ಗೇಣಿ ನಿರ್ಧಾರಗೊಳ್ಳುತ್ತಿತ್ತು.[122] ಅಂತೆಯೇ ಗೇಣಿಯನ್ನು ಅಕ್ಕಿ ಮುಡಿಗಳು ಅಥವಾ ಗದ್ಯಾಣದ ರೂಪದಲ್ಲಿಯೂ ವಾರ್ಷಿಕವಾಗಿ ನೀಡಲಾಗುತ್ತಿತ್ತು.[123]

ಅದೇ ರೀತಿ ಕೆಳದಿ ಆಳ್ವಿಕೆಯ ತುಳುನಾಡಿನಲ್ಲಿ ತೆಂಗು, ಅಡಿಕೆ ಮರಗಳನ್ನು ಗೇಣಿಗೆ ನೀಡಲಾಗುತ್ತಿತ್ತು.

ಇದನ್ನು ಮರಗೇಣಿ ಎಂದು ಕರೆಯಲಾಗಿದೆ.[124] ಕ್ರಿ.ಶ. 1662ರ ಮಲ್ಲೇರ ಮಠದ ಶಾಸನ ತಿಳಿಸುವಂತೆ ಮರಗೇಣಿಯನ್ನು ಪರಿಷ್ಕರಿಸಲಾಗುತ್ತಿತ್ತು.[125] ಕಾಲಾಂತರದಲ್ಲಿ ಈ ವ್ಯವಸ್ಥೆಯಲ್ಲಿ ಹಲವು ಬದಲಾವಣೆಗಳನ್ನು ಕಾಣಬಹುದು. ಕ್ರಿ.ಶ.1715ರಲ್ಲಿ ಮಂಜೇಶ್ವರ ಪ್ರದೇಶದಲ್ಲಿ ಹುಟ್ಟುವಳಿಯನ್ನು ಆಧರಿಸಿ ಮರಗೇಣಿಯನ್ನು ಪಡೆಯುತ್ತಿದ್ದುದನ್ನು ಮಂಜೇಶ್ವರದ ಕಡತಗಳು ವಿವರಿಸುತ್ತವೆ.[126] ಹಾಗೆಯೇ ಮರ ಗೇಣಿಯನ್ನು ನಿರ್ಧರಿಸಿ ಬರಹರೂಪಕ್ಕಿಳಿಸಲಾಗುತ್ತಿತ್ತು ಮತ್ತು ತೆಂಗಿನ ಮರದ ವಯಸ್ಸಿಗನುಗುಣವಾಗಿ 1:3 ರೂಪಾಯಿಗಳಷ್ಟು ಗೇಣಿ ವ್ಯತ್ಯಾಸಗೊಳ್ಳುತ್ತಿತ್ತು ಎಂಬುದಾಗಿ ಬುಕಾನನ್ ಮಾಹಿತಿ ನೀಡುತ್ತಾನೆ.[127] ಭೂ ಹಿಡುವಳಿಯು ಯಾವುದೇ ರೂಪದಲ್ಲಿ ಇನ್ನೊಬ್ಬರಿಗೆ ಹಸ್ತಾಂತರವಾದಾಗ ಗೇಣಿದಾರರು ಹೊಸ ಹಿಡುವಳಿದಾರನ ಕೆಳಗೆಯೂ ಅದೇ ಸ್ಥಿತಿಯಲ್ಲಿ ಮುಂದುವರಿಯುತ್ತಿದ್ದರು.[128] ಕೆಲವು ಶಾಸನಗಳು ಸೂಚಿಸುವಂತೆ ಧಾರ್ಮಿಕ ಸಂಸ್ಥೆಗಳಂತಹ ಭೂ ನಿಯಂತ್ರಣ ವ್ಯವಸ್ಥೆಯಲ್ಲಿ ತಮ್ಮ ಇಚ್ಛಾನುಸಾರ ಗೇಣಿದಾರರನ್ನು ಹೊಂದಲು ಅವಕಾಶವಿತ್ತು.[129] ಕಾಸರಗೋಡಿನ ಬಾಡೂರು ಗ್ರಾಮ ಮತ್ತು ಬಂಟ್ವಾಳದ ಮಂಜೆ ಗ್ರಾಮದಲ್ಲಿ ಮೂಲಗೇಣಿದಾರರು ಇತರ ತೆರಿಗೆಗಳಾದ ಪಗುದಿ ಮತ್ತು ಕಾಣಿಕೆಯನ್ನು ಸರಕಾರಕ್ಕೆ ಸಲ್ಲಿಸುತ್ತಿದ್ದರೆಂದು ಕ್ರಿ.ಶ 1702 ಮತ್ತು 1708ರ ದಾಖಲೆಗಳಿಂದ ತಿಳಿದುಬರುತ್ತದೆ.[130] ಒಟ್ಟಿನಲ್ಲಿ ತುಳುನಾಡಿನಲ್ಲಿ ಬ್ರಿಟೀಷರ ಆಡಳಿತದ ಕಾಲಕ್ಕೆ ಒಟ್ಟು ಉತ್ಪತ್ತಿಯ $^1/_4$ ರಿಂದ $^1/_2$ ರಷ್ಟು ಗೇಣಿಯನ್ನು ಪಡೆಯಲಾಗುತ್ತಿತ್ತು.[131]

### 3.5 ತುಳುನಾಡಿನ ರೈತ ವರ್ಗ

ಈ ಕಾಲಘಟ್ಟದಲ್ಲಿ ದೊಡ್ಡ ಸಂಖ್ಯೆಯ ಭೂ ಮಾಲೀಕರು ತುಳುನಾಡಿನಲ್ಲಿ ಅಸ್ತಿತ್ವದಲ್ಲಿದ್ದು ಅವರು ನೇರವಾಗಿ ಭೂಮಿಯನ್ನು ಕೃಷಿ ಮಾಡುತ್ತಿರಲಿಲ್ಲ. ಬದಲಾಗಿ ಭೂಮಿಯನ್ನು ಗೇಣಿಗೆ ನೀಡಿ ಗೇಣಿದಾರರಿಂದ ಗೇಣಿಯನ್ನು ಮುಖ್ಯವಾಗಿ ವಸ್ತುವಿನ ರೂಪದಲ್ಲಿ ಸಂಗ್ರಹಿಸುತ್ತಿದ್ದರು. ಈ ಭೂ ಮಾಲೀಕರು ಸಾಮಾನ್ಯವಾಗಿ ತಮ್ಮ ಕೈಕೆಳಗಿರುವ ರೈತರನ್ನು ಶೋಷಿಸುತ್ತಿದ್ದರು. ಈ ಕಾರಣಕ್ಕಾಗಿಯೇ ರೈತಾಪಿವರ್ಗ ಮಧ್ಯಕಾಲದಲ್ಲಿ ದುರ್ಬಲ ವರ್ಗವಾಗಿಯೇ ಇತ್ತು. ಹಾಗೆಯೇ ಅಸ್ಪೃಶ್ಯರಾಗಿದ್ದ ಹೊಲೆಯರು, ಪಂಬದರು, ಪರವರು, ನಲಿಕೆಯವರು, ಮಲೆಕುಡಿಯರು ಮುಂತಾದವರು ಉನ್ನತ ಜಾತಿಯ ಜನರ ಸೇವಕರಾಗಿ ದುಡಿಯಬೇಕಾಗಿತ್ತು. ಕೃಷಿ ಕಾರ್ಮಿಕರಾಗಿ, ಧಾರ್ಮಿಕ ಸಂಸ್ಥೆಗಳ ಭೂಮಿಯಲ್ಲಿ ಅಥವಾ ಇತರ ಉನ್ನತ ವರ್ಗದವರ ಭೂಮಿಗಳಲ್ಲಿ ಅವರು ಕೆಲಸ ಮಾಡಬೇಕಾಗಿತ್ತು. ಇದು ಸಾಮಾಜಿಕ ಅಸಮತೋಲನಕ್ಕೆ ಕಾರಣವಾಗಿತ್ತು. ಸಂಪತ್ತಿನ ವಿತರಣೆಯ ವಿಚಾರದಲ್ಲಿ, ಆಡಳಿತಗಾರರಾಗಿ ಸರಕಾರದಲ್ಲಿ ಹುದ್ದೆ ಗಿಟ್ಟಿಸುವಲ್ಲಿ, ಭೂ ಒಡೆತನದ ವಿಚಾರದಲ್ಲಿ, ಧಾರ್ಮಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸುವಿಕೆಯ ವಿಚಾರದಲ್ಲಿ ಅವರು ಹಿಂದುಳಿಯುವಂತಾಯಿತು. ಕ್ರಿ.ಶ. 17 ಮತ್ತು 18ನೇ ಶತಮಾನದಲ್ಲಿ ಈ ಭಾಗದಲ್ಲಿ ನಿರ್ಮಾಣಗೊಂಡ ಸಂಘರ್ಷದ ವಾತಾವರಣಕ್ಕೆ ಇನ್ನಿತರ ಕಾರಣಗಳೊಂದಿಗೆ ತೆರಿಗೆ ಪಾವತಿದಾರರ ಹಾಗೂ ಗೇಣಿಯ

ವಿಚಾರದಲ್ಲಿದ್ದ ಅಸಮಾಧಾನಗಳೂ ಕಾರಣವಾಗಿದ್ದವು.

ತುಳುನಾಡಿನಲ್ಲಿ ಭೂ ಸಂಬಂಧೀ ಜನರನ್ನು (1) ಶ್ರೀಮಂತ ರೈತರು (2) ಸಾಧಾರಣ ಶ್ರೀಮಂತಿಕೆಯ ರೈತರು (3) ಕೂಲಿ ಕಾರ್ಮಿಕರು ಮತ್ತು (4) ಕೃಷಿ ಜೀತದಾಳುಗಳು ಎಂಬುದಾಗಿ ವಿಂಗಡಿಸಬಹುದು. ಶಾಸನಗಳು ಮೌಖಿಕ ಆಕರಗಳು ಮತ್ತು ಪ್ರವಾಸಿಗರ ಬರವಣಿಗೆಗಳು ಈ ವರ್ಗಗಳ ಜೀವನ ಮತ್ತು ಸಂಘರ್ಷಗಳ ಮಾಹಿತಿ ನೀಡುತ್ತವೆ. ಕೆಳದಿಯರಸರ ಆಳ್ವಿಕೆಯ ಕಾಲದಲ್ಲಿ ಸ್ಥಳೀಯ ರಾಜರುಗಳೂ ಕೆಲವೊಮ್ಮೆ ಸಾಮಂತರಾಗಿ, ಕೆಲವೊಮ್ಮೆ ಸ್ವತಂತ್ರವಾಗಿ ಆಳ್ವಿಕೆ ನಡೆಸುತ್ತಿದ್ದರು. ಇವರ ಕೆಳಗೆ ಅನೇಕ ಗ್ರಾಮಗಳಿದ್ದು ಈ ಗ್ರಾಮಗಳಲ್ಲಿ ಹೆಚ್ಚಿನ ಎಲ್ಲಾ ವರ್ಗದ ಜನ ಒಣ ಭೂಮಿ ಮತ್ತು ಜೌಗು ಭೂಮಿಗಳನ್ನು ಹೊಂದಿ ಬೇಸಾಯ ಮಾಡುತ್ತಾ ಬರುತ್ತಿದ್ದರು. ತುಳು ಪಾಡ್ದನಗಳು ಹಲವು ಸಂದರ್ಭಗಳಲ್ಲಿ ಊರಿನ ಮುಖ್ಯಸ್ಥರ ಬೀಡಿನ ಮನೆಯನ್ನು ಹೆಸರಿಸುತ್ತವೆ. ತುಳುನಾಡಿನ ದಕ್ಷಿಣ ಭಾಗದಲ್ಲಿ ಬಲ್ಲಾಳರುಗಳು ಪ್ರಮುಖ ಭೂ ಒಡೆಯರಾಗಿದ್ದು ಬೀಡಿನ ಸುತ್ತ ಅನತಿ ದೂರದಲ್ಲಿ ವಾಸಿಸುತ್ತಿದ್ದ ಗೇಣಿದಾರರು ಈ ಭೂಮಾಲೀಕರಿಗೆ ಉಚಿತ ಸೇವೆಯನ್ನು ಸಲ್ಲಿಸುತ್ತಿದ್ದರು. ಪಂಜುರ್ಲಿ ಪಾಡ್ದನ, ಮರ್ದಾಳದ ಬಲ್ಲಾಳನ ಬೀಡನ್ನು ಹೆಸರಿಸುತ್ತದೆ.[132] ಈ ಬೀಡಿನಲ್ಲಿ ಸೇವೆ ಸಲ್ಲಿಸುತ್ತಿದ್ದ ಸೇವಕರು, ಒಪ್ಪಂದದ ಕಾರ್ಮಿಕರು ರೈತರು ಮತ್ತು ಅಂಬಿಗನನ್ನು ಈ ಪಾಡ್ದನ ಹೆಸರಿಸುತ್ತದೆ. ಈ ಆಳುಗಳು ತಮ್ಮ ತಮ್ಮ ಗುಡಿಸಲುಗಳಲ್ಲಿ ವಾಸಿಸುತ್ತಿದ್ದು ಬೀಡಿನಲ್ಲಿ ಕೊಡಮಾಡುವ ಆಹಾರವನ್ನು ಸ್ವೀಕರಿಸಿಕೊಂಡು ಬದುಕಿದ್ದರು. ಬಲ್ಲಾಳರಿಂದ ಕಂಬಳಗದ್ದೆಯನ್ನು ಸ್ವೀಕರಿಸಿದ ಕೋಟಿ ಚೆನ್ನಯರೆಂಬ ಸಹೋದರರು ಆ ಗದ್ದೆಯ ಬೇಸಾಯಕ್ಕೆ ಗೇಣಿದಾರರನ್ನು ನಿಯೋಜಿಸಿದ್ದರು. ಒಂದು ಜೋಡಿ ಎತ್ತಿನೊಂದಿಗೆ ನೇಗಿಲು ಹಿಡಿದು ಉಳುಮೆ ಮಾಡಿದವರಿಗೆ ಮೂರು ಸೇರುಗಳಷ್ಟು ಅಕ್ಕಿ ಮತ್ತು ಎಲೆಯ ತುಂಬ ಕುಚ್ಚಿಲು ಅಕ್ಕಿಯನ್ನು ನೀಡಲಾಗಿತ್ತು.[133] ಹಾಗೆಯೇ ಪ್ರವಾಸಿಗರ ಬರಹಗಳಲ್ಲಿ ಕೂಲಿ ಕಾರ್ಮಿಕರ ಮಾಹಿತಿ ದೊರೆಯುತ್ತದೆ. ಉದಾಹರಣೆಗೆ ಪಿಯತ್ರೋ ಡೆಲ್ಲಾ ವಲ್ಲೆ ಕದ್ರಿಯ ಜೋಗಿಗಳ ಭೂಮಿಯಲ್ಲಿ ಕೂಲಿ ಕಾರ್ಮಿಕರನ್ನು ನಿಯೋಜಿಸಲಾಗಿತ್ತು ಎಂದು ತಿಳಿಸುತ್ತಾನೆ.[134]

ಭೂ ಒಡೆಯರಾದ ಬಲ್ಲಾಳರು ಮತ್ತು ಇತರ ರೈತರು ಕೃಷಿ ಚಟುವಟಿಕೆಗಳಲ್ಲಿ ಆಳುಗಳೆಂಬ ಜೀತದವರನ್ನು ನಿಯೋಜಿಸುತ್ತಿದ್ದರು. ಸಾಮಾನ್ಯವಾಗಿ ಈ ಆಳುಗಳು ತಳವರ್ಗದವರಾದ ಹೊಲೆಯರು, ಬಾಕುಡರು, ಪಂಬದರು, ನಲ್ಕೆಯವರು ಮತ್ತು ಕೊರಗರು ಆಗಿದ್ದರು.[135] ಇವರು ಭೂ ಮಾಲೀಕರ ಆಸ್ತಿಯಾಗಿದ್ದರೆಂದು ಹೇಳಲಾಗಿದೆ. ಜೀತದಾಳುಗಳಲ್ಲಿ 2 ರೀತಿಯನ್ನು ಗುರುತಿಸಬಹುದಾಗಿತ್ತು. 1. ಹುಟ್ಟಾಳು (ವಂಶ ಪಾರಂಪರ್ಯ ಜೀತ) 2.ಮಣ್ಣಾಳು(ಭೂಮಿಗೆ ಸಂಬಂಧಿಸಿದ ಜೀತದಾಳು) ಭೂಮಿಯ ಬದಲಾವಣೆಯೊಂದಿಗೆ ಇವರ ಯಜಮಾನರೂ ಬದಲಾಗುತ್ತಿದ್ದರು. ಶಾಸನಗಳು ಮತ್ತು ಕಡತಗಳು ಈ ರೀತಿ ಭೂಮಾಲೀಕರೊಂದಿಗೆ ಕೈ ಬದಲಾಗುತ್ತಿದ್ದ ಜೀತದಾಳುಗಳ ಬಗ್ಗೆ ಹೇಳುತ್ತವೆ.[136] ಶ್ರೀಮಂತ ರೈತರಾದ ಬ್ರಾಹ್ಮಣರು ಮತ್ತು ಉನ್ನತ ವರ್ಗದ ಶೂದ್ರರಾದ ನಾಡವರು ಅಥವಾ ಬಂಟರು, ಬಿಲ್ಲವರು

ಮತ್ತು ಮೊಗವೀರರು ಭತ್ತದ ಗದ್ದೆಗಳನ್ನು, ವಿಶಾಲವಾದ ತೆಂಗಿನ ತೋಟ, ಅಡಿಕೆ ತೋಟ ಮತ್ತಿತರ ಬೆಳೆಗಳ ಭೂಮಿಯನ್ನು ಹೊಂದಿದ್ದು, ಈ ರೈತರ ಸಂಪತ್ತನ್ನು ಅಕ್ಕಿ ಮುಡಿಗಳಿಂದ ಮತ್ತು ತೋಟದ ಉತ್ಪತ್ತಿಯಿಂದ ಅಳೆಯಲಾಗುತ್ತಿತ್ತು.[137]

ಕರ್ನಾಟಕದ ಇತರ ಸ್ಥಳಗಳಿಗೆ ಹೋಲಿಸಿದರೆ ಬ್ರಾಹ್ಮಣರು ವಿಶೇಷವಾಗಿ ಹಬ್ಬುಗಳು ಮತ್ತು ಹವ್ಯಕರು ತುಳುನಾಡಿನಲ್ಲಿ ಕೃಷಿ ಚಟುವಟಿಕೆಗಳ ಬಹಳಷ್ಟು ಜ್ಞಾನವನ್ನು ಹೊಂದಿದ್ದರು.[138] ಇತರ ಸಮುದಾಯಗಳಾದ ಜೈನರು ಮತ್ತು ಉನ್ನತ ವರ್ಗದ ಶೂದ್ರರು ತಮ್ಮ ಕೆಲಸದವರಲ್ಲದೆ, ಇತರ ಕೂಲಿಯವರನ್ನು ಗುಲಾಮರನ್ನೂ ಕೆಲಸಗಳಿಗೆ ನಿಯೋಜಿಸುತ್ತಿದ್ದರು. ಹೆಚ್ಚಿನ ಸಂದರ್ಭಗಳಲ್ಲಿ ಶ್ರೀಮಂತ ರೈತರು ಗೇಣಿದಾರರ ಗೇಣಿಯನ್ನು ಅವಲಂಬಿಸಿದ್ದರು.

ಕಂದಾಯ ಆಡಳಿತದ ವಿಚಾರದಲ್ಲಿ ತುಳುನಾಡನ್ನಾಳಿದ ರಾಜರುಗಳು ಸಾಮಾನ್ಯವಾಗಿ ರೈತರ ಕಡೆಗೆ ಮೃದು ಧೋರಣೆಯನ್ನು ಹೊಂದಿದ್ದರು. ಸಾಮಾನ್ಯವಾಗಿ ರಾಜರು ಕೃಷಿಕರನ್ನು, ಉತ್ಪನ್ನವನ್ನು ಹೆಚ್ಚಿಸುವ ಸಲುವಾಗಿ ಪ್ರೋತ್ಸಾಹಿಸುತ್ತಿದ್ದರು. ರೈತರಿಗೆ ಸಾಲ ಸೌಲಭ್ಯ, ಕೆರೆ ಕಟ್ಟೆಗಳ ನಿರ್ಮಾಣ ಮತ್ತು ರಿಪೇರಿ, ಪಾಳು ಭೂಮಿಯ ಕೃಷಿಗೆ ಪ್ರೋತ್ಸಾಹ ಮತ್ತು ಪ್ರಕೃತಿ ವಿಕೋಪದ ಸಂದರ್ಭದಲ್ಲಿ ತೆರಿಗೆಯನ್ನು ಕಡಿಮೆ ಮಾಡುವ ಅಥವಾ ಸಂಪೂರ್ಣ ರಿಯಾಯಿತಿ ನೀಡುವ ಕೆಲಸಗಳು, ರೈತರ ರಾಜರ ಸಂಬಂಧ ಹೆಚ್ಚಿಸಲು ನೆರವಾಗುತ್ತಿತ್ತು. ಕೆಳದಿ ನಾಯಕರ ಕಾಲದಲ್ಲಿ ಕೃಷಿಕರ ಕಲ್ಯಾಣಕ್ಕೆ ರಾಜರುಗಳು ಬದ್ಧರಾಗಿದ್ದರು.[139] ಒಕ್ಕಲುಗಳಿಂದ ಗೇಣಿ ಬಾಕಿ ಇದ್ದರೆ ಅವರ ಕೃಷಿ ಭೂಮಿಗಳನ್ನು ಸಾಮಾನ್ಯವಾಗಿ ವಶಪಡಿಸಿಕೊಳ್ಳುತ್ತಿರಲಿಲ್ಲ. ಮೂಲ್ಕಿ ಪರಿಸರದಲ್ಲಿ ಗೇಣಿ ಬಾಕಿ ಇದ್ದರೆ ಮೂಲ್ಕಿಯ ಸಾವಂತ ಅರಸರು ವಿಚಾರಿಸಿ ಯುಕ್ತವಾದ ತೀರ್ಮಾನ ನೀಡುತ್ತಿದ್ದರೆಂದು ತಿಳಿಯುತ್ತದೆ. ಸಾವಂತರಸರು ಗೇಣಿಯನ್ನು ನಿರ್ಧರಿಸುತ್ತಿದ್ದರಲ್ಲದೆ ಆ ಗೇಣಿಯನ್ನು ಭೂಮಿಯ ಒಡೆಯರು ಹೆಚ್ಚಿಸಬಾರದೆಂದು ತಾಕೀತು ಮಾಡಿದ್ದರು.[140]

ಹಲವು ದಾಖಲೆಗಳು ರೈತರು ಮತ್ತು ಆಳುವರಸರ ನಡುವಿನ ಸಹಕಾರ ಮತ್ತು ಪರಸ್ಪರಾವಲಂಬನೆಗಳ ಬಗ್ಗೆ ಹೇಳಿದರೂ ಕೆಲವು ಸಂದರ್ಭಗಳಲ್ಲಿ ಇವರ ನಡುವೆ ಸಂಘರ್ಷಗಳೂ ನಡೆದಿತ್ತು. ಕ್ರಿ.ಶ. 1606ರಲ್ಲಿ ಹಳೇಪೈಕ ಜಾತಿಯ ರೈತರು ಗೇರುಸೊಪ್ಪೆಯ ಮತ್ತು ಸಂಗೀತಪುರದ ರಾಣಿಯ ವಿರುದ್ಧ ದಂಗೆಯೆದ್ದರು. ರಾಣಿ ವಿಧಿಸಿದ್ದ ಅಧಿಕ ಪ್ರಮಾಣದ ತೆರಿಗೆಯ ವಿರುದ್ಧ ಈ ಸಂಘರ್ಷವೇರ್ಪಟ್ಟಿತು.[141] ಹಳೇಪೈಕದವರು ವೆಂಕಟಪ್ಪ ನಾಯಕನ ಸಹಾಯವನ್ನು ಕೇಳಿದಾಗ ಅವನು ಒಪ್ಪಿ ರಾಣಿಯನ್ನು ಪದಚ್ಯುತಗೊಳಿಸಿದ.[142] ಹಾಗೆಯೇ ಕೆನರಾದ ಉತ್ತರಭಾಗದಲ್ಲಿ ಕೆಳ ವರ್ಗದ ರೈತರ ಸಹಾಯದಿಂದ ವೆಂಕಟಪ್ಪ ನಾಯಕ ತನ್ನ ಅಧಿಕಾರವನ್ನು ಭದ್ರಪಡಿಸಿದ.

ಆದರೆ ವೆಂಕಟಪ್ಪ ನಾಯಕನ ಕಂದಾಯ ನೀತಿಯಿಂದ ತುಳುನಾಡಿನ ಭೂಹಿಡುವಳಿದಾರರಿಗೆ ಅನಾನುಕೂಲವಾಗಿತ್ತು. ಉದಾಹರಣೆಗೆ ವಿಶಾಲವಾದ ಭೂಮಿಯನ್ನು ಹೊಂದಿದ್ದ ಕದ್ರಿಯ ಜೋಗಿಗಳು

ನಾಯಕನ ತೀವ್ರವಾದ ತೆರಿಗೆ ಹೆಚ್ಚಳದಿಂದ ಬಡತನಕ್ಕಿಳಿಯಬೇಕಾಯಿತು. ಪಿಯತ್ರೋ ಡೆಲ್ಲಾ ವಲ್ಲೆಯ ಅವಲೋಕನದಂತೆ ಘಟ್ಟ ಪ್ರದೇಶದ ಕೊಲ್ಲೂರಿನಲ್ಲಿ ರೈತರ ಸ್ಥಿತಿ ಶೋಚನೀಯವಾಗಿತ್ತು. ತೀವ್ರವಾದ ತೆರಿಗೆಯಿಂದ ಅವರು ಬಡತನದ ಬೇಗೆಯನ್ನು ಅನುಭವಿಸಬೇಕಾಯಿತು.[143] ಕ್ರಿ.ಶ. 1629ರ ಪೋರ್ಚುಗೀಸ್ ದಾಖಲೆಯೊಂದರ ಪ್ರಕಾರ ವೆಂಕಟಪ್ಪನ ಮರಣವಾದೊಡನೆ ತುಳುನಾಡಿನ ಸಾಮಂತರಸರು ಕೆಳದಿ ಸಂಸ್ಥಾನದ ವಿರುದ್ಧ ದಂಗೆಯೆದ್ದರು. ಸ್ಥಳೀಯ ರಾಜರುಗಳು ರಾಣಿಯರು ಬಲ್ಲಾಳರು ವೀರಭದ್ರನನ್ನು ವಿರೋಧಿಸಿದರಲ್ಲದೆ, ಅವನಿಗೆ ಘಟ್ಟದ ಮೇಲಿಂದ ಸಹಾಯ ದೊರಕದಂತೆ ತಡೆಯೊಡ್ಡಿದ್ದರು. ಇದು ಸಾಮಂತರಸರ ದಂಗೆಯಾದರೂ, ದಂಗೆಯ ಸೂಕ್ಷ್ಮ ಅವಲೋಕನ ಇದಕ್ಕೆ ಕೃಷಿ ಸಂಬಂಧ ಇರುವುದನ್ನು ನಿರೂಪಿಸುತ್ತದೆ. ತುಳುನಾಡಿನಲ್ಲಿ ವೆಂಕಟಪ್ಪನಿಂದ ಸೋಲಿಸಲ್ಪಟ್ಟ ಎಲ್ಲಾ ಸಾಮಂತರಸರು ರಾಣಿಯರು ಬಲ್ಲಾಳರು ಭೂ ಹಿಡುವಳಿದಾರರಾಗಿದ್ದರು. ವೀರಭದ್ರ ನಾಯಕ ಅವರಿಗೆ ಅತಿಯಾದ ಕಪ್ಪವನ್ನು ಹೇರಿದ್ದ. ಪರಿಣಾಮವಾಗಿ ಅವರು ಬಡತನವನ್ನು ಅನುಭವಿಸಬೇಕಾಯಿತು ಮತ್ತು ಭೂಮಿಯನ್ನು ಕಳೆದು ಕೊಳ್ಳಬೇಕಾಯಿತು.[144] ಅವರೆಲ್ಲರೂ ಕೆಳದಿಯರಸರ ಅಧಿಕಾರ ವ್ಯಾಪ್ತಿಯಿಂದ ಹೊರಬರಲು ಪ್ರಯತ್ನಿಸಿದರಾದರೂ ಪ್ರಬಲನಾಗಿದ್ದ ವೀರಭದ್ರನೆದುರು ದುರ್ಬಲ ಸಾಮಂತರ ಒಕ್ಕೂಟ ಯಶಸ್ವಿಯಾಗಲಿಲ್ಲ. ಅಲ್ಲದೆ ಹಳೇಪೈಕದ ಭೂಮಾಲೀಕರು ಮತ್ತು ರೈತರು ಈ ಹಿಂದೆ ವೆಂಕಟಪ್ಪನ ಸಹವರ್ತಿಗಳಾಗಿದ್ದ ಕಾರಣ ಈ ದಂಗೆಗೆ ದನಿಗೂಡಿಸಲಿಲ್ಲವೆಂದು ತೋರುತ್ತದೆ. ಬದಲಿಗೆ ತುಳು ಸಾಮಂತರ ದಂಗೆಯನ್ನು ಹಳೇಪೈಕದವರ ಸಹಾಯದಿಂದಲೇ ನಾಯಕರು ದಮನ ಮಾಡಿರಬೇಕು. ಅದರ ಪರಿಣಾಮವಾಗಿ ಹಳೇಪೈಕದ ಜನ ಕರಾವಳಿ ಪ್ರದೇಶದ ಕೃಷಿ ಚಟುವಟಿಕೆಗಳಲ್ಲಿ ಪ್ರಾಮುಖ್ಯತೆಯನ್ನು ಪಡೆದರು.[145] ಕ್ರಿ.ಶ. 1674ರಲ್ಲಿ ಕೆಳದಿಯರಸರಿಗೆ ಬೆಂಬಲ ನೀಡಿದ್ದ ಅಂತಹ ಒಬ್ಬ ಹಳೇಪೈಕದ ನಾಯಕನೆಂದರೆ ಕಳ್ಳು ತೆಗೆಯುವ ಕುಟುಂಬಕ್ಕೆ ಸೇರಿದ ಕಾಸರಗೋಡು ತಿಮ್ಮಣ್ಣ.[146] ಕೆಳದಿ ಸಾಮ್ರಾಜ್ಯದ ವಿರುದ್ಧ ಭೂ ಹಿಡುವಳಿದಾರರು ವೀರಮ್ಮಾಜಿಯ ಕಾಲದಲ್ಲಿಯೂ ದಂಗೆಯೆದ್ದರು. ಕ್ರಿ.ಶ.1758ರಲ್ಲಿ ನಡೆದ ಈ ದಂಗೆಗೆ ಹೆಚ್ಚುವರಿ ತೆರಿಗೆಯನ್ನು ವಿಧಿಸಿದ್ದು ಕಾರಣವಾಗಿತ್ತು. ಆದರೆ ಈ ಘಟನೆ ಒಪ್ಪಂದದ ಮೂಲಕ ಬಗೆಹರಿಯಿತು. ಅದರಂತೆ ರೈತರು ವರ್ಷಕ್ಕೆ $12^1/_2$ ಶೇಕಡದಂತೆ 4 ವರ್ಷಗಳಲ್ಲಿ 50 ಶೇಕಡ ತೆರಿಗೆಯನ್ನು ನೀಡಲು ಒಪ್ಪಿದ್ದರು.[147] ಐದನೇ ವರ್ಷ ಇದನ್ನು ಕಡಿಮೆಮಾಡಬೇಕಾಗಿತ್ತು. ಆದರೆ ಹೈದರಾಲಿ ಅದನ್ನು ಖಾಯಂಗೊಳಿಸಿದ.

ಈ ಕಾಲಘಟ್ಟದ ಹೆಚ್ಚಿನ ಎಲ್ಲಾ ರಾಜಕೀಯ, ಆರ್ಥಿಕ ಘಟನೆಗಳಿಗೆ ಕೆಳದಿಯರಸರ ಪ್ರತ್ಯಕ್ಷ ಅಥವಾ ಪರೋಕ್ಷ ನಂಟು ಕಂಡುಬರುತ್ತದೆ. ಭೂಹಿಡುವಳಿದಾರರಂತೆ, ಗೇಣಿದಾರರೂ ದಂಗೆಯೆದ್ದ ಸನ್ನಿವೇಶಗಳು ಈ ಕಾಲದಲ್ಲಿ ಸೃಷ್ಟಿಯಾದವು. ಕ್ರಿಶ 1565 ರಿಂದ 1658 ರವರೆಗೆ ಗೇಣಿದಾರರ ಅಸಮಾಧಾನದ ಉದಾಹರಣೆಗಳನ್ನು ಶೃಂಗೇರಿ, ಕಾರ್ಕಳ, ಮಂಗಳೂರು, ಪ್ರದೇಶಗಳಲ್ಲಿ ನೋಡಲು ಸಾಧ್ಯವಿದೆ. ಕ್ರಿ.ಶ

1621ರ ಶಾಸನ ನೀಡುವ ಮಾಹಿತಿಯಂತೆ ಶೃಂಗೇರಿ ಮಠದ ಗೇಣಿದಾರರು ಗೇಣಿಯನ್ನು ನೀಡದೆ ಭೂಮಿಯನ್ನು ಅತಿಕ್ರಮಣ ಮಾಡಿ ಅವುಗಳನ್ನು ತಮ್ಮ ಖಾಸಗಿ ತೋಟಗಳನ್ನಾಗಿ ಪರಿವರ್ತಿಸಿದರು. ಈ ಸಮಸ್ಯೆಯನ್ನು ಕೆಳದಿ ವೆಂಕಟಪ್ಪ ನಾಯಕ ಪರಿಹರಿಸಿ ಶೃಂಗೇರಿ ಮಠದ ಆಸ್ತಿಯನ್ನು ಮತ್ತೆ ಕೊಡಿಸಿದ.[148] ಕ್ರಿ.ಶ.1657ರಲ್ಲಿ ಶಿವಪ್ಪನಾಯಕನ ಆಳ್ವಿಕೆಯಲ್ಲಿ ಮಂಗಳೂರು ಮತ್ತು ಹತ್ತಿರದ ಪರಿಸರದ ಗೇಣಿದಾರರು ಶೃಂಗೇರಿ ಮಠದ ಭೂಮಿಯನ್ನು ಉತ್ತಾರವಾಗಿ ಪಡೆದುಕೊಂಡು ಗೇಣಿಯನ್ನು ನೀಡದೆ ಪುಂಡುತನ ಮಾಡಿದಾಗ ರಾಜ ಗೇಣಿದಾರರಿಗೆ ಬಾಕಿ ಗೇಣಿಯನ್ನು ಚುಕ್ತಗೊಳಿಸುವಂತೆ ಆಜ್ಞಾಪಿಸಿದ್ದ.[149] (ವಕ್ಕಲು ಕರೆಸಿ ತಾಕೀತು ಮಾಡಿಸಿ ಯಥಾಸ್ಥಿತಿಯಲ್ಲಿ ಬಹ ಹಿಂದಣವನ್ನು ಕೊಡಿಸಿ ಮುಂದು ಕಾಲಕಾಲಕ್ಕೆ ಕೊಡುವ ಹಾಗೆ ಕಟ್ಟು ಮಾಡಿಸುವುದು) ಕ್ರಿಶ 1656ರಲ್ಲಿ ಶೃಂಗೇರಿ ಮಠಕ್ಕೊಳಪಟ್ಟ ಕಾರ್ಕಳ ಹೋಬಳಿಯ ಭೂಮಿಯನ್ನು ಅಲ್ಲಿಯ ಗೇಣಿದಾರರು ಕೃಷಿ ಮಾಡದೆ ಬಿಟ್ಟು ಬಿಟ್ಟಾಗ ಶಿವಪ್ಪನಾಯಕ ವೆಂಗಲ್ ಭಟ್ಟ ಎಂಬವನನ್ನು ಕಳುಹಿಸಿದ. ಅವನು ಗೇಣಿದಾರರ ಕುಂದುಕೊರತೆಗಳನ್ನು ವಿಚಾರಿಸಿ ಗೇಣಿಯನ್ನು ಮರು ನಿರ್ಣಯಿಸಿ ಸಮಸ್ಯೆ ಬಗೆಹರಿಸಿದ.[150] ಈ ಎಲ್ಲಾ ಉದಾಹರಣೆಗಳು ತುಳುನಾಡಿನಲ್ಲಿದ್ದ ಗೇಣಿದಾರರ ಸಮಸ್ಯೆಯನ್ನು ವಿವರಿಸುತ್ತದೆ. ಗೇಣಿದಾರರು ಮತ್ತು ಭೂ ಒಡೆಯರ ನಡುವಿನ ಸಂಘರ್ಷವನ್ನು ತಪ್ಪಿಸಲು ಕ್ರಿ.ಶ.17ನೇ ಶತಮಾನದ ಕೊನೆಯಲ್ಲಿ ಒಂದು ಹೊಸ ಉಪಾಯವನ್ನು ಮಾಡಲಾಗಿತ್ತು ಎಂದು ಹೇಳಲಾಗಿದೆ.[151] ಭೂ ಒಡೆಯರು ಮತ್ತು ಗೇಣಿದಾರರ ಮಧ್ಯೆ ಬರವಣಿಗೆಯ ಒಪ್ಪಂದ ಏರ್ಪಟ್ಟಿತ್ತು. ಇದನ್ನು ಸಾಗುವಳಿ ಓಲೆ ಅಥವಾ ಎದರುನೂಡಿ ಎಂದು ಕರೆಯಲಾಗಿದೆ. ಈ ದಾಖಲೆಯಲ್ಲಿ ಭತ್ತದ ಗದ್ದೆಯ ಪರಿಸರ, ಅದರ ಫಲವತ್ತತೆ, ಅಕ್ಕಿ ಮುಡಿಯ ಅಥವಾ ನಾಣ್ಯದ ರೂಪದಲ್ಲಿ ಒಕ್ಕಲಿನವರು ಒಡೆಯರಿಗೆ ನೀಡುವ ಗೇಣಿಯ ಪ್ರಮಾಣ, ಇವುಗಳನ್ನು ಬರೆಸಲಾಗುತ್ತಿತ್ತು. ಗದ್ದೆಯಲ್ಲಿ ಬೇಸಾಯ ಮಾಡದೇ ಇದ್ದಾಗ ಆ ವರ್ಷ ಕೇವಲ ತೆರಿಗೆಯನ್ನು ಮಾತ್ರ ನೀಡಲಾಗುತ್ತಿತ್ತು.[152] ಎಲ್ಲಿಯವರೆಗೆ ಗೇಣಿದಾರರು ಗೇಣಿ ನೀಡುತ್ತಿದ್ದರೋ ಅಲ್ಲಿಯ ವರೆಗೆ ಅವರನ್ನು ಒಕ್ಕಲೆಬ್ಬಿಸುತ್ತಿರಲಿಲ್ಲ. ಗೇಣಿದಾರ ಬೇಸಾಯ ಭೂಮಿಯನ್ನು ಯಾವುದೇ ಸಂದರ್ಭದಲ್ಲಿ ಒಡೆಯನಿಗೆ ಬಿಟ್ಟುಕೊಟ್ಟಾಗ ಅವನು ಮಾಡಿದ ಕೃಷಿಗೆ ಅನುಗುಣವಾಗಿ ಒಡೆಯನು ಹಣವನ್ನು ನೀಡಬೇಕಾಗಿತ್ತು.[153] ಈ ಅವಲೋಕನದಿಂದ ಸ್ಪಷ್ಟವಾಗುವುದೇನೆಂದರೆ ಕೆಳದಿಯ ಆಳ್ವಿಕೆಯ ಅಂತ್ಯದಲ್ಲಿ ಗೇಣಿದಾರರು ಹೆಚ್ಚುಕಡಿಮೆ ಸುಸ್ಥಿತಿಯಲ್ಲಿದ್ದು ಅವರ ಹಕ್ಕುಗಳನ್ನು ಗೌರವಿಸಲಾಗುತ್ತಿತ್ತು.

ರಣಜಿತ್ ಗುಹಾ ಅವರ ಅಭಿಪ್ರಾಯದಲ್ಲಿ, ಉತ್ಪಾದನೆಯ ಸಂದರ್ಭದಲ್ಲಿ, ಶೋಷಣೆಗೆ ಒಳಪಟ್ಟಾಗ ಸಬಾಲ್ಟರ್ನ್ ವರ್ಗಗಳು ಸಿಡಿದೇಳುತ್ತವೆ.[154] ಕಾರ್ಮಿಕರು ಮತ್ತು ರೈತರಿಂದ ಪ್ರಾರಂಭಗೊಂಡು ಬಡವರು, ಕೆಳವರ್ಗಗಳ ಜನರು ಅನುಭವಿಸಿದ ಶೋಷಣೆಯ ಸಂದರ್ಭದಲ್ಲಿ ಕೂಡ ಸಬಾಲ್ಟರ್ನ್ ಪ್ರತಿಭಟನೆಗಳು ಹುಟ್ಟಿಕೊಳ್ಳುತ್ತಿತ್ತು. ಕೆಳದಿ ಆಳ್ವಿಕೆಯ ತುಳುನಾಡಿನಲ್ಲಿ ಕಂಡುಬರುವ ಗೇಣಿದಾರರ ಸಮಸ್ಯೆಗಳನ್ನು ಈ ಹಿನ್ನೆಲೆಯಲ್ಲಿ ನೋಡಬಹುದು. ಹಾಗೆಯೇ ಕೆಲವು ಬಾರಿ ಸಬಾಲ್ಟರ್ನ್ ಮತ್ತು ಎಲೈಟ್ ವರ್ಗಗಳು

ಒಟ್ಟಾಗಿರುವ ಸಂದರ್ಭಗಳನ್ನು ಗುರುತಿಸಬಹುದು. ಮೊದಲನೆಯ ವೆಂಕಟಪ್ಪ ನಾಯಕನ ಮರಣದ ನಂತರ ನಡೆದ ತುಳುನಾಡಿನ ಸ್ಥಳೀಯರಸರ ದಂಗೆಗಳನ್ನು ಈ ಹಿನ್ನೆಲೆಯಲ್ಲಿ ನೋಡಬಹುದಾಗಿದೆ. ಬಹುಶಃ ಈ ರೀತಿಯ ದಾಖಲಾಗದ ಸಂಘರ್ಷಗಳೂ ಈ ಕಾಲದಲ್ಲಿ ಇದ್ದಿರಬಹುದು. ತೆರಿಗೆ ಹೆಚ್ಚಳದಂತಹ ಸಮಸ್ಯೆಗಳ ಜೊತೆಯಲ್ಲಿ ಗೇಣಿದಾರರ ಅಥವಾ ಇತರ ಭೂ ಹಿಡುವಳಿದಾರರ ಅಸಮಾಧಾನಗಳು ಸ್ಥಳೀಯ ಅರಸರು ಪದೇ ಪದೇ ಕೆಳದಿಯರಸರನ್ನು ವಿರೋಧಿಸಲು ಕಾರಣವಾಗಿರಬೇಕು. ಈ ಕಾಲದಲ್ಲಿ ಭೂ ಹಿಡುವಳಿದಾರರು ಮತ್ತು ರಾಜ್ಯ, ಹಾಗೆಯೇ ಭೂ ಹಿಡುವಳಿದಾರರು ಮತ್ತು ಗೇಣಿದಾರರು ಈ ಎರಡೂ ರೀತಿಯ ಸಂಘರ್ಷಗಳನ್ನು ಗುರುತಿಸಬಹುದಾಗಿದೆ. ಒಟ್ಟಿನಲ್ಲಿ ವಿಶ್ವಾತ್ಮಕ ದೃಷ್ಟಿಕೋನದಲ್ಲಿ ಕೆಳದಿ ರಾಜ್ಯ ಉತ್ತಮ ಆಡಳಿತದಿಂದ ಗುರುತಿಸಿಕೊಂಡರೂ, ಸ್ಥಳೀಯ ದೃಷ್ಟಿಯಲ್ಲಿ ಅಧ್ಯಯನ ನಡೆಸಿದಾಗ ಹಲವು ಹೊಸ ವಿಚಾರಗಳು ಗೋಚರಿಸುತ್ತವೆ.

**ಅಡಿ ಟಿಪ್ಪಣಿಗಳು**

1.. ವೆಂಕಟರತ್ನಂ ಎ.ವಿ, ಎಂ.ಬಿ. ಪದ್ಮ, 1985, ಇತಿಹಾಸ ಸಂಶೋಧನಾ ಮಾರ್ಗ, ಬ್ಯಾಪ್ಕೋ ಪಬ್ಲಿಕೇಷನ್ಸ್, ಬೆಂ., ಪು.36
2. N.S.B.Grass,1927 Jan, The rise and development of Economic History, Economic history review, p.12
3. KI, VI Nos, 61,62,69,70,79; KI III.Nos, 6,10; SII.VII No.296; SII.VII No.321,326; Ibid.IX,Nos 441, 555, 576, 655.
4. ಗಂಗಾನಾಯಕ್(ಸಂ.), ಕೆಅಶಾಸಂ, ಸಂ.13.ಪು.17;
5. SII, IX Pt.II, Nos 446,641,659.
6. ARSIE 1929-30, No.602.
7. Vasantha Madhava K.G. 1991, Western Karnataka Its Agrarian relations, Delhi, p.48
8. SII.IX Pt.II,No.620,621,632,695; KI-VI No.694.
9.. SII.IX Pt.II 512,620,632,659,675; KI-III, No 7
10. ARIE 1964 AP A No.2, p.41
11. EC VIII Sa.111.
12. ಗಣಪತಿ ರಾವ್ ಐಗಳ್ ಎಂ, 2004, ದ.ಕ.ಜಿಲ್ಲೆಯ ಪ್ರಾಚೀನ ಇತಿಹಾಸ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ಪು.135,136
13. ಗೋಪಾಲ್. ಆರ್ (ಸಂ) 2005, ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು. ಪು.215
14. Buchanan Francis, 1873, A journey from Madras through the countries of Mysore, Canara and Malabar, II, Madras, p.262.
15. Ibid,p.311,325 345,358
16. SII.IX Pt.II,No.426,609,675; KI III No .7
17. SII.VII Nos.199,200,207,209,246,248,255,262,264; EI, VII No10
18 Buchanan Francis, Op. Cit, p.255.
19 SII VII Nos,212,242; EI VII No10; KI III Nos 11,14
20. ಗಣಪತಿ ರಾವ್ ಐಗಳ್ ಎಂ, ಪೂರ್ವೋಕ್ತ, ಪು.384.; B.A Saletore,1936, Ancient Karnataka, Vol.I, History of Tuluva, Poona, pp.539-78.
21. MAR, 1943, No.54
22. SII VII Nos.210,226,244,255,262,264
23. Anual Reports of Kannada Research Institute, of 1940, Nos, 88; ARIE 1952 Ap, A No.8
24. EC VIII, Ti Nos. 83,92,97,88,63,75; Ibid, VI, Kp, 46; ARIE 1969 Ap, A No.9
25. MAR 1923, Nos.104,107

26. SII VII Nos.182,380,289; Ibid IX Pt II.No 259; ARIE,1929-30 No.579.
27. Dr. John Fryer's Account of India, 1873, reprints of Calcutta Weekely English man, London. p.221; Desai. M.A.1969, Chittakul-Karwar A History, Bombay p.12; South Canara District Gazetteer, p 764.
28. Dames (1918), (translated) Barbosa, The Book of Duarte Barbosa: An account of the countries boardering on the Indian Ocean and their inhabitants I, pp 195-6; Indica Vol.15 No.2(1978) P.12
29. ARSIE, 1969, Ap. A, No.8
30. Buchanan, II, op.cit p 218-9; ಕೇಶವ ಕೃಷ್ಣ ಕುಡ್ವ, 1948, ದಕ್ಷಿಣ ಕನ್ನಡದ ಇತಿಹಾಸ, ಮಂಗಳೂರು–ಪು 127; Silva S S, History of Christianity in canara pp.44,50,53,60; Deekshith G.S, .Studies in Keladi History, Banglore p.95
31. Edward Grey, (translated) The Travelle of Pietro Della valle in India, London, 1892, Vol.II.P.301
32. Silva.S, Op.cit p 103.
33. Moraes G M, Manglore a Historical sketch p 60; Buchanan,op.cit p 218-19
34. Buchanan, Op.cit, p 219,232.; Silva.S, Op.cit p.150.166
35. Vasantha Madhava K.G.1991, Western Karnataka Its Agrarian relations,Delhi p.53
36. SII, VII Nos 244,262,264,321; Ibid IX Nos 632,655,673,675;.KI III pt 9,11,13,14,16
37. Buchanan,op.cit II, p 225.
38. ವಿವೇಕ ರೈ ಬಿ.ಎ., ಪೂರ್ವೋಕ್ತ, ಪು.183
39. ಅದೇ
40. ಪೂವಪ್ಪ ಕಣಿಯೂರು; 2009, ಮೌಖಿಕ ಸಂಕಥನ, ತರಂಗಿಣಿ ಪ್ರಕಾಶನ ಸುಳ್ಯ. ಪು.35; ಕ್ಷೇತ್ರ ಕಾರ್ಯದಲ್ಲಿ ಸಂದರ್ಶನ: ರವಿರಾಮ ರೈ ಮಿತ್ತೂರು
41. KI III, No.9; SII VII No.264; ARIE 1969 Ap A No.8; SII.IX pt II No 620
42. ವಿವೇಕ ರೈ ಬಿ.ಎ., ಪೂರ್ವೋಕ್ತ, ಪು.176
43. I.A XXXIII, pp 34-38
44. EC VIII Sa 16,17,P 94; Buchanan Op.cit, 239
45. Buchanan Op.cit,252,304; Sturrock,South canara,Op. Cit. p 128
46. KI III Pt.I No.6
47. SII.VII Nos, 368,210,269; Ibid,IX pt,II,No,675; kI,III Pt.I Nos 13,15; MAR 1931 No19; ಗಣಪತಿ ರಾವ್ ಐಗಳ್, ಪೂರ್ವೋಕ್ತ, ಅ.ಸಂ., 6
48. EC VI, Sg 5,11,13; MAR 1916, p.66; ಗುಂಡಾ ಜೋಯಿಸ ಕೆಳದಿ, 1977–ಲಿಂಗಣ್ಣ ಕವಿಯ ಕೆಳದಿ ನೃಪ ವಿಜಯ, ಕಸಾಪ ಬೆಂಗಳೂರು, ಪು.99–100; Vasantha Madhava K.G., Op.Cit, P.77
49. ಮೂಡಬಿದ್ರಿ ತಾಮ್ರ ಶಾಸನ ಪ್ರತಿ, Vasantha Madhava, K.G.Op.Cit, P.210
50. SII.IX pt,II,No,674; Vasantha Madhava K.G., Op.Cit, P.77
51. ARIE, 1964, Ap. A, No.2. P.41
52. EC,VIII. Sg, NO,117; Vasantha Madhava K.G., Op.Cit,P.77
53. ಎ.ಕೆ. ಶಾಸ್ತ್ರಿಗಳು ಸಂಗ್ರಹಿಸಿದ ಕಾಗದದ ದಾಖಲೆ, Vasantha Madhava K.G., Op.Cit,PP.78
54. A.K.Shastry, 2001, The Records of The Sringeri Matha relating to keladi, Keladi museum, p.50;
55. SII,IX,Pt,II, No.609; Vasantha Madhava, K.G.Op.Cit, P.79
56. SII VII No. 269
57. SII VII No. 210; ARSIE 1941 Ap A No.3
58. SII VII No. 269
59. SII IX Pt.II No.675
60 Journal of Bombay Historical Society, Bombay (1929) P 87. Vasantha Madhava K.G., Op.Cit, p.80
61 ARSIE 1941 App. A, No.10; ಮೂಡಬಿದ್ರಿ ತಾಮ್ರ ಶಾಸನ ಪ್ರತಿ, Vasantha Madhava K.G., Op.Cit, P 210
62. SII VII, No.210.ARSIE 1941 Ap A No.3
63. SII VII, No.226.224,225,256,257
64. ಗಣಪತಿ ರಾವ್ ಐಗಳ್ ಎಂ, ಪೂರ್ವೋಕ್ತ, ಅ.ಸಂ.30.
65. Shivanna.K.S. 1983, The Agrarian system of Karnataka, Prasaranga Mysore, 35-34
66. SII.IX Pt II, No.673,674; EC,VI Sr.No. 82

67. ಗಣಪತಿ ರಾವ್ ಐಗಳ್ ಎಂ. ಪೂರ್ವೋಕ್ತ, ಪು.171
68. ವೆಂಕಟೇಷ್ ಜೋಇಬಿಸ್ ಕೆಳದಿ. 1979. ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಕ.ಸಾ.ಪ., ಬೆಂಗಳೂರು. ಪು.72
69. Suryanath Kamat.(ed) 1983, Karnataka State Gazetteer. Pt.I, Banglore, P.82
70. ಗುಂಡಾ ಜೋಯಿಸ್,(ಸಂ) ಕೆಳದಿ ನೃಪ ವಿಜಯ, ಪೂರ್ವೋಕ್ತ. ಪು.37; SII IX Pt II Nos 655,659,674
71. EC VIII Ti,Nos 101,78,Sg 159; MAR 1927, p 135-136; ShivannA K.S, Op.cit. 54-56
72. RameSH K.V.1 965,A History of South Canara,Karnataka University Dharwad, p 270
73. Gururaj Bhat p.1975,Studies in Tuluva History and Culture.Manipal,p.198
74. ARIE 1969 Ap A No.7; SII iX No.694; ಗಣಪತಿ ರಾವ್ ಐಗಳ್ ಎಂ, ಪೂರ್ವೋಕ್ತ. ಅ.ಸಂ.22
75. SII.IX No.512
76. SII.IX No.517
77. SII IX Pt.II No 540
78. ARIE 1969 Ap No.7; ಗಣಪತಿ ರಾವ್ ಐಗಳ್ ಎಂ, ಪೂರ್ವೋಕ್ತ, ಅ.ಸಂ.22
79. SII, IX, Pt II, No 51; SII, Vii, No.374; SII, IX, No.694
80. SII IX Nos 511, 512, 517, 525, 540,655,659
81. ARSIE 1929, No.494; SII VII,No 390,374,375,376; Ibid IX Nos.517,525,694.
82. MAR.1928, No ,112 ; EC,VII, Ti 52.
83. SII IX Pt.II, No.659.
84. SII IX Pt.II, No.674.
85. SII.IX Pt.II, No.65
86. Ramesh K.V., Op.cit.p.279.; Vasantha Madhava K.G. Op.cit.p. 127
87. SII.IX,Pt.II No.540.
88. SII,IX,Pt.II, No.659, 621,675,694
89. Gururaj Bhat, Op.Cit, P.203
90. SII VII NO,264; Ibid, IX NOs, 620,632,655.
91. ARSIE,1964, Ap A no.2 p.41.
92. M.A.R.1923, Nos,102,95; ARIE 1969, Ap A No.9.
93. MAR,1934 No.9 dated 1690 A.D.; Mac colns no.340. p.175
94 MAR.1933, No.30 Shastry A.K. 2001, Sringeri Dharmasamsthana, Keladi Museum, p.162.
95. EC. VIII, Sa No.157, p.330
96. ಗಣಪತಿ ರಾವ್ ಐಗಳ್ ಎಂ, ಪೂರ್ವೋಕ್ತ, ಅ.ಸಂ.31.
97. Vasantha Madhava K.G. Op.cit.p. 131
98 ಗಣಪತಿ ರಾವ್ ಐಗಳ್ ಎಂ, ಪೂರ್ವೋಕ್ತ. ಅ.ಸಂ.3
99. ಗಣಪತಿ ರಾವ್ ಐಗಳ್ ಎಂ, ಪೂರ್ವೋಕ್ತ. ಅ.ಸಂ. 8, 20; ARSIE 1932 Ap A No.5
100. A.K.Shastry, Op. Cit, p.50;
101. Mac colns No.61
102. ಗಣಪತಿ ರಾವ್ ಐಗಳ್ ಎಂ, ಪೂರ್ವೋಕ್ತ, ಅ.ಸಂ.19
103. ಗಣಪತಿ ರಾವ್ ಐಗಳ್ ಎಂ, ಪೂರ್ವೋಕ್ತ, ಅ.ಸಂ.8
104. Vasantha Madhava K.G., Op.cit,P.87.
105. Vasantha Madhava K.G., Op.cit.p.87
106. Vasantha Madhava K.G., Op.cit.p.87
107. SII,IX,Pt.II. No.655
108. ARSIE 1930. No.608.
109. ARIE 1969, AP.A No.7
110. EC VIII, Ti No.52
111. Buchanan,Op.Cit, II, p.226
112. Vasantha Madhava K.G. Op.cit.p.87; MAR 1932,No.40; ARSIE 1929-30, No.602.
113. ARIE 1964 Ap.A No.39, p.47
114. Vasantha Madhava K.G., Op.cit., p.89
115. EC,VIII, Sb.No, 55
116. EC,VIII,Ti, No.5, p, 417; MAR,1916, p.65; Ibid,1933, No.28.
117. MAR,1933, No.30.

118. SII,IX,Pt.II,Nos.540,673; Ibid,VII, No.321; MAR,1928,NO,112; Ibid.1929,No.92; Ibid.1923, No.102,108; EC,VIII,Ti, No.83; ARSIE I955, AP Nos.7,8,; K.I,III, No.9.
119. KI.III,pt,I no,14; Ibid No,15,16,17.
120. EC.VIII,Ti,No.83.
121. EC,VIII, Ti, No.92
122. John Sturrock, 1864, Madras District Manuals, South Canara, volume -1, Madras, P.223; SII, IX, Pt.II, 609
123. SII, IX,II, No.674; KI,III,No,9,11
124. ARSIE,1941, Ap,No,3; SII,VII,II,No.210; MAR, 1934, No,51
125. EC,VIII, Ti, No.92
126. ಗಣಪತಿ ರಾವ್ ಐಗಳ್, ಪೂರ್ವೋಕ್ತ, ಅ.ಸಂ.31, ಪು.340
127. Buchanan,II, Op.Cit,p.240
128. SII,VII,II,No.374; SII, IX,II, No.694
129. ಗಣಪತಿ ರಾವ್ ಐಗಳ್, ಪೂರ್ವೋಕ್ತ, ಅ.ಸಂ.6
130. ಗಣಪತಿ ರಾವ್ ಐಗಳ್, ಪೂರ್ವೋಕ್ತ, ಅ.ಸಂ.6, 8; MAR, 1929, No.92
131. Buchanan, II, Op.Cit, p.226; Hamilton, East India Gazettere, I, P.345
132. Indian Antiquity, XXVI, p,51; Saletore. B.A,1936, Ancient Karnataka, Vol.I, History of Tuluva, poona.
133. Indian Antiquity, XXVI, p, 51; Saletore B.A, Op. Cit, p.527
134. Edward Grey (ed), Op.Cit, p.350.
135. Buchanan Francis, Op. Cit, p.271
136. Shastry A.K, Shringeri Dharma samsthana, Op. Cit, p.187
137. Indian Antiquity, XXIII, p,152; Saletore.B.A.op.cit, p.527
138. Buchanan, Op. Cit, pp, 262,323,325-6,336,345.; Indian Antiquity, XXII, p.48.; Saletore, B.A, Op.cit, p.467.
139. Vasantha Madhava K.G. Op.cit.p.112
140. ಚಿನ್ನಸ್ವಾಮಿ ಸೋಸಲೆ. ಎನ್(ಸಂ) 2014, ಕರಾವಳಿ ಕರ್ನಾಟಕದ ಜೈನ ಅರಸು ಮನೆತನಗಳು–ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ ಕವಿವಿ. ಹಂಪಿ., ಪು.436; Vasantha Madhava K.G., Op.cit. Ap. No.7, p.202
141. Vasantha Madhava K.G. Op.cit. p.112
142. Buchanan, Op.Cit, p316.
43. Edward Grey (ed), Op.Cit, pp.296, 249-51
144. HerasHenry, PIHRC, XI. p.108; Edward Grey, op.cit, II, p,.212, 285, 286, 314, 315, 348,353; Sturrock, Op. Cit, Vol.I. pp,96-98
145. Buchanan, Op.cit.II, p.239.
146. ಗುಂಡಾ ಜೋಯಿಸ್(ಸಂ) ಕೆಳದಿ ನೃಪ ವಿಜಯ, ಪೂರ್ವೋಕ್ತ, ಪು.117; Vasantha Madhava K.G. Op.cit. p.113
147. Chitnis, K.N, 1974, Keladi Polity, Karnataka University Dharwar, p.140
148. EC,Vol.VI, Sg, No, 5, p.351-52
149. A.K.Shastry, 2001, The Records of The Sringeri Matha relating to keladi, 2001, Keladi museum, p.25.
150. A.K.Shastry, Ibid, p.24,
151. .Vasantha Madhava K.G., Op.cit., p.107
152 . Buchanan, Op.cit.II, p.225-6.
153. Buchanan, Op.cit.II, p.240.
154. ವಿಜಯ್ ಪೂಣಚ್ಚ ತಂಬಂಡ, ವಿರೂಪಾಕ್ಷಿ ಪೂಜಾರಹಳ್ಳಿ(ಸಂ), 2010 ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ ಹಂಪಿ, ಪು.256–295

## ಅಧ್ಯಾಯ – 4

# ವ್ಯಾಪಾರ ಮತ್ತು ತೆರಿಗೆ ಪದ್ಧತಿ

ಕೆಳದಿ ಆಳ್ವಿಕೆಯ ಕಾಲಘಟ್ಟದಲ್ಲಿ ತುಳುನಾಡು, ಅಕ್ಕಿ, ಕರಿಮೆಣಸು, ತೆಂಗು, ಅಡಿಕೆ, ಕಬ್ಬು, ಇತ್ಯಾದಿ ಬೆಳೆಗಳ ಪ್ರಮುಖ ಕೃಷಿ ಭೂಮಿಯಾಗಿತ್ತು. ಸಹಜವಾಗಿ ಇದು ವ್ಯಾಪಾರ ವ್ಯವಹಾರಗಳಿಗೆ ನಾಂದಿ ಹಾಡಿತ್ತು. ತುಳುನಾಡಿನ ಕೃಷಿ ಉತ್ಪನ್ನಗಳನ್ನು ಆಹಾರ ಉತ್ಪನ್ನಗಳು ಮತ್ತು ವಾಣಿಜ್ಯ ಉತ್ಪನ್ನಗಳು ಎಂಬುದಾಗಿ ವಿಂಗಡಿಸಬಹುದು. ವಿವಿಧ ರೀತಿಯ ಅಕ್ಕಿ, ರಾಗಿ, ಜೋಳ, ತರಕಾರಿಗಳು, ಕಬ್ಬು ಇತ್ಯಾದಿ ಆಹಾರ ಉತ್ಪನ್ನಗಳಾದರೆ, ತೆಂಗು, ಅಡಿಕೆ, ಗೋಡಂಬಿ, ಕಾಳುಮೆಣಸು, ಏಲಕ್ಕಿ, ಮತ್ತು ಅರಣ್ಯ ಉತ್ಪನ್ನಗಳು ವಾಣಿಜ್ಯ ಉತ್ಪನ್ನಗಳಾಗಿದ್ದವು. ಕ್ರಿ.ಶ.16ನೇ ಶತಮಾನದ ನಂತರ ಯುರೋಪಿಯನ್ ವ್ಯಾಪಾರಿಗಳ ಪ್ರಭಾವದಿಂದಾಗಿ ವಾಣಿಜ್ಯ ಉತ್ಪನ್ನಗಳು ಪ್ರಾಮುಖ್ಯತೆಯನ್ನು ಪಡೆದವು.

### 4.1 ಕೃಷಿ ಉತ್ಪನ್ನಗಳ ವ್ಯಾಪಾರ

ತುಳುನಾಡು ಮಾತ್ರವಲ್ಲದೆ ಇಡಿಯ ಕರಾವಳಿ ತೀರದಲ್ಲಿ ಅಕ್ಕಿ ಪ್ರಮುಖ ಆಹಾರ ಉತ್ಪನ್ನವಾಗಿತ್ತು.[1] ಬಾರ್ಬೋಸನ ಹೇಳಿಕೆಯಂತೆ ಗಿರಿವಾಲ್(ಗಿರಜತ್), ಜಾನಿಬಜಲ್, ಕಮಗರ್ ಮತ್ತು ಪಚರಿ ಇಲ್ಲಿಯ ವಿವಿಧ ಬಗೆಯ ಭತ್ತದ ಬೆಳೆಗಳು. ಇಲ್ಲಿಯ ಜನಸಾಮಾನ್ಯರು ಸ್ಥಳೀಯವಾದ ಕುಚ್ಚಲಕ್ಕಿಯನ್ನು ಬಳಸುತ್ತಿದ್ದರು ಎಂದು ಹೇಳಲಾಗಿದೆ.[2] ಬೈಂದೂರು(ಮಜಂದೂರ್) ಪ್ರದೇಶದ ಅಕ್ಕಿ ವ್ಯವಹಾರಕ್ಕೆ ಸಂಬಂಧಿಸಿದಂತೆ ಬಾರ್ಬೋಸ ಹೇಳುವಂತೆ, ಇಲ್ಲಿ ಹೆಚ್ಚಿನ ಪ್ರಮಾಣದ ಅಕ್ಕಿ ಬೆಳೆಯುತ್ತಿದ್ದು ಇಲ್ಲಿಂದ ದೊಡ್ಡ ಪ್ರಮಾಣದಲ್ಲಿ ಅಕ್ಕಿ ಭಟ್ಕಳ ಬಂದರಿಗೆ ರವಾನೆಯಾಗುತ್ತಿತ್ತು.[3] ಡೊಮಿಂಗೋ ಪಾಯಸ್ ಹೇಳುವಂತೆ, ಭಟ್ಕಳ ಮತ್ತು ಜಂಬೂರು ನಡುವಿನ ಪ್ರದೇಶದಿಂದಲೇ ಹೆಚ್ಚಿನ ಪ್ರಮಾಣದ ಅಕ್ಕಿಯನ್ನು ವಿದೇಶೀ ವ್ಯಾಪಾರಿಗಳು ಪಡೆಯುತ್ತಿದ್ದರು.[4]

ತುಳುನಾಡಿನಲ್ಲಿ ದೊಡ್ಡ ಪ್ರಮಾಣದಲ್ಲಿ ಕರಿಮೆಣಸಿನ ಕೃಷಿ ಪ್ರಾಮುಖ್ಯತೆಯನ್ನು ಪಡೆದದ್ದು ಕ್ರಿ.ಶ.15ನೇ ಶತಮಾನದ ಕೊನೆಯಲ್ಲಿ. ಶಾಸನಗಳು,[5] ಕರಿಮೆಣಸನ್ನು 'ಗಡಸಿನ ಸರಕು' ಎಂಬುದಾಗಿ ಹೆಸರಿಸುವ ಮೂಲಕ ಅಧ್ಯಯನ ಕಾಲಘಟ್ಟದಲ್ಲಿ ಅದು ಅಗತ್ಯದ ಸರಕು ಆಗಿತ್ತು ಎಂಬುದನ್ನು ಸೂಚಿಸುತ್ತದೆ. ಕರಾವಳಿ ತೀರದಲ್ಲಿ ಬೆಳೆಯುತ್ತಿದ್ದ ಕರಿಮೆಣಸು ಉತ್ತಮ ವಿಧದ್ದಾಗಿದ್ದು ಇದಕ್ಕೆ ವಿವಿಧ ದೇಶಗಳಲ್ಲಿ ಬಹಳಷ್ಟು ಬೇಡಿಕೆಯಿತ್ತು.[6] ಗೇರುಸೊಪ್ಪೆಯ ಪ್ರಾಂತ್ಯದಲ್ಲಿ ಲಭಿಸುತ್ತಿದ್ದ ಅಗಾಧ ಪಮಾಣದ ಉತ್ತಮ

ದರ್ಜೆಯ ಕರಿಮೆಣಸಿನಿಂದಾಗಿ ಮತ್ತು ಅದರ ಪೂರೈಕೆಯ ನಿಯಂತ್ರಣ ಹೊಂದಿದ್ದ ಕಾರಣಕ್ಕಾಗಿ ಅಲ್ಲಿಯ ರಾಣಿ ಚೆನ್ನಭೈರಾದೇವಿಯನ್ನು "ಕರಿಮೆಣಸಿನ ರಾಣಿ' ಎಂದು ಕರೆಯಲಾಗಿದೆ.[7] ಕ್ರಿ.ಶ. 17ನೇ ಶತಮಾನದಲ್ಲಿ ಕೆಳದಿ ಸಾಮ್ರಾಜ್ಯ ಮತ್ತು ಸ್ವಾದಿಯ ಪ್ರಾಂತ್ಯದಲ್ಲಿ ದೊರಕುತ್ತಿದ್ದ ಅತ್ಯುತ್ತಮ ಕರಿಮೆಣಸು ಮತ್ತು ಇದಕ್ಕಿದ್ದ ವಿಶೇಷವಾದ ಬೇಡಿಕೆಯೇ ಅಧ್ಯಯನ ಕಾಲಘಟ್ಟದ ಆರ್ಥಿಕ ಸಂಘರ್ಷಗಳ ಪ್ರಮುಖ ಹಿನ್ನೆಲೆಯೆಂಬುದು ಗಮನಾರ್ಹ ವಿಚಾರವಾಗಿದೆ.[8]

ತೆಂಗು, ಅಡಿಕೆ, ಗೋಡಂಬಿ ಮತ್ತು ಏಲಕ್ಕಿಗಳು ಈ ಭಾಗದ ಇತರ ವಾಣಿಜ್ಯ ಬೆಳೆಗಳು. ವಿದೇಶೀ ವ್ಯಾಪಾರಿಗಳಿಂದ ಈ ಸರಕುಗಳಿಗಿದ್ದ ಬೇಡಿಕೆಯಿಂದಾಗಿ ಈ ಪ್ರದೇಶದ ರಾಜರುಗಳೂ ಈ ಬೆಳೆಗಳಿಗೆ ಉತ್ತೇಜನ ನೀಡಿದರು. ಪಶ್ಚಿಮ ಕರಾವಳಿ ತೀರದಲ್ಲಿ ಪೋರ್ಚುಗೀಸರು ಸುಧಾರಿತ ರೀತಿಯ ತೆಂಗಿನ ಬೆಳೆಗೆ ನಾಂದಿ ಹಾಡಿದ್ದರು ಮತ್ತು ಈ ಕಾರಣಕ್ಕಾಗಿಯೇ ಕೆಳದಿ ರಾಜರುಗಳು ಗೋವಾದ ಕ್ರೈಸ್ತರನ್ನು ಕರಾವಳಿ ತೀರಕ್ಕೆ ಅಹ್ವಾನಿಸಿದರು ಎಂದು ಹೇಳಲಾಗಿದೆ.[9] ಅಲ್ಲದೆ ಅಕ್ಕಿಯ ಬೆಳೆಯಲ್ಲಿ ಕೊರತೆ ಕಂಡು ಬಂದಾಗ ನಾಯಕರು ವ್ಯಾಪಾರದ ಸಮತೋಲನಕ್ಕಾಗಿ ತೆಂಗಿನ ಬೆಳೆಯನ್ನು ಪ್ರೋತ್ಸಾಹಿಸಿದರು. ಕ್ರಿ.ಶ.1681ರ ಕೊಡ್ಲಾಡಿಯ ಶಾಸನ ಹೇಳುವಂತೆ ಪಡುಕೋಣೆ, ಗಂಗೊಳ್ಳಿ ಪ್ರದೇಶಗಳಲ್ಲಿ ನಷ್ಟವುಂಟಾದಾಗ ಈ ನಷ್ಟವನ್ನು ಹೋಗಲಾಡಿಸಲು ಕೆಳದಿ ರಾಣಿ ಚೆನ್ನಮ್ಮಾಜಿ ತೆಂಗಿನ ಕೃಷಿಯನ್ನು ಉತ್ತೇಜಿಸಿದಳು.[10] ಇತರ ವಾಣಿಜ್ಯ ಕೃಷಿ ವಸ್ತುಗಳಾದ ಕಬ್ಬು, ಶುಂಠಿ, ಗೋಡಂಬಿ ಮತ್ತು ಅರಣ್ಯದ ಉತ್ಪನ್ನಗಳು ಸಹ್ಯಾದ್ರಿಯ ಇಕ್ಕೆಲಗಳಲ್ಲಿ ಲಭ್ಯವಿದ್ದವು. ಇವುಗಳ ವ್ಯಾಪಾರ ರಾಜ್ಯಕ್ಕೆ ಹೆಚ್ಚಿನ ಆದಾಯ ತರುತ್ತಿತ್ತು.[11]

### 4.2 ಕೃಷಿ ವ್ಯವಹಾರ ಕೇಂದ್ರಗಳು

ಈ ಭಾಗದ ವ್ಯಾಪಾರ ವಾಣಿಜ್ಯ ಚಟುವಟಿಕೆಗಳನ್ನು 2 ರೀತಿಯಲ್ಲಿ ವಿಭಾಗಿಸಬಹುದಾಗಿದೆ.

1. ಒಳನಾಡ ವ್ಯಾಪಾರ 2. ವಿದೇಶೀ ವ್ಯಾಪಾರ

ವಿಜಯನಗರದ ಕಾಲದಲ್ಲಿಯೂ ಆಂತರಿಕ ವ್ಯಾಪಾರದ ಭಾಗವಾಗಿ, ಅಕ್ಕಿ, ಕಬ್ಬು, ಹೆಸರುಕಾಳು, ಸಾಂಬಾರ ಪದಾರ್ಥಗಳು, ತೆಂಗಿನಕಾಯಿ ವ್ಯಾಪಾರ, ಸಹ್ಯಾದ್ರಿಯ ಕೆಳಗೆ ಮತ್ತು ಮೇಲೆ ಭರದಿಂದ ನಡೆಯುತ್ತಿತ್ತು.[12] ಮಿರ್ಜಾನ್, ಹೊನ್ನಾವರ, ಭಟ್ಕಳ, ಬಸ್ರೂರು, ಬಾರ್ಕೂರು, ಮಂಗಳೂರು, ಮಂಜೇಶ್ವರ, ಕುಂಬಳ ಮತ್ತು ಕಾಸರಗೋಡು, ಕಾರ್ಕಳ, ಮೂಡಬಿದಿರಿ, ಕಳಸ, ಸಾಗರ, ಚಂದಾವರ ಮತ್ತು ಬನವಾಸಿ ಪ್ರಮುಖ ಆಂತರಿಕ ವ್ಯಾಪಾರೀ ಕೇಂದ್ರಗಳಾಗಿದ್ದವು. ಹಾಗೆಯೇ ತುಳುನಾಡಿನ ವ್ಯಾಪಾರಿಗಳು ಮಲಬಾರ್ ತೀರದೊಂದಿಗೂ ನಿಕಟ ಸಂಪರ್ಕ ಹೊಂದಿದ್ದರು. ಸಾಮಾನ್ಯವಾಗಿ ಕೃಷಿ ಉತ್ಪನ್ನಗಳೇ ಆಂತರಿಕ ವ್ಯಾಪಾರದಲ್ಲಿ ಪ್ರಮುಖ ಸರಕಾಗಿತ್ತು. ಮುಸ್ಲಿಮರು ಕೆಳವರ್ಗದ ಹಿಂದೂಗಳ ಸಹಾಯದಿಂದ ಸಮುದ್ರ ವ್ಯಾಪಾರದಲ್ಲಿ ತೊಡಗಿದ್ದರು.[13]

ಸಕ್ಕರೆ ಮತ್ತು ಕರಿಮೆಣಸಿಗೆ ಪೋರ್ಚುಗೀಸ್ ವ್ಯಾಪಾರಿಗಳು ಬಹಳಷ್ಟು ಬೇಡಿಕೆ ವ್ಯಕ್ತಪಡಿಸಿದ್ದರು ಮತ್ತು ಕ್ರಿ.ಶ.1512ರಲ್ಲಿ ಈ ಸರಕುಗಳು ಭಟ್ಕಳ ಮತ್ತು ಹೊನ್ನಾವರ ಬಂದರುಗಳಿಂದ ಗೋವಾದ ಬಂದರುಗಳಿಗೆ ರಫ್ತಾಗುತ್ತಿತ್ತು.[14] ಪೋರ್ಚುಗೀಸರು ಕರಿಮೆಣಸನ್ನು ಭಟ್ಕಳ ಮತ್ತು ಹೊನ್ನಾವರ ಪ್ರದೇಶಗಳಿಂದ ಗುತ್ತಿಗೆಗೆ ಪಡೆಯುತ್ತಿದ್ದರು ಮತ್ತು ಸ್ಥಳೀಯ ವ್ಯಾಪಾರಿಗಳಿಗೆ 6 ತಿಂಗಳು ಮೊದಲೇ ಮುಂಗಡ ನೀಡುತ್ತಿದ್ದರು. ಕ್ರಿ.ಶ.1594ರ ಪೋರ್ಚುಗೀಸ್ ದಾಖಲೆ ಕೊಡುವ ಮಾಹಿತಿಯಂತೆ ಕೃಷಿ ವಸ್ತುಗಳಾದ ಕರಿಮೆಣಸು, ಕಬ್ಬು ಮತ್ತು ತೆಂಗಿನ ವ್ಯಾಪಾರ ಹೊನ್ನಾವರ, ಭಟ್ಕಳ, ಬಸ್ರೂರು ಮತ್ತು ಮಂಗಳೂರು ಬಂದರುಗಳಲ್ಲಿ ಭರದಿಂದ ಸಾಗುತ್ತಿತ್ತು.[15]

ಕ್ರಿ.ಶ.17ನೇ ಶತಮಾನದಲ್ಲಿ ಕುಂಬಳೆ, ಕಾರ್ನಾಟೆ(ಕಾರ್ನಾಡು), ಗಂಗೊಳ್ಳಿ, ತದ್ರಿ(ತದಡಿ) ಮತ್ತು ಕಾರವಾರಗಳೂ ಕೃಷಿ ಉತ್ಪನ್ನಗಳ ವ್ಯಾಪಾರದ ಪ್ರಮುಖ ಬಂದರುಗಳಾಗಿ ಕಂಡುಬರುತ್ತವೆ.[16] ಅಕ್ಕಿ, ತೆಂಗು, ಕಬ್ಬು ಮತ್ತು ಅಡಿಕೆಯ ಲಭ್ಯತೆಯ ಕಾರಣದಿಂದಾಗಿ ಮಂಜೇಶ್ವರ, ಕುಂಬಳೆಗಳು ಪ್ರಮುಖ ಸಾಗರ ವ್ಯಾಪಾರ ಕೇಂದ್ರಗಳಾದವು. ಈ ವಸ್ತುಗಳನ್ನು ದೊಡ್ಡ ಹಡಗುಗಳಲ್ಲಿ ಮುಂಬೈ, ಗೋವಾ, ಕಲ್ಲಿಕೋಟೆ ಮತ್ತು ಅರೇಬಿಯಾಗೆ ರಫ್ತು ಮಾಡಲಾಗುತ್ತಿತ್ತು.[17] ಕಾರ್ನಾಟೆ, ಇನ್ನೊಂದು ಪ್ರಮುಖ ಸಾಗರ ವ್ಯಾಪಾರ ಕೇಂದ್ರವಾಗಿದ್ದು ಇಲ್ಲಿಂದ ಪೋರ್ಚುಗೀಸರು ಅಕ್ಕಿ, ಕಬ್ಬು, ತೆಂಗಿನ ನಾರು ಮತ್ತು ತೆಂಗನ್ನು ಖರೀದಿಸುತ್ತಿದ್ದರು. ಈ ವಿಚಾರ ಕ್ರಿ.ಶ.1656ರಲ್ಲಿ ಈ ಬಂದರಿಗೆ ಭೇಟಿ ನೀಡಿದ ಸಂತ ಕ್ಯಾಥರಿನ್‌ನ ದಾಖಲೆಗಳಿಂದ ಸ್ಪಷ್ಟವಾಗುತ್ತದೆ.[18] ಕ್ರಿ.ಶ.17ನೇ ಶತಮಾನದ ಮಧ್ಯದಲ್ಲಿ ಕುಂದಾಪುರ ಸಮೀಪದ ಗಂಗೊಳ್ಳಿ, ಅಕ್ಕಿ, ಕರಿಮೆಣಸು, ಕಬ್ಬು, ಹೊಗೆಸೊಪ್ಪು ಮತ್ತು ತೆಂಗಿನ ಪ್ರಮುಖ ವ್ಯಾಪಾರದ ಕೇಂದ್ರವಾಗಿತ್ತು. ವ್ಯಾಪಾರದ ರಕ್ಷಣೆಗೆ ಮತ್ತು ಅಕ್ಕಿ ಕರಿಮೆಣಸಿನ ಪೂರೈಕೆಗೆ ಪೋರ್ಚುಗೀಸರು ಇಲ್ಲಿ ಕೋಟೆಯನ್ನು ಕಟ್ಟಿಸಿದ್ದರು. ಇಲ್ಲಿ ಅಕ್ಕಿಯ ವ್ಯಾಪಾರ ಬಹಳ ಬಿರುಸಿನಿಂದ ಸಾಗುತ್ತಿತ್ತು. ಕ್ರಿ.ಶ. 1653ರಲ್ಲಿ ಕೆಳದಿ ಶಿವಪ್ಪ ನಾಯಕ ಪೋರ್ಚುಗೀಸರಿಂದ ಈ ಕೋಟೆಯನ್ನು ವಶಪಡಿಸಿಕೊಂಡ ನಂತರ ಗೌಡ ಸಾರಸ್ವತ ವ್ಯಾಪಾರಿಗಳು ಇಲ್ಲಿಯ ವ್ಯಾಪಾರದಲ್ಲಿ ಮೇಲ್ಮೆಯನ್ನು ಪಡೆದಿದ್ದರು.[19] ಕರಾವಳಿಯ ಬಂದರುಗಳಲ್ಲಿ ಅಕ್ಕಿ, ಮೆಣಸು, ಕಬ್ಬಿಣದ ಅದಿರು, ಕೊಬ್ಬರಿ, ಕಾಯಿ ಕತ್ತ, ಕಬ್ಬಿನ ಬೆಲ್ಲ, ಹುಳಿ, ಗಂಧ, ದ್ರಾಕ್ಷಿ, ಇಂಗು, ಜೋಳ ಇನ್ನಿತರ ದವಸ ಧಾನ್ಯಗಳು ರಫ್ತಾಗುತ್ತಿದ್ದುವೆಂದು ಮಂಜೇಶ್ವರ ದೇವಾಲಯದಲ್ಲಿ ಸಿಕ್ಕಿದ ಕ್ರಿ.ಶ.1757ರ ಕಡತದಿಂದ ತಿಳಿದು ಬರುತ್ತದೆ.[20] ಕ್ರಿ.ಶ.1638ರಲ್ಲಿ ಭಾರತಕ್ಕೆ ಬಂದ ಜರ್ಮನಿಯ ಪ್ರವಾಸಿ ಮಂಡೆಲ್ ಸ್ಲೋ, ಮಲಬಾರಿಗಳು, ಕ್ಯಾಲಿಕಟ್, ಹೊನ್ನಾವರ, ಬಾರ್ಕೂರು, ಮಂಗಳೂರು ಮುಂತಾದ ಕಡೆಗಳಿಂದ ತೆಂಗಿನ ಮರದ ಕಾಯಿರ್(ತೆಂಗಿನ ನಾರು) ಕೊಪೆರಾ(ಕೊಬ್ಬರಿ) ಬೆಲ್ಲ, ಅಡಿಕೆ, ಎಳ್ಳೆದೆಲೆ, ಅಕ್ಕಿ ಮುಂತಾದ ಸರಕುಗಳನ್ನು ತಂದು ಸೂರತ್, ಕ್ಯಾಂಬೆ ಮತ್ತು ಬ್ರೋಚ್ ಈ ಸ್ಥಳಗಳಲ್ಲಿ ಮಾರಿ, ಹಿಂತಿರುಗುವಾಗ ಅಫೀಮು, ಕೇಸರಿ, ಹವಳ, ಹತ್ತಿನೂಲು, ಅಗಸೆ ಬಟ್ಟೆ ಮುಂತಾದ ವಸ್ತುಗಳನ್ನು ತೆಗೆದುಕೊಂಡು ಹೋಗುತ್ತಾರೆ ಎಂದು

ಹೇಳಿದ್ದಾನೆ.[21] ಕ್ರಿ.ಶ.17ನೇ ಶತಮಾನದಲ್ಲಿ ಕರಾವಳಿಯ ಬಂದರುಗಳ ಜೊತೆಯಲ್ಲಿ ಘಟ್ಟದ ಕೆಳಗಿನ ತುಳುನಾಡಿನಲ್ಲಿ ಬಂಟ್ವಾಳ, ಬಂಗಾಡಿ, ಬೆಳ್ತಂಗಡಿ ಮತ್ತು ಪಾಣೆಮಂಗಳೂರುಗಳು ಕೃಷಿ ಉತ್ಪನ್ನಗಳ ಪ್ರಮುಖ ವ್ಯಾಪಾರೀ ಕೇಂದ್ರಗಳಾಗಿದ್ದವು ಎಂಬುದಾಗಿ ಕ್ರಿ.ಶ. 1642ರ ದಾಖಲೆಯಿಂದ ತಿಳಿಯುತ್ತದೆ.[22] ಕೊಕ್ಕರ್ಣೆ, ಕಾರ್ಕಳ, ಸೋಮೇಶ್ವರ, ಗೇರುಸೊಪ್ಪೆ, ಚಂದಾವರಗಳೂ ಪ್ರಮುಖ ವ್ಯಾಪಾರೀ ಕೇಂದ್ರಗಳಾಗಿದ್ದವು.[23]

ಪ್ರಾಚೀನ ಕಾಲದಿಂದಲೂ ಪಶ್ಚಿಮದ ರಾಷ್ಟ್ರಗಳು ಸಮುದ್ರ ಮಾರ್ಗದ ಮೂಲಕ ಭಾರತದ ಪಶ್ಚಿಮ ಕರಾವಳಿ ತೀರದೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿದ್ದವು. ಇಲ್ಲಿಯ ಬಂದರುಗಳ ಮೂಲಕ ಶತಮಾನಗಳಿಂದ ಪಾಶ್ಚಿಮಾತ್ಯ ಮತ್ತು ಪೌರ್ವಾತ್ಯ ಜಗತ್ತುಗಳ ನಡುವೆ ಸಂಪರ್ಕ ಸಾಧ್ಯವಾಗಿತ್ತು. ವಿಜಯನಗರ ಕಾಲದಲ್ಲಿ ಬಾರ್ಬೊಸ ಹೇಳುವಂತೆ,[24] ಮಂಗಳೂರು ಗೋವಾ ಮತ್ತು ಭಟ್ಕಳ, ವಿದೇಶಗಳಿಗೆ ಅಕ್ಕಿ ರಫ್ತು ಮಾಡುತ್ತಿದ್ದ ಕೇಂದ್ರಗಳಾಗಿದ್ದವು. ತುಳುನಾಡಿನ ಆಯಕಟ್ಟಿನ ಸ್ಥಳ ಇಂತಹ ಕೃಷಿ ಉತ್ಪನ್ನಗಳನ್ನು ಬೆಳೆಯಲು ಮತ್ತು ಮಾರಾಟ ಮಾಡಲು ಪ್ರಶಸ್ತವಾಗಿತ್ತು. ಅಬ್ದುಲ್ ರಜಾಕ್ ಹೇಳುವಂತೆ,[25] ವಿಜಯನಗರ ಕಾಲದಲ್ಲಿ ನೂರಾರು ಸಮುದ್ರ ತೀರದ ಬಂದರುಗಳಿದ್ದು ಇವುಗಳಿಗೆ ಹಿಂದೂ ಮಹಾಸಾಗರದ ದ್ವೀಪಗಳೊಂದಿಗೆ, ಮಲಯ, ಬರ್ಮಾ, ಚೈನಾ, ಅರೇಬಿಯಾ, ಪರ್ಷಿಯಾ, ದಕ್ಷಿಣ ಆಫ್ರಿಕಾ, ಅಬಿಸೀನಿಯಾ ಮತ್ತು ಪೋರ್ಚುಗಲ್‌ನೊಂದಿಗೆ ವ್ಯಾಪಾರ ಸಂಪರ್ಕವಿತ್ತು. ಡೊಮಿಂಗೋ ಪಾಯಸ್ ಹೇಳುವಂತೆ, ‘ಇಲ್ಲಿ ಅನೇಕ ಸಮುದ್ರ ತೀರದ ಬಂದರುಗಳಿದ್ದವು. ಅವುಗಳಲ್ಲಿ ಅಂಕೋಲ, ಮಿರ್ಜಾನ್, ಹೊನ್ನಾವರ ಭಟ್ಕಳ, ಮಂಗಳೂರು, ಬಾರ್ಸಿಲೋರ್(ಬಸ್ರೂರು) ಮತ್ತು ಬೆಕನೋರ್‌ಗಳಲ್ಲಿ (ಬಾರ್ಕೂರು) ಪೋರ್ಚುಗೀಸರ ಫ್ಯಾಕ್ಟರಿಗಳಿತ್ತು.[26]

ಕಬ್ಬು ಮತ್ತು ತೆಂಗಿಗೆ ಮಾಲ್ಡೀವಿಯಾ ದ್ವೀಪಗಳು ಮತ್ತು ಅರೇಬಿಯಾದಿಂದ ಬೇಡಿಕೆ ಇದ್ದ ಕಾರಣದಿಂದ ಅರೇಬಿಯಾ, ಆರ್ಮುಜ್, ಪೂರ್ವ ಆಫ್ರಿಕಾ, ಮಾಲ್ಡೀವಿಯಾ ದ್ವೀಪದವರೆಗೂ ಕರಾವಳಿಯ ವ್ಯಾಪಾರ ಚಟುವಟಿಕೆಗಳು ವಿಸ್ತರಿಸಿದ್ದವು.[27] ಅಕ್ಕಿ, ಸಕ್ಕರೆ, ಸಾಂಬಾರಪದಾರ್ಥಗಳು ಮತ್ತು ಹತ್ತಿಯ ಬಟ್ಟೆಗಳನ್ನು ಪೋರ್ಚುಗೀಸ್ ವ್ಯಾಪಾರಿಗಳು ಬಂದರುಗಳಲ್ಲಿ ಖರೀದಿಸಿ ವಿದೇಶಗಳಿಗೆ ರವಾನಿಸುತ್ತಿದ್ದರು.[28] ಬಸ್ರೂರು ಬಾರ್ಕೂರು ಮತ್ತು ಮಂಗಳೂರು ಬಂದರುಗಳಲ್ಲಿ ಅಕ್ಕಿಯನ್ನು ಸಂಗ್ರಹಿಸಿ ಮಾಲ್ಡೀವ್ ದ್ವೀಪಗಳಿಗೆ, ಏಡನ್ ಮತ್ತು ಆರ್ಮುಜ್‌ಗಳಿಗೆ ರಫ್ತು ಮಾಡಲಾಗುತ್ತಿತ್ತು.[29] ತೆಂಗು, ಕರಿಮೆಣಸು, ಸಾಂಬಾರ ಪದಾರ್ಥಗಳು ಮತ್ತು ಕಬ್ಬುವಿಗೆ ಆರ್ಮುಜ್, ಪರ್ಶಿಯಾ ಮತ್ತು ಯೆಮನ್‌ನ ವ್ಯಾಪಾರಿಗಳಿಂದ ಬಹಳ ಬೇಡಿಕೆ ಇತ್ತು. ಈ ಉತ್ಪನ್ನಗಳನ್ನು ಹೊನ್ನಾವರ ಮತ್ತು ಮಂಗಳೂರಿನ ಬಂದರುಗಳಿಂದ ಮುಸ್ಲಿಂರ ಹಡಗುಗಳ ಮೂಲಕ ರಫ್ತು ಮಾಡಲಾಗುತ್ತಿತ್ತು. ಈ ಹಡಗುಗಳಲ್ಲಿ ಸ್ಥಳೀಯ ಹಿಂದುಗಳಾದ ಮುಕ್ಕರಿಗಳು ಮತ್ತು ಖಾರ್ವಿಗಳು ಕೆಲಸ ಮಾಡುತ್ತಿದ್ದರು.[30] ವಿಜಯನಗರ ಕಾಲದಲ್ಲಿ ಅರಬ್ಬರು ಮತ್ತು ಪೋರ್ಚುಗೀಸರು ಪ್ರಮುಖ

ವಿದೇಶೀ ವ್ಯಾಪಾರಿಗಳಾದರೆ, ಕಾಲಾಂತರದಲ್ಲಿ ಪೋರ್ಚುಗೀಸರು ಅರಬ್ಬರನ್ನು ಹೊರದಬ್ಬುವುದರಲ್ಲಿ ತಕ್ಕಮಟ್ಟಿಗೆ ಯಶಸ್ವಿಯಾದರು. ಪೋರ್ಚುಗೀಸರು ಮಂಗಳೂರು ಬಸ್ರೂರು ಗಂಗೊಳ್ಳಿ ಮತ್ತು ಹೊನ್ನಾವರಗಳಲ್ಲಿ ಗೋದಾಮುಗಳನ್ನು ಹೊಂದಿದ್ದರು. ಕ್ರಿ.ಶ.17ನೇ ಶತಮಾನದ ಕೊನೆಯಲ್ಲಿ ಮೂಲ್ಕಿಯೂ ಕೂಡ ಪ್ರಮುಖ ಬಂದರಾಗಿ ಕಾಣಿಸಿಕೊಳ್ಳುತ್ತದೆ. ಕ್ರಿ.ಶ. 1705ರಲ್ಲಿ ಪೋರ್ಚುಗೀಸರು ಇಲ್ಲಿಂದ ಸುಂಕವನ್ನು ಸಂಗ್ರಹಿಸುತ್ತಿದ್ದರು. ಹ್ಯಾಮಿಲ್ಟನ್‌ನ ಪ್ರಕಾರ ಅಲ್ಲಿ ಹರಿಯುವ ಶಾಂಭವಿ ನದಿಯ ಸಹಾಯದಿಂದ ಮೂಲ್ಕಿಯಿಂದ ದೊಡ್ಡ ಪ್ರಮಾಣದ ಅಕ್ಕಿಯನ್ನು ಬಂದರಿಗೆ ತಂದು ಆರ್ಮುಜ್ ಮತ್ತು ಏಡನ್‌ಗೆ ರಫ್ತು ಮಾಡಲು ಸಾಧ್ಯವಾಗಿತ್ತು.[31] ಕ್ರಿ.ಶ.18ನೇ ಶತಮಾನದ ಮಧ್ಯಭಾಗದಲ್ಲಿ ಕನ್ನಡ ಕರಾವಳಿಯ ಬಂದರುಗಳು ಅಕ್ಕಿ, ಕರಿಮೆಣಸುಗಳನ್ನು ಮಲಬಾರ್, ಮಸ್ಕತ್, ಅರೇಬಿಯಾ ಮತ್ತು ಆಫ್ರಿಕಾಗಳಿಗೆ ರಫ್ತು ಮಾಡುತ್ತಿದ್ದವು. ಈ ಕೃಷಿ ಉತ್ಪನ್ನಗಳ ವ್ಯಾಪಾರ ಕೆಳದಿ ನಾಯಕರಿಗೆ ಹೆಚ್ಚಿನ ಆದಾಯವನ್ನು ತಂದಿತ್ತು.[32]

ಕ್ರಿ.ಶ.16ನೇ ಶತಮಾನದ ಆರಂಭದಿಂದ ಕರಾವಳೀ ತೀರದ ಕೃಷಿ ವ್ಯಾಪಾರದಲ್ಲಿ ಹಲವು ಬದಲಾವಣೆಗಳಾದವು. ವ್ಯವಹಾರದಲ್ಲಿ ಹಣವನ್ನು ಹೆಚ್ಚಾಗಿ ಉಪಯೋಗಿಸಲು ಪ್ರಾರಂಭಿಸಿದ್ದು, ವಾಣಿಜ್ಯ ಉತ್ಪನ್ನಗಳ ವ್ಯಾಪಾರ ಮತ್ತು ಯುರೋಪಿನವರೆಗೂ ವ್ಯಾಪಾರ ವ್ಯವಹಾರಗಳ ವಿಸ್ತರಣೆ ಇತ್ಯಾದಿ ವಿಚಾರಗಳು ಇವುಗಳಲ್ಲಿ ಪ್ರಮುಖವಾಗಿದೆ. ಪೋರ್ಚುಗೀಸರ ಚಿನ್ನದ ನಾಣ್ಯಗಳ (ಕುಜ್ರತ್, ಪಗೋಡಗಳು ಜೆರಾಫಿನ್ಸ್, ಸಾವೊ ತೋಮ್ಸ್) ಬಳಕೆ ಪ್ರಾರಂಭವಾಯಿತು.[33] ಕೆಳದಿ ಅರಸರ ಆಳ್ವಿಕೆಯ ಪ್ರಾರಂಭದ ಕಾಲದಲ್ಲಿ ಗೋವಾ ಹಾಗೂ ಕೆನರಾದ ನಾಣ್ಯಗಳು ಸಮಾನ ವಿನಿಮಯ ದರವನ್ನು ಹೊಂದಿದ್ದವು. ಆದರೆ ಆ ನಂತರದ ದಿನಗಳಲ್ಲಿ ಪೋರ್ಚುಗೀಸರು ಪದೇ ಪದೇ ತಮ್ಮ ನಾಣ್ಯದ ಮೌಲ್ಯವನ್ನು ಬದಲಾಯಿಸುತ್ತಿದ್ದ ಕಾರಣ ಇವುಗಳ ನಡುವೆ ವ್ಯತ್ಯಾಸ ತಲೆದೋರಿತು.[34]

**ಸಾರಿಗೆ ಸಂಪರ್ಕ:** ಕೃಷಿ ಉತ್ಪನ್ನಗಳ ಸಾಗಾಟದ ವಿಚಾರ ವಿದೇಶೀ ಯಾತ್ರಿಕರ ಬರಹದಿಂದ ಸ್ಪಷ್ಟವಾಗುತ್ತದೆ. ಉದಾಹರಣೆಗೆ ಕ್ರಿ.ಶ. 1516ರಲ್ಲಿ ಬಾರ್ಬೋಸ್‌ನ ಅವಲೋಕನದಂತೆ ಅಕ್ಕಿ, ತರಕಾರಿ, ಕಬ್ಬು, ಮುಂತಾದ ಒಳನಾಡಿನ ಉತ್ಪನ್ನಗಳನ್ನು ಕರಾವಳೀ ತೀರದ ಪಟ್ಟಣಗಳಿಂದ ಕಾವಡಿಗಳ ಮೂಲಕ ಸಾಗಾಟ ಮಾಡುತ್ತಿದ್ದರು.(ಭುಜದ ಮೇಲೆ ದೊಣ್ಣೆಯನ್ನಿಟ್ಟು ಎರಡೂ ಬದಿಯಲ್ಲಿ ಭಾರವಾದ ವಸ್ತುಗಳನ್ನು ಇಳಿಬಿಟ್ಟಿರುವುದು) ಹಾಗೆಯೇ ಕುದುರೆ, ಎತ್ತಿನ ಬಂಡಿ ಮತ್ತು ಕತ್ತೆಗಳ ಮೇಲೆ ಹೇರಿಕೊಂಡು ಸಾಗಾಟ ಮಾಡುತ್ತಿದ್ದರು.[35] ಇಂಗ್ಲೀಷ್ ಯಾತ್ರಿಕ ಜಾನ್ ಫ್ರೇಯರ್‌ನ ಅಭಿಪ್ರಾಯದಂತೆ ಕರಾವಳಿ ಕರ್ನಾಟಕದ ರಸ್ತೆಗಳು ವಿಶಾಲವಾಗಿದ್ದವು.[36] ಕರಾವಳಿ ತೀರದ ಬಂದರುಗಳು ಒಳನಾಡಿನೊಂದಿಗೆ ಉತ್ತಮ ಸಂಪರ್ಕವನ್ನು ಹೊಂದಿದ್ದವು. ರಸ್ತೆಗಳಲ್ಲಿ ನಾಲ್ಕು ಸಾಲಿನಲ್ಲಿ ಮರಗಳಿದ್ದವು.[37] ಇಮ್ಮಡಿ ಬಸವಪ್ಪನಾಯಕನ ಕಾಲದಲ್ಲಿ ರಾಜಧಾನಿ ಬಿದನೂರಿನಿಂದ ಕರಾವಳಿಯ ಬಂದರುಗಳನ್ನು ಸಂಪರ್ಕಿಸುವ ರಸ್ತೆಗಳು ಸುರಕ್ಷಿತವಾಗಿದ್ದವು.[38] ಸಹ್ಯಾದ್ರಿಯ ಮೇಲೆ ಮತ್ತು ಕೆಳಗೆ ಎತ್ತಿನ ಬಂಡಿಯ ಮೂಲಕ ಸಾಗಾಟ ಮಾಡುತ್ತಿದ್ದರೆಂದು ಕೆಲವು

ದೇಶೀಯ ದಾಖಲೆಗಳು ತಿಳಿಸುತ್ತವೆ.[39]

ದೊಡ್ಡ ಮತ್ತು ಸಣ್ಣ ಹಡಗುಗಳು, ದೋಣಿಗಳು ಮತ್ತು ತೆಪ್ಪಗಳನ್ನು ನೀರಿನ ಮೇಲೆ ವಸ್ತುಗಳನ್ನು ಸಾಗಾಟ ಮಾಡಲು ಬಳಸುತ್ತಿದ್ದರು. ಕರಾವಳಿಯ ಪ್ರಮುಖ ನದಿಗಳಾದ ನೇತ್ರಾವತಿ, ಪಂಚಗಂಗಾವಳಿ, ಶರಾವತಿ, ಕಾಳಿ, ಮುಂತಾದವು ಆಂತರಿಕ ವ್ಯವಹಾರದಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದವು. ಕರಾವಳಿಯ ನದಿಗಳು ಸಾಕಷ್ಟು ವಿಶಾಲವಾಗಿದ್ದು, ಆಳವಾಗಿದ್ದು ದೋಣಿಯಾನಕ್ಕೆ ಯೋಗ್ಯವಾಗಿತ್ತು.[40] ಪೋರ್ಚುಗೀಸ್ ದಾಖಲೆಗಳು ಈ ಕಾಲದಲ್ಲಿ ಕರಾವಳಿಯಲ್ಲಿ ಬಳಸುತ್ತಿದ್ದ ವಿವಿಧ ರೀತಿಯ ಸ್ಥಳೀಯ ಹಡಗುಗಳನ್ನು ಉಲ್ಲೇಖಿಸುತ್ತವೆ. ಇನ್ನು ಕೆಲವು ದಾಖಲೆಗಳು, ಸ್ಥಳೀಯ ಹಡಗುಗಳು ಅಕ್ಕಿ, ಕರಿಮೆಣಸು, ಮತ್ತು ತೆಂಗನ್ನು ಮಲಬಾರ್‌ಗೆ ಹಾಗೂ ಅರೇಬಿಯಾ ಮತ್ತು ಕೆಂಪು ಸಮುದ್ರ ಪ್ರದೇಶಗಳಿಗೆ ಸಾಗಿಸುತ್ತಿದ್ದುದನ್ನು ತಿಳಿಸುತ್ತವೆ.[41] ಕ್ರಿ.ಶ.17ನೇ ಶತಮಾನದ ಪ್ರಾರಂಭದಲ್ಲಿ ಫ್ರಾಂಕಾಯಿಸ್ ಪಿರಾರ್ಡ್, ಮಾಲ್ಡೀವ್ ದ್ವೀಪದಲ್ಲಿದ್ದ ಸ್ಥಳೀಯರ ಹಡಗುಗಳನ್ನು ಉಲ್ಲೇಖಿಸುತ್ತಾನೆ.[42] ಹಾಗೆಯೇ ಕೊಚ್ಚಿನ್ ಆರ್ಕಿವ್ಸ್‌ನಲ್ಲಿರುವ ಕ್ರಿ.ಶ.18ನೇ ಶತಮಾನದ ಕೆಲವು ಕನ್ನಡ ಪತ್ರಗಳು, ದೊಡ್ಡ ಹಡಗುಗಳು ಮತ್ತು ತೆಪ್ಪಗಳು ಕೆನರಾದ ವ್ಯಕ್ತಿಗಳಿಗೆ ಸೇರಿದ್ದು ಮಲಬಾರ್ ಮತ್ತು ಕರ್ನಾಟಕದ ಕರಾವಳಿ ಭಾಗಗಳಿಗೆ ಅಕ್ಕಿ ಮತ್ತು ತೆಂಗನ್ನು ಸಾಗಿಸುತ್ತಿದ್ದವು ಎಂದು ಉಲ್ಲೇಖಿಸುತ್ತವೆ.[43]

**ವ್ಯಾಪಾರಿಗಳು ಮತ್ತು ವ್ಯಾಪಾರಿ ಸಂಘಗಳು:** ಭಾರತದ ಇತರ ಕಡೆಗಳಲ್ಲಿ ಇದ್ದಂತೆ ತುಳುನಾಡಿನ ವ್ಯಾಪಾರ ವ್ಯವಹಾರ ಸ್ಪರ್ಧಾತ್ಮಕವಾಗಿತ್ತು. ಸಾಮಾನ್ಯವಾಗಿ ವ್ಯವಹಾರಗಳಲ್ಲಿ ತಮ್ಮ ಕುಟುಂಬದವರನ್ನೇ ಸೇರಿಸಿಕೊಳ್ಳುತ್ತಿದ್ದರು.[44] ವಿವಿಧ ವ್ಯಾಪಾರಿ ಸಂಘಟನೆಗಳು, ಸೆಟ್ಟಿಕಾರರು, ಎಳಮೆಗಳು, ನಖರ, ಬಣಕುದಾಸ್, ನಾನಾದೇಶಿ, ಬಣಜಿಗರು, ಕೋಮಟಿಗರು ತುಳುನಾಡಿನ ವ್ಯಾಪಾರ ವಾಣಿಜ್ಯದಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದರು. ಕ್ರಿ.ಶ. 11ನೇ ಶತಮಾನದಿಂದೀಚೆಗೆ ಮುಸ್ಲಿಂ ವ್ಯಾಪಾರೀ ಸಂಘವಾದ ಹಂಜಮಾನರು ಇಲ್ಲಿಯ ವ್ಯಾಪಾರದಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಸೆಟ್ಟಿಕಾರರು, ಹಲರು, ಎಳಮೆಗಳು ಮುಂತಾದ ಸಂಘ ಸಮುದಾಯಗಳ ಸಮ್ಮುಖದಲ್ಲಿ ತುಳುನಾಡಿನ ದಾನ ದತ್ತಿಗಳು ನೀಡಲ್ಪಡುತಿದ್ದವೆಂದು ವಿಜಯನಗರ ಮತ್ತು ಕೆಳದಿ ಆಳ್ವಿಕೆಯ ಪ್ರಾರಂಭದ ಕಾಲದ ಶಾಸನಗಳು ನಿರೂಪಿಸುತ್ತವೆ.[45] ಅದೇ ರೀತಿ ಕಳಸ ಕಾರ್ಕಳದ ಭೈರರಸರು, 'ಪ್ರಭುಗಳ' ಸಹಮತ ಪಡೆದು ಕಳಸೇಶ್ವರ ದೇವಳಕ್ಕೆ ದಾನ ನೀಡಿದ್ದ ಮಾಹಿತಿ ಲಭ್ಯವಾಗುತ್ತದೆ.[46] ಆದರೆ ಕೆಳದಿ ಆಳ್ವಿಕೆಯ ಉತ್ತರಾರ್ಧದಲ್ಲಿ ಈ ಸಂಘಗಳ ಉಲ್ಲೇಖಗಳು ಅಷ್ಟಾಗಿ ಕಂಡುಬರುವುದಿಲ್ಲ. ಇದು ಇವುಗಳ ಪ್ರಭಾವ ಇಳಿಮುಖವಾದುದರ ದ್ಯೋತಕವಾಗಿದೆ.

ಪೋರ್ಚುಗೀಸರ ಆಗಮನದ ವೇಳೆಗೆ ಬಸ್ರೂರಿನ ಅಕ್ಕಿ ವ್ಯಾಪಾರವನ್ನು ಬಸ್ರೂರಿನ ಶೆಟ್ಟಿ ವ್ಯಾಪಾರಿಗಳು ನಿಯಂತ್ರಿಸುತ್ತಿದ್ದರು. ಅವರು ಶ್ರೀಮಂತರಾಗಿದ್ದು ಕೃಷಿ ಉತ್ಪನ್ನಗಳ ವ್ಯಾಪಾರಸ್ಥರಾಗಿದ್ದರು. ಮುಸ್ಲಿಂ ವ್ಯಾಪಾರಿಗಳು ಕುಚ್ಚಿಲಕ್ಕಿ, ಕರಿಮೆಣಸು, ತೆಂಗು, ಕಬ್ಬು ಮುಂತಾದ ವಸ್ತುಗಳನ್ನು ಕಾಸರಗೋಡು, ಮಂಗಳೂರು,

ಹೊನ್ನಾವರ, ಮಿರ್ಜಾನ್ ಮತ್ತು ಗೋವಾದ ಬಂದರುಗಳಲ್ಲಿ ವ್ಯಾಪಾರ ಮಾಡುತ್ತಿದ್ದರು.[47] ಅವರು ಹಡಗುಗಳ ಮಾಲಿಕರಾಗಿದ್ದು ಆಂತರಿಕ ವ್ಯಾಪಾರದಲ್ಲಿಯೂ ಪ್ರಮುಖ ಪಾತ್ರವಹಿಸಿದ್ದರು. ಇತರ ಸಮುದಾಯದ ಜನರೂ ತಮ್ಮ ಸರಕುಗಳೊಂದಿಗೆ ಆ ಹಡಗುಗಳಲ್ಲಿ ತಮ್ಮ ಪಾಲಿನ ವಂತಿಗೆ ನೀಡಿ ಪ್ರಯಾಣಿಸಬಹುದಾಗಿತ್ತು. ಮಲಬಾರ್ ತೀರದಲ್ಲಿ ಹೆಚ್ಚಿನ ಹಡಗುಗಳು ಮುಸ್ಲಿಮರ ನಿಯಂತ್ರಣದಲ್ಲಿತ್ತು. ಅವರು ಕೆಳವರ್ಗದ ಹಿಂದೂಗಳನ್ನು ನಾವಿಕರಾಗಿ ಅಥವಾ ಹುಟ್ಟುಗೋಲು ಹಾಕುವವರಾಗಿ ಆಯೋಜಿಸಿದ್ದರು. ಹಾಗಾಗಿ ಹಿಂದೂಗಳು ಹಾಗೂ ಮುಸ್ಲಿಮರು ಹೆಚ್ಚಿನ ಸಂದರ್ಭಗಳಲ್ಲಿ ಆಪ್ತ ವ್ಯಾಪಾರ ಸಂಬಂಧ ಹೊಂದಿದ್ದರು.[48] ಚೀನೀಯರು ಮತ್ತು ಅರಬ್ಬರು ಕರ್ನಾಟಕದ ಬಂದರುಗಳಲ್ಲಿ ವ್ಯಾಪಾರ ಮಾಡುತ್ತಿದ್ದ ಪ್ರಮುಖ ವಿದೇಶಿ ವ್ಯಾಪಾರಿಗಳಾಗಿದ್ದರು. ಚೀನೀಯರು ಮಂಗಳೂರು ಮತ್ತು ಹೊನ್ನಾವರದ ಬಂದರುಗಳಿಗೆ ಕೃಷಿ ಉತ್ಪನ್ನಗಳ ವ್ಯಾಪಾರದ ಉದ್ದೇಶದಿಂದ ಭೇಟಿ ನೀಡುತ್ತಿದ್ದರು.[49] ವಿದೇಶೀ ವ್ಯಾಪಾರವನ್ನು ಮಾಡುತ್ತಿದ್ದ ಇಲ್ಲಿಯ ಜೈನ ಸೆಟ್ಟಿಗಳ ಕಾರಣದಿಂದಾಗಿಯೇ ಚೀನಾದೇಶದ ಡ್ರ್ಯಾಗನ್ ನಂತಹ ಚಿತ್ರ ಸಾವಿರಕಂಬದ ಬಸದಿಯ ಭೈರಾದೇವಿ ಮಂಟಪದ ಕಕ್ಷಾಸನದಲ್ಲಿ ಕೆತ್ತಲಾಯಿತು. ಬಸದಿಯ ಒಳಗಿರುವ ಶಾಸನವೊಂದರಲ್ಲಿ 'ಚೈನಾಂಬರ' ಎಂಬ ಪದವೂ ಚೀನಾದೇಶದ ಬಟ್ಟೆ ಅಂದರೆ ರೇಶ್ಮೆಯ ವ್ಯಾಪಾರದ ನಂಟನ್ನು ಬಲಪಡಿಸುತ್ತದೆ.[50]

ಕ್ರಿ.ಶ.16ನೇ ಶತಮಾನದ ಆರಂಭದಲ್ಲಿ ಪೋರ್ಚುಗೀಸರ ಆಗಮನದೊಂದಿಗೆ ತುಳುನಾಡಿನ ಕರಾವಳೀ ತೀರದ ವ್ಯಾಪಾರ ಚಟುವಟಿಕೆಗಳು ಗಣನೀಯವಾಗಿ ಬದಲಾವಣೆಯನ್ನು ಕಂಡಿತು. ಅವರು ಇಲ್ಲಿಯ ಬಂದರುಗಳಲ್ಲಿ ಅಕ್ಕಿ, ಕರಿಮೆಣಸು ಮತ್ತು ಇತರ ಉತ್ಪನ್ನಗಳ ವ್ಯಾಪಾರದಲ್ಲಿ ಏಕಸ್ವಾಮ್ಯತೆಯನ್ನು ಸಾಧಿಸಲು ಹೊಸ ವಿಧಾನಗಳನ್ನು ಅನುಸರಿಸಿದರು. ಉದಾಹರಣೆಗೆ ಭಟ್ಕಳ, ಹೊನ್ನಾವರ, ಮತ್ತು ಗೇರುಸೊಪ್ಪೆಗಳಲ್ಲಿ ಕ್ರಿ.ಶ. 1502 ಮತ್ತು 1570ರಲ್ಲಿ ಕೃಷಿ ಉತ್ಪನ್ನಗಳ ಮೇಲೆ ಪೋರ್ಚುಗೀಸರ ಏಕಸ್ವಾಮ್ಯತೆಯ ಪ್ರಯತ್ನಗಳು ಸ್ಥಳೀಯ ವ್ಯಾಪಾರಿಗಳನ್ನು ರೇಗಿಸಿತು. ಕ್ರಿ.ಶ. 1525ರಲ್ಲಿ ಪೋರ್ಚುಗೀಸರು ಮಂಗಳೂರಿನಲ್ಲಿ ವ್ಯಾಪಾರದಲ್ಲಿ ತೊಡಗಿದ್ದ ಮಲಬಾರಿಗಳ ಹಡಗುಗಳನ್ನು ನಾಶಮಾಡಿದರು. ಹಾಗೆಯೇ ಬಸ್ರೂರಿನ ಶೆಟ್ಟಿಗಳು ಪೋರ್ಚುಗೀಸರ ಕಿರುಕುಳದಿಂದಾಗಿ ತಮ್ಮ ಸಮುದ್ರ ವ್ಯಾಪಾರದ ಹಿಡಿತವನ್ನು ಕಳೆದುಕೊಂಡರು. ಈ ಸೆಟ್ಟಿ ವ್ಯಾಪಾರಿಗಳು ಪೋರ್ಚುಗೀಸರಿಗಿಂತ ಮಲಬಾರಿ ವ್ಯಾಪಾರಿಗಳಿಗೆ ಅಕ್ಕಿಯನ್ನು ಪೂರೈಸುವುದನ್ನು ಇಷ್ಟ ಪಡುತ್ತಿದ್ದರು.[51] ಏಕೆಂದರೆ ಹಿಂದಿನಿಂದಲೂ ಅವರು ವ್ಯಾಪಾರ ವ್ಯವಹಾರಗಳ ಬಾಂದವ್ಯವನ್ನು ಹೊಂದಿದ್ದರು. ಅಂತೆಯೇ ಪೋರ್ಚುಗೀಸರು ಈ ಸಂದರ್ಭದಲ್ಲಿ ಅರಬ್ ವ್ಯಾಪಾರಿಗಳನ್ನೂ ತಡೆದಿದ್ದರು. ಆದಾಗ್ಯೂ ಕ್ರಿ.ಶ.17ನೇ ಶತಮಾನದ ಪ್ರಾರಂಭದಿಂದ ಪೋರ್ಚುಗೀಸ್ ವ್ಯಾಪಾರಿಗಳು ಇನ್ನಿತರ ಯುರೋಪಿಯನ್‌ರಿಂದ ವಿರೋಧವನ್ನು ಎದುರಿಸಬೇಕಾಯ್ತು. ಭಟ್ಕಳ, ಬಸ್ರೂರು ಮತ್ತು ಮಂಗಳೂರುಗಳಲ್ಲಿ ಡಚ್ಚರು ಮತ್ತು ಇಂಗ್ಲೀಷರು ಅಕ್ಕಿ ಮತ್ತು ಕರಿಮೆಣಸಿನ ವ್ಯಾಪಾರದಲ್ಲಿ ಪೋರ್ಚುಗೀಸರಿಗೆ ತೀವ್ರ ಸ್ಪರ್ಧೆಯನ್ನು ನೀಡಿದರು.

ಅಂತೆಯೇ ಅವರು ಕಾಸರಗೋಡಿನ ಬಂದರಿನಲ್ಲಿ ಸ್ಥಳೀಯರಿಂದಲೂ ತೀವ್ರ ಸ್ಪರ್ಧೆಯನ್ನು ಎದುರಿಸಬೇಕಾಯಿತು.[52] ಹಾಗೆಯೇ ಕರಾವಳಿಯ ಪಟ್ಟಣಗಳಲ್ಲಿ ಪೋರ್ಚುಗೀಸರಿಗೆ ಅರಬ್ಬರ ವ್ಯಾಪಾರವನ್ನೂ ಸಂಪೂರ್ಣವಾಗಿ ನಿಯಂತ್ರಿಸಲು ಸಾಧ್ಯವಾಗಲಿಲ್ಲ.[53]

ಕ್ರಿ.ಶ.17ನೇ ಶತಮಾನದ ಉದ್ದಕ್ಕೂ ಮತ್ತು ಕ್ರಿ.ಶ. 18ನೆಯ ಶತಮಾನದ ಮೊದಲ ದಶಕಗಳಲ್ಲಿ ಯುರೋಪಿಯನ್ನರು ಈ ಭಾಗದ ವ್ಯಾಪಾರದಲ್ಲಿ ಏಕಸ್ವಾಮ್ಯತೆಯನ್ನು ಸ್ಥಾಪಿಸಲು ಪ್ರಯತ್ನಿಸಿದರು. 'ಪೋರ್ಟ್ಸ್– ಫ್ಯಾಕ್ಟರಿ ಸಿಸ್ಟಮ್'[54] ಮೂಲಕ ಅವರು ವ್ಯಾಪಾರವನ್ನು ನಿರ್ವಹಿಸುತ್ತಿದ್ದರು. ಈ ವ್ಯವಸ್ಥೆಯಲ್ಲಿ ಯುರೋಪಿಯನ್ನರು ಫ್ಯಾಕ್ಟರಿಗಳನ್ನು ಸ್ಥಾಪಿಸಿ, ಕೋಟೆಗಳನ್ನು ನಿರ್ಮಿಸಿ ಅವುಗಳನ್ನು ತಮ್ಮ ವ್ಯಾಪಾರದ ಕೇಂದ್ರಗಳಾಗಿ ಪರಿವರ್ತಿಸುತ್ತಿದ್ದರು. ಆದಾಗ್ಯೂ ಕ್ರಿ.ಶ. 18ನೇ ಶತಮಾನದ 2ನೆಯ ದಶಕದಲ್ಲಿ ಇಲ್ಲಿಯ ಆಂತರಿಕ ಮತ್ತು ಬಾಹ್ಯ ವ್ಯಾಪಾರಗಳೆರಡರಲ್ಲೂ ಸ್ಥಳೀಯರಾದ ಗೌಡ ಸಾರಸ್ವತರು ಮೇಲ್ಮೆಯನ್ನು ಸಾಧಿಸಿದರು. ಹಾಗೆಯೇ ಅರಬ್ಬರು ಮತ್ತು ಇತರ ಮುಸ್ಲಿಂರು ಮುಂಚೂಣಿಯಲ್ಲಿದ್ದರು. ಕ್ರಿ.ಶ. 1748 ಎಪ್ರಿಲ್ 5ನೇ ತಾರೀಕಿನ ಪೋರ್ಚುಗೀಸ್ ದಾಖಲೆಯೊಂದು, ನಾರಾಯಣ ಪ್ರಭು ಎನ್ನುವವನು ಅಂಕೋಲದ ವ್ಯಾಪಾರಿಯಾಗಿದ್ದು ಅವನು ಗೋವಾದಲ್ಲಿದ್ದ ಪೋರ್ಚುಗೀಸರಿಗೆ ಅಕ್ಕಿಯನ್ನು ಪೂರೈಸುತ್ತಿದ್ದ ಎಂಬ ಮಾಹಿತಿ ನೀಡುತ್ತದೆ.[55] ಹಾಗೆಯೇ ಕ್ರಿ.ಶ 1742ರ ಅಪ್ರಕಟಿತ ದಾಖಲೆ, ತಿಳಿಸುವಂತೆ ಹೊನ್ನಾವರ ಮತ್ತು ಮಂಗಳೂರಿನ ನಡುವೆ 'ಹರ್ ಕಮಿತಿ'(ಹರಿ ಕಾಮತ್) ಒಬ್ಬ ಪ್ರಮುಖ ವ್ಯಾಪಾರಿಯಾಗಿದ್ದ. ಕೆ.ಜಿ.ವಸಂತ ಮಾಧವರು ಇವನನ್ನು ಸಾರಸ್ವತ ವ್ಯಾಪಾರಿಯೆಂದು ಪರಿಗಣಿಸಿದ್ದಾರೆ. ಆದರೆ ಅವನು ವ್ಯಾಪಾರಸ್ಥರಾದ ಕೋಮಟಿಗ ಜನಾಂಗಕ್ಕೆ ಸೇರಿದವನೆಂದೂ ಹೇಳಲಾಗಿದೆ.[56] ಕರಾವಳಿ ಭಾಗದಲ್ಲಿ ಗೌಡ ಸಾರಸ್ವತ ಮೂಲಕ್ಕೆ ಸೇರಿದ ಕಾಮತರು ತಮ್ಮನ್ನು ವ್ಯಾಪಾರ ವ್ಯವಹಾರದಲ್ಲಿ ತೊಡಗಿಸಿಕೊಂಡಿದ್ದರು. ಹಾಗಾಗಿ ಆತ ಕೋಮಟಿಗ ಸಮುದಾಯದವನೆಂದು ಹೇಳಿರುವುದು ಸಮಂಜಸವೆಂದು ತೋರುವುದಿಲ್ಲ. ಅವನು ಅಕ್ಕಿ, ಕರಿಮೆಣಸು ಮತ್ತು ಇತರ ಸರಕುಗಳ ವ್ಯಾಪಾರಿಯಾಗಿದ್ದನಲ್ಲದೆ, ಮೊಬಲಗು ನೀಡುವಲ್ಲಿ ತಡವಾದರೆ ಅದರ ಮೇಲೆ ಬಡ್ಡಿಯನ್ನೂ ವಿಧಿಸುತ್ತಿದ್ದ.[57] ಬಸ್ರೂರು, ಹೊನ್ನಾವರ, ಮೂಲ್ಕಿ, ಮತ್ತು ಮಂಗಳೂರುಗಳಲ್ಲಿ ತನ್ನ ವ್ಯಾಪಾರ ಕೇಂದ್ರವನ್ನು ಹೊಂದಿದ್ದ. ಬಸ್ರೂರಿನ ಸಾರಸ್ವತ ವ್ಯಾಪಾರಿಗಳು ಸ್ವಂತ ಹಡಗನ್ನು ಹೊಂದಿ ವಿದೇಶಿ ವ್ಯಾಪಾರದಲ್ಲಿ ತೊಡಗಿದ್ದರು. ಆದಾಗ್ಯೂ ನಿಜ ಅರ್ಥದಲ್ಲಿ ಸಮುದ್ರ ವ್ಯಾಪಾರ ಚಟುವಟಿಕೆಗಳನ್ನು ಖಾರ್ವಿಗಳು, ಮೊಗೇರರು ಮತ್ತು ಮರಕಲರು ನಡೆಸುತ್ತಿದ್ದರು. ಈ ಸ್ಥಳೀಯ ವ್ಯಾಪಾರಿಗಳು ಪೋರ್ಚುಗೀಸರ ಅಕ್ಕಿ ಸಾಗಿಸುವ ಬೆಂಗಾವಲು ಪಡೆಯ ವ್ಯವಸ್ಥೆಯ ಭಾಗವಾಗಿಯೂ ಇದ್ದರು. ಇದನ್ನು ಖಫಿಲ್ ಎಂದು ಕರೆಯಲಾಗಿದೆ.[58] ಹೈದರ್ ಮತ್ತು ಟಿಪ್ಪು ಸುಲ್ತಾನ್ ಕಾಲದಲ್ಲಿ ಮತ್ತು ಆನಂತರ ಗೌಡ ಸಾರಸ್ವತರು, ಮುಸ್ಲಿಮರ ಜೊತೆಯಲ್ಲಿ ಬಂಟರೂ ವ್ಯಾಪಾರ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡರು.[59]

ಒಟ್ಟಿನಲ್ಲಿ ಮೊದಲು ಇಲ್ಲಿನ ಆಂತರಿಕ ವ್ಯಾಪಾರ ಮಾಪಿಳ್ಳೆ, ಬ್ಯಾರಿ, ನವಾಯಿತ ಮೊದಲಾದ ಮುಸಲ್ಮಾನರು, ಜೈನಸೆಟ್ಟಿಗಳು ನಡೆಸುತ್ತಿದ್ದರು. ಅರಬ್ಬರು ವಿದೇಶೀ ವ್ಯಾಪಾರದಲ್ಲಿ ನುರಿತವರಾಗಿದ್ದರು. ಕ್ರಿ.ಶ. 16ನೇ ಶತಮಾನದಲ್ಲಿ ಪೋರ್ಚುಗೀಸರು ಮುಸ್ಲಿಮರ ವ್ಯಾಪಾರವನ್ನು ಕಸಿದುಕೊಂಡರು. ಆದರೆ ತದನಂತರ ಗೋವೆಯಿಂದ ಬಂದ ವೈಷ್ಣವ ಸಾರಸ್ವತರು ಕರಾವಳಿ ಕರ್ನಾಟಕದ ವಾಣಿಜ್ಯದಲ್ಲಿ ಪ್ರಬಲರಾದರೆಂದು ವಿದೇಶೀ ದಾಖಲೆಗಳಿಂದ ತಿಳಿದು ಬರುತ್ತದೆ. ಇವರು ಕರಾವಳಿಯ ಕೃಷಿ ಉತ್ಪಾದನೆ ಮತ್ತು ವ್ಯಾಪಾರವನ್ನು ವಿಸ್ತಾರಗೊಳಿಸಿದರು. ಇದರಿಂದಾಗಿ ಕೃಷಿ ಉತ್ಪಾದನೆ ಬಹಳ ಲಾಭದಾಯಕವೆನಿಸಿತು. ಕೃಷಿ ಮತ್ತು ಇತರ ಸರಕುಗಳ ವ್ಯಾಪಾರ ತುಳುನಾಡಿನ ಕರಾವಳಿ ತೀರದಲ್ಲಿ ರಾಜಕೀಯ ಘಟನೆಗಳನ್ನು ರೂಪಿಸುವಷ್ಟು ಪ್ರಭಾವಶಾಲಿಯಾಗಿತ್ತು. ಮುಖ್ಯವಾಗಿ ಕೆಳದಿನಾಯಕರು ಮತ್ತು ಸ್ಥಳೀಯ ರಾಜರುಗಳು ಅಕ್ಕಿ ಮತ್ತು ಕರಿಮೆಣಸಿನ ವ್ಯಾಪಾರವನ್ನು ನಿರ್ಬಂಧಿಸುವ ಮೂಲಕ ಶಸ್ತ್ರ ಸಹಿತರಾಗಿ ಆಗಮಿಸಿದ್ದ ವಿದೇಶೀ ವ್ಯಾಪಾರಿಗಳನ್ನು ನಿಯಂತ್ರಿಸುತ್ತಿದ್ದರು. ಪೋರ್ಚುಗೀಸರು ಡಚ್ಚರು ಮತ್ತು ಇಂಗ್ಲೀಷರು ಈ ಭಾಗದ ಅಕ್ಕಿ ಮತ್ತು ಕರಿಮೆಣಸಿನ ಮೇಲೆ ಬಹಳಷ್ಟು ಅವಲಂಬಿತರಾಗಿದ್ದರು. ಈ ಸನ್ನಿವೇಷದ ಲಾಭ ಪಡೆದ ಕೆಳದಿಯರಸರು ಪೋರ್ಚುಗೀಸರಿಗೆ ನಿರ್ದಿಷ್ಟ ಪ್ರಮಾಣದ ಕರಿಮೆಣಸನ್ನು ನಿರ್ದಿಷ್ಟ ಬೆಲೆಗೆ ಕೊಂಡು ಕೊಳ್ಳಬೇಕು ಎಂದು ತಾಕೀತು ಮಾಡಿದ್ದರು. ಉದಾಹರಣೆಗೆ ಪೋರ್ಚುಗೀಸರು ಉದ್ದಟತನ ತೋರಿದಾಗ, ಕೆಳದಿ ಶಿವಪ್ಪ, ಚೆನ್ನಮ್ಮಾಜಿ ಮತ್ತು ಸೋಮಶೇಖರನಾಯಕ, ಅಕ್ಕಿ ಪೂರೈಕೆಯ ಬೇಡಿಕೆಯನ್ನು ತಿರಸ್ಕರಿಸಿದ್ದರು.[60] ಈ ಸಂಘರ್ಷದ ರಾಜಕಾರಣವನ್ನು ಮುಂದೆ ಪ್ರತ್ಯೇಕವಾಗಿ ಚರ್ಚಿಸಲಾಗಿದೆ.

**4.3 ತೆರಿಗೆಯ ಸ್ವರೂಪ – ಭೂ ಸಂಬಂಧಿತ ತೆರಿಗೆಗಳು**

ಕೆಳದಿ ಆಳ್ವಿಕೆಯ ತುಳುನಾಡಿನಲ್ಲಿಯೂ ಭೂ ತೆರಿಗೆಯೇ ರಾಜ್ಯದ ಪ್ರಧಾನ ಆದಾಯದ ಮೂಲವಾಗಿತ್ತು. ಸರಕಾರದ ತೆರಿಗೆ ನೀತಿ ಜನರಿಗೆ ತೊಂದರೆಯನ್ನುಂಟು ಮಾಡಬಾರದೆಂದು ರಾಜರುಗಳು ಬಹು ಎಚ್ಚರಿಕೆ ವಹಿಸುತ್ತಿದ್ದರು. ತೆರಿಗೆಯ ಪ್ರಮಾಣ ಕಾಲದಿಂದ ಕಾಲಕ್ಕೆ ಮತ್ತು ಪ್ರದೇಶದಿಂದ ಪ್ರದೇಶಕ್ಕೆ ಬೇರೆ ಬೇರೆಯಾಗಿರುತ್ತಿತ್ತು. ವಿಜಯನಗರದರಸರು, ಕೆಳದಿನಾಯಕರು ಮತ್ತು ಸ್ಥಳೀಯ ರಾಜರುಗಳು ಅಲ್ಲದೆ ಹೈದರ್ ಮತ್ತು ಟಿಪ್ಪುವಿನ ಕಾಲದಲ್ಲಿ $^1/_6$ ಭಾಗ ತೆರಿಗೆಯನ್ನು ಸಂಗ್ರಹಿಸುವ ವಿಧಾನ ಜಾರಿಯಲ್ಲಿದ್ದರೂ ಅನೇಕ ಸಂದರ್ಭಗಳಲ್ಲಿ ಇವರ ಕಂದಾಯ ಸ್ವರೂಪವು ಸ್ವತಂತ್ರ ರೂಪ ಪಡೆದುಕೊಂಡಿತು ಎಂದು ಭಾವಿಸಬೇಕಾಗುತ್ತದೆ.[61] ತೆರಿಗೆಯ ದರ, ಮಣ್ಣಿನ ಗುಣ ಲಕ್ಷಣ ಮತ್ತು ಫಲವತ್ತತೆಯನ್ನು ಅವಲಂಬಿಸಿತ್ತು. ಕ್ರಿ.ಶ. 16ನೇ ಶತಮಾನದ ಉತ್ತರಾರ್ಧದಲ್ಲಿ ಕೆಳದಿಯರಸರು ತುಳುನಾಡಿನ ಮೇಲೆ ಹಿಡಿತ ಹೊಂದಿದರಾದರೂ, ಇವರ ಕಂದಾಯ ಸ್ವರೂಪವು ಕ್ರಿ.ಶ. 1614ರ ನಂತರ ಅಂದರೆ ವೆಂಕಟಪ್ಪನಾಯಕ ತುಳುನಾಡಿನ ಮೇಲೆ ತನ್ನ ನಿಯಂತ್ರಣ ಸಾಧಿಸಿದ ನಂತರ ರೂಪುಗೊಂಡಿತೆಂದು ಹೇಳಲಾಗಿದೆ.[62] ಅಂದರೆ ಇದಕ್ಕಿಂತ ಮೊದಲು

ವಿಜಯನಗರದರಸರ ತೆರಿಗೆ ನೀತಿಯನ್ನು ಇವರು ಮುಂದುವರೆಸಿರಬೇಕೆಂದು ಭಾವಿಸಬೇಕಾಗುತ್ತದೆ. ಕೆಳದಿ ರಾಜರು ಹಳೆಯ ತೆರಿಗೆ ನೀತಿಯೊಂದಿಗೆ, ಕೆಲವು ಹೊಸ ತೆರಿಗೆ ವ್ಯವಸ್ಥೆಯನ್ನು ಜಾರಿಗೊಳಿಸಿದರು.

ಸಾಮಾನ್ಯವಾಗಿ ಎಲ್ಲಾ ಬೇಸಾಯ ಯೋಗ್ಯ ಭೂಮಿಗಳನ್ನು ರಾಯರೇಖಾ ಮತ್ತು ಬೀಜವರಿ ಪದ್ಧತಿಯಲ್ಲಿ ಮೌಲ್ಯಮಾಪನ ಮಾಡಲಾಗುತ್ತಿತ್ತು. ರಾಯಾರೇಖಾ ಪದ್ಧತಿ ಕೆನರಾ ಪ್ರದೇಶದಲ್ಲಿ ವಿಜಯನಗರದ ಹರಿಹರನ ಕಾಲದಲ್ಲಿದ್ದ ಭೂ ಮೌಲ್ಯಮಾಪನದ ವಿಧಾನವಾಗಿತ್ತು.[63] ಆದರೆ ಇದು ಅಪರೂಪದಲ್ಲಿ ಅನುಸರಿಸಲ್ಪಡುತ್ತಿತ್ತು. ಈ ಭಾಗದಲ್ಲಿ ಬಹಳ ಜನಪ್ರಿಯವಾದ ಭೂ ಮೌಲ್ಯಮಾಪನ ವ್ಯವಸ್ಥೆಯೆಂದರೆ ಬೀಜವರಿ. ಒಂದು ನಿರ್ದಿಷ್ಟ ಪಡಿಸಿದ ಭೂಮಿಗೆ ಎಷ್ಟು ಬಿತ್ತನೆ ಬೀಜ ಉಪಯೋಗಿಸಲಾಗುತ್ತದೆ ಎನ್ನುವುದರ ಆಧಾರದಲ್ಲಿ ಭೂಮಿಯ ಅಳತೆಯ ಮೌಲ್ಯಮಾಪನ ನಡೆಯುತ್ತಿತ್ತು. ಈ ಕಾಲದ ಹಲವು ಶಾಸನಗಳಲ್ಲಿ ಬೀಜವರಿ, ಬೀಜವರಿ ಗದ್ದೆ ಅಥವಾ ಬೀಜವರಿ ಖಂಡುಗ ಮೊದಲಾದ ಪದಗಳು ಕಾಣಸಿಗುತ್ತವೆ.[64] ಬೀಜವರಿ ಪದ್ಧತಿಯಲ್ಲದೆ ಭೂಮಿಯನ್ನು 'ಕಾಟಿ' ಕೋಲುಗಳ ಮೂಲಕ ಅಳೆಯಲಾಗುತ್ತಿತ್ತೆಂದು ತಿಳಿದುಬರುತ್ತದೆ.[65] ನೇಗಿಲಿನ ಸಂಖ್ಯೆಯ ಆಧಾರದಲ್ಲಿ ಭೂ ಕಂದಾಯವನ್ನು ನಿಗದಿಮಾಡುವ ಕ್ರಮ(ಕುಳ) ಗೋಕರ್ಣ, ತೀರ್ಥಹಳ್ಳಿಯಂತಹ ಕೆಲವು ಭಾಗಗಳಲ್ಲಿ ಅಸ್ತಿತ್ವದಲ್ಲಿತ್ತು.[66] ಹಾಗೆಯೇ ಸಾಮಾನ್ಯವಾಗಿ ಭೂಮಿಯ ಮೌಲ್ಯಗಳನ್ನು ಆ ಭೂಮಿಯ ಉತ್ಪನ್ನದ ಆಧಾರದಲ್ಲಿ ದಾಖಲಿಸಲಾಗುತ್ತಿತ್ತು. ಉದಾಹರಣೆಗೆ ಕ್ರಿ.ಶ.1670ರ ಮಂಜೇಶ್ವರದ ಕಾಗದದ ದಾಖಲೆ, ಸಜಿಪದ ಮಾಗಣೆಯ ಮಂಜೆ ಗ್ರಾಮವನ್ನು 12 ವರಹ ಮೌಲ್ಯದ ಆದಾಯದ ಹಿನ್ನೆಲೆಯಲ್ಲಿ ಗುರುತಿಸಿರುವುದು ತಿಳಿದುಬರುತ್ತದೆ.[67] ಒಣಭೂಮಿಗೆ ಸಂಬಂಧಪಟ್ಟಂತೆ ಕೆಳದಿ ರಾಜರು ಯಾವ ಅಳತೆಗೋಲನ್ನು ಕೂಡ ಉಪಯೋಗಿಸಿಲ್ಲ ಎಂದು ಹೇಳಲಾಗಿದೆ.[68] ಆದರೆ 2 ಶಾಸನಗಳು ಭೂಮಿಯನ್ನು ಅಳತೆ ಮಾಡುವ 'ಕಾಟಿ'ಯನ್ನು ಹೆಸರಿಸಿವೆ. ಕ್ರಿಶ 1665ರ ಶಾಸನವೊಂದರಲ್ಲಿ[69] ಬಾರ್ಕೂರು ಹೋಬಳಿಯ ನಲ್ವತ್ತನಾಡು ಸೀಮೆಯ ಅಸೋಡ ಗ್ರಾಮದಲ್ಲಿ, ಕಾಟಿ 110ರ ಮೌಲ್ಯವು 44 ಗದ್ಯಾಣಗಳೆಂದು ದಾಖಲಾಗಿದೆ. ಕ್ರಿ.ಶ.1674ರ ಗಂಗೊಳ್ಳಿಯ ಮಲ್ಲೇರ ಮಠದ ತಾಮ್ರ ಶಾಸನ[70] ನೀಡುವ ಮಾಹಿತಿಯಂತೆ $126^1/_2$ ಕಾಟಿ ಭೂಮಿ, ಹಲಸನಾಡು ಸೀಮೆಯ ಸೇನಾಪುರ ಗ್ರಾಮದಲ್ಲಿದ್ದು ಅದರ ಮೂಲ ಮೌಲ್ಯಮಾಪನ $50^1/_2$ ಗದ್ಯಾಣ ಮತ್ತು 1 ಹಣವಾಗಿತ್ತು. ಆದಾಗ್ಯೂ ಕಾಟಿ ಎನ್ನುವ ಅಳತೆಗೋಲನ್ನು ಅಪರೂಪದಲ್ಲಿ ಉಪಯೋಗಿಸಲಾಗಿದೆ. ತೋಟದ ಭೂಮಿಗೆ ಸಂಬಂಧಿಸಿದಂತೆ ಕೆಲವು ಅಳತೆಗೋಲನ್ನು ಬಳಸಲಾಗುತ್ತಿತ್ತೆಂದು ಬಿ.ಎಲ್.ರೈಸ್ ಹೇಳಿದ್ದಾರೆ. ಆದರೆ ಇಲ್ಲಿ ಕೂಡ ಯಾವ ಮಾಹಿತಿಯ ಆಧಾರದಲ್ಲಿ ಇದನ್ನು ಅವರು ಹೇಳಿದ್ದಾರೆಂದು ತಿಳಿಯಲು ನಮಗೆ ಆಧಾರಗಳ ಕೊರತೆ ಇದೆ.[71] ಹಲವು ಶಾಸನಗಳು ಪ್ರಾಕುರೇಖಾ ಎನ್ನುವ ಪದವನ್ನು ಬಳಸಿದೆ. ಉದಾಹರಣೆಗೆ ಕ್ರಿ.ಶ 1623ರ ತೀರ್ಥಹಳ್ಳಿಯಲ್ಲಿ ದೊರೆತ ಶಾಸನ ಬಾರ್ಕೂರು ಸೀಮೆಯ ಮಾಕ್ಸಿ ಗ್ರಾಮದ ಪ್ರಾಕು ರೇಖಾವನ್ನು ಕಾಟಿ 72 ಗದ್ಯಾಣಗಳೆಂದು ಉಲ್ಲೇಖಿಸಿವೆ.[72] ಪ್ರಾಕು ರೇಖಾ ಎಂಬುದು ಈ ಹಿಂದೆ ಮೌಲ್ಯಮಾಪನ ಮಾಡಿದ ಭೂಮಿ ಎಂಬ

ಅರ್ಥದಲ್ಲಿ ಬಳಕೆಯಾಗಿದೆ.

ಬೀಜವರಿಯ ಜೊತೆಗೆ ಫಲವತ್ತತೆಯ ಆಧಾರದಲ್ಲಿ ಭೂ ತೆರಿಗೆಯನ್ನು ವಿಧಿಸುವ ಕ್ರಮ ಈ ಕಾಲದಲ್ಲಿಯೂ ಮುಂದುವರೆಯಿತು. ಶಾಸನಗಳು ಹಲವು ರೀತಿಯ ಬೇಸಾಯ ಯೋಗ್ಯ ಭೂಮಿಯನ್ನು ಹೆಸರಿಸುತ್ತವೆ. ಅವುಗಳೆಂದರೆ ಬಯಲು, ಮಜಲು, ಮಕ್ಕಿ ಮತ್ತು ಭಾಗಾಯ್ತು, ಈ ಎಲ್ಲಾ ಭೂಮಿಗಳು ಫಲವತ್ತತೆಯ ಆಧಾರದಲ್ಲಿ ತೆರಿಗೆಗೆ ಒಳಗಾಗುತ್ತಿದ್ದವು. ಕ್ರಿ.ಶ 1674ರ ಗಂಗೊಳ್ಳಿಯ ಮಲ್ಲೇರ ಮಠದ ತಾಮ್ರ ಶಾಸನ, ವಿವಿಧ ಗದ್ದೆಗಳಾದ ಬಯಲು ಮತ್ತು ಮಕ್ಕಿಗೆ ಪ್ರತ್ಯೇಕ ತೆರಿಗೆಯ ದರ ವಿಧಿಸಲಾಗುತ್ತಿತ್ತು ಎಂಬ ಮಾಹಿತಿ ನೀಡುತ್ತದೆ.[73] ಕ್ರಿ.ಶ 1674ರಲ್ಲಿ ಉಡುಪಿಯ ಬೆನವಟ್ಟಿ ಗ್ರಾಮದಲ್ಲಿ ವಿವಿಧ ಭತ್ತದ ಗದ್ದೆಗಳಿಗೆ ವಿವಿಧ ಪ್ರಮಾಣದ ತೆರಿಗೆ ಸಂಗ್ರಹಿಸಲಾಗಿತ್ತು ಎಂಬ ಮಾಹಿತಿ ದೊರೆಯುತ್ತದೆ. ಈ ಎಲ್ಲಾ ಭತ್ತದ ಗದ್ದೆಗಳ ಕಂದಾಯ ಆದಾಯ ಹಣದ ರೂಪದಲ್ಲಿ 44 ಗದ್ಯಾಣಗಳು ಮತ್ತು 3 ಹಣಗಳಾಗಿತ್ತು.[74] ಹಾಗೆಯೇ ಇದೇ ಲಕ್ಷಣಗಳು ಮಂಗಳೂರಿನ ದಕ್ಷಿಣಕ್ಕೆ ಇರುವ ಪ್ರದೇಶಗಳಲ್ಲಿತ್ತು. ಉದಾಹರಣೆಗೆ ಮಂಜೇಶ್ವರ ದೇವಳದ ಕ್ರಿ.ಶ 1708ರ ಕಡತವೊಂದರಲ್ಲಿ ಕಾಸರಗೋಡಿನ ಕುಂಬಳೆಯ ಅಂಗಡಿಮೊಗರು ಮಾಗಣಿಯ ಬಾಡೂರು ಗ್ರಾಮದಲ್ಲಿ ಬೆಟ್ಟು, ಮಜಲು, ಬಯಲು ಗದ್ದೆಗಳು ಮತ್ತು ಭಾಗಾಯ್ತು ಭೂಮಿಗಳಿದ್ದು ಇವುಗಳಿಗೆ ಪ್ರತ್ಯೇಕವಾದ ತೆರಿಗೆ ವಿಧಿಸಲಾಗುತ್ತಿತ್ತು.[75]

ಕೆಳದಿ ಅರಸರ ಅಧಿಕಾರಾವಧಿಯಲ್ಲಿ ನಿರಂತರವಾಗಿ ಭೂ ತೆರಿಗೆಯನ್ನು ಹೆಚ್ಚಿಸುತ್ತಿದ್ದರೆಂದು ತಿಳಿದುಬರುತ್ತದೆ. ನಿರ್ದಿಷ್ಟವಾದ ಮೌಲ್ಯಮಾಪನವನ್ನು ಶಿಸ್ತು ಎಂದು ಕರೆಯಲಾಗಿದೆ. (standard assement) ತೆರಿಗೆಯನ್ನು ಹೆಚ್ಚಿಸುವಾಗ ಮೂಲ ಶಿಸ್ತಿನಲ್ಲಿ ಬದಲಾವಣೆ ಮಾಡದೇ ಹೆಚ್ಚುವರಿ ತೆರಿಗೆಯನ್ನು ವಿಧಿಸಲಾಗುತ್ತಿತ್ತು.[76] ಭೂಮಿಯ ನಿರ್ದಿಷ್ಟಪಡಿಸಿದ ಭೂಕಂದಾಯವನ್ನು ಸಿದ್ಧಾಯವೆಂದು ಕರೆಯಲಾಗಿದೆ. ಸಿದ್ಧಾಯವು ಮುಖ್ಯ ಭೂ ಕಂದಾಯವಾಗಿ ಮುಂದುವರೆದಿತ್ತು. ಸಿದ್ಧಾಯದೊಂದಿಗೆ ರಾಜರುಗಳು 'ಸಮುದಾಯ' ಮತ್ತು 'ಕುಲ' ಎನ್ನುವ ತೆರಿಗೆಯನ್ನು ಸಂಗ್ರಹಿಸುತ್ತಿದ್ದರು.[77] ವಿಜಯನಗರ ಕಾಲದಿಂದಲೇ ಅಸ್ತಿತ್ವದಲ್ಲಿದ್ದ ಈ ತೆರಿಗೆ ಕೇವಲ ನಗದು ರೂಪದಲ್ಲಿ ಸಲ್ಲಿಸಬೇಕಾದ ಭೂ ಕಂದಾಯವಾಗಿತ್ತು.[78] ಸಿದ್ಧಾಯದೊಂದಿಗೆ ಇತರ ಕೆಲವು ತೆರಿಗೆಗಳನ್ನು ಕೆಳದಿ ರಾಜರು ಸಂಗ್ರಹಿಸುತ್ತಿದ್ದರು. ಅಂತಹ ಒಂದು ತೆರಿಗೆಯೆಂದರೆ ಜಿರಾಡ. (ಹೆಚ್ಚುವರಿ ಭೂ ತೆರಿಗೆ) ತೀರ್ಥಹಳ್ಳಿಯ ಶಾಸನ[79] ಕೊಡುವ ಮಾಹಿತಿಯಂತೆ, ವೆಂಕಟಪ್ಪ ನಾಯಕ ಮಾಸ್ತಿ ಗ್ರಾಮದಲ್ಲಿ ಜಿರಾಡ ಎನ್ನುವ ತೆರಿಗೆಯನ್ನು ಸಂಗ್ರಹಿಸುತ್ತಿದ್ದ. ಜಿರಾಡವನ್ನು ಹೆಚ್ಚಿಸುವುದು ಸರ್ವೇಸಾಮಾನ್ಯವಾಗಿತ್ತು. ಕ್ರಿ.ಶ 1674ರಲ್ಲಿ ಕೆಳದಿ ಚೆನ್ನಾಮ್ಮಾಜಿ ಸೇನಾಪುರ ಗ್ರಾಮದಲ್ಲಿ 40 ಗದ್ಯಾಣಗಳು ಮತ್ತು 4 ಹಣಗಳನ್ನು ಜಿರಾಡದ ರೂಪದಲ್ಲಿ ಹೆಚ್ಚಿಸಿದಳು.[80] ಕ್ರಿ.ಶ.1699ರಲ್ಲಿ ಕೆಳದಿ ಬಸವಪ್ಪ ನಾಯಕ ಮುನಿನಾಡು ಸೀಮೆಯಿಂದ $1^1/_2$ ಗದ್ಯಾಣಗಳನ್ನು ಜಿರಾಡದ ರೂಪದಲ್ಲಿ ಸಂಗ್ರಹಿಸಿದ್ದ. ಹಾಗೆಯೇ ಹಿಂದಿನ ಜಿರಾಡ ಅಥವಾ ಕೋಟೆ ಜಿರಾಡ ಪದಗಳು ಕೋಟೆಯ ಮೇಲಿನ ತೆರಿಗೆಯನ್ನು

ಸೂಚಿಸುತ್ತವೆ. ಈ ಬಿರಾಡವನ್ನು ಕೆಳದಿಯ ರಾಜರುಗಳು ಅವರ ಆಳ್ವಿಕೆಯ ಕೊನೆಯವರೆಗೆ ಸಂಗ್ರಹಿಸಿದ್ದರು.[81]

ಕೆಳದಿ ರಾಜರು ಸಂಗ್ರಹಿಸುತ್ತಿದ್ದ ಇನ್ನೊಂದು ಭೂ ತೆರಿಗೆಯೆಂದರೆ ದಾಸೋಹ. ಕ್ರಿ.ಶ.16 ನೇ ಶತಮಾನದ ಕೊನೆಯಲ್ಲಿ ಈ ತೆರಿಗೆ ಕರಾವಳಿ ಕರ್ನಾಟಕದಲ್ಲಿ ಹಲವು ಕಡೆ ಅಸ್ತಿತ್ವದಲ್ಲಿದ್ದಂತೆ ತೋರುತ್ತದೆ.[82] ಇಲ್ಲಿ ದಾಸೋಹವನ್ನು ಒಂದು ಗದ್ಯಾಣಕ್ಕೆ ಒಂದು ವೀಸದ ದರದಲ್ಲಿ ಹಸಿದವರಿಗೆ ಆಹಾರ ನೀಡುವ ಸೇವಾ ಸಂಸ್ಥೆಗಳ ನಿರ್ವಹಣೆಗೆ ವಿಧಿಸಲಾಗುತ್ತಿತ್ತು.[83] ಕೆಳದಿ ರಾಜರು ದಾಸೋಹವನ್ನು ತುಳುನಾಡಿನ ಬೇರೆ ಬೇರೆ ಕಡೆ ಸಂಗ್ರಹಿಸುತ್ತಿದ್ದರು.[84] ಇನ್ನೊಂದು ಪ್ರಮುಖ ಅಂಶವೆಂದರೆ ತುಳುನಾಡಿನ ಸ್ಥಳೀಯ ರಾಜರುಗಳು ಸಹ ದಾಸೋಹದಂತಹ ತೆರಿಗೆಯನ್ನು ವಿಧಿಸುತ್ತಿದ್ದರೆಂದು ದಾಖಲೆಗಳು ದೃಢೀಕರಿಸುತ್ತವೆ. ಕ್ರಿ.ಶ.1655ರ ದಾಖಲೆ ಹೇಳುವಂತೆ 12 ಗದ್ಯಾಣಗಳಷ್ಟು ಮೂಲ ಆದಾಯವಿರುವ ಪೆನ್ನಾರ್‌ಮೊಗರು ಸ್ಥಳದ ಮೇಲೆ $^3/_4$ ಗದ್ಯಾಣ ದಾಸೋಹ ವಿಧಿಸಲಾಗಿತ್ತು.[85] ಕ್ರಿ.ಶ. 1736ರಲ್ಲಿ ವಿಟ್ಲದ ಕೃಷ್ಣಪ್ಪ ಡೊಂಬ ಹೆಗ್ಗಡೆ, 12 ಗದ್ಯಾಣಗಳಿಗೆ $^1/_4$ ವರಹಗಳಷ್ಟು ದಾಸೋಹ ವಿಧಿಸಿದ್ದ. ಅದನ್ನು ಪರಮೇಶ್ವರ ಸೇನಭೋವನು ಖಜಾನೆಗೆ ನೀಡಬೇಕಾಗಿತ್ತು.[86] ಕ್ರಿ.ಶ 1730ರ ಒಂದು ತಾಡೋಲೆಯಲ್ಲಿ, ಮೂಲ್ಕಿ ಸಾವಂತರ ಪ್ರಾಂತ್ಯದಲ್ಲಿ ಈ ತೆರಿಗೆ ಅಸ್ತಿತ್ವದಲ್ಲಿ ಇದ್ದದ್ದು ತಿಳಿದುಬರುತ್ತದೆ.[87] ಈ ಉದಾಹರಣೆಗಳು ದಾಸೋಹ ಎನ್ನುವುದು ಮೂಲ ಭೂ ತೆರಿಗೆಯೊಂದಿಗೆ ಸಂಗ್ರಹಿಸುತ್ತಿದ್ದ ಹೆಚ್ಚುವರಿ ತೆರಿಗೆ ಎಂದು ಸ್ಪಷ್ಟವಾಗುತ್ತದೆ ಮತ್ತು ಇದನ್ನು ಕೆಳದಿಯರಸರೊಂದಿಗೆ ಸ್ಥಳೀಯ ಅರಸರೂ ವಿಧಿಸುತ್ತಿದ್ದುದನ್ನು ಗಮನಿಸಿದರೆ ಸ್ಥಳೀಯ ರಾಜರಿಗೆ ತೆರಿಗೆ ವಿಧಿಸುವ ಸೀಮಿತ ಅಧಿಕಾರವನ್ನು ಕೆಳದಿ ರಾಜರು ನೀಡಿರಬೇಕೆಂದು ತಿಳಿಯಲು ಆಸ್ಪದವಿದೆ.

ಪಗುದಿ ಎನ್ನುವುದು ಭೂತೆರಿಗೆಯೊಂದಿಗೆ ಸಂಗ್ರಹಿಸುತ್ತಿದ್ದ ಇನ್ನೊಂದು ತೆರಿಗೆ. ಇದನ್ನು ಮೊಗಲರ ವಿರುದ್ಧ ಸಾಮ್ರಾಜ್ಯವನ್ನು ರಕ್ಷಣೆಮಾಡುವುದಕ್ಕೆ ಒಂದು ಗದ್ಯಾಣಕ್ಕೆ ಒಂದು ಹಣ ಮತ್ತು ಒಂದು ಹಾಗದಂತೆ ವಿಧಿಸಲಾಗುತ್ತಿತ್ತು.[88] ಕ್ರಿ.ಶ. 1669ರಲ್ಲಿ ಘಟ್ಟದ ಕೆಳಗಿನ ಐದು ಗ್ರಾಮದಲ್ಲಿ ಜನರು ಪಗುದಿಯನ್ನು ನೀಡುತ್ತಿದ್ದರು ಎಂಬ ಮಾಹಿತಿ ದೊರೆಯುತ್ತದೆ.[89] ಪಗುದಿಯ ಸಂಗ್ರಹ ಕರಾವಳಿ ಕರ್ನಾಟಕದಲ್ಲಿ ಇತ್ತು ಎಂಬುದಾಗಿ ಮಂಜೇಶ್ವರದ ದಾಖಲೆಗಳಿಂದ ತಿಳಿಯುತ್ತದೆ.[90]

ಕ್ರಿ.ಶ. 1618ರ ನಂತರ ಕೆಳದಿಯ ನಾಯಕರು ತೆಂಗು ಮತ್ತು ತೋಟಗಾರಿಕ ಬೆಳೆಗಳ ಮೇಲೆ ವಿಶೇಷ ಮೌಲ್ಯಮಾಪನವನ್ನು ವಿಧಿಸಿದ್ದರು. ಇದು ಹಲವು ಶಾಸನಗಳಲ್ಲಿ ದಾಖಲಾಗಿದೆ. ಕ್ರಿ.ಶ 1624ರ ಶಾಸನ ಬಾರ್ಕೂರು ಸೀಮೆಯ ಮಾಸ್ಕೀ ಗ್ರಾಮದಲ್ಲಿ ತೆಂಗು, ಮತ್ತು ಅಡಿಕೆ ಮರಗಳಿಂದ ಕೆಳದಿ ವೆಂಕಟಪ್ಪನಾಯಕನಿಗೆ 60 ಗದ್ಯಾಣಗಳಷ್ಟು ಆದಾಯ ಬರುತ್ತಿತ್ತು ಎಂಬ ಮಾಹಿತಿ ನೀಡುತ್ತದೆ.[91] ಈ ವ್ಯವಸ್ಥೆ ಕೆಳದಿ ನಾಯಕರ ಆಳ್ವಿಕೆಯ ಕೊನೆಯವರೆಗೂ ಕರಾವಳಿ ಭಾಗದಲ್ಲಿ ಮುಂದುವರೆದಿತ್ತು.[92]

ಅರಣ್ಯದಿಂದಲೂ ರಾಜ್ಯಕ್ಕೆ ಆದಾಯವಿತ್ತು. ಕ್ರಿ.ಶ.1729ರಲ್ಲಿ ಕೆಳದಿಯ ಇಮ್ಮಡಿ ಸೋಮಶೇಖರ ನಾಯಕ $^1/_2$ ಗದ್ಯಾಣ ಮತ್ತು 2 ಪಣಗಳನ್ನು ಅರಣ್ಯಗಳಿಂದ ತೆರಿಗೆಯ ರೂಪದಲ್ಲಿ (ಕಾನು ತೆರಿಗೆ)

ಸಂಗ್ರಹಿಸಿದ್ದ.[93] ಸಮುದ್ರ ತೀರದಲ್ಲಿ ವಾಸಿಸುತ್ತಿದ್ದ ಜನರ ಮೇಲೆ ಸಮುದ್ರಾವಳಿ ಎಂಬ ತೆರಿಗೆಯನ್ನು ಸಂಗ್ರಹಿಸುತ್ತಿದ್ದರು.[94] ಇವಲ್ಲದೆ, ವರ್ತನೆ, ಕಾಣಿಕೆ, ದೇವಸ್ಥಾನ ಮತ್ತು ಬಸದಿಗಳ ಮೇಲಿನ ಮಿಗತೆ ಇತ್ಯಾದಿ ತೆರಿಗೆಗಳು ಜಾರಿಯಲ್ಲಿದ್ದವು.[95]

**4.4 ಇತರ ತೆರಿಗೆಗಳು**

ಭೂ ತೆರಿಗೆಯೊಂದಿಗೆ ಇತರ ತೆರಿಗೆಗಳನ್ನು ಜನರಿಂದ ಸಂಗ್ರಹಿಸಲಾಗುತ್ತಿತ್ತು. ಕುಂಬಾರಿಕೆ, ಮಗ್ಗ ಮುಂತಾದ ಕೈಗಾರಿಕೆಗಳ ಮೇಲೆ ತೆರಿಗೆ ವಿಧಿಸಲಾಗುತ್ತಿತ್ತೆಂದು ಕ್ರಿ.ಶ 1710ರ ಶಾಸನ ತಿಳಿಸುತ್ತದೆ.[96] ವೃತ್ತಿ ತೆರಿಗೆಗಳನ್ನು ಸಂಗ್ರಹಿಸಲಾಗುತ್ತಿತ್ತೆಂದು ಕೆಲವು ಶಾಸನಗಳು ತಿಳಿಸುತ್ತವೆ. ಕುಂಬಾರರು ಮತ್ತು ನೇಯ್ಗೆಯವರು, ಮಡಿವಾಳರು, ಮೀನುಗಾರರು, ಬೇಟೆಗಾರರು ಗ್ರಾಮ ಲೆಕ್ಕಿಗರು(accountants) ಕಾವಲುಗಾರರ ಮೇಲೂ ತೆರಿಗೆ ವಿಧಿಸಲಾಗುತ್ತಿತ್ತು.[97] ಶಾಸನಗಳು,[98] ಸುವರ್ಣಾದಯ ಎಂಬ ತೆರಿಗೆ ಕುರಿತು ಮಾಹಿತಿ ನೀಡುತ್ತದೆ. ಕ್ರಿ.ಶ 1664ರಲ್ಲಿ ಕೆಳದಿ ಸೋಮಶೇಖರ ನಾಯಕ ಯಡಹಳ್ಳಿ ಗ್ರಾಮದ ಬರಹಗಾರರಿಂದ ತೆರಿಗೆ ಸಂಗ್ರಹಿಸಿದ್ದ.[99] ಕ್ರಿ.ಶ 1623 ಮತ್ತು 1702ರ ಶಾಸನಗಳು ಗ್ರಾಮ ಲೆಖ್ಖಿಗನಿಂದ ತೆರಿಗೆ ಸಂಗ್ರಹಿಸಿದ ಮಾಹಿತಿ ನೀಡುತ್ತವೆ.[100] ಕ್ರಿ.ಶ. 1674ರ ತಾಮ್ರ ಶಾಸನ ಕಾವಲುಗಾರನ ಮೇಲೆ ವಿಧಿಸಿದ್ದ ವೃತ್ತಿ ತೆರಿಗೆಯನ್ನು ತಿಳಿಸುತ್ತದೆ.[101]

ಸರಕಾರ ಕೃಷಿ ಉತ್ಪನ್ನಗಳಾದ ರಾಗಿ, ಭತ್ತ, ಅಡಿಕೆ, ಕೊಬ್ಬರಿ, ಎಣ್ಣೆ, ಬೆಲ್ಲ, ಅಕ್ಕಿ, ಕರಿಮೆಣಸು ಮುಂತಾದ ವಸ್ತುಗಳ ಮೇಲೆ ತೆರಿಗೆ ವಿಧಿಸಿದುದರ ಮಾಹಿತಿ ದೊರೆಯುತ್ತದೆ.[102] ಕ್ರಿ.ಶ.1671ರಲ್ಲಿ ಕೆಳದಿ ಸೋಮಶೇಖರನಾಯಕ ತಂಬಾಕಿನ ಮೇಲೆ ತೆರಿಗೆಯನ್ನು ವಿಧಿಸಿದ್ದ.[103] ಕ್ರಿ.ಶ.1685ರ ಮಂಜೇಶ್ವರ ದೇವಳದ ಕಾಗದದ ದಾಖಲೆಯೊಂದು ಹೇಳುವಂತೆ ಅಡಿಕೆ, ತೆಂಗು ಮತ್ತು ಅಕ್ಕಿ ಮಂಗಳೂರು ಮತ್ತು ಕುಂಬಳದ ಬಂದರುಗಳಲ್ಲಿ ವ್ಯವಹಾರದಲ್ಲಿದ್ದು ಅವುಗಳಿಂದ ಸುಂಕವನ್ನು ಸಂಗ್ರಹಿಸಲಾಗುತ್ತಿತ್ತು.[104] ಇನ್ನು ಕೆಲವು ದಾಖಲೆಗಳು ಮತ್ತು ಶಾಸನಗಳು ಈರುಳ್ಳಿ, ಬೆಳ್ಳುಳ್ಳಿ, ಶುಂಠಿ, ಶ್ರೀಗಂಧ ಮತ್ತು ಬಟ್ಟೆಗಳಿಂದ ಸುಂಕವನ್ನು ಸಂಗ್ರಹಿಸಲಾಗುತ್ತಿತ್ತೆಂದು ತಿಳಿಸುತ್ತದೆ.[105]

ಹಾಗೆಯೇ ಆಕರ, ಬಿರಾಡ, ದಾಸೋಹ, ಪಗುದಿ, ಪಟ್ಟಿ, ತೆರು, ಕಾಣಿಕೆ, ನೊಗ, ಹಣ, ವೊಕ್ಕಲು ಗುತ್ತಿಗೆ, ಬಿಡು ಭಟ್ಟ ಮುಂತಾದ ತೆರಿಗೆಗಳನ್ನು ಸಂಗ್ರಹಿಸುತ್ತಿದ್ದರು.[106] ಸಾಮಾನ್ಯವಾಗಿ ಧಾರ್ಮಿಕ ಸಂಸ್ಥೆಗಳಿಗೆ ತೆರಿಗೆ ಇರುತ್ತಿರಲಿಲ್ಲ ಅಥವಾ ಕಡಿಮೆ ತೆರಿಗೆ ಇರುತ್ತಿತ್ತು. ಈ ತೆರಿಗೆಗಳನ್ನು ವರ್ಷಕ್ಕೆ ಒಮ್ಮೆ ಸಂಗ್ರಹಿಸಲಾಗುತ್ತಿತ್ತು. ಆದರೆ ಈ ಕಾನೂನು ಕಡ್ಡಾಯವಾಗಿರಲಿಲ್ಲ. ಕೆಲವು ಸಂದರ್ಭಗಳಲ್ಲಿ ಭೂಕಂದಾಯವನ್ನು ರೈತರ ಅನುಕೂಲಕ್ಕಾಗಿ ಕಂತುಗಳಲ್ಲಿ ಸಂಗ್ರಹಿಸಲಾಗುತ್ತಿತ್ತು. ಶಾಸನವೊಂದು ಹಣದ ರೂಪದಲ್ಲಿ ಸಂಗ್ರಹಿಸುತ್ತಿದ್ದ 'ಮುಕಂದಾಯವನ್ನು' ಹೆಸರಿಸುತ್ತದೆ.[107] ಇದು 3 ಕಂತುಗಳಲ್ಲಿ ತೆರಿಗೆ ಸಂಗ್ರಹಿಸಲಾಗುತ್ತಿತ್ತು ಎಂಬುದನ್ನು ಸೂಚಿಸುತ್ತದೆ. ಕಂದಾಯ ವಿಭಾಗವನ್ನು 'ಅಟ್ಟವಣೆ' ಎಂದು ಕರೆಯಲಾಗುತ್ತಿತ್ತು.

ಕ್ರಿ.ಶ.1600 ರಿಂದ ಕೆಳದಿ ರಾಜ್ಯದ ಅಂತ್ಯದವರೆಗಿನ ತೆರಿಗೆಗಳ ಅಧ್ಯಯನದಿಂದ ತೆರಿಗೆಗಳ ವಿಧಿಸುವಿಕೆ ಆರೋಹಣಾ ಕ್ರಮದಲ್ಲಿತ್ತೆಂದು ತಿಳಿಯುತ್ತದೆ.[108] ಕೆಳದಿ ವೆಂಕಟಪ್ಪನಾಯಕ ಹಿಂದಿನ ಸರಕಾರದ ಮೂಲ ತೆರಿಗೆಗೆ 50% ನ್ನು ಸೇರಿಸಿದ್ದ ಎಂದು ಹೇಳಲಾಗಿದೆ.[109] ಇದನ್ನು ಅರೆವಾಸಿ ಎಂದು ಕರೆಯಲಾಗಿದೆ. ಇದನ್ನು ಅವನ ಆಳ್ವಿಕೆಯ ಕೊನೆಯ ಅವಧಿಯಲ್ಲಿ ಬಹುಷ ಜಾರಿಗೆ ತಂದಿರಬೇಕು.[110] ಆದಾಗ್ಯೂ ಕೆಳದಿನಾಯಕರ ಕೆಳಗೆ ಭೂ ಕಂದಾಯ ಮಿತವಾಗಿತ್ತೆಂದು ಹೇಳಲಾಗಿದೆ.[111]

ಶಿವಪ್ಪ ನಾಯಕನಿಂದ ಜಾರಿಗೆ ತರಲ್ಪಟ್ಟ ಭೂಕಂದಾಯದ ಮಾಪನವನ್ನು ಶಿಸ್ತು ಎಂದು ಕರೆಯಲಾಗಿದೆ. ಇದು ಆನಂತರದ ಮಾಪನಗಳಿಗೆ ಬುನಾದಿಯಾಗಿತ್ತು. ಶಿವಪ್ಪ ನಾಯಕ ಫಲವತ್ತತೆಯ ಆಧಾರದಲ್ಲಿ ಭೂಮಿಯನ್ನು ವಿಂಗಡಿಸುತ್ತಿದ್ದ. ಇಲ್ಲಿ 12 ವರ್ಷಗಳ ಸರಾಸರಿ ಉತ್ಪನ್ನವನ್ನು ಗಣನೆಗೆ ತೆಗೆದುಕೊಳ್ಳಲಾಗುತ್ತಿತ್ತು. ಬಿತ್ತಿದ ಬೀಜ, ಬೇಸಾಯದ ಖರ್ಚು ಮತ್ತು ಒಟ್ಟು ಉತ್ಪತ್ತಿಯ ಪ್ರಮಾಣ ಮತ್ತು ಮೌಲ್ಯ ಇವುಗಳ ನಿರ್ದಿಷ್ಟ ನಿಖರ ದಾಖಲೆಗಳನ್ನು ಇಡಲಾಗುತ್ತಿತ್ತು. ಬೇಸಾಯ ಯೋಗ್ಯ ಭೂಮಿಯನ್ನು ಉತ್ತಮ, ಮಧ್ಯಮ ಕನಿಷ್ಠ, ಅಧಮ, ಮತ್ತು ಅಧಮಾಧಮ ಎಂದು ವಿಂಗಡಿಸಲಾಗುತ್ತಿತ್ತು.[112] ಬಿ.ಎಲ್. ರೈಸ್ ಹೇಳಿದಂತೆ, ಶಿವಪ್ಪನಾಯಕನ ಶಿಸ್ತು, ಸಮಕಾಲೀನ ಶಾಸನಗಳಲ್ಲಿ ಸಾಕಷ್ಟು ಉಲ್ಲೇಖಿಸಲ್ಪಟ್ಟಿಲ್ಲ.[113] ಅಂತೆಯೇ ಈ ವಿಶಿಷ್ಟ ತೆರಿಗೆ ಪದ್ಧತಿ ತುಳುನಾಡಿನಲ್ಲಿ ಜನಪ್ರಿಯವಾಗಿರಲಿಲ್ಲವೆಂದೇ ಹೇಳಬಹುದು. ಆದರೆ ಕೆನರಾದ ಕಲೆಕ್ಟರ್ ಮುನ್ರೋ, ಕಂದಾಯ ವಿಚಾರದಲ್ಲಿ ಶಿವಪ್ಪನಾಯಕನ ಕಂದಾಯ ಪದ್ಧತಿಯನ್ನು ಮಾದರಿಯಾಗಿ ಹೊಂದಿದ್ದ ಎನ್ನುವುದು ಗಮನಾರ್ಹ ಅಂಶವಾಗಿದೆ.[114] ಮಲೆನಾಡು ಪ್ರದೇಶದಲ್ಲಿ ಈ ಪದ್ಧತಿ ಅಸ್ತಿತ್ವದಲ್ಲಿದ್ದು ಮೈಸೂರಿನ ಕಮೀಶನರ್ ಆಗಿದ್ದ ಬೌರಿಂಗನೂ ಈ ಪದ್ಧತಿಯನ್ನು ಮೆಚ್ಚಿದ್ದನು.[115]

**ಸೈನಿಕ ಸಂಬಂಧಿ ತೆರಿಗೆಗಳು:** ಕೆಲವು ಶಾಸನಗಳು ದಂಡಿನ ಬಿರಾಡ ಅಥವಾ ಕೋಟೆ ಬಿರಾಡ ಎನ್ನುವ ಸೈನ್ಯ ಸಂಬಂಧೀ ತೆರಿಗೆಗಳನ್ನು ಹೆಸರಿಸುತ್ತವೆ. ಇದು ಕೋಟೆಗಳ ನಿರ್ವಹಣೆಗೆ ಜನರ ಮೇಲೆ ವಿಧಿಸುತ್ತಿದ್ದ ತೆರಿಗೆಯಾಗಿತ್ತು. ಕ್ರಿ.ಶ 1674ರಲ್ಲಿ ಗಂಗೊಳ್ಳಿ ಕೋಟೆಯ ನಿರ್ವಹಣೆಗೆ $2^1/_2$ ಗದ್ಯಾಣಗಳನ್ನು ಕೋಟೆ ಬಿರಾಡದ ರೂಪದಲ್ಲಿ ಸಂಗ್ರಹಿಸಲಾಗಿತ್ತು.[116] ಹಾಗೆಯೇ ಬಾರ್ಕೂರು ಹೋಬಳಿಯ ಪಿಲೆಯೂರು ಮತ್ತು ಕೊಡಿಯಾಲದ ಕೋಟೆಗಳಿಂದ 2 ಹಣಗಳು ಮತ್ತು 5 ಗದ್ಯಾಣಗಳನ್ನು ಕೋಟೆ ಬಿರಾಡವಾಗಿ ಸಂಗ್ರಹಿಸಲಾಗುತ್ತಿತ್ತು.[117] ಕವಳೇದುರ್ಗದ ಶಾಸನ ದಂಡಿನ ಬಿರಾಡವನ್ನು ಉಲ್ಲೇಖಿಸುತ್ತವೆ.[118] ಬಂಟ್ವಾಳ ಸಮೀಪದ ಮೊಗರ್ನಾಡಿನ ದೇವಳದ ನಿರೂಪವೊಂದು ಕಾಂತಮಂಗಲ ಕೋಟೆಯಿಂದ ಸಂಗ್ರಹಿಸುತಿದ್ದ ದಾಸೋಹವನ್ನು ಉಲ್ಲೇಖಿಸುತ್ತದೆ.[119]

**ಸುಂಕ ಸಂಗ್ರಹ:** ಸಾಗಾಟದ ತೆರಿಗೆಯಾದ ರಹದಾರಿ ಸುಂಕ, ರಸ್ತೆಗಳ ಸಾಗಾಟ ಹಾಗೂ ಸಾಮಾಗ್ರಿಗಳನ್ನು ಕೊಂಡುಹೋಗುತ್ತಿದ್ದ ದೋಣಿಗಳ ಮೇಲಿನ ಸುಂಕವನ್ನು ಒಳಗೊಂಡಿತ್ತು. ಕ್ರಿ.ಶ. 1623ರಲ್ಲಿ ಪಿಯತ್ರೋ ದೆಲ್ಲಾ ವಲ್ಲೆ ಮಂಗಳೂರು ಸಮೀಪ ಗುರುಪುರ ನದಿಯಲ್ಲಿ ವೆಂಕಟಪ್ಪನ ಅಧಿಕಾರಿಗಳಿಗೆ ಸರಕು ತುಂಬಿದ

ದೋಣಿಗಳು ಸುಂಕ ನೀಡುವುದನ್ನು ಉಲ್ಲೇಖಿಸಿದ್ದಾನೆ.[120] ಕ್ರಿ.ಶ.1745ರಲ್ಲಿ ಅಕ್ಕಿ ಮತ್ತು ತೆಂಗಿನ ಸರಕುಗಳು ಮಂಗಳೂರು ಮತ್ತು ಮಂಜೇಶ್ವರ ಬಂದರುಗಳಿಂದ ರಸ್ತೆಯ ಮೂಲಕ ಸಾಗಿದಾಗ ಸುಂಕ ವಿಧಿಸಲಾಗುತ್ತಿತ್ತು ಎಂಬ ವಿಚಾರವನ್ನು ಕಾಗದದ ದಾಖಲೆಯೊಂದು ತಿಳಿಸುತ್ತದೆ.[121] ಮಂಜೇಶ್ವರದ ದಾಖಲೆಯೊಂದು,[122] 'ಕೊಕ್ಕರ್ಣೆ ಮಾರ್ಗದಿಂದ ಹೋಗಿ ಬರುವ ಸರಕುಗಳಿಗೆ ವಿಧಿಸುತಿದ್ದ ಸುಂಕದ ಪ್ರಮಾಣವನ್ನು ತಿಳಿಸುತ್ತದೆ. ಇದೇ ದಾಖಲೆ ಘಟ್ಟದಿಂದ ಮೇಲೆ ಮತ್ತು ಕೆಳಬರುವ ವಸ್ತುಗಳಾದ ಅಕ್ಕಿ, ತೆಂಗು, ಅಡಿಕೆ, ಕರಿಮೆಣಸು, ಎಣ್ಣೆ ಬೀಜಗಳು ಇತ್ಯಾದಿಗಳಿಗೆ ದಾರಿಯಲ್ಲಿ ರಹದಾರಿ ಸುಂಕ ವಿಧಿಸಲಾಗುತ್ತಿತ್ತೆಂಬ ಮಾಹಿತಿ ನೀಡುತ್ತವೆ. ರಹದಾರಿ ಸುಂಕವನ್ನು ವಿಧಿಸುವಾಗ ಎತ್ತಿನಬಂಡಿ ಸಾಗಿಸುವ ಎತ್ತಿನ ಬಣ್ಣ ಮತ್ತು ವಯಸ್ಸನ್ನು ದಾಖಲೆಗಳಲ್ಲಿ ನಮೂದಿಸಲಾಗುತ್ತಿತ್ತು. ಹಲವು ಶಾಸನಗಳು ಈ ಪ್ರಕ್ರಿಯೆಯನ್ನು ದಾಖಲಿಸಿವೆ.[123] ಹಾಗೆಯೇ ಪ್ರಾಣಿಗಳ ಮೇಲೆ ಮಾರಾಟ ತೆರಿಗೆಯನ್ನು ವಿಧಿಸಲಾಗುತ್ತಿತ್ತು ಎಂಬುದು "ಮಾರುವ ಎತ್ತು, ಎಮ್ಮೆ, ದನ, ಕೋಣ, ಸುಂಕ ಸಹ" ಎಂಬ ಉಲ್ಲೇಖದಿಂದ ತಿಳಿಯಬಹುದು.[124] ಘಟ್ಟದ ಕೆಳಗೆ ಖರೀದಿಸಿದ ಈ ಪ್ರಾಣಿಗಳನ್ನು ಎಡತೊರೆಯ ಮಾರುಕಟ್ಟೆಯಲ್ಲಿ ಮಾರಾಟ ಮಾಡುವಾಗ ಮಾರಾಟ ತೆರಿಗೆ ನೀಡಬೇಕಿತ್ತು. ಘಟ್ಟದ ಕೆಳಗಣ ಸುಬ್ರಹ್ಮಣ್ಯ ಸಮೀಪದ ಕುಳ್ಕುಂದ ಹಿಂದಿನ ಕಾಲದಿಂದಲೂ ಇಂತಹ ಜಾನುವಾರು ಜಾತ್ರೆಯ ಕೇಂದ್ರವಾಗಿತ್ತು.

ಎತ್ತಿನ ಬಂಡಿಯಲ್ಲಿ ಸಾಗಿಸುವಾಗ ಸುಂಕರಹಿತವಾಗಿ ಸಾಗಾಟ ಮಾಡುವ ಪ್ರಕ್ರಿಯೆ ಎಲ್ಲಾ ಸಂದರ್ಭಗಳಲ್ಲಿ ಇರಲಿಲ್ಲ. ಕೆಲವೊಂದು ಮೌಲ್ಯಯುತ ವಸ್ತುಗಳನ್ನು(ಗಡಸಿನ ಸರಕು) ಮಠಕ್ಕೆ ಅಥವಾ ಇನ್ನಾವುದೇ ಸ್ಥಳಗಳಿಗೆ ಸಾಗಿಸಿದರೂ ಸುಂಕವನ್ನು ನೀಡಬೇಕಾಗಿತ್ತು. ದಾಖಲೆಗಳಲ್ಲಿ ಉಲ್ಲೇಖಿಸಲ್ಪಟ್ಟ ಇಂತಹ ಸರಕುಗಳೆಂದರೆ ಅಡಿಕೆ, ಕರಿಮೆಣಸು, ರೇಷ್ಮೆ, ತೆಂಗಿನ ತಿರುಳು ಇತ್ಯಾದಿ.[125] ಆದರೆ  ಕೆಲವು ಬಾರಿ ಮೌಲ್ಯಯುತ ಸರಕುಗಳಿಗೂ ಕೆಲವೊಂದು ನಿರ್ಬಂಧಗಳನ್ನು ಹಾಕಿ ವಿಶೇಷ ತೆರಿಗೆ ಇಳಿತ ಮಾಡಲಾಗುತ್ತಿತ್ತು. ಕ್ರಿ.ಶ 1642ರಲ್ಲಿ ಕೆಳದಿಯ ವೀರಭದ್ರ ನಾಯಕ 2 ಕಟ್ಟು ಅಡಿಕೆ ಮತ್ತು ಒಂದು ಕಟ್ಟು ಕರಿಮೆಣಸನ್ನು ವರ್ಷಕ್ಕೊಮ್ಮೆ ಸುಂಕ ಇಲ್ಲದೆ ಮಂದಳ್ಳಿ ಮಹತ್ತಿನ ಮಠಕ್ಕೆ ಸಾಗಿಸಲು ಅನುಮತಿ ನೀಡಿದ್ದ.[126] ಕ್ರಿ.ಶ.1664ರಲ್ಲಿ ಇಮ್ಮಡಿ ಸೋಮಶೇಖರ ನಾಯಕ ಕೋಟೇಶ್ವರದಲ್ಲಿ ಪರಮೇಶ್ವರಿಯಮ್ಮಾಜಿಯವರು ಕಟ್ಟಿಸಿದ ಮಹತ್ತಿನ ಮಠಕ್ಕೆ ಒಂದು ಗಾಡಿ ಅಡಿಕೆ ಮತ್ತು 6 ಮಣ ಕರಿಮೆಣಸನ್ನು ಒಂದು ಬಾರಿಗೆ ಸುಂಕವಿಲ್ಲದೆ ಕೊಂಡುಹೋಗಲು  ಒಪ್ಪಿಗೆ ನೀಡಿದ್ದ.[127]

ಕೆಲವು ತುಳು ಪಾಡ್ದನಗಳು ಕೃಷಿ ವಸ್ತುಗಳ ಮೇಲೆ ಹೇರುತ್ತಿದ್ದ ಸುಂಕವನ್ನು ಉಲ್ಲೇಖಿಸಿವೆ. ಉದಾಹರಣೆಗೆ 'ಕೋಟಿ ಚೆನ್ನಯ' ಪಾಡ್ದನದಲ್ಲಿ ಸುಂಕದ ಕಟ್ಟೆ ಮತ್ತು ಅಲ್ಲಿಯೇ ಇರುವ ಸುಂಕದ ದೇರೆ ಎಂಬುವವನ ವಿಷಯ ಬರುತ್ತದೆ. ಈ ಸುಂಕದ ದೇರೆಯು, ಕೋಟಿ-ಚೆನ್ನಯರ ಖಡ್ಗಕ್ಕೆ ಸುಂಕವನ್ನು ಕೇಳುತ್ತಾನೆ.[128] ಇನ್ನೊಂದು ಕಡೆ ಕೃಷಿ ವಸ್ತುಗಳಾದ ಅಕ್ಕಿ, ತೆಂಗಿನಕಾಯಿ, ಕೆರ್ನಲ್ ಇತ್ಯಾದಿ ವಸ್ತುಗಳಿಗೆ

ಪ್ರಾಂತ್ಯಗಳ ಗಡಿಯಲ್ಲಿದ್ದ ಸುಂಕಠಾಣೆಗಳಲ್ಲಿ ಸುಂಕ ಸಂಗ್ರಹಿಸಲಾಗುತಿತ್ತು ಎಂಬ ಮಾಹಿತಿ ದೊರೆಯುತ್ತದೆ.[129] ಕೋಟಿ ಚೆನ್ನಯ ಪಾಡ್ದನದಲ್ಲಿ,[130] ಬಂಗೆರೆ ಬಲ್ ಸುಂಕೊ, ಮೂಳ್ಯೆರೆ ಮೂಳೆ ಸುಂಕೊ, ಚೌಟೆರೆ ಸರಪಡಿ ಗೆತ್ತೊಂದುಪ್ಪುಲ' ಎನ್ನುವ ಮಾತು ಬರುತ್ತದೆ. ಇದು ಮೂರು ಜೈನ ಅರಸು ಮನೆತನಗಳಾದ ಬಂಗರು ಮೂಲರು ಮತ್ತು ಚೌಟರ ಸುಂಕದ ಪದ್ಧತಿಯನ್ನು ಹೇಳುತ್ತದೆ.

ಬಸದಿ ಮತ್ತು ದೇವಾಲಯಗಳ ಹೆಚ್ಚುವರಿ ಆದಾಯದ ಮೇಲೆ ತೆರಿಗೆ ವಿಧಿಸಲಾಗುತ್ತಿತ್ತು. ಕ್ರಿ.ಶ 1665ರ ಶಾಸನ ಕೋಟೇಶ್ವರದ ದೇವಳ ಮತ್ತು ಚೌಳಿಕೇರಿ ವಿನಾಯಕ ದೇವಳದಿಂದ ಸಂಗ್ರಹಿಸಿದ 12 ಗದ್ಯಾಣ ಮತ್ತು 3 ಹಣ ತೆರಿಗೆಯನ್ನು ಉಲ್ಲೇಖಿಸುತ್ತದೆ.[131] ಅದೇ ವರ್ಷದ 2 ಶಾಸನಗಳು ಬಸದಿಗಳು ಮತ್ತು ದೇವಳಗಳಿಂದ ಸಂಗ್ರಹಿಸಿದ 4 ಗದ್ಯಾಣ ಹೆಚ್ಚುವರಿ ಆದಾಯವನ್ನು ಉಲ್ಲೇಖಿಸುತ್ತವೆ.[132] ವಾರಿಸುದಾರರಿಲ್ಲದ ಮತ್ತು ಬಂಜರು ಭೂಮಿ, ಮನೆಯ ಹಿಂಭಾಗದ ಜಾಗ, ದಾನ ನೀಡಲ್ಪಟ್ಟ ಕಾಸವರ್ಗ (ವಂಶಪಾರಂಪರ್ಯವಾಗಿ ಬಂದ ಎತ್ತರದ ಹುಲ್ಲು ಬೆಳೆದಿರುವ ನಿರ್ಲಕ್ಷಿತ ಮರಳು ಭೂಮಿ) ಮತ್ತು ಶರಾಬು ಇವುಗಳ ಮೇಲೆ ತೆರಿಗೆ ವಿಧಿಸಲಾಗುತ್ತಿತ್ತು.[133] ವಿಟ್ಲ ಪ್ರಾಂತ್ಯದಲ್ಲಿ ಬಟ್ಟಲು ಕಾಣಿಕೆ, ಹಬ್ಬ ಕಾಣಿಕೆ ಮತ್ತು ಹೋಬಳಿಯ ವರದಗಳನ್ನು ಗೇಣಿದಾರರಿಂದ ಸಂಗ್ರಹಿಸಲಾಗುತ್ತಿತ್ತು.[134] ಇಕ್ಕೇರಿ ಅರಸರ ಕಾಲದಲ್ಲಿ ತುಳುನಾಡಿನ ಸಾಮಂತ ಅರಸರು ಒಂದೊಂದು ವಿಧದ ವಸ್ತುವಿನ ರೂಪದಲ್ಲಿ ಕಪ್ಪವನ್ನು ಸಲ್ಲಿಸುತ್ತಿದ್ದರು ಎನ್ನಲಾಗಿದೆ. ಬಂಗರಾಜನು ಹಣವನ್ನೂ, ವಿಟ್ಲದ ಡೊಂಬಹೆಗಡೆಯು ಅಡಿಕೆಯನ್ನೂ, ವೇಣೂರಿನ ಅಜಿಲನು ಅಕ್ಕಿಯನ್ನೂ, ಬೈಲಂಗಡಿ ಮೂಲನು ಏಲಕ್ಕಿಯನ್ನೂ, ಮೂಲಿಕೆ ಸಾವಂತನು ಉಪ್ಪನ್ನೂ, ಪಣಪಿಲ ಕೊನ್ನಾರ ಅರಸನು ತೆಂಗಿನಕಾಯಿಗಳನ್ನೂ ಕೊಡುತ್ತಿದ್ದರು ಎನ್ನಲಾಗಿದೆ.[135]

**ತೆರಿಗೆ ರಿಯಾಯಿತಿ:** ರೈತರ, ಬ್ರಾಹ್ಮಣರ, ಧಾರ್ಮಿಕ ಸಂಸ್ಥೆಗಳ ಹಾಗೂ ರಾಜ್ಯಕ್ಕೆ ಅಮೂಲ್ಯ ಸೇವೆ ಸಲ್ಲಿಸಿದವರ ಕೃಷಿ ಹಾಗೂ ಇನ್ನಿತರ ತೆರಿಗೆಗಳನ್ನು ಕಡಿಮೆ ಮಾಡಲಾಗುತ್ತಿತ್ತು. ಪ್ರವಾಹ, ಗುಡ್ಡಜರಿತ, ರಸ್ತೆ ಹಾನಿ, ಮತ್ತು ಬೆಳೆಗಳು ನಷ್ಟವಾದ ಸಂದರ್ಭಗಳಲ್ಲಿ ಭೂ ಹಿಡುವಳಿದಾರರ ತೆರಿಗೆಗಳನ್ನು ಸರಕಾರಗಳು ಕಡಿತಗೊಳಿತ್ತಿದ್ದವು. ಕಂದಾಯ ದಾಖಲೆಗಳಲ್ಲಿ ಅವುಗಳನ್ನು 'ನಷ್ಟ' ಎಂದು ನಮೂದಿಸಲಾಗಿದೆ. ಕ್ರಿ.ಶ 1633ರ ಶಾಸನ ಕಬ್ಬುನಾಡು ಸೀಮೆ ಕರಡಿ ಗ್ರಾಮದಲ್ಲಿ ರೈತರ ತೆರಿಗೆ ಕಡಿಮೆ ಮಾಡಿದ ವಿಚಾರ ತಿಳಿಸುತ್ತದೆ.[136] ಕ್ರಿ.ಶ. 1662 ಮತ್ತು 1674ರ ಗಂಗೊಳ್ಳಿ ಮಲ್ಲೇರ ಮಠದ ಅಪ್ರಕಟಿತ ಶಾಸನಗಳಲ್ಲಿ ಹಲವು ನಷ್ಟಗಳನ್ನು ಉಲ್ಲೇಖಿಸಲಾಗಿದೆ. ಉಪ್ಪು ನೀರು ಹಾದ ನಷ್ಟ, ಬೆಟ್ಟ ಕುಸಿದ ನಷ್ಟ, ಹೊಳೆ ಉಕ್ಕಿ ಹರಿದ ನಷ್ಟ, ಹೊಯಿಗೆ ಹಾದು ಬೆಟ್ಟು ಮಾಡಿದ ನಷ್ಟ, ಹೊಳೆ ಉಕ್ಕಿ ಹರಿದ ನಷ್ಟ, ಹೊಯಿಗೆ ಹಾದು ಬೆಟ್ಟು ಮಾಡಿದ ನಷ್ಟ, ಗೋಡೆ ಜಾರಿದ ನಷ್ಟ ಇತ್ಯಾದಿ.[137] ಹಾಗೆಯೇ  ಗುಡ್ಡೆ ಜರಿದ ನಷ್ಟ, ನಿಡುವತ್ತಿನ ನಷ್ಟ, ಬೆಟ್ಟು ಮಾಡಿದ ನಷ್ಟ ಮುಂತಾದ ನಷ್ಟಗಳು ಬಸರೂರು, ಬರೆಗುಂಡಿ ಮತ್ತು ಹಕ್ಲಾಡಿ ಪ್ರದೇಶಗಳಲ್ಲಾಗಿತ್ತೆಂದು ಹಲಸನಾಡು ಕಡತಗಳು ತಿಳಿಸುತ್ತವೆ. ಈ ಕಡತಗಳು ಈ ನಷ್ಟಗಳ ಮೌಲ್ಯವನ್ನು

38 ಗದ್ಯಾಣ ಮತ್ತು 3 ಹಣಗಳಷ್ಟೆಂದು ತಿಳಿಸುತ್ತವೆ.[138] ಕ್ರಿ.ಶ 1655ರಲ್ಲಿ ಕಾಸರಗೋಡು ಮತ್ತು ಪುತ್ತೂರಿನ ಕೆಲವು ಪ್ರದೇಶಗಳು ಅನಾವೃಷ್ಟಿಗೆ ತುತ್ತಾದವು. ಇದರಿಂದ ಪೆರ್ತ ಮೊಗರಿನ ಕೆಲವು ಗದ್ದೆಗಳು ನೀರಿನಲ್ಲಿ ಮುಳುಗಿ ನಾಲ್ಕು ವರಹಗದ್ಯಾಣ ಬೆಲೆ ಬರುವ ಪ್ರದೇಶದ ಬೆಳೆ ನಷ್ಟವಾಯಿತು. ಇದನ್ನು ತಿಳಿದ ವಿಠಲ ನರಸಿಂಹ ಡೊಂಬ ಹೆಗ್ಗಡೆ, ತಿಮ್ಮಾಜಿಗೆ ವಿನಾಯಿತಿ ಬಿಟ್ಟದ್ದನ್ನು ಐಗಳು ಸಂಶೋಧಿಸಿದ ಮಂಜೇಶ್ವರದ ದಾಖಲೆಯಿಂದ ತಿಳಿದುಬರುತ್ತದೆ.[139]

ಸಾಮಾನ್ಯವಾಗಿ ರಾಜರುಗಳು ಮಠ ದೇವಾಲಯಗಳಂತಹ ಧಾರ್ಮಿಕ ಸಂಸ್ಥೆಗಳಿಗೆ ತೆರಿಗೆಯನ್ನು ಕಡಿತಗೊಳಿಸುತ್ತಿದ್ದರು. ಬೇಸಾಯದಲ್ಲಿ ಆಧಿಕ ಉತ್ಪತ್ತಿ ಬಂದಾಗ ಹೆಚ್ಚುವರಿ ತೆರಿಗೆ ಸಂಗ್ರಹಿಸುವ ಉದಾಹರಣೆಗಳೂ ಇವೆ. ಉದಾಹರಣೆಗೆ, ಕ್ರಿ.ಶ. 1674ರ ಶಾಸನ ನೀಡುವ ಮಾಹಿತಿಯಂತೆ ಕುಂದಾಪುರ ಸಮೀಪದ ಕಡಕ್ಕೆ ಗ್ರಾಮದಲ್ಲಿ ಜಗ್ಗಿ ಸೇನಬೋವ ಎಂಬವರು 1 ಗದ್ಯಾಣವನ್ನು ಅಲ್ಲಿಯ ರೈತರಿಂದ ಭತ್ತದ ಗದ್ದೆಯಲ್ಲಿ ಬಂದ ಹೆಚ್ಚುವರಿ ಆದಾಯದ ಹಿನ್ನೆಲೆಯಲ್ಲಿ ಸಂಗ್ರಹಿಸಿದ್ದರು.[140] ಹಾಗೆಯೇ ಕ್ರಿ.ಶ 1709ರ ಶಾಸನ, ನಷ್ಟ ಪರಿಹಾರವಾಗಿ ರೈತರಿಗೆ ಕಡಿಮೆ ಮಾಡಿದ್ದ ಹಣವನ್ನು ಆ ನಂತರ ಮರಳಿ ಪಡೆಯಲಾಯಿತು ಎಂದು ತಿಳಿಸುತ್ತದೆ. ಅದೇ ವರ್ಷ ಸರಕಾರ $1^1/_2$ ಗದ್ಯಾಣಗಳಷ್ಟು ಹೆಚ್ಚು ಹಣವನ್ನು ಕಾನತೇರು(ಅರಣ್ಯ ಭೂಮಿ) ವಿನಿಂದ ಪಡೆಯಿತು ಎಂದು ಶಾಸನ ತಿಳಿಸುತ್ತದೆ.[141] ಶಾಸನದಲ್ಲಿ 'ನಷ್ಟ ಹೆಚ್ಚಿಗೆ' ಎಂಬ ಪದ ರಾಜರುಗಳು ಭೂ ಹಿಡುವಳಿದಾರರಿಂದ ನಷ್ಟವನ್ನು ಮರಳಿ ಪಡೆಯುತ್ತಿದ್ದರೆಂದು ಅರ್ಥೈಸಬಹುದು.[142]

**ಕಂದಾಯ ಇಲಾಖೆ:** ಕಂದಾಯ ವಿಚಾರಕ್ಕೆ ಪ್ರತ್ಯೇಕವಾದ ಕಂದಾಯ ಇಲಾಖೆ ಅಸ್ತಿತ್ವದಲ್ಲಿತ್ತು ಎಂದು ತಿಳಿದುಬರುತ್ತದೆ. ಕೇಂದ್ರೀಯ ಕಂದಾಯ ಇಲಾಖೆಯನ್ನು ಅಟ್ಟಾವಣೆ ಎಂದು ಕರೆಯಲಾಗುತ್ತಿತ್ತು.[143] ಕ್ರಿ.ಶ. 1743– 44ರ ಇಂಗ್ಲೀಷ್ ದಾಖಲೆಗಳು ಮತ್ತು ಶಿವಪ್ಪ ನಾಯಕನ ನಿರೂಪಗಳಿಂದ[144] ಪ್ರಾಂತ್ಯಗಳಲ್ಲಿ ಸುಂಕದ ಅಧಿಕಾರಿ ಮತ್ತು ಜಿಲ್ಲೆಗಳಲ್ಲಿ ಸ್ಥಳೀಯ ಅಧಿಕಾರಿಗಳಿರುತ್ತಿದ್ದರು ಎಂದು ತಿಳಿದು ಬರುತ್ತದೆ. ಕ್ರಿ.ಶ.1656ರ ಶಿವಪ್ಪನಾಯಕನ ನಿರೂಪದಂತೆ ವೆಂಗಂಭಟ್ಟ ಎನ್ನುವವನು ಕಾರ್ಕಳದ ಕಂದಾಯ ಅಧಿಕಾರಿಯಾಗಿದ್ದ.[145] ಕ್ರಿ.ಶ 1657ರಲ್ಲಿ ಶಿವಪ್ಪನಾಯಕ ತನ್ನ ಕಂದಾಯ ಅಧಿಕಾರಿ ತಿರುಮಲ ಭಟ್ಟ ಮತ್ತು ಸೇನ ಬೋವನಿಗೆ ದಾನ ದತ್ತಿಗಳನ್ನು ದಾಖಲಿಸಲು, ದೇವಳಗಳನ್ನು ನಿರ್ಮಿಸಲು ಮತ್ತು ಇತರ ಕಂದಾಯ ಚಟುವಟಿಕೆಗಳನ್ನು ನಡೆಸಲು ಸೂಚಿಸಿದ್ದ. ಅಳಿಯ ಕೆಂಚಣ್ಣ ಮತ್ತು ನರಸ ಎನ್ನುವವರು ಈ ಭಾಗದಲ್ಲಿ ಕಂದಾಯ ಅಧಿಕಾರಿಗಳಾಗಿ ನೇಮಿಸಲ್ಪಟ್ಟವರಾಗಿದ್ದರು.[146] ಲಿಂಗಣ್ಣನ ಕೆಳದಿ ನೃಪ ವಿಜಯ ಹೇಳುವಂತೆ, ರೈತರು ಮತ್ತು ಜನರನ್ನು ಬೇರೆ ಬೇರೆ ರೀತಿಯಲ್ಲಿ ಶೋಷಿಸುತ್ತಿದ್ದ ವ್ಯಾಪಾರಿಗಳು ಮತ್ತು ಇತರ ಜನರ ಮೇಲಿನ ಕಂದಾಯವನ್ನು ಅವನು ಹೆಚ್ಚು ಮಾಡಿದ್ದ.[147] ಅತ್ಯುತ್ತಮ ಕಂದಾಯ ಆಡಳಿತದ ಮೂಲಕ ಅವನ ಖಜಾನೆ ಸಂಪತ್ತಿನಿಂದ ತುಂಬಿತ್ತು. ಕಂದಾಯ ವಿಭಾಗವನ್ನು ಸುವ್ಯವಸ್ಥಿತಗೊಳಿಸಲು

ಅವನು ಸೇನಬೋವ ಮತ್ತು ಕರಣಿಕರಾಗಿ ಯೋಗ್ಯ ಜನರನ್ನು ನೇಮಕ ಮಾಡುತ್ತಿದ್ದ. ಹಾಗೆಯೇ ಭೂಮಿಗೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಸರಿಯಾಗಿ ನಿರ್ವಹಿಸಲು ಅನಗತ್ಯ ಖರ್ಚುಗಳನ್ನು ನಿಲ್ಲಿಸಲು ಸೂಚಿಸಿದ್ದ.

ಸ್ಥಳೀಯ ದಾಖಲೆಗಳು, ವಿವಿಧ ತೆರಿಗೆಗಳನ್ನು ಸಂಗ್ರಹಿಸುತ್ತಿದ್ದ ವಿವಿಧ ದರ್ಜೆಯ ಕಂದಾಯ ಅಧಿಕಾರಿಗಳನ್ನು ಹೆಸರಿಸುತ್ತವೆ. ಹೋಬಳಿ ಕರಣಿಕ, ಕರಣಿಕ, ಸೇನಬೋವ, ಬಾಗಿಲ ಮನುಷ್ಯ, ಕಂಟದವ, ಚಿಟಿನವ, ಸುಂಕದವ, ಊಳಿಗದವ, ಉಗ್ರಾಣಿ ಮುಂತಾದವರು ಕಂದಾಯ ವಿಭಾಗಕ್ಕೆ ಸಂಬಂಧಿಸಿದವರೆಂದು ಹಲವು ಶಾಸನಗಳು ಸೂಚಿಸುತ್ತವೆ.[148] ಹೋಬಳಿ ಕರಣಿಕನು ಹೋಬಳಿಯ ಲೆಕ್ಕ ಪತ್ರಗಳನ್ನು ನಿರ್ವಹಿಸುತ್ತಿದ್ದ ಎಂಬುದಾಗಿ ಕ್ರಿ.ಶ.1713 ಮತ್ತು 1741ರ ಕಾಗದದ ದಾಖಲೆಗಳು ತಿಳಿಸುತ್ತವೆ. ಈ ಕಾಗದದ ದಾಖಲೆಗಳು ಮಂಗಳೂರು ಮತ್ತು ಬಾರ್ಕೂರಿನ ಹೋಬಳಿ ಕರಣಿಕರನ್ನು ಹೆಸರಿಸುತ್ತವೆ.[149] ಅವರು ದಾನದತ್ತಿಗಳಿಗೆ ಸರಕಾರಕ್ಕೆ ಶಿಫಾರಸ್ಸು ಮಾಡುತ್ತಿದ್ದರು. ಆ ಮೂಲಕ ಜನರು ಸರಕಾರದಿಂದ ದತ್ತಿಗಳನ್ನು ಪಡೆಯುತ್ತಿದ್ದರು. ಹಲವು ಶಾಸನಗಳು 'ಸೇನಬೋವರ ಕಡತ' ಎಂದು ಉಲ್ಲೇಖಿಸಿರುವುದನ್ನು ಕಾಣಬಹುದು.[150] ಸೇನಬೋವ ಕಂದಾಯ ಆಡಳಿತದಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದ. ಗ್ರಾಮದ ಕಂದಾಯ ಲೆಕ್ಕಗಳನ್ನು ನಿರ್ವಹಿಸುವ ಮತ್ತು ಕೆಲವು ಬಾರಿ ಭೂ ವ್ಯವಹಾರಗಳ ಎಲ್ಲಾ ದಾಖಲೆಗಳ ಮೇಲ್ವಿಚಾರಕರಾಗಿ ಇವರು ಜವಾಬ್ದಾರಿಯುತ ಸ್ಥಾನದಲ್ಲಿದ್ದವರು. ಸುಂಕದವನು ಸುಂಕವನ್ನು ಸಂಗ್ರಹಿಸುವವನಾಗಿದ್ದ. ಅದಕ್ಕಾಗಿ ಘಟ್ಟದ ಮೇಲೆ ಮತ್ತು ಕೆಳಗೆ ಸುಂಕದಠಾಣೆಗಳು ಸ್ಥಾಪಿಸಲ್ಪಟ್ಟಿದ್ದವು. ಕೊಡಿಯಾಲ, ಮಂಜೇಶ್ವರ, ಉಪ್ಪಿನಂಗಡಿ, ಬೆಳ್ತಂಗಡಿ, ಬಂಗಾಡಿ ಇನವಳಿ, ಬಂಟವಾಳ, ಬೈಂದೂರು ಹಳಗೇರಿಗಳಲ್ಲಿ ಇಂತಹ ಸುಂಕದ ಕೇಂದ್ರಗಳಿದ್ದವು.[151] ಕ್ರಿ.ಶ 1641ರ ದಾಖಲೆ ಕೆಳದಿ ವೀರಭದ್ರ ಈ ಪ್ರದೇಶಗಳಿಂದ ಸುಂಕ ಸಂಗ್ರಹಿಸುತ್ತಿದ್ದ ಎಂದು ತಿಳಿಸುತ್ತದೆ.[152] ಶಾಸನಗಳು ಸುಂಕದ ದೇವರಸ, ಸುಂಕಬರೊಮ ಮತ್ತು ಸಿದ್ದ ಬಸವಯ್ಯ ಎನ್ನುವ ಹೆಸರುಗಳನ್ನು ಸೂಚಿಸುತ್ತದೆ. ಅವರು ಸುಂಕ ಸಂಗ್ರಾಹಕರಾಗಿರಬೇಕು.[153]

ತುಳುನಾಡಿನಲ್ಲಿ ಕೆಳದಿಯರಸರ ತೆರಿಗೆ ಪದ್ಧತಿ ಹಳೆಯ ಮತ್ತು ಹೊಸ ಪದ್ಧತಿಗಳ ಸಂಯೋಜನೆಯಾಗಿತ್ತು. ಈ ಕಾಲದಲ್ಲಿ ಬದಲಾದ ರಾಜಕೀಯ ಸಂದರ್ಭಗಳು ಮತ್ತು ಯುರೋಪಿಯನ್ನರ ಚಟುವಟಿಕೆಗಳು ಕಂದಾಯ ಸ್ವರೂಪವನ್ನು ಸಂಕೀರ್ಣಗೊಳಿಸಲು ಕಾರಣವಾಯಿತು. ಕೆಳದಿ ರಾಜರ ಕಂದಾಯ ಸ್ವರೂಪ ವಿವಿಧ ಸಮುದಾಯಗಳ ಮೇಲೆ ಬಹಳಷ್ಟು ಪ್ರಭಾವ ಬೀರಿತ್ತು. ಬ್ರಾಹ್ಮಣರು, ಜೈನರು, ಉನ್ನತವರ್ಗದ ಶೂದ್ರರಾದ ಬಂಟರು, ನಾಯಕರು ಮತ್ತು ಗೌಡರು ಈ ಕಾಲದ ಭೂ ಒಡೆಯರಾಗಿದ್ದರು. ಕೆಳದಿಯರಸರ ತೆರಿಗೆ ನೀತಿ ವೀರಶೈವರು, ಗೌಡ ಸಾರಸ್ವತರು ಮತ್ತು ಕ್ರೈಸ್ತರು ಈ ಭಾಗದಲ್ಲಿ ಭೂ ಒಡೆಯರಾಗುವಂತೆ ಮಾಡಿತು. ಬ್ರಾಹ್ಮಣರೊಂದಿಗೆ, ಗೌಡ ಸಾರಸ್ವತರ ಮತ್ತು ವೀರಶೈವರ ಧಾರ್ಮಿಕ ಸಂಸ್ಥೆಗಳು ಉಂಬಳಿಯನ್ನು ಪಡೆದವು. ಈ ಉಂಬಳಿಗಳು ತೆರಿಗೆ ರಹಿತವಾಗಿದ್ದವು ಅಥವಾ

ಭಾಗಶಃ ತೆರಿಗೆ ನೀಡುವಂತಹವಾಗಿದ್ದವು. ಇಮ್ಮಡಿ ಸೋಮಶೇಖರ ನಾಯಕ ಮತ್ತು ಇಮ್ಮಡಿ ಬಸವಪ್ಪನ ಕಾಲದಲ್ಲಿ ಪ್ರಮುಖ ವ್ಯಕ್ತಿಗಳಾದ ನಿರ್ವಾಣಯ್ಯ, ಗುರು ಬಸವಪ್ಪ, ಮೊದಲಾದ ವೀರಶೈವರು ಈ ಸಂಸ್ಥೆಗಳಿಗೆ ನೀಡಿದ ಉಂಬಳಿ ಜಾರಿಗೆ ತರುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದರು. ಸಾಮಾನ್ಯವಾಗಿ ಈ ರೀತಿ ನೀಡಿದ ಭೂಮಿ ಸರ್ವಮಾನ್ಯಗಳಾಗಿರುತ್ತಿದ್ದವು.

ಇನ್ನೊಂದು ಅಂಶವೆಂದರೆ ಕರಾವಳಿಯ ಜೈನರು ಕಾಲಕ್ರಮೇಣ ಕಂದಾಯ ಆಡಳಿತದ ತಮ್ಮ ನಿಯಂತ್ರಣವನ್ನು ಕಳೆದುಕೊಂಡರು. ಆದರೆ ಮಂಗಳೂರು ರಾಜ್ಯದಲ್ಲಿ ಅವರು ಭೂ ಹಿಡುವಳಿದಾರರಾಗಿ ಮುಂದುವರೆದರು. ವಿದೇಶೀ ದಾಖಲೆಗಳು ಕೊಡುವ ಮಾಹಿತಿಯಂತೆ ಗೌಡ ಸಾರಸ್ವತರು ಹೊಸತಾಗಿ ಭೂ ಹಿಡುವಳಿದಾರರಾದರು ಮತ್ತು ಅಕ್ಕಿಯ ವ್ಯಾಪಾರದಲ್ಲಿ ತೊಡಗುವ ಮೂಲಕ ಅದರ ಮಾರುಕಟ್ಟೆಯ ವಿಸ್ತಾರಕ್ಕೆ ಕಾರಣರಾದರು.[154] ಅವರ ವ್ಯಾಪಾರ ಚಟುವಟಿಕೆಗಳು ರಾಜ್ಯದ ಆದಾಯವನ್ನು ಹೆಚ್ಚಿಸಿದವು. ಆಸ್ಥಾನ ವ್ಯಾಪಾರಿಗಳಾಗುವುದರ ಜೊತೆಯಲ್ಲಿ ಮಿರ್ಜಾನ್, ಅಂಕೋಲ, ಹೊನ್ನಾವರ, ಮತ್ತು ಮಂಜೇಶ್ವರಗಳಲ್ಲಿ ಕಂದಾಯ ಆಡಳಿತದಲ್ಲಿಯೂ ಅವರು ಭಾಗವಹಿಸಿದ್ದರು.[155] ಒಟ್ಟಿನಲ್ಲಿ ಈ ಕಾಲದ ಆಡಳಿತಗಾರರ ತೆರಿಗೆಯ ಸ್ವರೂಪ, ವಾಣಿಜ್ಯ ಬೆಳೆಗಳಾದ ತೆಂಗು, ಅಡಿಕೆ, ಗೋಡಂಬಿ, ಕರಿಮೆಣಸು, ಮತ್ತು ಕಬ್ಬು ವಿಸ್ತಾರವಾಗಿ ಬೆಳೆಸಲು ಸಹಕಾರಿಯಾಗಿತ್ತು. ಇವುಗಳ ಮೇಲಿನ ತೆರಿಗೆ ಮತ್ತು ಇನ್ನಿತರ ಸುಂಕಗಳು ರಾಜ್ಯದಲ್ಲಿ ಆದಾಯವನ್ನು ತರುತ್ತಿತ್ತು. ಕೆಳದಿ ಮೊದಲನೆಯ ಸೋಮಶೇಖರ ನಾಯಕನ ಆಡಳಿತ ಕಾಲದಿಂದ ರಾಜ್ಯದ ಅವನತಿಯ ಕಾಲದವರೆಗೆ ಪ್ರಮುಖ ವೀರಶೈವ ಮುಂದಾಳುಗಳು, ಅರಸರ ತೆರಿಗೆ ಧೋರಣೆಗಳ ಮೇಲೆ ವರ್ಚಸ್ಸು ಬೀರಿದ್ದರೆಂದು ತಿಳಿದುಬರುತ್ತದೆ.[156] ವಸೂಲಿಯಲ್ಲಿ ಕೆಲವು ಸಲ ಅರಸರ ಅಧಿಕಾರಿಗಳು ದರ್ಪ ತೋರಿಸಿದ್ದರಿಂದ ರೈತರು ಅತೃಪ್ತಿ ವ್ಯಕ್ತಪಡಿಸುತ್ತಿದ್ದರೆಂದು ತಿಳಿದು ಬರುತ್ತದೆ.[157] ಹಲವು ಕುಂದು ಕೊರತೆಗಳು ತೆರಿಗೆ ಪದ್ಧತಿಯಲ್ಲಿದ್ದರೂ, ಈ ಪದ್ಧತಿ ಕೆಳದಿ ರಾಜ್ಯದ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗಳನ್ನು ಸದ್ದಿಲ್ಲದೆ ಮಾರ್ಪಡಿಸಿರುವುದು ಗಮನಾರ್ಹವಾದುದು. ಕೆಳದಿ ನಾಯಕರ ತೆರಿಗೆ ಪದ್ಧತಿಯ ಒಂದು ವೈಶಿಷ್ಟ್ಯವೆಂದರೆ ನೈಸರ್ಗಿಕ ಅನಾಹುತಗಳನ್ನು ಗಣನೆಗೆ ತೆಗೆದುಕೊಂಡು ರೈತರಿಗೆ ತೆರಿಗೆ ರಿಯಾಯತಿ ಮಾಡುತ್ತಿದ್ದರು. ಇದು ಕೆಳದಿಯ ಆಡಳಿತ ಜನಪರವಾಗಿತ್ತೆಂಬುದನ್ನು ದೃಢಪಡಿಸುತ್ತದೆ. ರಾಜ್ಯದ ಹಿತದೃಷ್ಟಿಯಿಂದ ತೆರಿಗೆ ಹೆಚ್ಚಳದಂತಹ ಕ್ರಮಗಳನ್ನು ತೆಗೆದುಕೊಂಡರೂ ರೈತರಿಗೆ ನಷ್ಟವಾದಾಗ ಅವರ ಸಹಾಯಕ್ಕೆ ನಿಲ್ಲುವ ಸರಕಾರದ ಈ ಕ್ರಮ ಗಮನಾರ್ಹವಾಗಿದೆ. ಇವರ ತೆರಿಗೆ ಪದ್ಧತಿಯು ವಾಣಿಜ್ಯ ಬೆಳೆಗಳ ಕೃಷಿಗೆ ಪ್ರೋತ್ಸಾಹ ನೀಡಿತು. ಈ ಎಲ್ಲಾ ಅಂಶಗಳು ಕೆಳದಿಯರಸರು ಕಂದಾಯ ಆಡಳಿತವನ್ನು ಉತ್ತಮಪಡಿಸಲು ಎಲ್ಲಾ ಕ್ರಮಗಳನ್ನು ಕೈಗೊಂಡರೆಂದು ತಿಳಿಸುತ್ತವೆ. ಇದರಿಂದ ಕೆಳದಿ ರಾಜ್ಯ ಬಲಿಷ್ಠವಲ್ಲದಿದ್ದರೂ ಶ್ರೀಮಂತವಾಗಿತ್ತೆಂದು ಗೋವೆಯ ವೈಸರಾಯ ಕ್ರಿ.ಶ.1751ರಲ್ಲಿ ತನ್ನ ಪತ್ರದಲ್ಲಿ ತಿಳಿಸಿರುವುದು ಸೂಕ್ತ ಅವಲೋಕನವಾಗಿದೆ.[158]

ಕ್ರಿ.ಶ. 1799ರಲ್ಲಿ ಕೆನರಾದ ಮೊದಲ ಇಂಗ್ಲೀಷ್ ಕಲೆಕ್ಟರ್ ಆಗಿದ್ದ ಮುನ್ರೋ ಹೇಳುವಂತೆ,[159] ಕೆಳದಿಯ ಆಳ್ವಿಕೆಯ ಕೊನೆಯಲ್ಲಿ ಕೆನರಾ ಪ್ರದೇಶದಿಂದ 3,20,827 ಪಗೋಡಗಳನ್ನು ಕಂದಾಯ ರೂಪದಲ್ಲಿ ಪಡೆಯಲಾಗುತ್ತಿತ್ತು.

### 4.5 ಕೆಳದಿ ಆಳ್ವಿಕೆಯ ಕಾಲದ ತುಳುನಾಡಿನ ನಾಣ್ಯ ಪದ್ಧತಿ

ತುಳುನಾಡಿನಲ್ಲಿ ರೋಮನ್ ಸೇರಿದಂತೆ ವಿದೇಶೀ ನಾಣ್ಯಗಳು, ಪಶ್ಚಿಮ ಚಾಲುಕ್ಯರ ಜಗದೇಕಮಲ್ಲನ ಗದ್ಯಾಣಗಳು, ದೇವಗಿರಿ ಯಾದವರ ಪದ್ಮಟಂಕೆಗಳು, ಗಂಗರ ನಾಣ್ಯಗಳು, ಹೊಯ್ಸಳರ, ಆಳುಪರ ಶಾಂತರರ, ವಿಜಯನಗರದರಸರ, ನಗಿರೆ, ಸಾಳುವ, ಹಾಡುವಳ್ಳಿ, ಕೆಳದಿ ನಾಯಕರ, ಮೈಸೂರು ಒಡೆಯರ, ಹೈದರ್ ಹಾಗೂ ಟಿಪ್ಪುವಿನ ನಾಣ್ಯಗಳು ಬಹಳಷ್ಟು ಸಂಖ್ಯೆಯಲ್ಲಿ ದೊರೆತಿದೆ. ಆಳುಪರು, ಶಾಂತರರು ನಗಿರೆ ಹಾಗೂ ಹಾಡುವಳ್ಳಿಯ ಸಾಳುವರು ವಿಜಯನಗರದರಸರು ತುಳುನಾಡಿನ ವ್ಯವಹಾರಕ್ಕಾಗಿಯೇ ನಾಣ್ಯಗಳನ್ನು ಮಾಡಿಸಿರುವುದು ಗಮನಾರ್ಹವಾಗಿದೆ.[160] ಈ ಕಾಲದ ತುಳುನಾಡಿನಲ್ಲಿ ಮುಖ್ಯವಾಗಿ ವಿಜಯನಗರದರಸರ ನಾಣ್ಯಗಳು ಪ್ರಾಧಾನ್ಯತೆಯನ್ನು ಪಡೆದಿದ್ದರೂ ಕೆಳದಿಯರಸರ ಮತ್ತು ಪೋರ್ಚುಗೀಸರ ನಾಣ್ಯಗಳೂ ಇಲ್ಲಿಯ ಅರ್ಥವ್ಯವಸ್ಥೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದವು. ವಿಜಯನಗರ ಕಾಲದಲ್ಲಿ ತುಳುನಾಡಿನ ಬಾರ್ಕೂರು ಹಾಗೂ ಮಂಗಳೂರುಗಳಲ್ಲಿ ಎರಡು ನಾಣ್ಯ ಟಂಕಸಾಲೆಗಳಿದ್ದವು.[161] ತುಳುನಾಡಿನ ಹೊರಗಿನ ಟಂಕಸಾಲೆಗಳಲ್ಲಿ ತಯಾರಿಸಲಾದ ನಾಣ್ಯಗಳನ್ನು ತುಳುನಾಡಿನಲ್ಲಿ ಉಪಯೋಗಿಸಬೇಕಾದರೆ ಆ ನಾಣ್ಯಗಳ ಬದಲಿಗೆ ಬಾರಕೂರು ಟಂಕಸಾಲೆಯ ನಾಣ್ಯಗಳಿಗೆ ವಿನಿಮಯ ಮಾಡಿಕೊಳ್ಳಬೇಕಿತ್ತು.[162]

ಕೆಳದಿಯರಸರು ಕೆಲವೊಂದು ಬದಲಾವಣೆಗಳೊಂದಿಗೆ ವಿಜಯನಗರದ ಕಾಲದ ನಾಣ್ಯಗಳನ್ನು ಮುಂದುವರೆಸಿದರು. ಇದೇ ಕೆಲಸವನ್ನು ಆಳುಪರ ಅವನತಿಯ ಕಾಲಕ್ಕೆ ತುಳುನಾಡನ್ನು ಪ್ರವೇಶಿಸಿದ ವಿಜಯನಗರದ ಅರಸರು ಪಾಲಿಸಿದ್ದರು. ಈ ಕಾಲದಲ್ಲಿ ನಾಣ್ಯಗಳು ಚಿನ್ನ, ಬೆಳ್ಳಿ, ತಾಮ್ರ ಮೊದಲಾದ ಲೋಹಗಳಿಂದ ತಯಾರಾಗುತ್ತಿತ್ತು. ಪ್ರಮುಖವಾಗಿ ಬಂಗಾರದ ನಾಣ್ಯಗಳು ರೂಢಿಯಲ್ಲಿತ್ತು. ತುಳುನಾಡು ಸೇರಿದಂತೆ ಪಶ್ಚಿಮ ಕರ್ನಾಟಕದಲ್ಲಿ ಗದ್ಯಾಣ, ವರಹ, ಪೊನ್ನು(ಹೊನ್ನು) ಕಾಟಿ ಗದ್ಯಾಣ, ಅರ್ಧ ಕಾಟಿ ಗದ್ಯಾಣ, ಕಾಟಿ ಪ್ರತಾಪ, ಸಣ್ಣ ಪ್ರತಾಪ, ಹಣ ಮತ್ತು ಹಾಗ, ಗದಯತಾರ ಅಥವಾ ತಾರ ಇತ್ಯಾದಿ ನಾಣ್ಯಗಳು ಬಳಕೆಯಲ್ಲಿದ್ದವು. ತಾರ, ಬೆಳ್ಳಿಯ ನಾಣ್ಯವಾಗಿದ್ದರೆ, ಜಿತ ಗದ್ಯಾಣ ಅಥವಾ ಜಿತಾಲ್ ಮತ್ತು ದುಡ್ಡು ತಾಮ್ರದ ನಾಣ್ಯವಾಗಿತ್ತು. ಅಂತೆಯೇ ವಿದೇಶೀ ನಾಣ್ಯಗಳಾದ ಬಾಹಿರ ಗದ್ಯಾಣ ಪಗೋಡಗಳು, ಜೆರಾಫಿನ್ಸ್ ಬಳಕೆಯಲ್ಲಿದ್ದವು. ಅದೇ ರೀತಿ ಗೋವಾವನ್ನು ವಶಪಡಿಸಿಕೊಂಡ ಪೋರ್ಚುಗೀಸರು ಅವರದೇ ಆದ ನಾಣ್ಯಗಳನ್ನು ಮುದ್ರಿಸಿ ಕರಾವಳಿ ಭಾಗದಲ್ಲಿ ಚಲಾವಣೆಗೆ ತಂದರು. ಅಲ್ಫಾನ್ಸೋ ಡಿ. ಅಲ್ಬುಕರ್ಕನು ಸ್ಥಳೀಯ ನಾಣ್ಯಗಳ ಮೌಲ್ಯಗಳಿಗೆ ಸಮಾನವಾದ ನಾಣ್ಯಗಳನ್ನು ಜಾರಿಗೆ ತಂದನು. ಈ ಹಿನ್ನೆಲೆಯಲ್ಲಿ,

ಗೋವಾ ಮತ್ತು ಕೆನರಾ ಪ್ರದೇಶದ ನಾಣ್ಯಗಳು ಸಮಾನವಾದ ವಿನಿಮಯ ದರವನ್ನು ಹೊಂದಿದ್ದವು.[163]

ಕ್ರಿ.ಶ.16ನೇ ಶತಮಾನದ ಉತ್ತರಾರ್ಧದ ವೇಳೆಗೆ ಸ್ಥಳೀಯ ಮತ್ತು ಪೋರ್ಚುಗೀಸ್ ನಾಣ್ಯ ವ್ಯವಸ್ಥೆಯಲ್ಲಿ ಕೆಲವೊಂದು ವ್ಯತ್ಯಾಸಗಳಾದವು. ಇದಕ್ಕೆ ಮುಖ್ಯ ಕಾರಣ ಪೋರ್ಚುಗೀಸರು ತಮ್ಮ ನಾಣ್ಯಗಳ ಮೌಲ್ಯಗಳನ್ನು ಪದೇ ಪದೇ ಬದಲಿಸುತ್ತಿದ್ದರು. ಆದಾಗ್ಯೂ ಅವರು ಕಾಳುಮೆಣಸು ಮತ್ತು ಅಕ್ಕಿ ವ್ಯಾಪಾರದಲ್ಲಿ ಸ್ಥಳೀಯ ನಾಣ್ಯಗಳನ್ನು ಬಳಸುತ್ತಿದ್ದರು. ಉದಾಹರಣೆಗೆ ಕ್ರಿ.ಶ.1574ರ ದಾಖಲೆಯಂತೆ ಗೇರುಸೊಪ್ಪೆಯ ರಾಣಿ ಪೋರ್ಚುಗೀಸರಿಗೆ 1 ಖಂಡಿಗೆ 25 ಪಗೋಡಗಳನ್ನು ಸ್ವೀಕರಿಸಿ ಕಾಳುಮೆಣಸನ್ನು ಮಾರಲು ಒಪ್ಪಿದ್ದಳು.[164] ಕ್ರಿ.ಶ. 16ನೇ ಶತಮಾನದ ಮದ್ಯಭಾಗದಲ್ಲಿ ಕರಾವಳಿ ಪ್ರದೇಶದಲ್ಲಿ 2 ರೀತಿಯ ಗದ್ಯಾಣಗಳ ಬಳಕೆಯನ್ನು ಕಾಣಬಹುದಾಗಿದೆ. ದೊಡ್ಡ ಗದ್ಯಾಣ ಮತ್ತು ಗಟ್ಟಿ ಗದ್ಯಾಣ  ಇದು ಶೇಕಡವಾರು ಹೆಚ್ಚು ಚಿನ್ನವನ್ನು ಒಳಗೊಂಡಿರುವ ಹೆಚ್ಚು ಮೌಲ್ಯದ  ನಾಣ್ಯವಾಗಿತ್ತು.[165] ವಿಜಯನಗರದ ನಾಣ್ಯಗಳು ಕೆಳದಿ ರಾಜರ ನಾಣ್ಯಗಳ ಮೇಲೆ ಬಹಳಷ್ಟು ಪ್ರಭಾವವನ್ನು ಬೀರಿದ್ದವು ಕೆಳದಿ ಸದಾಶಿವರಾಯನು ಶಿವ ಪಾರ್ವತಿ ಚಿತ್ರವಿರುವ ನಾಣ್ಯಗಳನ್ನು ಟಂಕಿಸಿದ್ದ. ಇದರ ತೂಕ 52 ಗ್ರೇನ್ ಅಂದರೆ 3.4 ಗ್ರಾಂ. ಅಗಲ 0.5". ವಿಜಯನಗರದ ಕಾಲದ ನಾಣ್ಯಗಳೂ ಇಷ್ಟೇ ತೂಕ ಮತ್ತು ಅಳತೆಯನ್ನು ಹೊಂದಿದ್ದವು. ತೂಕ, ಛಾಪಿಸುವವಿದ್ಯೆ, ಲಿಪಿ ಈ ಎಲ್ಲಾ ವಿಚಾರಗಳಲ್ಲಿ ಕೆಳದಿಯರಸರು ವಿಜಯನಗರದರಸರನ್ನು ಅನುಸರಿಸಿದರು. ಆದರೆ ಕೆಳದಿ ಸದಾಶಿವ ನಾಯಕ ತನ್ನ ಹೆಸರನ್ನು ಆ ನಾಣ್ಯಗಳ ಮೇಲೆ ಅಚ್ಚು ಹಾಕಿಸಿದ್ದ. ಇವರ ಚಿನ್ನದ ನಾಣ್ಯಗಳಲ್ಲಿ ಹಲವು ವಿಧಗಳಿವೆ.[166]

1. ಮುಮ್ಮುಖ = ಕುಳಿತಿರುವ ಶಿವ ಪಾರ್ವತಿ, ಶಿವನ ಕೈಯಲ್ಲಿ ತ್ರಿಶೂಲ ಮತ್ತು ಮೃಗ. ಹಿಮ್ಮುಖದಲ್ಲಿ ಮೂರು ಸಾಲುಗಳ ನಾಗರೀಬರಹ  'ಶ್ರೀ/ ಸದಾ/ ಶಿವ'
2. ಮುಮ್ಮುಖ = ಕುಳಿತಿರುವ ಶಿವ ಪಾರ್ವತಿ, ಶಿವನ ಕೈಯಲ್ಲಿ ತ್ರಿಶೂಲ ಮತ್ತು ಮೃಗ. ಹಿಮ್ಮುಖದಲ್ಲಿ ನಾಗರೀ ಲಿಪಿ 'ಶ್ರೀ'
3. ಸದಾಶಿವರಾಯನ ಅರ್ಧವರಹ ಅಥವಾ ಹೊನ್ನು. ಇದು ವರಹದಂತೆ ಹಿಮ್ಮುಖ ಮುಮ್ಮುಖ ಚಿತ್ರವನ್ನು ಹೊಂದಿದೆ. ಆದರೆ ಹರಿಣದ ಚಿತ್ರ ಇಲ್ಲ ಮತ್ತು ಇದು ಅಳತೆಯಲ್ಲಿ ಸಣ್ಣದಾಗಿದೆ.

ಶ್ರೀ ಸದಾಶಿವ ಎನ್ನುವ ದೇವನಾಗರಿ ಲಿಪಿಯ ಬರಹ ಸದಾಶಿವನಿಂದ ಆರಂಭಗೊಂಡು ಕೆಳದಿ ಆಳ್ವಿಕೆಯ ಕೊನೆಯವರೆಗೂ ಉಪಯೋಗಿಸಲ್ಪಡುತಿತ್ತು. ಸುಮಾರು ಇನ್ನೂರು ವರ್ಷಗಳಲ್ಲಿ 'ಶ್ರೀ/ ಸದಾ/ ಶಿವ' ಬರವಣಿಗೆಯಲ್ಲಿ ಲಿಪಿಯ ಶೈಲಿಯ ಬದಲಾವಣೆಯನ್ನು ಗುರುತಿಸಬಹುದಾಗಿದೆ. ವಿಜಯನಗರ ದೊರೆ ಸದಾಶಿವರಾಯನು ತನ್ನ ನಾಣ್ಯಗಳ ಹಿಮ್ಮುಖದಲ್ಲಿ "ಶ್ರೀ ಪ್ರತಾಪಸದಾಶಿವರಾಯ" ಎಂದು ಬರೆಸಿದ್ದ. ಆದರೆ ಇಕ್ಕೇರಿ ವರಹದ ಹಿಮ್ಮುಖದಿನಲ್ಲಿ ಪ್ರತಾಪ ಎನ್ನುವ ಪದವಿಲ್ಲದೇ ಇರುವುದರಿಂದ ಇದು ಕೆಳದಿಯರಸರ ನಾಣ್ಯವೆಂದು ಸ್ಪಷ್ಟವಾಯಿತು. ಅಷ್ಟರ ಮಟ್ಟಿಗೆ ವಿಜಯನಗರದ ಮತ್ತು ಕೆಳದಿ ಸದಾಶಿವನ

ನಾಣ್ಯಗಳು ಸಾಮ್ಯತೆಯನ್ನು ಪಡೆದಿದೆ.

ಶಿವಪ್ಪನಾಯಕನ ಕಾಲದಲ್ಲಿ ತಾಮ್ರದ ನಾಣ್ಯಗಳನ್ನು ಛಾಪಿಸಲಾಗಿದ್ದು, ಅವು 0.5 ಡಯಾಮೀಟರ್ ಹೊಂದಿತ್ತು ಎಂಬ ಅಭಿಪ್ರಾಯವಿದೆ.[167] ಆದರೆ ತಾಮ್ರದ ನಾಣ್ಯಗಳ ಅಸ್ತಿತ್ವದ ಕುರಿತಾಗಿ ವಿದ್ವಾಂಸರಲ್ಲಿ ಒಮ್ಮತ ಅಭಿಪ್ರಾಯ ಇಲ್ಲ.[168] ಅದೇ ರೀತಿ ವೆಂಕಟಪ್ಪನಾಯಕನ ತಾಮ್ರದ ನಾಣ್ಯದಲ್ಲಿ ಶಿವ ಪಾರ್ವತಿಯ ಚಿತ್ರ ಮತ್ತು 'ಶ್ರೀವೆಂಕಟ' ಎನ್ನುವ ಬರಹವನ್ನು ಕಾಣಬಹುದು.[169] ಈ ನಾಣ್ಯ ವಿಜಯನಗರದ ವೆಂಕಟಪತಿಯ ನಾಣ್ಯಗಳೋ ಅಥವಾ ಕೆಳದಿ ವೆಂಕಟಪ್ಪನ ನಾಣ್ಯಗಳೋ ಎನ್ನುವ ವಿಚಾರದಲ್ಲಿ ಚರ್ಚೆಗಳಿವೆಯಾದರೂ ಅದು ಕೆಳದಿ ವೆಂಕಟಪ್ಪನ ನಾಣ್ಯಗಳೆಂದು ವಿದ್ವಾಂಸರು ತರ್ಕಿಸಿದ್ದಾರೆ.[170] ಅದೇ ರೀತಿ ಗಂಡ ಭೇರುಂಡ ಚಿತ್ರವೂ ನಾಣ್ಯಗಳಲ್ಲಿ ಬಳಕೆಯಾಗಿದೆ ಎಂಬ ಹೇಳಿಕೆಯಿದೆ.[171] ಗಂಡ ಭೇರುಂಡ ಚಿತ್ರವಿರುವನಾಣ್ಯಗಳನ್ನು ಮಾಲವೆ ಗ್ರಾಮದಲ್ಲಿ ನೋಡಿದ್ದೇನೆ ಎಂದು ಎಂ.ಎಚ್.ಕೃಷ್ಣ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಆದರೆ ಅಂತಹ ನಾಣ್ಯಗಳು ಮತ್ತೆ ದೊರೆತಿಲ್ಲ ಎನ್ನುವುದು ಈ ನಾಣ್ಯದ ಕುರಿತಾಗಿ ಸಂದೇಹ ಮೂಡಿಸುತ್ತದೆ.

ಕೆಳದಿ ನಾಯಕರ ನಾಣ್ಯ ಪದ್ಧತಿ ತುಳುನಾಡಿನ ಈ ಭಾಗದಲ್ಲಿ ಆರ್ಥಿಕ ಸಬಲತೆಗೆ ಕಾರಣವಾಯಿತು. ಅವರ ನಾಣ್ಯಗಳು ಇಕ್ಕೇರಿ ವರಹಗಳೆಂದು ಪ್ರಸಿದ್ಧವಾದವು. ಕಡತಗಳು ಮತ್ತು ಶಾಸನಗಳ ಆಧಾರದಲ್ಲಿ ತುಳುನಾಡಿನಲ್ಲಿ ಸಿಗುವ ಕೆಳದಿ ನಾಯಕರ ನಾಣ್ಯಗಳ ಮೌಲ್ಯಗಳನ್ನು ಈ ಕೆಳಗಿನಂತೆ ನಿರ್ಧರಿಸಲಾಗಿತ್ತು[172]

1. ವರಹ – ಪೋರ್ಚುಗೀಸ್ ಮೊದಲಾದ ವಿದೇಶಿಯರು ಇದನ್ನು ಪಗೋಡ ಎಂದು ಕರೆದಿದ್ದಾರೆ.[173] ಕೆಳದಿ ರಾಜ್ಯದಲ್ಲಿ ಹೆಚ್ಚಿನ ವ್ಯವಹಾರಗಳು ವರಹಗಳಿಂದಲೇ ನಡೆಯುತ್ತಿತ್ತೆಂದು ಕಂದಾಯ ತೆರಿಗೆಗಳಿಗೆ ಸಂಬಂಧಿಸಿದ ದಾಖಲೆಗಳು ಸೂಚಿಸುತ್ತವೆ.
2. ಹೊನ್ನು – ಹೊನ್ನು ವರಹದ ಅರ್ಧಭಾಗ ಅಥವಾ 5 ಹಣಕ್ಕೆ ಸಮ. ವರಹದ ನಂತರದ ಸ್ಥಾನ ಹೊನ್ನಿಗೆ ಇತ್ತು.
3. ಧಾರಣ – ಇದು ಹೊನ್ನಿನ ಅರ್ಧ ಭಾಗವಾಗಿದೆ. ಒಂದು ಹೊನ್ನು ಎರಡು ಧಾರಣ . ಇದು ವರಹದ ಕಾಲುಭಾಗವೆಂದು ಕಿಟೆಲ್ ಅರ್ಥೈಸುತ್ತಾರೆ.[174] ಕೆಳದಿ ಶಾಸನಗಳಲ್ಲಿ ಅಪರೂಪದಲ್ಲಿ ಮಾತ್ರ ಧಾರಣ ಶಬ್ದ ಬಳಕೆಯಾಗಿರುವುದರಿಂದ ಇದು ಹೆಚ್ಚಾಗಿ ಚಲಾವಣೆಯಲ್ಲಿ ಇಲ್ಲದ ನಾಣ್ಯ ಎಂದು ಊಹಿಸಬಹುದು.
4. ಹಣ – ಪೋರ್ಚುಗೀಸರು ಮತ್ತು ಇತರರು ಫಣಂ ಎಂದು ಕರೆದಿರುವ ಹಣ ವರಹದ $^1/_{10}$ ಭಾಗ ಅಥವಾ ಹೊನ್ನಿನ $^1/_5$ ಭಾಗವಾಗಿತ್ತು. ಒಂದು ಹೊನ್ನು ಐದು ಹಣಕ್ಕೆ ಸಮವಾಗಿತ್ತು
5. ಮುಪ್ಪಾಗ– $^3/_4$ ಭಾಗದ ಹಣ ಒಂದು ಮುಪ್ಪಾಗಕ್ಕೆ ಸಮನಾದುದು.
6. ಅಡ್ಡ–ಇದು ಹಣದ ಅರ್ಧಭಾಗ ಮೌಲ್ಯವನ್ನು ಹೊಂದಿತ್ತು. ಎರಡು ಅಡ್ಡ ಒಂದು ಹಣಕ್ಕೆ ಸಮ.
7. ಹಾಗ – ಒಂದು ಹಾಗ ಎಂದರೆ $^1/_4$ ಭಾಗದ ಹಣ. ಒಂದು ಹಣಕ್ಕೆ 4 ಹಾಗ 2 ಹಾಗ =

ಒಂದು ಅಡ್ಡ, ಮೂರು ಹಾಗಕ್ಕೆ ಒಂದು ಮುಪ್ಪಾಗ

8. ಬೇಳೆ – ಒಂದು ಅಡ್ಡ ನಾಲ್ಕು ಬೇಳೆಗೆ ಸಮ. ಒಂದು ಹಾಗಕ್ಕೆ ಎರಡು ಬೇಳೆ.

9. ವೀಸ – ಹಾಗದ 1/4 ಭಾಗ. ನಾಲ್ಕು ವೀಸ ಸೇರಿ ಒಂದು ಹಾಗ.

10.ಅರೆವೀಸ – ಇದು ವೀಸದ ಅರ್ಧಭಾಗ. ಎರಡು ಅರೆವೀಸ = ಒಂದು ವೀಸ.

ಕೆಳದಿ ಆಳ್ವಿಕೆಯ ಉತ್ತರ ತುಳುನಾಡಿನಲ್ಲಿ ತಾರ ಎಂಬ ಬೆಳ್ಳಿಯ ನಾಣ್ಯ ಅಸ್ತಿತ್ವದಲ್ಲಿತ್ತು ಎಂದು ಹೇಳಲಾಗಿದೆ. ಆದರೆ ಶಾಸನಗಳಲ್ಲಿ ಅದರ ಉಲ್ಲೇಖವಿಲ್ಲ. ವೀರಭದ್ರನಾಯಕನ ಕಾಲದಲ್ಲಿ ಕ್ರಿ.ಶ 1637 ರಲ್ಲಿ ಭಟ್ಕಳದಲ್ಲಿ ಇವುಗಳನ್ನು ನೋಡಿದ್ದಾಗಿ ಬ್ರಿಟೀಷ್ ಯಾತ್ರಿಕ ಪೀಟರ್ ಮಂಡಿ ಬರೆಯುತ್ತಾನೆ. ಈ ನಾಣ್ಯವು 4 ತಾಮ್ರದ ಕಾಸುಗಳಿಗೆ ಸಮ ಎನ್ನುತ್ತಾನೆ.[175]

ತುಳುನಾಡಿನ ಕರಾವಳಿ ತೀರಗಳಲ್ಲಿ ವ್ಯಾಪಾರಕ್ಕೆ ಸುಲಭವಾಗುವಂತೆ ಪೋರ್ಚುಗೀಸ್ ವ್ಯಾಪಾರಿಗಳು ತಮ್ಮದೇ ನಾಣ್ಯಗಳನ್ನು ಬಿಡುಗಡೆಗೊಳಿಸಿದರು. ಅವುಗಳೆಂದರೆ ಸಾವೊ ತೋಮ್ಸ್ (Sao tomes) ಜೆರಾಫಿಮ್ (xirafim) ಮತ್ತು ಕುಜರತ್(cuzrat). ಅವರ ನಾಣ್ಯಗಳು, ಕಾಳು ಮೆಣಸು ಮತ್ತು ಅಕ್ಕಿ ವ್ಯಾಪಾರದಲ್ಲಿ ಬಳಸಲ್ಪಡುತ್ತಿತ್ತು ಮತ್ತು ಅವುಗಳನ್ನು ಕೆಳದಿಯ ನಾಣ್ಯಗಳೊಂದಿಗೆ ವಿನಿಮಯ ಮಾಡಿಕೊಳ್ಳಬಹುದಾಗಿತ್ತು. ಉದಾಹರಣೆಗೆ ಕ್ರಿಶ 1633ರ ವೀರಭದ್ರ ನಾಯಕ ಮತ್ತು ಪೋರ್ಚುಗೀಸರ ಮಧ್ಯದ ಒಪ್ಪಂದದಂತೆ ಇಕ್ಕೇರಿಯ 100 ಪಗೋಡಗಳು ಗೋವಾದ ಚಿನ್ನದ ನಾಣ್ಯಗಳಾದ 102 ಸಾವೊತೋಮ್ಸ್‌ಗಳಿಗೆ ಸಮ ಎಂದು ಉಲ್ಲೇಖಿಸಲಾಗಿತ್ತು. ಕ್ರಿಶ 1630ರಲ್ಲಿ ಗೋವಾದ ಇನ್ನೊಂದು ನಾಣ್ಯ ಜೆರಾಫಿಮ್ 3.5 ರಿಂದ 1 ಅನುಪಾತದಲ್ಲಿ ಇಕ್ಕೇರಿ ವರಹಗಳೊಂದಿಗೆ ವಿನಿಮಯಗೊಳ್ಳುತ್ತಿತ್ತು. ಕುಜರತ್(ಕುರ್ಜತ್) ಎನ್ನುವ ಅವರ ಚಿನ್ನದ ನಾಣ್ಯ ಕ್ರಿ.ಶ.18ನೇ ಶತಮಾನದ ಉತ್ತರಾರ್ಧದಲ್ಲಿಯೂ ಕರಾವಳಿ ತೀರದಲ್ಲಿ ಚಲಾವಣೆಯಲ್ಲಿತ್ತು.[176]

ಕೆಳದಿಯರಸರ ಆಳ್ವಿಕೆಯ ಕಾಲದಲ್ಲಿ ತುಳುನಾಡಿನಲ್ಲಿ ಹಲವಾರು ಸ್ಥಳೀಯ ಸಾಮಂತ ಅರಸು ಮನೆತನಗಳು ಆಳ್ವಿಕೆ ನಡೆಸುತ್ತಿದ್ದರೂ ಗೇರುಸೊಪ್ಪೆಯ ಸಾಳುವರನ್ನು ಬಿಟ್ಟು, ಉಳಿದವರು ತಮ್ಮದೆ ಆದ ನಾಣ್ಯವನ್ನ ಟಂಕಿಸುವ ಕೆಲಸಕ್ಕೆ ಕೈ ಹಾಕಲಿಲ್ಲ. ಸಾಮಾನ್ಯವಾಗಿ ನಾಣ್ಯಗಳನ್ನ ಟಂಕಿಸುವ ಕೆಲಸವನ್ನು ಸಾರ್ವಭೌಮ ರಾಜರು ನಿಭಾಯಿಸುತ್ತಿದ್ದರು. ಅದು ಅವರ ಸ್ವಾತಂತ್ರ್ಯದ ಮತ್ತು ಹೆಗ್ಗಳಿಕೆಯ ಪ್ರತೀಕವಾಗಿತ್ತು. ತುಳುನಾಡಿನ ಸ್ಥಳೀಯ ಸಾಮಂತ ಅರಸರು ತಮ್ಮದೇ ಆದ ನಾಣ್ಯಗಳನ್ನು ತಾರದೆ ಕೆಳದಿಯರಸರ ನಾಣ್ಯಗಳನ್ನೇ ವ್ಯವಹಾರದಲ್ಲಿ ಒಪ್ಪಿಕೊಂಡದ್ದು ಒಂದರ್ಥದಲ್ಲಿ ಕೆಳದಿಯರಸರ ಸಾರ್ವಭೌಮತ್ವವನ್ನು ಒಪ್ಪಿಕೊಂಡಂತೆಯೇ ಸರಿ. ಇಕ್ಕೇರಿ ವರಹಗಳ ಜನಪ್ರಿಯತೆಯು ಇದಕ್ಕೆ ಒಂದು ಕಾರಣವಾಗಿರಬಹುದು. ಈ ವರಹಗಳು ಜನಾನುರಾಗಿ ಚಿನ್ನದ ನಾಣ್ಯಗಳಾಗಿದ್ದು ಇಂತಹ ಜನಪ್ರಿಯ ನಾಣ್ಯವನ್ನು ಬದಲಾಯಿಸಲು ಹೈದರ್ ಅಲಿಯೂ ಹಿಂಜರಿದಿದ್ದ. ಆತ ಈ ಮಾದರಿಯ ನಾಣ್ಯವನ್ನೇ ಟಂಕಿಸಿದ ಆದರೆ ಮುಂಭಾಗದಲ್ಲಿ

'ಹೆ' ಎಂಬ ಪರ್ಷಿಯನ್ ಅಕ್ಷರವನ್ನು ಹಾಕಿಸಿ ಶಿವ ಪಾರ್ವತಿಯರ ಚಿತ್ರವನ್ನ ಹಿಮ್ಮುಖದಲ್ಲಿ ಅಳವಡಿಸಿದ. ಶಾಸನದಲ್ಲಿ ತುಳುನಾಡಿನ ಭಾಗವೆಂದು ಹೆಸರಿಸಲ್ಪಟ್ಟ ಗೇರುಸೊಪ್ಪೆಯನ್ನಾಳಿದ ಸಾಳುವ ವಂಶಜರು ತಮ್ಮದೇ ಆದ ನಾಣ್ಯಗಳನ್ನು ಜಾರಿಗೆ ತಂದಿರುವುದು ಅವರ ಸ್ವಾಭಿಮಾನದ ಪ್ರತೀಕವಾಗಿದೆ. ವಿಜಯನಗರದರಸರ ಕಾಲದಲ್ಲಿಯೇ ತಮ್ಮದೇ ನಾಣ್ಯಗಳನ್ನು ಇವರು ಟಂಕಿಸಿದ್ದಲ್ಲದೆ ತಮ್ಮ ಬಿರುದುಗಳನ್ನು ಪ್ರಚುರಪಡಿಸಲು ಈ ನಾಣ್ಯಗಳನ್ನು ಬಳಸಿದ್ದರು. ಚೆನ್ನಭೈರಾದೇವಿ(1555–1602) ತನ್ನದೇ ಹೆಸರಿನಲ್ಲಿ ತಾಮ್ರದ ನಾಣ್ಯಗಳನ್ನು ಅಚ್ಚು ಹಾಕಿಸಿ ತನ್ನ ವಿಶಿಷ್ಟತೆಯನ್ನು ತೋರಿಸಿದ್ದಾಳೆ. ತುಳುನಾಡನ್ನು ಈ ಕಾಲದಲ್ಲಿ ಆಳಿದ ಇತರ ಯಾವ ಅರಸರೂ ತಮ್ಮದೇ ಆದ ನಾಣ್ಯಗಳನ್ನು ಬಿಡುಗಡೆಗೊಳಿಸಿದ ಉದಹಾರಣೆಗಳಿಲ್ಲ. ಇದು ಸ್ಥಳೀಯ ಅರಸರ ಸೀಮಿತ ಅಧಿಕಾರ ವ್ಯಾಪ್ತಿಯನ್ನು ತೋರಿಸುತ್ತದೆ. ಸ್ಥಳೀಯ ಅರಸರು ಕೆಳದಿಯರಸರ ವಿರುದ್ಧ ಹಲವು ಬಾರಿ ದಂಗೆಯೆದ್ದರೂ ಕೆಳದಿ ನಾಣ್ಯಗಳನ್ನೇ ತಮ್ಮ ವ್ಯವಹಾರದಲ್ಲಿ ಮುಂದುವರೆವರೆಸಿದ್ದು ಸ್ಪಷ್ಟವಾಗಿದೆ.

ಕೆಳದಿಯರಸರ ವರಹಗಳು ವಿಜಯನಗರದ ಕಾಲದ ಗದ್ಯಾಣಗಳಿಗೆ ಸಮನಾಗಿತ್ತು. ಹಾಗಾಗಿಯೇ ಇಕ್ಕೇರಿ ವರಹಗಳೆಂದು ಪ್ರಸಿದ್ಧವಾದ ಈ ನಾಣ್ಯಗಳು ತುಳುನಾಡಿನ ದಾನ ಪರಂಪರೆಯಲ್ಲಿ ಹಲವು ಬಾರಿ ಕಂಡು ಬರುತ್ತದೆ.[177] ಆದರೆ ವರಹಗಳ ಜೊತೆಗೆ ತುಳುನಾಡಿನಲ್ಲಿ ವಿಜಯನಗರ ಕಾಲದ ಗದ್ಯಾಣಗಳ ಬಳಕೆಯೂ ಮುಂದುವರೆದಿತ್ತು ಎಂಬುದಾಗಿ ಹಲವು ದಾಖಲೆಗಳು ದೃಢಪಡಿಸುತ್ತವೆ. ಹಾಗಾಗಿ ಕೆಳದಿ ಸಾಮ್ರಾಜ್ಯದಲ್ಲಿ ಗದ್ಯಾಣದ ಬಳಕೆ ಕಡಿಮೆಯಾಯಿತೆಂಬ ಎ.ವಿ.ನರಸಿಂಹ ಮೂರ್ತಿಯವರ ಅಭಿಪ್ರಾಯ ಸರಿಯೆನಿಸುವುದಿಲ್ಲ. ಕೆಳದಿ ಅರಸರ ಆಳ್ವಿಕೆಯ ತುಳುನಾಡಿನಲ್ಲಿ ಬರೆಯಲ್ಪಟ್ಟ ಅನೇಕ ಶಾಸನಗಳಲ್ಲಿರುವ ಗದ್ಯಾಣದ ಉಲ್ಲೇಖಗಳು, ಈ ಕಾಲಘಟ್ಟದಲ್ಲಿಯೂ ಗದ್ಯಾಣಗಳು ಹಿಂದಿನಂತೆ ಬಳಕೆಯಲ್ಲಿತ್ತು ಎಂಬುದಾಗಿ ಸೂಚಿಸುತ್ತವೆ.

ಮೇಲೆ ವಿವರಿಸಿದ ಎಲ್ಲ ರೀತಿಯ ನಾಣ್ಯಗಳಲ್ಲಿ ಮುಖ್ಯವಾಗಿ ವರಹ, ವರಹ ಗದ್ಯಾಣ, ಕಾಟಿ ಗದ್ಯಾಣ, ಹಣ ಮತ್ತು ಹೊನ್ನು ತುಳುನಾಡಿನ ಭೂ ವ್ಯವಹಾರಗಳಲ್ಲಿ, ಭೂಗೇಣಿ ವ್ಯವಸ್ಥೆಯಲ್ಲಿ ಅಥವಾ ತೆರಿಗೆ ಕಟ್ಟುವಾಗ ಬಳಸುತ್ತಿದ್ದ ಬಗ್ಗೆ ಶಾಸನಗಳು ಮತ್ತು ಕಡತಗಳು ತಿಳಿಸುತ್ತವೆ. ಹತ್ತನೆ ಶತಮಾನದಲ್ಲಿ ಬಳಕೆಯಲ್ಲಿದ್ದ ಗದ್ಯಾಣ ಕೆಳದಿ ಆಳ್ವಿಕೆಯ ಕಾಲದಲ್ಲಿ ಬೇರೆ ಬೇರೆ ರೂಪಾಂತರಗೊಂಡು ವಿವಿಧ ಮೌಲ್ಯದ ವಿವಿಧ ನಾಣ್ಯಗಳು ಬಳಕೆಗೆ ಬಂತು. ಇದು ವಸ್ತುವಿನ ಬದಲಿಗೆ ಹಣದ ರೂಪದಲ್ಲಿ ತೆರಿಗೆಯನ್ನು ಅಥವಾ ಭೂಗೇಣಿಯನ್ನು ನೀಡಬೇಕೆಂಬ ಸರಕಾರದ ನಿರೀಕ್ಷೆಯ ಫಲವಾಗಿತ್ತು. ಆದರೆ ರೈತರು ತಮ್ಮ ಗೇಣಿಯನ್ನು ಅಥವಾ ಕಂದಾಯವನ್ನು ವಸ್ತುವಿನ ರೂಪದಲ್ಲಿಯೂ ನೀಡುತ್ತಿದ್ದರು ಎಂಬುದಾಗಿ ಬುಕಾನನ್ ತಿಳಿಸುತ್ತಾನೆ.[178]

ಅಡಿಟಿಪ್ಪಣಿಗಳು


1. John Sturrock,1864, Madras District Manuals, South canara, I, Madras, P.192
2. Dames (1918), (translated) Barbosa, The Book of Duarte Barbosa : An account of the countries boardering on the Indian Ocean and their inhabitants I, pp 185,188,192,195-6
3. Barbosa I, Op. Cit, p,192
4. Robert Sewell, 1894, A Forgotten empire, New Delhi, p.230
5. SII VII No.284.
6. Barbosa,II, Op. Cit, P.215
7. Edward Grey, (translated) 1892, The Travelle of Pietro Della valle in India, London, Vol.II, pp.196, 221
8. Heras henry, PIHRC X p.113; ಶಾಸ್ತ್ರಿ ಬಿ.ಎಸ್., 1972, ಕೆಳದಿ ಅರಸರು ಹಾಗೂ ಪೋರ್ಚುಗೀಸರು ಕರ್ನಾಟಕ ವಿ.ವಿ. ಧಾರವಾಡ, ಪು 11,53,122; Fawcett EFI(N.S.) i.297
9. ಕೇಶವ ಕೃಷ್ಣ ಕುಡ್ವ, 1948, ದಕ್ಷಿಣ ಕನ್ನಡದ ಇತಿಹಾಸ, ಮಂಗಳೂರು, ಪು.127; Deekshit G.S.(ed)Studies in keladi History p.95; silva, I, PP,44,50,53,60
10. Edward Grey,(ed) The Travells,II, Op. Cit p.296; Peter mundy, ibid, p. 99; Buchanan, Op. cit , p.227
11. MAR,1933,No.30 pp191-95; peter Mundy,Op.cit,p.80-99; Hamilton, op.cit, p.160; Buchanan, Op.Cit, pp 232,33,34,243,261,302,303,354
12. SII VII Nos.309,340;
13. Barbosa, Op.cit,II p.64-65
14. Vasantha Madhava K.G. Op.cit. p,142
15. Heras henry, Op.cit pp, 427, 429
16. Heras henry, Op.Cit, p.113; Shastry B.S, The studies, p.207; Foster,EFI,1646-50,p.6; Ibid,1661-64, p.349. Fawcett, Ibid, (N.S.) I.p.297.
17. ಗಣಪತಿ ರಾವ್ ಐಗಳ್ ಎಂ, 1924, ಸ್ಥಳಪುರಾಣಗಳು ಮಂಜೇಶ್ವರ, ಬಂಟವಾಳ, ಅ.ಸಂ.14,15,
18. Vasantha Madhava K.G., Op.cit. p.143
19. Heras, Op. cit, p.113; ಶಾಸ್ತ್ರಿ ಬಿ.ಎಸ್. 1972, ಕೆಳದಿ ಅರಸರು ಹಾಗೂ ಪೋರ್ಚುಗೀಸರು ಕರ್ನಾಟಕ ವಿ.ವಿ. ಧಾರವಾಡ, ಪು.51, 63, 98, 119, 112; ARSIE,1939, Ap A no.1
20. ವಸಂತ ಮಾಧವ ಕೆ.ಜಿ, 1999, ಕರಾವಳಿ ಕರ್ನಾಟಕದ ರಾಜಕೀಯ ಇತಿಹಾಸ ಅಧ್ಯಯನ ಮತ್ತು ಸಂಶೋಧನೆ, ನಮ್ಮಿ ಅನಂತ ಪ್ರಕಾಶನ ಪಾವಂಜೆ, ಪು.118
21. ನಾಗೇಗೌಡ ಎಚ್.ಎಲ್.(ಲೇ) ಸುದರ್ಶನ, ಡಾ. ಟಿ.ಎಂ.ಎ.ಪೈ ಅಭಿನಂದನಾ ಗ್ರಂಥ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ಸುದರ್ಶನ, ಪು.95
22. ಗಣಪತಿ ರಾವ್ ಐಗಳ್. ಎಂ., 2004, ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, ಪೂರ್ವೋಕ್ತ, ಪು.438
23. ಗಣಪತಿ ರಾವ್ ಐಗಳ್. ಎಂ., ಸ್ಥಳಪುರಾಣಗಳು ಮಂಜೇಶ್ವರ, ಅ.ಸಂ.14, EC,VII,Shi, No.28
24. Appa Dorai,1936, Economic conditions in southern India, VoL,II, Madras.
25. Robert Sewell, Op. Cit, p.86
26 Sewell. Op. cit p.229
27. Grey (ed) The Voyage Of Francois pyrard,I,p.236
28. Henry Heras, I,189-198
29. Barbosa, Op. cit, 189-198
30. Barbosa,I Op. cit, 166,185,303,215, Ibid,II p,56; Danvers C.F, 1894, The Portuguese in India Vol I, London, P.411.
31. ಶಾಸ್ತ್ರಿ ಬಿ.ಎಸ್. 1972, ಕೆಳದಿ ಅರಸರು ಹಾಗೂ ಪೋರ್ಚುಗೀಸರು ಕರ್ನಾಟಕ ವಿ.ವಿ. ಧಾರವಾಡ, ಪು.142; JBHS,II,No.2, sept.1929, pp,226-231; Hamilton. Op.cit, p.159.
32. Danvers C.F,. 1894, The Portuguese in India Vol II, London, p, 423
33. Shastry B.S.Studies, Op. cit pp.204,205; Danvers, Op. cit, p. 411
34. Shastry, B.S. ibid, pp.207-8
35. Barbosa, Op.cit,I, p181,197
36. Frayer, CWE p.224
37. Alexander Hamilton, 1930, A new account of East Indies(ed), Poster, London, p.159
38. Rice B.L.,1909, Mysore and Coorg from the Inscriptions, London-II, 435
39. EC VIII, Ti Nos.83,92,68,69; MAR,1933 No.33; Ibid,1928 no.58; ಗಣಪತಿ ರಾವ್ ಐಗಳ್. ಎಂ., ಸ್ಥಳ ಪುರಾಣಗಳು ಮಂಜೇಶ್ವರ, ಅ.ಸಂ.7,14,15.; EC VII,Sh,no.58

40. Buchanan, II, Op. Cit, P.246,325; Gazetteer of the Bombay presidency, vol.V. pt.II, Kanara, Bombay, 1883, p.39
41. Pearson M.N. Coastal western India, p.77,123,125; ಶಾಸ್ತ್ರಿ ಬಿ.ಎಸ್.ಕೆಳದಿ ಅರಸರು ಹಾಗೂ ಪೋರ್ಚುಗೀಸರು, ಪೂರ್ವೋಕ್ತ, ಪು.142,153,166,173.
42 Pearson M.N., Op.Cit, p.236.
43. Vasantha Madhava K.G.1991, Western Karnataka Its Agrarian relations, Delhi, P.147; Vasantha Madhava K.G, A note on kannada paper in Cochine Archives; Indian Archieves XXVii, 1978, No.2, pp 33-36
44. Vasantha Madhava K.G, Op. Cit, P.148
45. SII.VII. No.210, ARSIE,1941 Ap A No.3
46. MAR.1934, No.15
47. Pearson, Op.cit, p.122; barbosa,Op.cit,p.187,188,189-196. Froncois pyrard,Op.cit, p.344-45,386,444.
48. Barbosa, Op.cit, II p.64-65; Pearson, Op.cit, p.124.
49. A. Appadorai, Op. Cit, p.257; Kamath S.U.,"Trade at Karnataka ports" QJMS LX 3-4 pp 164-166
50. SII, VII, No. 196
51 Pearson, Op.cit,p125; Shastry, studies pp. 201, 209, 210;
52 Froncois pyrard, Op. cit, p. 344-5; William Foster, English Factories i India, 1622-23. P. 333; Ibid 1661-64, p.228 JBHS II p.248-49. Hamilton, p.159; ಶಾಸ್ತ್ರಿ ಬಿ.ಎಸ್, ಕೆಳದಿ ಅರಸರು ಹಾಗೂ ಪೋರ್ಚುಗೀಸರು, ಪು.115–16; .KGV, "Dutch in Coastal Karnataka", QJMS, LXXiii No.3-4(1982 July-dec, pp 4-6)
53. ಶಾಸ್ತ್ರಿ ಬಿ.ಎಸ್, ಕೆಳದಿ ಅರಸರು ಹಾಗೂ ಪೋರ್ಚುಗೀಸರು, ಪೂರ್ವೋಕ್ತ, ಪು.128, 132, 138; Shastry, studies, Op. Cit, pp. 210-212
54. Purabhilekha Puratatva, 1985, iii, Panjim p.92; Vasantha Madhava K.G., Op.cit. p.150. ಈ ವ್ಯವಸ್ಥೆಯಲ್ಲಿ ಪೋರ್ಚುಗೀಸರು ಕೋಟೆಗಳನ್ನು ಕಟ್ಟಿ ಫ್ಯಾಕ್ಟರಿಗಳನ್ನು ಸ್ಥಾಪಿಸಿ ವ್ಯಾಪಾರ ವ್ಯವಹಾರಗಳನ್ನು ಬಲಗೊಳಿಸುತ್ತಿದ್ದರು.
55 . Vasantha Madhava K.G., Op.cit., p.150.
56. ಅರುಣ್ ಎಚ್.ಟಿ, 2002, ಕೆಳದಿ ನಾಯಕರ ಕಾಲದ ತೆರಿಗೆ ಪದ್ಧತಿ, ಅಪ್ರಕಟಿತ ಸಂಶೋಧನಾ ಗ್ರಂಥ, ಕುವೆಂಪು ವಿಶ್ವವಿದ್ಯಾನಿಲಯ, ಪು.80
57. Secretariate Inward Letter Book, (Unpublished 1741/4.3 AP.325,Ibid 1741/42,198-79
58. Pearson, Op.cit, p125
59. Buchanan, Op.cit, p.243.
60. ಶಾಸ್ತ್ರಿ ಬಿ.ಎಸ್, ಕೆಳದಿ ಅರಸರು ಹಾಗೂ ಪೋರ್ಚುಗೀಸರು, ಪೂರ್ವೋಕ್ತ, ಪು.66,67,145.
61. Vasantha Madhava K.G., Op.cit. 153
62. ವಸಂತ ಮಾಧವ. ಕೆ.ಜಿ, ಕ.ಕ.ರಾ.ಇ.ಸಂ, ಪೂರ್ವೋಕ್ತ, ಪು.131.
63. Saletore, B.A. 1934, Social and Political life in Vijayanagara Empire.II, p.456: MAR 1923, No.108.
64. SII Vii Nos. 210, 251, 252, 255, Ibid, ix Pt II Nos. 620 , 674, KI iii, No. 14, KIV No. 73.
65. Ramesh K.V.1 965,A History of South Canara,Karnataka University Dharwad p. 286.; E C. Viii TI No. 92.
66. Vasantha Madhava K.G. Op.cit. 157
67. ಗಣಪತಿ ರಾವ್ ಐಗಳ್. ಎಂ, ಪೂರ್ವೋಕ್ತ, ಪು.3
68. Chitnis, K.N, 1974, Keladi Polity, Karnatak a University Dharwar, p.131
69. E. C. Viii TI No. 92.
70. ARSIE 1939, Ap A No.1
71. Chitnis Op. cit. p 131
72. E. C. Viii TI 83,185, 63, 44., ಗಣಪತಿ ರಾವ್ ಐಗಳ್. ಎಂ., ಪೂರ್ವೋಕ್ತ, ಅ.ಸಂ.17
73. ARSIE, 1939, AP.A No. 1
74. ARIE 1969, AP. A No. 9
75. ಗಣಪತಿ ರಾವ್ ಐಗಳ್.ಎಂ, ಸ್ಥಳಪುರಾಣಗಳು ಮಂಜೇಶ್ವರ, ಅ.ಸಂ.8.
76. Saletore B.A., Op.cit, II p. 459.

77. Ramesh K.V., Op. cit p. 286
78. ಶೈಲಾ ಟಿ.ವರ್ಮ 2002, ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಜ್ಞಾನೋದಯ ಪ್ರಕಾಶನ ಬೆಂಗಳೂರು, ಪು.168
79. E. C. Viii Tl 83.
80. ARSIE, 1939, Ap A No. 1.
81. EC. Viii Tl 92; ARSIE 1941 Ap A No.16.
82. ARIE 1969 AP A No. 7
83. Chitnis, Op. cit, p, 97.
84. MAR 1933, No. 30, p.190, E. C. Vi. Kp.46, E. C. Vii Sk 210, Ibid, 1943 No. 44 Mac coins No. 54 p.135,
85. ಗಣಪತಿ ರಾವ್ ಐಗಳ್. ಎಂ, ಪೂರ್ವೋಕ್ತ, ಅ.ಸಂ.18
86. ಗಣಪತಿ ರಾವ್ ಐಗಳ್. ಎಂ., ಪೂರ್ವೋಕ್ತ, ಅ.ಸಂ.17
87. ಕೆ.ಜಿ. ವಸಂತಮಾಧವರು ಪಿ. ಶ್ರೀನಿವಾಸ ಭಟ್ಟರಿಂದ ಸಂಗ್ರಹಿಸಿದ್ದ ಕ್ರಿ.ಶ.1730ರ ತಾಳೆ ಓಲೆ ದಾಖಲೆ
88. Chitnis Op.cit, p. 97
89. E. C. Vii Sk 210 p. 294
90. ಗಣಪತಿ ರಾವ್ ಐಗಳ್. ಎಂ, ಪೂರ್ವೋಕ್ತ, ಅ.ಸಂ 18,19,20,22,6
91. E. C. Viii, Tl No. 83, pp 522
92. E. C. Viii Tl 92; ARSIE 1939 Ap. A No.1; MAR 1934 No. 9; Ibid, 1933, No. 30; Ibid, 1943 No.44.
93. MAR, 1933 No. 30
94. E C. Viii Tl 77, p. 514
95. MAR 1928, No,112; Ibid, 1923 No.71; EC VII TLP.47,92,53,185
96. EC. VIII Tl 91, 59, 67, 95
97. K.N.Chitnis, Op.Cit, p.98
98. EC. Viii Tl 78 ; MAR. 1928 No. 112, p.43
99. EC. Viii, Tl No. 185, Ibid, Tl Nos. 91, 95
100. EC. Viii, Tl 83, 137
101. ARSIE 1939 AP A No. 1
102. EC. Viii, Tl No. 83, 68, 69, 42, 89, 94
103. EC. Viii, Tl 28
104. ಗಣಪತಿ ರಾವ್ ಐಗಳ್. ಎಂ, ಪೂರ್ವೋಕ್ತ, ಅ.ಸಂ. 7
105 EC VIII, Tl Nos. 72, 46, MAR 1916, p 68; ಗಣಪತಿ ರಾವ್ ಐಗಳ್. ಎಂ, ಪೂರ್ವೋಕ್ತ, ಅ.ಸಂ.4
106. Gururaj Bhat, Op.Cit,.216; B.A.Saletore, Op.Cit, p.456-465
107. SII Vii No. 340
108. ARIE 1939 No. Ap 1; MAR 1923, No. 99; Ibid, 1934 No.9, Ibid, 1933, No. 30.
109. Sturrock, South Canara district Manual I p 97; Kanara (GBP) II, Op.Cit, p 157
110. MAR 1993, No.28.
111. Kanara (GBP) II, Op.Cit, pp 137, 138, 157
112. Rice, Mysore and Coorg from inscriptions p.187-88; Chitnis Op.cit, pp 133-135
113 Rice, Mysore and Coorg from inscriptions, II p. 457.
114. Kanara II (GBP), Op. Cit, p 157. ; Vasantha Madhava K.G. Op.cit. p.136
115. ಸಬಾಸ್ಟಿಯನ್ ಜೋಸೆಫ್(ಸಂ) 2018, ಕರ್ನಾಟಕ ಚರಿತ್ರೆ–ಚರಿತ್ರೆ ಮಾಲೆ 6, ಪ್ರಸಾರಾಂಗ ಕ.ವಿ.ವಿ.ಹಂಪಿ, ಪು.242
116. ARSIE 1939 Ap A No.1
117. Ibid, 1941 Ap A No.16; E.C. Viii Tl No. 95, p. 541
118. E.C,VIII,Tl.No.91., P.533.
119. ಕೆಳದಿ ವೆಂಕಟೇಷ್ ಜೋಯಿಸ್, 2015, ಲೇ. ಇತಿಹಾಸ ದರ್ಶನ ಸಂ.30, ಮೊಗರನಾಡು ನರಿಕೊಂಬು ಶ್ರೀ ಲಕ್ಷ್ಮೀನರಸಿಂಹ ದೇವಾಲಯದ ಅಪ್ರಕಟಿತ ಮೂರು ನಿರೂಪಗಳು, ಪು.172
120. Buchanan, Op. cit II p 305
121. ಗಣಪತಿ ರಾವ್ ಐಗಳ್. ಎಂ, ಪೂರ್ವೋಕ್ತ, ಅ.ಸಂ. 14
122. ಕೆಜಿವ, ಕಕರಾಇ, ಪೂರ್ವೋಕ್ತ, ಪು.132, 133
123. MAR 1943 No. 40; Ibid 1928, No. 58; EC. Viii Tl No. 68.
124. E.C.VIII.Tl.No.91.P.534. SII Vii Nos. 229, 248, 263, 273; Buchanan, Op. cit II P 304.

125. EC. Viii Tl No. 96; MAR 1943 p.125-6; Ibid, 1928, p.61
126. MAR 1943, No. 37. P.117.
127. E.C. Viii Tl 92.
128. ವಿವೇಕ ರೈ ಬಿ.ಎ., 1985, ತುಳು ಜಾನಪದ ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು.216
129. Saletore, B.A. Ancient Karnataka,Op.Cit, pp 524-26.
130. ವಿವೇಕ ರೈ ಬಿ.ಎ, ಪೂರ್ವೋಕ್ತ, ಪು.216
131. EC. Viii Tl 92.
132. Ibid Nos. 53, 185.
133. MAR 1943 No. 31 p 108, EC Viii, Ti 185; Saletore B. A. Ancient Karnataka, p.469.
134. ಗಣಪತಿ ರಾವ್ ಐಗಳ್.ಎಂ, ಪೂರ್ವೋಕ್ತ. ಅ.ಸಂ.18, 20
135. ವಿವೇಕ ರೈ ಬಿ.ಎ, ಪೂರ್ವೋಕ್ತ, ಪು.218
136. ARSIE, 1929 Ap. A No. 3.
137. ARSIE of 1939 Ap A No. 1
138. ವಸಂತ ಮಾಧವ ಕೆ.ಜಿ, ಕಕರಾಇ, ಪೂರ್ವೋಕ್ತ, ಪು. 166.
139. ಗಣಪತಿ ರಾವ್ ಐಗಳ್.ಎಂ, ಪೂರ್ವೋಕ್ತ. ಪು.334, ಅ.ಸಂ.17
140. ARSIE, 1939, Ap A No. 1.
141. E.C. V iii Tl, No. 47.
142. MAR 1933, No. 30, p. 195.
143. SII VII, No. 340; Vasantha Madhava K.G. Op.cit., p.167
144. SILB, A 1743/4, pp 79-80; MAR 1916, p 66.
145. MAR 1916, p 66; Shastry. A.K.2001, The Records of The Sringeri Matha relating to Keladi, Keladi Museum. p.24
146. MAR 1916, p 66
147. ಜೋಯಿಸ ಗುಂಡಾ ಕೆಳದಿ, 1977, ಗದ್ಯಾನುವಾದ–ಲಿಂಗಣ್ಣ ಕವಿಯ ಕೆಳದಿ ನೃಪ ವಿಜಯ, ಕಸಾಪ ಬೆಂಗಳೂರು, ಪು.139, 140
148. MAR 1933 No.30, p.195 .
149. Silva S S, History of Christianity in II, p. 14; PIHRC,1929, pp 36-40.
150. EC. VI Kp 60, 46; Ibid, VI, Sk 210.; ಗಣಪತಿ ರಾವ್ ಐಗಳ್, ಪೂರ್ವೋಕ್ತ, ಅ.ಸಂ.3,7,31,30
151. EC. VIII Tl No. 83, 68, 69, 42, 46, 89, 72; Ibid, VII Sh 28.
152. ಗಣಪತಿ ರಾವ್ ಐಗಳ್. ಎಂ, ಪೂರ್ವೋಕ್ತ. ಪು.284
153. EC. VIII Tl Nos. 83, 47.
154. Batavia Dag register Quoted in JBHS II(1929)No.1.p.246; Ibid 1930 No.1, p.90-91,97; Foster EFI 1661-64, p.349
155. ಗಣಪತಿ ರಾವ್ ಐಗಳ್ ಎಂ, ಸ್ಥಳ ಪುರಾಣಗಳು ಮಂಜೇಶ್ವರ, ಅ.ಸಂ.7,11,13, ಕ್ರಿ.ಶ.1739ರ ಭಾಷಾಪತ್ರ; PIHRC Xii 1929, p.36-40.
156. ವಸಂತ ಮಾಧವ ಕೆ.ಜಿ, ಕಕರಾಇ, ಪೂರ್ವೋಕ್ತ, ಪು.134.
157. ವಸಂತ ಮಾಧವ ಕೆ.ಜಿ, ಕಕರಾಇ, ಪೂರ್ವೋಕ್ತ, ಪು.134.
158. Danvers, 1894, The Portuguese in India Vol.II, p.423, London
159. Kanara II(GBP) p.157, ವಸಂತ ಮಾಧವ ಕೆ.ಜಿ, ಕಕರಾಇ, ಪೂರ್ವೋಕ್ತ, ಪು.169
160. ಮುಂದರ್ಕೆ ನಿತ್ಯಾನಂದ ಪೈ, 2017 ಕಾಯಿನ್ಸ್ ಆಫ್ ತುಳುನಾಡು, ದಕ್ಷಿಣ ಭಾರತ ನಾಣ್ಯ ಸಂಘದ 27ನೇ ವಾರ್ಷಿಕ ಅಧಿವೇಶನದ ಅಧ್ಯಕ್ಷರ ವರದಿ.
161. SII, VII No.189, 223
162. ಉದಾಹರಣೆಗೆ "ಬಾರಕೂರ ಪರಿವರ್ತನಕ್ಕೆ ಸಲ್ಲುವ ಕಾಟಿ ಗದ್ಯಾಣ" "ಬಾರಕೂರ ಪರಿವರ್ತನಕ್ಕೆ ಸಲುವ ದೊಡ್ಡ ವರಹ ಗದ್ಯಾಣ" "ಅರ್ಧಬಾರಕೂರ ಪರಿವರ್ತನಕ್ಕೆ ಸಲುವ ದೊಡ್ಡ ವರಹ ಗದ್ಯಾಣ" ಮುಂತಾದ ಪ್ರಯೋಗಗಳಿಂದ ಊಹಿಸಬಹುದಾಗಿದೆ. SII.VII.No.336,345; Ibid Vol.IX,Pt.II, no.415,452
163. Vasantha Madhava K.G. Op.cit, p.180
164. Shastry B.S, Studies in Indo Portuguese History,Op.Cit,,P.204,207; Vasantha Madhava K.G, Op.Cit, P.181
165. SII IX, No.659
166. ಮುಂದರ್ಕೆ ನಿತ್ಯಾನಂದ ಪೈ ಸಂಗ್ರಹದಲ್ಲಿರುವ ನಾಣ್ಯಗಳು ಸ್ವತಃ ವೀಕ್ಷಣೆ ಮಾಡಲಾಗಿದೆ.
167 ಕೆಳದಿ ವೆಂಕಟೇಶ್ ಜೋಯಿಸ್, 1979, ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಕಸಾಪ, ಬೆಂಗಳೂರು, ಪು.186
168. ತಾಮ್ರದ ನಾಣ್ಯಗಳು ಲಭ್ಯವಿಲ್ಲ ಎಂಬುದಾಗಿ ಕೆಳದಿ ವೆಂಕಟೇಶ ಜೋಯಿಸರ ಹೇಳಿಕೆಯಿದ್ದರೂ ಆ ನಾಣ್ಯಗಳನ್ನು

ನೋಡಿದ್ದಾಗಿ ಏ.ವಿ.ನರಸಿಂಹ ಮೂರ್ತಿಯವರ ಹೇಳಿಕೆ ಇದೆ. ನಾಣ್ಯದ ಮುಮ್ಮುಖದಲ್ಲಿ ನಂದಿ, ಹಿಮ್ಮುಖದಲ್ಲಿ ಶ್ರೀ ಶಿವ ಎಂಬ ನಾಗರೀ ಬರಹವಿದೆ ಎಂಬ ಅಭಿಪ್ರಾಯವನ್ನು ನೀಡಿದ್ದಾರೆ. A.V. Narasimha Murty. 1997, Coins and currency system in Karnataka,p.310, Directorate of Archaeology and Museums in Karnataka,Mysore.

169. ಕೆಳದಿ ವೆಂಕಟೇಶ್ ಜೋಯಿಸ್, ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಕಸಾಪ, ಬೆಂಗಳೂರು, ಪು.186
170. ಕೆಳದಿ ವೆಂಕಟೇಶ್ ಜೋಯಿಸ್, ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪೂರ್ವೋಕ್ತ, ಪು.186; A.V. Narasimha Murty. OP.Cit, p.232, 233,
171. MAR 1930, p.78
172. Vasantha Madhava K.G, Op.Cit, P.182
173. K.N.Chitnis, Op.Cit, P.199.
174. Kittle K. Canaris English Dictionary, p.775.
175. Peter mundy; The travels in Europe and Asia(ed):R.C.Temple, London, A.V. Narasimha Murty. Op.Cit, p 308,
176. Vasantha Madhava K.G, Op.Cit, p.183.
177. SII IX, pt II,no 683; SII IX,pt II,29; EC,VIII Ti no.63; EC,VIII,Ti 92.; EC VIII.Ti 63; EC VI No kp 60; Chitnis Op.cit, p.20;
178. Buchanan, Op.Cit, p 225

ಅಧ್ಯಾಯ – 5

# ಆರ್ಥಿಕ ಸಂಘರ್ಷ

ಕೆಳದಿ ಆಳ್ವಿಕೆಯ ಕಾಲದ ತುಳುನಾಡು ವ್ಯಾಪಾರದ ಪ್ರಮುಖ ಕೇಂದ್ರವಾಗಿ ಗುರುತಿಸಲ್ಪಟ್ಟಿತ್ತು. ಸಮುದ್ರ ಮಾರ್ಗದ ನಂಟಿನಿಂದಾಗಿ ತುಳುನಾಡಿನ ಅನೇಕ ನೈಸರ್ಗಿಕ ಬಂದರುಗಳು ವ್ಯಾಪಾರದ ಪ್ರಮುಖ ಕೇಂದ್ರಗಳಾಗಿದ್ದವು. ಕೆಳದಿ ಅರಸರು, ಬಂಗ ರಾಜ, ಪೋರ್ಚುಗೀಸರು ಮತ್ತು ಕೆಳದಿಯ ಅರಸರ ಮಧ್ಯದ ವ್ಯಾಪಾರ, ವಾಣಿಜ್ಯ, ಆರ್ಥಿಕ ರಾಜಕೀಯ ಸಂಘರ್ಷ ಹಾಗೂ ಒಪ್ಪಂದಗಳು ಅಧ್ಯಯನ ಯೋಗ್ಯವಾಗಿದೆ. ಈ ಎಲ್ಲಾ ವಿಚಾರಗಳಿಗೆ ಸಾಗರೋತ್ತರ ವ್ಯಾಪಾರ, ಕರಿಮೆಣಸು, ಅಕ್ಕಿ ಪೂರೈಕೆಗೆ ಸ್ಪರ್ಧೆ, ಕಾರ್ಟೇಸ್ ನೀಡಿಕೆಯ ವಿಚಾರದಲ್ಲಿ ಭಿನ್ನಾಭಿಪ್ರಾಯ, ತೆರಿಗೆ ಸಂಗ್ರಹ ಮುಂತಾದ ಆರ್ಥಿಕ ವಿಚಾರಗಳು ಪ್ರಮುಖ ಕಾರಣವಾಗಿತ್ತು. ಕೆಳದಿಯರಸರ ಕಾಲದಲ್ಲಿ ಕರಿಮೆಣಸಿನ ಪೂರೈಕೆ ಮತ್ತು ಅಕ್ಕಿಯ ಪೂರೈಕೆಯ ವಿಚಾರದಲ್ಲಿ ಉಳಿದ ಎಲ್ಲಾ ಕೃಷಿ ಉತ್ಪನ್ನಗಳಿಗಿಂತಲೂ ಹೆಚ್ಚು ಸಂಘರ್ಷಗಳಾಗಿತ್ತು. ಕೆಳದಿ ರಾಜ್ಯದಿಂದ ನಿರ್ದಿಷ್ಟ ಪ್ರಮಾಣದ ಕರಿಮೆಣಸು ಮತ್ತು ಅಕ್ಕಿಯನ್ನು ಪೋರ್ಚುಗೀಸರು ಖರೀದಿಸಲೇಬೇಕು ಎಂಬುದು ಕೆಳದಿಯರಸರ ನಿಲುವಾದರೆ, ಪೋರ್ಚುಗೀಸರ ಸಾಮರ್ಥ್ಯಕ್ಕೆ ಅನುಗುಣವಾಗಿ ಖರೀದಿಯ ಪ್ರಮಾಣ ವ್ಯತ್ಯಾಸಗೊಳ್ಳುತ್ತಿತ್ತು. ಹಾಗೆಯೇ ಖರೀದಿಯ ಸಂದರ್ಭದಲ್ಲಿ ಬೆಲೆ ನಿಗದಿಯೂ ಇವರ ನಡುವೆ ಭಿನ್ನಾಭಿಪ್ರಾಯಕ್ಕೆ ಕಾರಣವಾಗಿತ್ತು. ಕೆಳದಿ ಸದಾಶಿವನಾಯಕ ತುಳುನಾಡಿನ ಬಹುಭಾಗದ ಮೇಲೆ ತನ್ನ ಹಿಡಿತವನ್ನು ಸಾಧಿಸಿದ್ದರೂ ಅವನ ಮತ್ತು ಪೋರ್ಚುಗೀಸ್ ಸಂಬಂಧಗಳ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. ತುಳುನಾಡಿನಲ್ಲಿ ನಿಜವಾದ ಅರ್ಥದಲ್ಲಿ ಆರ್ಥಿಕ ರಾಜಕಾರಣ ಪ್ರಾರಂಭವಾದದ್ದು ಹಿರಿಯ ವೆಂಕಟಪ್ಪನಾಯಕನ ಕಾಲದಲ್ಲಿಯೇ.

ತುಳುನಾಡಿನಲ್ಲಿ ಈ ಕಾಲಘಟ್ಟದಲ್ಲಿ ನಡೆದ ಆರ್ಥಿಕ ರಾಜಕಾರಣವನ್ನು ಈ ಕೆಳಗಿನ ಹಿನ್ನೆಲೆಗಳಲ್ಲಿ ನೋಡಬಹುದು. 1. ವ್ಯಾಪಾರೀ ಏಕಸ್ವಾಮ್ಯದ ಸಂಘರ್ಷ 2. ಅಕ್ಕಿಯ ಪೂರೈಕೆಯ ಸಂಘರ್ಷ 3.ಕರಿಮೆಣಸು ದರ ಸಮರ 4. ಕಾರ್ಟೇಸ್ ಅಥವಾ ಜಲಯಾನಾಧಿಕಾರ 5. ಕೋಟೆ ನಿರ್ಮಾಣ ಮತ್ತು ನಿಯಂತ್ರಣದ ಸಂಘರ್ಷ

## 5.1 ವ್ಯಾಪಾರಿ ಏಕಸ್ವಾಮ್ಯದ ಸಂಘರ್ಷ

ಕರಾವಳಿ ತೀರದಲ್ಲಿ ಕೆಳದಿಯರಸರ ಮತ್ತು ಪೋರ್ಚುಗೀಸರ ಸಂಘರ್ಷಕ್ಕೆ ಪ್ರಮುಖ ಹಿನ್ನೆಲೆಯೆಂದರೆ

ಅರಬರ ವ್ಯಾಪಾರ ವ್ಯವಹಾರಗಳು. ಪೋರ್ಚುಗೀಸರು ಭಾರತಕ್ಕೆ ಬರುವ ಮೊದಲೇ ಪಶ್ಚಿಮ ಕರಾವಳಿಯಲ್ಲಿನ ವ್ಯಾಪಾರ ವ್ಯವಹಾರಗಳಲ್ಲಿ ಅರಬ್ಬರು ಮುಂಚೂಣಿಯಲ್ಲಿದ್ದರು. ಹಾಗಾಗಿ ಅರಬ್ಬರನ್ನು ಕರಾವಳಿಯ ವ್ಯಾಪಾರ ಪ್ರಕ್ರಿಯೆಯಿಂದ ಹೊರಗಿಟ್ಟು, ವ್ಯಾಪಾರದ ಏಕಸ್ವಾಮ್ಯತೆ ಪಡೆಯಲು, ಪೋರ್ಚುಗೀಸರು ಪ್ರಯತ್ನಿಸುತ್ತಿದ್ದರು. ಕ್ರಿ.ಶ.16ನೇ ಶತಮಾನದ ಉದ್ದಕ್ಕೂ ಇವರ ನಡುವೆ ತೀವ್ರ ಸಂಘರ್ಷ ನಡೆದಿತ್ತು. ಕ್ರಿ.ಶ.1677ರಲ್ಲಿ ಚೆನ್ನಮ್ಮಾಜಿ ಮತ್ತು ಪೋರ್ಚುಗೀಸರಿಗೆ ನಡೆದ ಘರ್ಷಣೆಗೆ ಕಾರಣ ಚೆನ್ನಮ್ಮಾಜಿಯು ಅರಬರಿಗೆ ಕುಂದಾಪುರ, ಹೊನ್ನಾವರ ಮತ್ತು ಮಂಗಳೂರುಗಳಿಂದ ಅಕ್ಕಿ ಸಾಗಿಸಲು ಹಾಗೂ ಅ ಬಂದರುಗಳಲ್ಲಿ ವ್ಯಾಪಾರ ಕೇಂದ್ರಗಳನ್ನು ಸ್ಥಾಪಿಸಲು ಅನುಮತಿ ಕೊಟ್ಟಳು ಎಂಬುದಾಗಿತ್ತು. ತಮಗೆ ಅಕ್ಕಿ ನೀಡದೆ ಅರಬರಿಗೆ ನೀಡಿದ ಸ್ಥಳೀಯರ ವಿರುದ್ಧ ಪೋರ್ಚುಗೀಸರು ಎಷ್ಟು ಸಿಟ್ಟುಗೊಂಡಿದ್ದರು ಎಂದರೆ ಅವರು ತಮಗೆ ಅಕ್ಕಿ ಪೂರೈಕೆ ಮಾಡದೇ ಹೋದರೆ ಕನ್ನಡ ಕರಾವಳಿಯ ರೇವುಗಳನ್ನೂ ಹಾಗೂ ಅಲ್ಲಿರುವ ಹಡಗುಗಳನ್ನು ಸುಟ್ಟುಬಿಡಬೇಕೆಂದು ನಿರ್ಧರಿಸಿದ್ದರು.[1]

ಕ್ರಿ.ಶ. 1698ನೇ ಆಗಸ್ಟ್ ತಿಂಗಳಲ್ಲಿ ಮಂಗಳೂರಿಗೆ ಅರಬರ ಹಡಗುಗಳು ಅಕ್ಕಿ ಸಾಗಿಸಲು ಬಂದಿದ್ದವು. ಅಲ್ಲದೆ, ಅರಬರು ಅಲ್ಲಿ ಕೋಟೆ ಕೊತ್ತಲಗಳನ್ನು ಕಟ್ಟುವರೋ ಎಂಬ ಸಂಶಯವು ಪೋರ್ಚುಗೀಸರಿಗೆ ಇತ್ತು. ಹಾಗಾಗಿ ಬಸವಪ್ಪ ನಾಯಕನು ಅರಬರಿಗೆ ಕೊಡುವ ಉತ್ತೇಜನದ ಬಗೆಗೆ ಆಕ್ಷೇಪಣೆ ಮಾಡಿ ಅವನಿಗೆ ಪತ್ರ ಬರೆದರು. ಅದೇ ಸಮಯದಲ್ಲಿ ತಮ್ಮ ಎರಡು ಯುದ್ಧ ನೌಕೆಗಳನ್ನು ಮಂಗಳೂರಿನಲ್ಲಿ ಇರಬಹುದಾದ ಅರಬರ ಹಡಗುಗಳನ್ನು ಪತ್ತೆ ಹಚ್ಚಿ ನಾಶ ಮಾಡಲು ಹಾಗೂ ಕನ್ನಡ ಕರಾವಳಿಯಿಂದ ಅಕ್ಕಿ ಸಂಗ್ರಹಿಸಲು ಕಳುಹಿಸಿದ್ದರು.[2] ಒಂದು ವೇಳೆ ಬಸವಪ್ಪನು ಅರಬರೊಡನೆ ವ್ಯಾಪಾರ ಮಾಡದಿದ್ದರೆ ಅವನ ವೈರಿಗಳ ವಿರುದ್ಧ ಸಹಾಯ ನೀಡುವ ಭರವಸೆಯನ್ನು ವೈಸ್‌ರಾಯನು ಕೊಟ್ಟಿದ್ದನು. ಆದರೆ ಅರಬರಿಗೆ ಉತ್ತೇಜನ ಕೊಡಬಾರದೆಂಬ ಮಾತಿಗೆ ಬಸವಪ್ಪನು ಕಿವಿಗೊಡಲಿಲ್ಲ. ಗೋವೆಯ ಅಧಿಕಾರಿಗಳು ಕನ್ನಡ ಕರಾವಳಿಗೆ ಯುದ್ಧ ನೌಕೆಗಳನ್ನು ಕಳುಹಿಸುವ ಬೆದರಿಕೆ ಒಡ್ಡಿದ್ದರೂ, ಕೇಳದಿದ್ದುದರಿಂದ ಕ್ರಿ.ಶ. 1702ರ ಜನವರಿಯಲ್ಲಿ ಪೋರ್ಚುಗೀಸರು ಯುದ್ಧ ಹಡಗೊಂದನ್ನು ಕನ್ನಡ ರೇವುಗಳಿಗೆ ಕಳುಹಿಸಿದರು. ಅದರ ಮುಖ್ಯ ಉದ್ದೇಶ ಅರಬರು ಅಲ್ಲಿ ವ್ಯಾಪಾರಕೇಂದ್ರಗಳನ್ನು ಸ್ಥಾಪಿಸದಂತೆ ಮಾಡುವುದಾಗಿತ್ತು. ಅರಬರು ಅವಲಂಬಿಸಿದ್ದ ಕರಾವಳಿಯ ಅಕ್ಕಿಯನ್ನೆಲ್ಲ ತಾವೇ ಖರೀದಿಸಿದರೆ, ಅರಬರು ವ್ಯಾಪಾರದಲ್ಲಿ ಹಿನ್ನಡೆ ಹೊಂದುತ್ತಾರೆ ಎನ್ನುವುದು ಪೋರ್ಚುಗೀಸರ ಅಭಿಮತವಾಗಿತ್ತು.[3]

ಮುಂದೆ ಅಧಿಕಾರಪತ್ರ ಕೊಡಲ್ಪಟ್ಟಿದ್ದ ಬಸವಪ್ಪನ ಹಡಗೊಂದನ್ನು ಪೋರ್ಚುಗೀಸರು ವಶಪಡಿಸಿಕೊಂಡರು. ಇತರ ಕಾರಣಗಳೊಂದಿಗೆ ಆ ಹಡಗು ಮಸ್ಕತಿಗೆ ಹೋಗುತ್ತಿತ್ತೆಂದೂ, ಅದರಲ್ಲಿ ಅರಬರು ಇದ್ದರೆಂದೂ ಅವರ ಆರೋಪವಾಗಿತ್ತು. ಆ ಹಡಗನ್ನು ಗೋವೆಗೆ ತಂದು ಅದರಲ್ಲಿದ್ದ ಅಕ್ಕಿ ಮತ್ತು ಇನ್ನಿತರ ವಸ್ತುಗಳನ್ನು ಮಾರಿ, ಸಿಕ್ಕಿದ ಹಣವನ್ನು ಸ್ವಾಧೀನಪಡಿಸಿಕೊಂಡರು. ಆದರೆ ಅದರಲ್ಲಿದ್ದ

ಅರಬರು ಅವರ ಕೈಗೆ ಸಿಕ್ಕದೆ ಪಲಾಯನ ಮಾಡಿದರು. ಇದಕ್ಕೆ ಪ್ರತಿಯಾಗಿ ಬಸವಪ್ಪನು ಹೊನ್ನಾವರದ ಪಾದ್ರಿಯನ್ನು ಸೆರೆಯಲ್ಲಿರಿಸಿದನು. ಮಂಗಳೂರಿನ ಪಾದ್ರಿ ಮತ್ತು ಪೋರ್ಚುಗೀಸ್ ವರ್ತಕ ಕಾರ್ಯಭಾರಿಗಳ ಚಲನವಲನಗಳನ್ನು ಕೂಡ ನಿರ್ಬಂಧಿಸಿದನು. ಇದಕ್ಕೆ ಪ್ರತೀಕಾರವಾಗಿ ತಮ್ಮ ವ್ಯಾಪ್ತಿಯಲ್ಲಿದ್ದ ಬಿದನೂರು ರಾಜ್ಯದ ವ್ಯಾಪಾರಿಗಳನ್ನು ಪೋರ್ಚುಗೀಸರು ನಿರ್ಬಂಧಿಸಿದರು. ಪೋರ್ಚುಗೀಸರ ನಿರ್ಧಾರದ ಸುದ್ದಿ ಕೇಳಿ ಬಸವಪ್ಪನು ತಗ್ಗಬೇಕಾಯಿತು. ಜುಲೈ ತಿಂಗಳಲ್ಲಿ ಅಥವಾ ಅದಕ್ಕೆ ಮೊದಲು ಹೊನ್ನಾವರದ ಪಾದ್ರಿಯನ್ನು ಬಿಡುಗಡೆ ಮಾಡಿ ಮಂಗಳೂರಿನ ಪಾದ್ರಿ ಮತ್ತು ವರ್ತಕ ಕಾರ್ಯಭಾರಿಗಳ ಮೇಲೆ ಹಾಕಿದ್ದ ನಿರ್ಬಂಧಗಳನ್ನು ರದ್ದುಪಡಿಸಿದನು.

ಆರ್ಥಿಕ ರಾಜಕಾರಣದ ವಿಚಾರದಲ್ಲಿ ಸ್ಥಳೀಯ ಜನರೂ ಪ್ರಮುಖ ಪಾತ್ರ ವಹಿಸುತ್ತಿದ್ದರು. ಪೋರ್ಚುಗೀಸರ ವಿರೋಧವಿದ್ದರೂ ಲಾಭದ ಉದ್ದೇಶದಿಂದ ಕರಾವಳಿ ವ್ಯಾಪಾರಿಗಳು, ಅರಬರೊಂದಿಗೆ ವ್ಯವಹರಿಸುವುದನ್ನು ಮುಂದುವರಿಸಿದ್ದರು. ಹೀಗಾಗಿ ಪೋರ್ಚುಗೀಸರು ಬಂದು ಅಕ್ಕಿ ವಿಚಾರಿಸಿದಾಗ ಅವರಿಗೆ ಅಕ್ಕಿ ನೀಡುತ್ತಿರಲಿಲ್ಲ.[4] ಕ್ರಿ.ಶ.1704ರ ಜೂನ್ ಒಳಗೆ ಗೋವೆಯಲ್ಲಿ ಆಹಾರ ಧಾನ್ಯಗಳ ಅಭಾವ ಕಾಣಿಸತೊಡಗಿತು. ಇದರ ಪರಿಣಾಮವಾಗಿ, ಬಿದನೂರು ರಾಜ್ಯದಿಂದ ಆಹಾರ ಧಾನ್ಯಗಳನ್ನು ತೆಗೆದುಕೊಳ್ಳಬಾರದೆಂದೂ, ಬದಲಾಗಿ ಕೊಂಕಣ ದೇಶದಿಂದ ಖರೀದಿ ಮಾಡಬೇಕೆಂದೂ, ಪೋರ್ಚುಗೀಸರು ನಿಶ್ಚಯಿಸಿದರು.

ಕ್ರಿ.ಶ.1704ರ ಪತ್ರವೊಂದರ ಮಾಹಿತಿಯಂತೆ,[5] ಪೋರ್ಚುಗೀಸರಿಗೆ ಆಹಾರ ಧಾನ್ಯ ಪೂರೈಕೆ ಮಾಡಬಾರದೆಂದು ಅರಬರು ಬಸವಪ್ಪನನ್ನು ಕೇಳಿಕೊಂಡಿದ್ದರು. ಆಗ ಅರಬರ ನೌಕಾಬಲವು ಪ್ರಬಲವಾಗಿದ್ದುದರಿಂದ ಅವರ ಕರೆಗೆ ಓಗೊಡದಿದ್ದರೆ ತೊಂದರೆಯಾದೀತೆಂದು ಹೆದರಿ ಅವನು ಒಪ್ಪಿಕೊಂಡನು. ಇದಕ್ಕೆ ಪ್ರತೀಕಾರ ತೀರಿಸಲು ಪೋರ್ಚುಗೀಸರು ಅಡಿಕೆ ಸಾಗಿಸುತ್ತಿದ್ದ ಬಸವಪ್ಪನ ಕೆಲವು ನಾವೆಗಳನ್ನು ಕಿತ್ತುಕೊಂಡರು. ಅದಕ್ಕೆ ಪ್ರತಿಯಾಗಿ ಬಿದನೂರು ರಾಜ್ಯದಲ್ಲಿದ್ದ ಹದಿನಾರು ಇಲ್ಲವೇ ಹದಿನೆಂಟು ಪೋರ್ಚುಗೀಸ್ ಯೋಧರನ್ನೂ, ಅವರ ಇಬ್ಬರು ನಾಯಕರನ್ನೂ ಮತ್ತು ಕೆಲವು ನಾವಿಕರನ್ನೂ ಬಸವಪ್ಪನು ಸೆರೆಯಲ್ಲಿರಿಸಿದನು. ಅಲ್ಲದೆ ಪೋರ್ಚುಗೀಸ್ ವ್ಯಾಪಾರಿಗಳಿಗೆ ಸಲ್ಲಬೇಕಾದ ಹಣವನ್ನು ತಡೆಹಿಡಿದನು. ಸಮಯಕ್ಕೆ ಸರಿಯಾಗಿ ಅವನ ಬಂದರುಗಳಿಂದ ತಪ್ಪಿಸಿಕೊಂಡು ಹೋಗಲಾಗದೆ ಇದ್ದ ಕೆಲವು ಸಣ್ಣ ಪೋರ್ಚುಗೀಸ ನೌಕೆಗಳನ್ನು ನಿರ್ಬಂಧಿಸಿಟ್ಟನು. ಪೋರ್ಚುಗೀಸರು ಕೂಡಲೇ ನಾಲ್ಕು ಯುದ್ಧ ಹಡಗುಗಳನ್ನು ಕನ್ನಡ ಕರಾವಳಿಯ ಬಂದರುಗಳ ವ್ಯಾಪಾರಕ್ಕೆ ತೊಂದರೆ ಮಾಡಲು ಕಳುಹಿಸಿದರು. ತನ್ಮಧ್ಯೆ ಆರೇಬಿಯದಿಂದ ಬರುತ್ತಿದ್ದ ಅರಬರ ನೌಕಾದಳವನ್ನು ಸೂರತ್ತಿನ ಹತ್ತಿರ ಸೋಲಿಸಿದರು. ಇದರಿಂದ ಧೃತಿಗೆಟ್ಟ ಬಸವಪ್ಪನು ವರ್ಷಂಪ್ರತಿ ಪೋರ್ಚುಗೀಸರಿಗೆ 1500 ಚೀಲ ಅಕ್ಕಿಯ ಕಪ್ಪವನ್ನು ಕೊಡಲು ಒಪ್ಪಿದನು.[6]

ಕೆಳದಿಯರಸರು ತಮ್ಮ ಆಳ್ವಿಕೆಯ ಉದ್ದಕ್ಕೂ ಅರಬ್ಬರೊಂದಿಗೆ ಸ್ನೇಹದಿಂದಿದ್ದರು ಎಂದು ಹೇಳಲು

ಸಾಧ್ಯವಿಲ್ಲ. ಆರ್ಥಿಕ ಲಾಭದ ಉದ್ದೇಶದಿಂದ ಈ ಸಂಬಂಧಗಳು ಬದಲಾಗುತ್ತಿದ್ದವು. ಕ್ರಿ.ಶ.1707ರಲ್ಲಿ ಪೋರ್ಚುಗೀಸ್ ನೌಕಾಪಡೆಯು ಕನ್ನಡ ಕರಾವಳಿಯಿಂದ ಆಹಾರ ಧಾನ್ಯ ಸಂಗ್ರಹ ಮಾಡಲು ಹೋಯಿತು. ಆದರೆ ಅರಬರು ಕೂಡ 14 ಪ್ರಬಲ ಹಡಗುಗಳೊಂದಿಗೆ ಅಲ್ಲಿಗೆ ಬಂದಿದ್ದರು.[7] ಇದರಿಂದಾಗಿ ಪೋರ್ಚುಗೀಸರಿಗೆ ಅಲ್ಲಿ ವ್ಯಾಪಾರ ಮಾಡಲು ಕಷ್ಟವಾಯಿತು. ಅಲ್ಲದೆ ಹೊನ್ನಾವರ, ಕುಂದಾಪುರ ಮತ್ತು ಮಂಗಳೂರುಗಳನ್ನು ಅರಬರು ಸ್ವಾಧೀನಪಡಿಸಿಕೊಳ್ಳುವ ಯೋಚನೆಯಲ್ಲಿದ್ದರೆಂದು ಪೋರ್ಚುಗೀಸರು ಗ್ರಹಿಸಿದರು. ಹೊನ್ನಾವರದಲ್ಲಿ 2000 ಅರಬ ಸೈನಿಕರು ಇಳಿದು, ಆ ಸ್ಥಳವನ್ನು ಆಕ್ರಮಿಸತೊಡಗಿದರು. ಆದರೆ ಬಸವಪ್ಪನ ಯೋಧರು ಅವರನ್ನು ಸೋಲಿಸಿ ಓಡಿಸಿದರು. ಅರಬ್ ಸೈನಿಕರಲ್ಲಿ ಬಹು ಮಂದಿ ಸತ್ತರು ಹಾಗೂ ಕನ್ನಡಿಗರು ಅವರಿಂದ ಯುದ್ಧ ಸಲಕರಣೆಗಳನ್ನು ಕಿತ್ತುಕೊಂಡರು. ಹೊನ್ನಾವರದಿಂದ ಅರಬರು ಮಂಗಳೂರಿಗೆ ಹೋದರು. ಅಲ್ಲಿ ಪೋರ್ಚುಗೀಸರನ್ನು ಎದುರಿಸಬೇಕಾಯಿತು. ಅಲ್ಲಿ ಏನೂ ಮಾಡಲಾಗದೆ ಅರಬರು ಕುಂದಾಪುರಕ್ಕೆ ಹೋದರು. ಅಲ್ಲಿ ಕೂಡ ಪೋರ್ಚುಗೀಸರಿಂದ ಪೆಟ್ಟು ತಿಂದರು. ಅರಬರ ಮತ್ತು ಪೋರ್ಚುಗೀಸರ ನಡುವೆ ಆದ ಈ ನೌಕಾ ಯುದ್ಧಗಳು ಕ್ರಿ.ಶ.1708ರ ಆರಂಭದ ತಿಂಗಳುಗಳಲ್ಲಿ ಘಟಿಸಿದವು.[8] ಒಟ್ಟಿನಲ್ಲಿ ಕೆಳದಿಯರಸರು, ಪೋರ್ಚುಗೀಸ್ ಮತ್ತು ಅರಬ್ಬರ ಸಂಘರ್ಷವನ್ನು ತಮ್ಮ ಪರವಾಗಿ ಉಪಯೋಗಿಸಿಕೊಂಡರು. ಮೊದಲಿನಿಂದಲೂ ಈ ಸಂಘರ್ಷವಿತ್ತಾದರೂ ಇದು ತೀವ್ರ ಸ್ವರೂಪವನ್ನು ಪಡೆದದ್ದು ಬಸವಪ್ಪನ ಕಾಲದಲ್ಲಿ. ಈ ಹಿನ್ನೆಲೆಯಲ್ಲಿ ಆರ್ಥಿಕ ಸಂಘರ್ಷಗಳಲ್ಲಿ ಅರಬ್ಬರ ಪಾತ್ರವೂ ಮಹತ್ತರವಾದುದೆಂದು ತಿಳಿದುಬರುತ್ತದೆ. ವಿಜಯನಗರ ಕಾಲದಲ್ಲಿ ಅರಬ್ಬರು ಮತ್ತು ಪೋರ್ಚುಗೀಸರು ಪ್ರಮುಖ ವಿದೇಶೀ ವ್ಯಾಪಾರಿಗಳಾದರೆ ಕಾಲಾಂತರದಲ್ಲಿ ಪೋರ್ಚುಗೀಸರು ಅರಬ್ಬರನ್ನು ಹೊರದಬ್ಬುವುದರಲ್ಲಿ ತಕ್ಕಮಟ್ಟಿಗೆ ಯಶಸ್ವಿಯಾದರು.

### 5.2 ಅಕ್ಕಿಯ ಮೇಲಿನ ಏಕಸ್ವಾಮ್ಯದ ಸಂಘರ್ಷ

ಕೆಳದಿಯರಸರ ಮತ್ತು ಪೋರ್ಚುಗೀಸರ ನಡುವೆ ಭಿನ್ನಾಭಿಪ್ರಾಯಕ್ಕೆ ಕಾರಣವಾಗಿದ್ದ ಮತ್ತೊಂದು ಪ್ರಮುಖ ಅಂಶ ಅಕ್ಕಿ ವ್ಯಾಪಾರಕ್ಕೆ ಸಂಬಂಧಿಸಿದ್ದಾಗಿತ್ತು. ಗೋವಾ, ಕೊಚ್ಚಿನ್, ಕೊಲೊಂಬೋ, ಜಾಪ್ನಾ, ಮತ್ತು ಗಾಲೆ ಮುಂತಾದ ಪೋರ್ಚುಗೀಸ್ ವಸಾಹತುಗಳಿಗೆ ಅಗತ್ಯವಾದ ಅಕ್ಕಿಯ ಪೂರೈಕೆಯ ಕೇಂದ್ರವೂ ತುಳುನಾಡಾಗಿತ್ತು.[9] ಅಕ್ಕಿಯ ಬೆಲೆ ನಿರ್ಧಾರ ಮತ್ತು ಅದರ ಪೂರೈಕೆಯೂ ಈ ಆರ್ಥಿಕ ರಾಜಕಾರಣದ ಭಾಗವಾಗಿದೆ. ಪೋರ್ಚುಗೀಸರ ಕುತಂತ್ರದ ನೀತಿಗೆ ಹಿರಿಯ ವೆಂಕಟಪ್ಪ ನಾಯಕ ಅಕ್ಕಿ ಪೂರೈಕೆಯ ವಿಚಾರದಲ್ಲಿ ಸೂಕ್ತ ಉತ್ತರ ನೀಡಿದ್ದ. ಪೋರ್ಚುಗೀಸರು ತನ್ನ ಷರತ್ತುಗಳನ್ನು ಸ್ವೀಕರಿಸದಿದ್ದರೆ ಅವನು ಅಕ್ಕಿ ಪೂರೈಕೆ ಮಾಡುವುದನ್ನು ನಿರಂತರವಾಗಿ ತಡೆಹಿಡಿಯುತ್ತಿದ್ದ. ಅವನ ಆಳ್ವಿಕೆಯ ಕಾಲದಲ್ಲಿ ಪೋರ್ಚುಗೀಸರಿಗೆ ಮಂಗಳೂರು ಕೋಟೆಯಲ್ಲಿ ಅಕ್ಕಿಯ ಅಭಾವ ಗೋಚರಿಸಿತು. ಅವರ ಇತರ ಕೋಟೆಗಳಲ್ಲಿ

ಕೂಡ ಅಕ್ಕಿಯ ಕೊರತೆ ಕಂಡುಬರತೊಡಗಿತ್ತು. ಕ್ರಿ.ಶ. 1619ರ ನವಂಬರ್ 24ರಂದು ವೈಸರಾಯನಿಗೆ ಬರೆಯುತ್ತ ಮಂಗಳೂರು ಕೋಟೆಯ ಮುಖ್ಯಸ್ಥನಾದ ಗಸ್ಪಾರ್ ದೆ ಮೇಲ್ಲುವು ಈ ರೀತಿ ವರದಿ ಮಾಡಿದನು. "ವೆಂಕಟಪ್ಪನ ದಂಡನಾಯಕ ಬಸವಪ್ಪ ನಾಯಕನು ಆಹಾರ ಧಾನ್ಯಗಳ ಪೂರೈಕೆಯನ್ನು ತಡೆಹಿಡಿಯುವುದರಿಂದ ದಿವಸಕ್ಕೆ ಆರು ಮಂದಿಯಂತೆ ನಮ್ಮ ಜನ ಇಲ್ಲಿ ಸಾಯುತ್ತಿದ್ದಾರೆ. ನಾನು ಹಾಗೂ ನನ್ನ ಕೈಕೆಳಗಿನ ಅಧಿಕಾರಿಗಳು ಅಂಗಿ, ವಸ್ತ್ರಗಳಿಲ್ಲದೆ ಇದ್ದೇವೆ. ಇದ್ದವುಗಳನ್ನು ನಾವು ಮಾರಿದ್ದೇವೆ ಅಥವಾ ಅಡವು ಇಟ್ಟಿದ್ದೇವೆ. ಪ್ರತಿಯೊಂದು ವಸ್ತುವಿನ ಕ್ರಯ ಒಂದಕ್ಕೆ ಎರಡುವರೆ ಪಟ್ಟು ಏರಿ ಹೋಗಿದೆ. ಅಷ್ಟು ಕ್ರಯ ಕೊಟ್ಟರೂ ಕೊಳ್ಳಲು ವಸ್ತುಗಳಿಲ್ಲ. ಹಣವಾಗಲೀ, ಅಕ್ಕಿಯಾಗಲೀ ಇಲ್ಲದೆ ನೌಕಾದಳವು ಹತಾಶವಾಗಿದೆ. ಮಂಗಳೂರು ಬಿಟ್ಟು ಹೋಗಬೇಕೆಂದು ಹೆಚ್ಚಿನವರು ಒತ್ತಾಯ ಮಾಡುತ್ತಿದ್ದಾರೆ. ಸೈನಿಕರು ಓಡಿಹೋಗದಂತೆ ಅಧಿಕಾರಿಗಳು ಹಾಗೂ ಪಾದ್ರಿಗಳು ನೋಡಿಕೊಳ್ಳುತ್ತಿದ್ದಾರೆ ಆದರೂ ಬಹುಮಂದಿ ಸೈನಿಕರು ಓಡಿಹೋಗಿದ್ದಾರೆ. ಸುಮಾರು ಒಂದು ಸಾವಿರ ಪೋರ್ಚುಗೀಸ ಗೃಹಸ್ಥರಿಗೆ, ಸೈನಿಕರಿಗೆ, ಹೆಂಗಸರಿಗೆ ಹಾಗೂ ಇತರರಿಗೆ ಸಕಾಲದಲ್ಲಿ ಸಹಾಯ ಬರದಿದ್ದರೆ ದೊಡ್ಡ ಅನಾಹುತವಾದೀತು."[10] ಅಂದರೆ ವೆಂಕಟಪ್ಪನ ಕೆಳಗೆ ಪೋರ್ಚುಗೀಸರು ಯಾವ ರೀತಿ ಕುಗ್ಗಿ ಹೋಗಿರಬಹುದೆಂದು ಈ ದಾಖಲೆಗಳಿಂದ ತಿಳಿಯಬಹುದು. ಆರ್ಥಿಕವಾಗಿ ಪೋರ್ಚುಗೀಸರು ಬಹಳಷ್ಟು ತೊಂದರೆಗೊಳಗಾಗಿದ್ದರೆಂದೂ ಇದರಿಂದ ತಿಳಿಯಬಹುದು.

ಅಕ್ಕಿಯ ವಿಚಾರದಲ್ಲಿ ವೀರಭದ್ರ ನಾಯಕನ ಕಾಲದಲ್ಲಿಯೂ ಸಂಘರ್ಷ ಮುಂದುವರಿದಿತ್ತು. ವೀರಭದ್ರನಾಯಕನೊಂದಿಗೆ ವೈರತ್ವ ಪ್ರಾರಂಭವಾದ ಕೂಡಲೆ ಅವನು ಅಕ್ಕಿ ಪೂರೈಕೆ ಮಾಡುವುದನ್ನು ನಿಲ್ಲಿಸಬಹುದೆಂದು ಪೋರ್ಚುಗೀಸರು ನಿರೀಕ್ಷಿಸಿದ್ದರು. ಆದುದರಿಂದ 50 ಸಾವಿರ ಅಶ್ರಫಿಗಳಷ್ಟು (ಒಂದು ಅಶ್ರಫಿ ಮೂರು ಬ್ರಿಟಿಷ್ ಮೊಹರುಗಳಿಗೆ ಸಮ. ಪರ್ಷಿಯನ್ ಮೂಲದ ಮುಸ್ಲಿಂ ರಾಜವಂಶಗಳ ನಾಣ್ಯ.) ಬೆಲೆಯ ಅಕ್ಕಿಯನ್ನು ಕೊಂಕಣದಿಂದ ಕೊಳ್ಳಲು ನಿಶ್ಚಯಿಸಿದ್ದರು. ಆದರೆ ಪೋರ್ಚುಗೀಸರನ್ನು ಶತ್ರುಗಳೆಂದು ಸಾರಿದ ವೀರಭದ್ರನಾಯಕ, ಕ್ರಿ.ಶ.1630ರಲ್ಲಿ ಪೋರ್ಚುಗೀಸರು ನಿರೀಕ್ಷಿಸಿದಂತೆ ತನ್ನ ರಾಜ್ಯದಿಂದ ಅವರಿಗೆ ಅಕ್ಕಿ ಪೂರೈಸುವುದನ್ನೂ ನಿಲ್ಲಿಸಿದ.[11] ಅಂದರೆ, ಅಕ್ಕಿ ಈ ಕಾಲದಲ್ಲಿ ಪೋರ್ಚುಗೀಸರನ್ನು ಹದ್ದುಬಸ್ತಿನಲ್ಲಿಡಲು ಪ್ರಮುಖ ಸಾಧನವಾಗಿತ್ತು.

ಕ್ರಿ.ಶ.1633ರಲ್ಲಿ ಪೋರ್ಚುಗೀಸರು ಮತ್ತು ವೀರಭದ್ರನ ನಡುವೆ ನಡೆದ ಒಪ್ಪಂದದ ಪ್ರಕಾರ, ವೀರಭದ್ರನೂ ಅವನ ಉತ್ತರಾಧಿಕಾರಿಗಳೂ ಇಕ್ಕೇರಿ ರಾಜ್ಯದಿಂದ ಅಕ್ಕಿ ಮತ್ತು ಮರಗಳನ್ನು ವಾಡಿಕೆಯಂತೆ ಪೋರ್ಚುಗೀಸರಿಗೆ ಪೂರೈಕೆ ಮಾಡಬೇಕು. ಅವನು ಬಸರೂರಿನ ಠಾಣೆದಾರನಿಗೆ ಪೋರ್ಚುಗೀಸರ ಹಕ್ಕಿನ ಅಕ್ಕಿಯನ್ನು ತೆಗೆದುಕೊಳ್ಳಲು ಬಿಡುವಂತೆ ಆಜ್ಞೆ ಮಾಡಬೇಕು. ಬಸರೂರಿನ ವ್ಯಾಪಾರಿಗಳು ಪ್ರತಿವರ್ಷ ಪೋರ್ಚುಗೀಸರಿಗೆ ಕೊಡುತ್ತಿದ್ದ 500 ಚೀಲ ಅಕ್ಕಿಯ ಕಪ್ಪವನ್ನು ಮುಂದೆ ಕೊಡುವಂತೆ ವೀರಭದ್ರನು

ಸೂಚಿಸಬೇಕು ಎಂದು ನಿರ್ಣಯಿಸಲಾಯ್ತು. ಮುಂದೆ, ಕ್ರಿ.ಶ.1635ರಲ್ಲಿ ಪೋರ್ಚುಗೀಸರಿಗೆ ಬೇಕಾದ ಅಕ್ಕಿಯನ್ನು ವೀರಭದ್ರನಾಯಕ ಪೂರೈಸಿದ.[12] ಕ್ರಿ.ಶ. 1636ರಲ್ಲಿ ವೀರಭದ್ರನು ಪೋರ್ಚುಗೀಸರಲ್ಲಿ ಪುನ: ಕರಿಮೆಣಸಿಗೆ ಹೆಚ್ಚು ಕ್ರಯ ಕೇಳಿದನು. ಅಲ್ಲದೆ ಕುಂದಾಪುರದ ಪೋರ್ಚುಗೀಸ್ ಕೋಟೆಯನ್ನು ಖಾಲಿ ಮಾಡಬೇಕೆಂದೂ ಸೂಕ್ಷ್ಮವಾಗಿ ಸೂಚಿಸಿದನು. ಈ ಷರತ್ತುಗಳನ್ನು ಪೋರ್ಚುಗೀಸರು ಒಪ್ಪಿಕೊಳ್ಳುವಂತೆ ನಿರ್ಬಂಧಿಸಲು ಹಿಂದಿನ ವರ್ಷದಂತೆ ಅವರಿಗೆ ಅಕ್ಕಿ ಪೂರೈಕೆ ಮಾಡುವುದನ್ನು ನಿಲ್ಲಿಸಿದನು. ಪೋರ್ಚುಗೀಸರು ಅದಕ್ಕೆ ಬಗ್ಗದೆ ತಮಗೆ ಬೇಕಾದ ಅಕ್ಕಿಯನ್ನು ಮಂಜೇಶ್ವರ ಮತ್ತು ಕುಂಬಳಗಳಿಂದ ತೆಗೆದುಕೊಳ್ಳಲು ನಿಶ್ಚಯಿಸಿದರು. ಈ ಪ್ರದೇಶಗಳು ವೀರಭದ್ರನಿಗೆ ಸೇರಿದ್ದರೂ, ಅಲ್ಲಿನ ವ್ಯಾಪಾರಿಗಳು ಲಾಭದ ಉದ್ದೇಶದಿಂದ ಯಾರಿಗೂ ಅಕ್ಕಿ ಮಾರಲು ತಯಾರಿದ್ದರು.[13]

ಅಕ್ಕಿಗೆ ಈ ಕಾಲದಲ್ಲಿ ಎಷ್ಟು ಬೇಡಿಕೆ ಇತ್ತೆಂದರೆ, ಪೋರ್ಚುಗೀಸರಿಂದ ಸಾಕಷ್ಟು ಕಿರುಕುಳ ಅನುಭವಿಸಿದರೂ ಅರಬ್ಬರು ಮತ್ತೆ ಮತ್ತೆ ಕರಾವಳಿಗೆ ಆಗಮಿಸುತ್ತಿದ್ದರು. ಪೋರ್ಚುಗೀಸರ ವಿರೋಧವಿದ್ದರೂ ಕೆಳದಿಯರಸರು ಹಲವು ಬಾರಿ ಅರಬ್ಬರಿಗೆ ಅಕ್ಕಿ ಪೂರೈಕೆ ಮಾಡಿದ್ದರು. ಕ್ರಿ.ಶ.1677ರಲ್ಲಿ ಚೆನ್ನಮ್ಮಾಜಿ ಮತ್ತು ಪೋರ್ಚುಗೀಸರಿಗೆ ಘರ್ಷಣೆಯಾಯಿತು. ಅದಕ್ಕೆ ಕಾರಣ ಚೆನ್ನಮ್ಮಾಜಿಯು ಅರಬರಿಗೆ ಕುಂದಾಪುರ, ಹೊನ್ನಾವರ ಮತ್ತು ಮಂಗಳೂರುಗಳಿಂದ ಅಕ್ಕಿ ಸಾಗಿಸಲು ಹಾಗೂ ಅ ಬಂದರುಗಳಲ್ಲಿ ವ್ಯಾಪಾರಕೇಂದ್ರಗಳನ್ನು ಸ್ಥಾಪಿಸಲು ಅನುಮತಿ ಕೊಟ್ಟದ್ದು. ಪೋರ್ಚುಗೀಸರು ಕುಂದಾಪುರದಲ್ಲಿ ಅಕ್ಕಿ ಕೊಳ್ಳುವ ಪ್ರಯತ್ನ ಮಾಡಿದಾಗ ಕೋರ್ಜಿ ಒಂದಕ್ಕೆ 14 ಪ್ರತಾಪಗಳ ಬೆಲೆ ಹೇಳಲಾಯಿತು. ಅದೇ ರೀತಿಯ ಅಕ್ಕಿಯನ್ನು ಕೋರ್ಜಿಗೆ 8 ಪ್ರತಾಪಗಳಂತೆ ಅರಬರಿಗೆ ಅಲ್ಲಿಯ ಜನ ಮಾರಿದ್ದರೆಂದು ಗೊತ್ತಾದಾಗ ಪೋರ್ಚುಗೀಸರಿಗೆ ನಿರಾಶೆಯಾಯಿತು. ಹೆಚ್ಚು ಕ್ರಯ ಹೇಳಿ ತಾವು ಅಕ್ಕಿ ತೆಗೆದುಕೊಳ್ಳದಂತೆ ಮಾಡಿ ಅದನ್ನು ಪುನ: ಅಲ್ಲಿಗೆ ಬರಲಿದ್ದ ಅರಬರಿಗೋಸ್ಕರ ಶೇಖರಿಸಿಡುವ ಪ್ರಯತ್ನ ಸ್ಥಳೀಯರು ನಡೆಸಿದ್ದಾರೆಂದು ಪೋರ್ಚುಗೀಸರು ಊಹಿಸಿದರು. ಸಾಧ್ಯವಾದರೆ ಕನ್ನಡಿಗರನ್ನು ನ್ಯಾಯವಾದ ಬೆಲೆಗೆ ಅಕ್ಕಿ ಮಾರುವಂತೆ ಒಡಂಬಡಿಸಬೇಕೆಂದೂ, ಆ ಯತ್ನ ವಿಫಲವಾಗಿ ಕನ್ನಡಿಗರು ಅರಬರಿಗೆ ಅಕ್ಕಿ ಪೂರೈಕೆ ಮಾಡುತ್ತ ಹೋದರೆ ಕನ್ನಡ ಕರಾವಳಿಯ ರೇವುಗಳನ್ನೂ ಹಾಗೂ ಅಲ್ಲಿರುವ ಹಡಗುಗಳನ್ನೂ ಸುಟ್ಟುಬಿಡಬೇಕೆಂದೂ ಪೋರ್ಚುಗೀಸರು ನಿಶ್ಚಯಿಸಿದ್ದರು.[14] ಅಷ್ಟರಮಟ್ಟಿಗೆ ಅಕ್ಕಿ ಬೇಡಿಕೆಯ ಸರಕಾಗಿತ್ತು.

ಕೆಳದಿ ಬಸವಪ್ಪನ ಆಳ್ವಿಕೆಯಲ್ಲಿ ಅಕ್ಕಿ ಪೂರೈಕೆಯ ರಾಜಕಾರಣ ತೀವ್ರ ಸ್ವರೂಪವನ್ನು ಪಡೆಯಿತು. ಕ್ರಿ.ಶ.1712ರಲ್ಲಿ ಪೋರ್ಚುಗೀಸರು ಕುದುರೆಗಳನ್ನು ಸಾಗಿಸುತ್ತಿದ್ದ ಬಸವಪ್ಪನ ಹಡಗೊಂದನ್ನು ವಶಪಡಿಸಿಕೊಂಡರು. ಇನ್ನಿತರ ಕಾರಣಗಳೊಂದಿಗೆ, ಅವರು ಅಕ್ಕಿ ವ್ಯಾಪಾರಕ್ಕೆ ಹೋದಾಗ ಬಿದನೂರು ರಾಜ್ಯದವರು ಹೆಚ್ಚು ಕ್ರಯ ಹೇಳುತ್ತಿದ್ದರೆಂಬುದು ಪ್ರಮುಖ ಕಾರಣವಾಗಿತ್ತು. ಸಿಟ್ಟಿಗೆದ್ದ ಬಸವಪ್ಪನು ಪೋರ್ಚುಗೀಸರಿಗೆ ಅಕ್ಕಿ ಪೂರೈಕೆ ಮಾಡಕೂಡದೆಂದೂ, ಪೂರೈಕೆ ಮಾಡಿದವರಿಗೆ ಮರಣದಂಡನೆಯೆಂದೂ

ತನ್ನ ಪ್ರಜೆಗಳಿಗೆ ಸಾರಿದನು. ಇದಕ್ಕೆ ಪ್ರತೀಕಾರವಾಗಿ ಅವನ ರೇವುಗಳನ್ನು ಆಕ್ರಮಿಸಿ ಅಲ್ಲಿಯ ಹಡಗುಗಳನ್ನು ಸ್ವಾಧೀನ ಪಡಿಸಿಕೊಂಡು ಅವನ ಸಂಗ್ರಹವಿದ್ದ ಅಕ್ಕಿ ಬೇರೆಯವರಿಗೆ ಪೂರೈಕೆ ಆಗದಂತೆ ಮಾಡಲು ಪೋರ್ಚುಗೀಸರು ಹದಿಮೂರು ಯುದ್ಧ ಹಡಗುಗಳ ಪಡೆಯನ್ನು ಕಳುಹಿಸಿದರು.[15] ಜೋಸೆಫ್ ಪರೈರ ದೆ ಬ್ರೀತು ಎಂಬ ನೌಕಾಧಿಕಾರಿಯ ನೇತೃತ್ವದಲ್ಲಿ ಕನ್ನಡ ಕರಾವಳಿಯಲ್ಲಿ ಪೋರ್ಚುಗೀಸರು ವಿನಾಶಕಾರಿ ಆಕ್ರಮಣವನ್ನು ಮಾಡಿದರಲ್ಲದೆ ಅಕ್ಕಿಯ ವಿಚಾರದಲ್ಲಿ ತಮ್ಮ ತೀವ್ರ ಅಸಮಾಧಾನವನ್ನು ಹೊರಹಾಕಿದರು. ಮಂಗಳೂರಿನಿಂದ ಮಿರ್ಜಾನ್‌ವರೆಗಿನ ಬಂದರು ಪಟ್ಟಣಗಳನ್ನು ಹಾಳುಗೆಡವಿದರಲ್ಲದೆ, ನಾಲ್ಕು ಕೋಟೆಗಳು ನೆಲಸಮವಾದವು. ಹಡಗುಗಳು ಬೆಂಕಿಗಾಹುತಿಯಾಯ್ತು. ಅನೇಕ ಮನೆಗಳು ಧರಾಶಾಹಿಯಾದವು. ಸುಮಾರು 600 ಜನ ಕನ್ನಡ ಸೈನಿಕರು ಮತ್ತು ಪ್ರಜೆಗಳು ಪ್ರಾಣ ಕಳೆದುಕೊಂಡರೆ ಪೋರ್ಚುಗೀಸರ ಪೈಕಿ 12 ಜನ ಸತ್ತು 30 ಮಂದಿ ಗಾಯಗೊಂಡರು.[16] ಬೇರೆ ಬೇರೆ ಕಾರಣಗಳು ಈ ಸಂಘರ್ಷಕ್ಕಿದೆಯಾದರೂ ಪ್ರಮುಖ ಕಾರಣ ಅಕ್ಕಿಯ ಪೂರೈಕೆಯ ವಿಚಾರದ ರಾಜಕೀಯವೇ ಆಗಿತ್ತು.

ಕ್ರಿ.ಶ. 1713ರಲ್ಲಿ ಬಸವಪ್ಪನು ಪೋರ್ಚುಗೀಸ್ ವೈಸ್‌ರಾಯ್‌ಯಲ್ಲಿಗೆ ಕಡ್ಡಾಸೆ ದಾಮರಸ ಪ್ರಭುವನ್ನು ರಾಯಭಾರಿಯಾಗಿ ಗೋವೆಗೆ ಕಳುಹಿಸಿದ್ದ. ಕ್ರಿ.ಶ.1714ರ ಫೆಬ್ರುವರಿ 19ರಂದು ಕೆಳದಿ ಮತ್ತು ಪೋರ್ಚುಗೀಸರೊಳಗೆ ಒಪ್ಪಂದವಾಯಿತು.[17] ಪೋರ್ಚುಗೀಸರ ಬೇಡಿಕೆಗಳು ಇಂತಿದ್ದವು. ಅವರಿಗೆ ಸಲ್ಲತಕ್ಕ ಅಕ್ಕಿಯ ಕಪ್ಪವನ್ನು ವರ್ಷಕ್ಕೆ 1.500 ಚೀಲಗಳಿಂದ 1.900 ಚೀಲಗಳಿಗೇರಿಸಬೇಕು. ಬಿದನೂರು ರಾಜ್ಯದಿಂದ ಇತರರಿಗೆ ಅಕ್ಕಿ ಪೂರೈಕೆ ಮಾಡುವಾಗ ಅದನ್ನು ತೆಗೆದುಕೊಳ್ಳುವ ಮೊದಲ ಹಕ್ಕು ಪೋರ್ಚುಗೀಸರಿಗೆ ಇರಬೇಕು. ಅಕ್ಕಿ ಇಲ್ಲವೆಂದು ಅವರಿಗೆ ಎಂದೂ ಹೇಳಬಾರದು. ಅಕ್ಕಿ ಸಾಗಿಸುವ ಬಿದನೂರು ರಾಜ್ಯದ ಹಾಗೂ ಪೋರ್ಚುಗೀಸರ ಹಡಗುಗಳಿಗೆ ಗೋವೆ ಮತ್ತು ಕನ್ನಡ ಕರಾವಳಿಯ ಬಂದರುಗಳ ನಡುವೆ ನಿರಾತಂಕ ಜಲಯಾನದ ಹಕ್ಕಿರಬೇಕು. ಇದಕ್ಕೆ ಪ್ರತಿಯಾಗಿ ಬಸವಪ್ಪನ ಷರತ್ತುಗಳು ಈ ಕೆಳಗಿನಂತಿದ್ದವು. ಅಕ್ಕಿ ಸಾಗಿಸುವ ಬಿದನೂರು ರಾಜ್ಯದ ಹಡಗುಗಳು ಗೋವೆಗೆ ಹೋದಾಗ ಅವುಗಳನ್ನು ಅಡಚಣೆಗೊಳ ಪಡಿಸಬಾರದು. ಅವುಗಳಿಂದ ಕೊಂಡ ಅಕ್ಕಿಗೆ ಕ್ರಯ ಕೂಡಲೇ ಕೊಡಬೇಕು. ಒಟ್ಟಿನಲ್ಲಿ ಬಸವಪ್ಪನ ಕಾಲದಲ್ಲಿ ಆತ ಅರಬ್ಬರ ಸಹಕಾರದಿಂದ ಪೋರ್ಚುಗೀಸರನ್ನು ಕುಗ್ಗಿಸುವುದರಲ್ಲಿ ಸ್ವಲ್ಪ ಮಟ್ಟಿಗಾದರೂ ಯಶಸ್ವಿಯಾದ. ಅದಕ್ಕೆ ಅಕ್ಕಿಯ ಮೇಲಣ ಅವನ ನಿಯಂತ್ರಣವೇ ಪ್ರಮುಖ ಕಾರಣವಾಗಿತ್ತು. ಆದರೆ ತದನಂತರ ಪೋರ್ಚುಗೀಸರು ತಮ್ಮ ನೌಕಾ ಶಕ್ತಿಯಿಂದ ಮೇಲ್ಮೆಯನ್ನು ಸಾಧಿಸಿದರು.

ಕ್ರಿ.ಶ.1728ರಲ್ಲಿ ವೈಸ್‌ರಾಯನ ಪತ್ರವೊಂದು,[18] ಅಕ್ಕಿ ವ್ಯಾಪಾರ ಮತ್ತು ಪೂರೈಕೆಯ ಪ್ರಮಾಣದ ಕುರಿತಾಗಿ ಪ್ರಮುಖ ಮಾಹಿತಿ ನೀಡುತ್ತದೆ. "ತಾವು ಸೋಮಶೇಖರನಿಂದ ಪ್ರತಿವರ್ಷ ಜಾರಿಯಲ್ಲಿರುವ ಸಂತೆ ಕ್ರಯ ಹೆಚ್ಚು ಅಥವಾ ಕಡಿಮೆಯಿರಲಿ, ಕೋರ್ಜಿ ಒಂದರ 12 ಅಥವಾ 14 ಪ್ರತಾಪಗಳ ದರದಲ್ಲಿ 70000 ಚೀಲ ಅಕ್ಕಿ ಕೊಳ್ಳುವೆವು. ಹೆಚ್ಚು ಅಕ್ಕಿ ಬೇಕಾದರೆ ಜಾರಿಯಲ್ಲಿರುವ ಸಂತೆ ಕ್ರಯ ಕೊಡುವೆವು"

ಎಂಬುದಾಗಿ ಆ ಪತ್ರದಲ್ಲಿ ಹೇಳಲಾಗಿತ್ತು. ಈ ಪತ್ರದಿಂದ ಆ ಹಂತದಲ್ಲಿ ಪೋರ್ಚುಗೀಸರು ನಿರೀಕ್ಷಿಸುತ್ತಿದ್ದ ಅಕ್ಕಿಯ ಪ್ರಮಾಣ ಮತ್ತು ಬೆಲೆ ಏನೆಂದು ಸ್ಪಷ್ಟವಾಗುತ್ತದೆ. ಸ್ಥಳೀಯ ರಾಜರು ಮಾತ್ರವಲ್ಲದೆ ಕೆಳದಿಯರಸರೂ ಅಕ್ಕಿಯನ್ನು ಕಪ್ಪದ ರೂಪದಲ್ಲಿ ಪೋರ್ಚುಗೀಸರಿಗೆ ನೀಡುತ್ತಿದ್ದರು. ಕ್ರಿ.ಶ.1732ರಲ್ಲಿ ಸೋಮಶೇಖರ ನಾಯಕ ಮತ್ತು ಮಲಬಾರಿಗರ ಸಂಘರ್ಷದ ಸಂದರ್ಭದಲ್ಲಿ ಪೋರ್ಚುಗೀಸರು ಎರಡು ಯುದ್ಧ ನೌಕೆಗಳನ್ನು ಸಹಾಯಕ್ಕೆ ಕಳುಹಿಸಿದರೆ, ವರ್ಷಕ್ಕೆ 2500 ಚೀಲ ಅಕ್ಕಿಯ ಕಪ್ಪ ಕೊಡುವುದಾಗಿ ಸೋಮಶೇಖರನು ವೈಸ್ ರಾಯನಿಗೆ ಬರೆದನು.[19]

ತುಳುನಾಡಿನ ಬಂದರುಗಳಿಂದ ಅಕ್ಕಿಯ ಪೂರೈಕೆ ಪೋರ್ಚುಗೀಸರಿಗೆ ಮಾತ್ರವಲ್ಲದೆ ಬ್ರಿಟೀಷರಿಗೂ, ಡಚ್ಚರಿಗೂ ಅಗತ್ಯವಾಗಿತ್ತು. ಕ್ರಿ.ಶ.1687ರಲ್ಲಿ ಮುಂಬಯಿಯಲ್ಲಿ ಅಕ್ಕಿಯ ಅಭಾವ ತಲೆದೋರಿದಾಗ ಬ್ರಿಟೀಷರು ಮಂಗಳೂರಿನಿಂದ ಅಕ್ಕಿ ಪಡೆಯಲು ನಿರ್ಧರಿಸಿದ್ದರು.[20] ಕ್ರಿ.ಶ.1720ರಲ್ಲಿ, 2500 ಬೇಲ್ಸ್ ರಷ್ಟು ಅಕ್ಕಿಯನ್ನು ಬಸ್ರೂರಿನಿಂದ ಖರೀದಿಸಿದ ಬ್ರಿಟೀಷರು, 1740ರಲ್ಲಿ 6903 ಬೇಲ್ಸ್‌ರಷ್ಟು ಅಕ್ಕಿಯನ್ನು ಮಂಗಳೂರಿನಿಂದ ಖರೀದಿಸಿದ್ದರು. ಅಂತೆಯೇ 1741–42ರಲ್ಲಿ 4923 ಬೇಲ್ಸ್ ಅಕ್ಕಿ ಮಂಗಳೂರಿನಿಂದ ಪಡೆದಿದ್ದರು.[21] ಬ್ರಿಟೀಷರ ಸಂಬಂಧಗಳು ಕೆಳದಿ ರಾಜ್ಯದೊಂದಿಗೆ ಕೆಲವು ಸಂದರ್ಭಗಳಲ್ಲಿ ಎಷ್ಟು ನಿಕಟವಾಗಿತ್ತು ಎಂದರೆ, ಅದಲಾಮಿ ಎನ್ನುವ ತೆರಿಗೆಯಿಲ್ಲದೆ ಬ್ರಿಟೀಷರಿಗೆ ಅಕ್ಕಿಯನ್ನು ರಫ್ತು ಮಾಡಲು ಮಂಗಳೂರಿನ ಕೆಳದಿಯ ಜನರಲ್ ಸೂರಪ್ಪಯ್ಯ ಅವಕಾಶ ನೀಡಿದ್ದ.[22] ಆದರೆ ಸೋಮಶೇಖರ ನಾಯಕ ಇದನ್ನು ಮುಂದುವರೆಸಲಿಲ್ಲ.

ಅಕ್ಕಿ ಪೂರೈಕೆಯ ಹಿಂದೆ ಆರ್ಥಿಕ ಲಾಭಗಳಿಸುವ ಮತ್ತು ಐರೋಪಿಯನ್ನರಿಗೆ ವ್ಯಾಪಾರಿ ಸ್ಪರ್ಧೆ ನೀಡುವ ಉದ್ದೇಶ ಇತ್ತು ಎಂಬುದಾಗಿ ತಿಳಿಯುತ್ತದೆ. ಈ ಕಾಲದ ಒಪ್ಪಂದಗಳಲ್ಲಿ ಇತರ ಸರಕುಗಳಿಗಿಂತಲೂ ಹೆಚ್ಚಾಗಿ ಅಕ್ಕಿ ಪ್ರಧಾನವಾಗಿ ಉಲ್ಲೇಖಿಸಲ್ಪಟ್ಟ ಹಿನ್ನೆಲೆಯನ್ನು ಗಮನಿಸಿದಾಗ, ಅಕ್ಕಿ ಈ ಸಂದರ್ಭದಲ್ಲಿ ಪ್ರಮುಖ ವ್ಯಾಪಾರಿ ಸರಕಾಗಿತ್ತು ಎಂಬುದಾಗಿ ಕೆಲವು ಮೂಲಗಳಿಂದ ತಿಳಿದುಬರುತ್ತದೆ.[23] ಆ ಮೂಲಗಳ ಪ್ರಕಾರ "ಕೆಳದಿ ರಾಜ ಪ್ರಬಲನಾಗಿದ್ದಾನೆ ಅನ್ನುವುದಕ್ಕಿಂತಲೂ ಧನಿಕನಾಗಿದ್ದಾನೆ. ಅವನ ರಾಜ್ಯಕ್ಕೆ ಅಷ್ಟು ಹಣ ಬರಲು ಕಾರಣ ಮಲಬಾರು ಮತ್ತು ಮಸ್ಕತ್ತಿನ ಕೆಲ ಭಾಗಗಳೊಡನೆ ಅವನು ಮಾಡುತ್ತಿರುವ ಅಕ್ಕಿ ವ್ಯಾಪಾರವಾಗಿದೆ" ಎಂದು ಹೇಳಲಾಗಿದೆ. ಹಾಗಾಗಿ ಅಕ್ಕಿಯ ಬೇಡಿಕೆಯೇ ಈ ಎಲ್ಲಾ ಸಂಘರ್ಷಗಳಿಗೆ ಮೂಲವಾಗಿತ್ತು ಎನ್ನುವುದು ಸ್ಪಷ್ಟವಾಗುತ್ತದೆ.

### 5.3 ಕರಿಮೆಣಸು ದರ ಸಮರ

ಕೆಳದಿಯರಸರು ಮತ್ತು ಪೋರ್ಚುಗೀಸರ ನಡುವಿನ ಆರ್ಥಿಕ ರಾಜಕಾರಣ ಮತ್ತು ಸಂಘರ್ಷಕ್ಕೆ ಹಲವು ಕಾರಣಗಳಿದ್ದರೂ ಕರಿಮೆಣಸಿನ ದರ ಸಮರವೂ ಪ್ರಮುಖ ಕಾರಣವಾಗಿತ್ತು. ಕ್ರಿ.ಶ.16ನೇ ಶತಮಾನದ ಕೊನೆಯಲ್ಲಿ ಮತ್ತು 17ನೇ ಶತಮಾನದ ಪ್ರಾರಂಭದಲ್ಲಿ ತುಳುನಾಡಿನ ಬಂದರುಗಳು ಪೋರ್ಚುಗೀಸರ

ಪ್ರಮುಖ ವ್ಯಾಪಾರ ಕೇಂದ್ರಗಳಾಗಿ ಮೂಡಿಬಂದವು. ಇದಕ್ಕೆ ಒಂದು ಕಾರಣ ಗೋವಾದ ಸಾಮೀಪ್ಯ ಮತ್ತು ಮಲಬಾರಿನ ನಿರಂತರ ಕಲಹಗಳಿಂದ ಸಾಕಷ್ಟು ದೂರದಲ್ಲಿ ತುಳುನಾಡು ಇರುವುದಾಗಿತ್ತು. ಈ ಕಾರಣದಿಂದ ಪೋರ್ಚುಗೀಸರು ತುಳುನಾಡನ್ನು ಕರಿಮೆಣಸಿನ ಖರೀದಿ ಮಾರುಕಟ್ಟೆಯಾಗಿ ಪರಿವರ್ತಿಸಿದರು. ಮಲಬಾರಿನ ಕರಿಮೆಣಸಿಗಿಂತ ತುಳುನಾಡಿನ ಕರಿಮೆಣಸು ಹೆಚ್ಚು ವೆಚ್ಚದಾಯಕವಾಗಿದ್ದರೂ ಇದರ ಗುಣಮಟ್ಟ ಉತ್ತಮವಾಗಿತ್ತು ಮತ್ತು ಖರೀದಿಸುವ ಪ್ರಕ್ರಿಯೆಯೂ ಹೆಚ್ಚು ತೊಡಕಿನದಾಗಿರಲಿಲ್ಲ. ಸ್ಥಳೀಯ ಕರಾವಳಿ ತೀರದ ಅಧಿಕಾರಶಾಹಿಗಳು ಮತ್ತು ಸಾಗರೋತ್ತರ ವ್ಯಾಪಾರಿಗಳ ಮಧ್ಯೆ ಕಲಹಗಳು ಅಷ್ಟಾಗಿ ಇರಲಿಲ್ಲ. ಅದಕ್ಕೆ ಕಾರಣವೆಂದರೆ ಮಲಬಾರಿನಲ್ಲಿದ್ದಂತೆ ಇಲ್ಲಿಯೂ ಕೂಡ ಪೋರ್ಚುಗೀಸರು ಆಡಳಿತಗಾರರಂತೆ ಕಾಣಿಸಿಕೊಳ್ಳದೆ ವ್ಯಾಪಾರಿಗಳಾಗಿ ಮಾತ್ರ ಕಾಣಿಸಿಕೊಂಡರು. ಕ್ರಿ.ಶ.17ನೇ ಶತಮಾನದ ಮೊದಲ ದಶಕಗಳಲ್ಲಿ ಪೋರ್ಚುಗೀಸರು ಮಲಬಾರಿನ ಕರಿಮೆಣಸಿಗಿಂತ 2 ಪಟ್ಟು ಹೆಚ್ಚು ಕರಿಮೆಣಸನ್ನು ತುಳುನಾಡಿನಿಂದ ಸಂಗ್ರಹಿಸಿರುವುದು ಮಲಬಾರ್‌ನ ಅವರ ಆರ್ಥಿಕ ಸಾಮ್ರಾಜ್ಯದ ಇಳಿಮುಖದ ದ್ಯೋತಕವಾಗಿದೆ.[24]

ತುಳುನಾಡಿನ ಕರಿಮೆಣಸಿಗೆ ಹೆಚ್ಚಿನ ಬೆಲೆ ನಿಗದಿಯಾಗಲು ಇನ್ನೊಂದು ಕಾರಣವೆಂದರೆ ಏಷ್ಯಾದ ವ್ಯಾಪಾರಿಗಳಿಗೆ ತುಳುನಾಡು ಮುಕ್ತ ಮಾರುಕಟ್ಟೆಯಾಗಿದ್ದು ಏಷ್ಯಾದ ಮಾರುಕಟ್ಟೆಗಳಿಗೋಸ್ಕರ ಹೆಚ್ಚಿನ ಖರೀದಿ ಇಲ್ಲಿ ನಡೆಯುತ್ತಿತ್ತು. ಪೋರ್ಚುಗೀಸರಿಗೆ ತೆರಿಗೆ ನೀಡದೆ ಸೂರತ್ ಮತ್ತು ದಾಬುಲ್‌ನ ವ್ಯಾಪಾರಿಗಳು ಗುಜರಾತ್, ಮತ್ತು ಪಶ್ಚಿಮ ಏಷ್ಯಾದ ಮಾರುಕಟ್ಟೆಗೋಸ್ಕರ ಇಲ್ಲಿ ಪ್ರಮುಖ ಖರೀದಿದಾರರಾಗಿದ್ದರು. ಅರಬ್ ಮತ್ತು ಪರ್ಷಿಯನ್ ವ್ಯಾಪಾರಿಗಳು ತುಳುನಾಡಿಗೆ ಬಂದು ಖರೀದಿಯಲ್ಲಿ ತೊಡಗುತ್ತಿದ್ದುದು ಬೆಲೆ ಹೆಚ್ಚಳಕ್ಕೆ ಕಾರಣವಾಗಿತ್ತು. ಯುರೋಪಿನ ಕಂಪೆನಿಗಳು ಕರಿಮೆಣಸಿನ ವ್ಯಾಪಾರಕ್ಕೆ ಭಾರತಕ್ಕೆ ಮೊದಲು ಬಂದಾಗ ತುಳುನಾಡು ಮತ್ತು ಬಿಜಾಪುರದ ಅಧೀನ ಬಂದರುಗಳಿಗೆ ಭೇಟಿ ಕೊಟ್ಟಿದ್ದರು. ಕ್ರಿ.ಶ.1503ರಲ್ಲಿ ವಾಸ್ಕೋಡಿಗಾಮ ಭಟ್ಕಳದ ಮುಖ್ಯಸ್ಥನ ಪ್ರತಿನಿಧಿಗೆ ವಿಧಿಸಿದ್ದ ಷರತ್ತುಗಳಿಂದ,[25] ಹೇಗೆ ಪೋರ್ಚುಗೀಸರು ಕರಿಮೆಣಸು ವ್ಯಾಪಾರದಲ್ಲಿ ಹಿಡಿತ ಸಾಧಿಸಲು ಪ್ರಾರಂಭದಿಂದಲೂ ಪ್ರಯತ್ನಿಸುತ್ತಿದ್ದರು ಎಂದು ತಿಳಿಯುತ್ತದೆ. ಈ ಉದ್ದೇಶದಿಂದಲೇ ತುಳುನಾಡಿನ ಕರಿಮೆಣಸು ಬೆಳೆಯುವ ಒಳನಾಡಿನ ಪ್ರದೇಶಗಳ ಮೇಲೆ ನಿಯಂತ್ರಣವನ್ನು ಹೊಂದಿದ್ದ ಆಡಳಿತಗಾರರೊಂದಿಗೆ ಗೋವಾದ ಪೋರ್ಚುಗೀಸರು ಕ್ರಿ.ಶ.17ನೇ ಶತಮಾನದಲ್ಲಿ ಉತ್ತಮ ಸಂಬಂಧವನ್ನು ಹೊಂದಲು ಪ್ರಯತ್ನಿಸಿದ್ದರು. ಪೋರ್ಚುಗೀಸರು ಪ್ರಭಾವಶಾಲಿಗಳಾಗಿರುವವರೆಗೆ ಇದು ಸಾಧ್ಯವಾಗಿತ್ತು. ಆದರೆ ಇನ್ನಿತರ ಪಾಶ್ಚಿಮಾತ್ಯ ಶಕ್ತಿಗಳಾದ ಡಚ್ಚರು ಮತ್ತು ಇಂಗ್ಲೀಷರು ಕರಿಮೆಣಸಿಗೋಸ್ಕರ ಕರಾವಳಿಯ ಬಂದರಿಗೆ ಬರಲಾರಂಭಿಸಿದಾಗ ಸ್ಪರ್ಧೆ ಅನಿವಾರ್ಯವಾಯ್ತು ಮತ್ತು ಈ ಸ್ಪರ್ಧೆಯಲ್ಲಿ ತುಳುನಾಡಿನ ಸಾಮಂತರಸರು ಹಾಗೂ ಕೆಳದಿಯರಸರು ಒಳಗೊಂಡಿದ್ದರು. ಪ್ರಾರಂಭದಿಂದಲೂ ಪೋರ್ಚುಗೀಸರು ಸ್ಥಳೀಯ ರಾಜರುಗಳೊಂದಿಗೆ ಸಂಪರ್ಕದಲ್ಲಿದ್ದರು ಮತ್ತು ಇದಕ್ಕೆ ಕರಿಮೆಣಸಿನ ವ್ಯಾಪಾರದಲ್ಲಿ ಏಕಸ್ವಾಮ್ಯತೆಯನ್ನು ಪಡೆಯುವುದೇ ಉದ್ದೇಶವಾಗಿತ್ತು ಎಂಬುದು

ತಿಳಿಯುತ್ತದೆ. ಈಕಾರಣದಿಂದಲೇ ಕರಿಮೆಣಸು ಮತ್ತು ಅಕ್ಕಿ ಈ ಅಧ್ಯಯನ ಕಾಲಘಟ್ಟದಲ್ಲಿ ಪ್ರಮುಖ ವ್ಯಾಪಾರಿ ಸರಕಾಗಿ ಪಾಶ್ಚಿಮಾತ್ಯ ಶಕ್ತಿಗಳಾದ ಪೋರ್ಚುಗೀಸರು ಇಂಗ್ಲೀಷರು ಡಚ್ಚರು ಮತ್ತು ಫ್ರೆಂಚರು ಸ್ಥಳೀಯ ರಾಜರುಗಳೊಂದಿಗೆ ಉತ್ತಮ ಬಾಂಧವ್ಯವನ್ನು ಹೊಂದಲು ಮತ್ತು ಸಂಘರ್ಷಕ್ಕೆ ಇಳಿಯಲು ಕಾರಣವಾಯಿತು.

ಹಿರಿಯ ವೆಂಕಟಪ್ಪ ನಾಯಕ, ಪೋರ್ಚುಗೀಸರಿಗೆ ಕರಿಮೆಣಸಿನ ನಿಯಂತ್ರಣದ ಮೂಲಕವೂ ಸೂಕ್ತ ರಾಜನೀತಿಯ ಉತ್ತರ ನೀಡಿದ್ದ. ಕ್ರಿ.ಶ.17ನೇ ಶತಮಾನದ ಮೊದಲ ಭಾಗದಲ್ಲಿ ಇಂಗ್ಲೀಷ್ ಈಸ್ಟ್ ಇಂಡಿಯಾ ಕಂಪೆನಿ ಭಾರತದ ಹಲವು ಕಡೆ ತಮ್ಮ ಫ್ಯಾಕ್ಟರಿಗಳನ್ನು ತೆರೆದಿತ್ತು. ಆ ಸಂದರ್ಭದಲ್ಲಿ ಪೋರ್ಚುಗೀಸರ ಪ್ರಭಾವ ಅಧಿಕವಾಗಿತ್ತು. ಕ್ರಿ.ಶ. 1619ರ ಬ್ರಿಟೀಷರ ಕೆಲವು ಪತ್ರಗಳು,[26] ಇಕ್ಕೇರಿಯ ವಾಣಿಜ್ಯ ನೀತಿಯ ಕುರಿತಾಗಿ ಮಾಹಿತಿಯನ್ನು ನೀಡುತ್ತವೆ. ಆ ಪತ್ರದ ಪ್ರಕಾರ ಕೆಳದಿಯ ರಾಜ ವೆಂಕಟಪ್ಪ ನಾಯಕ ಇಂಗ್ಲೀಷರೊಂದಿಗೆ ಕರಿಮೆಣಸಿನ ವ್ಯಾಪಾರಕ್ಕೆ ಉತ್ಸುಕವಾಗಿದ್ದ. ಅದಕ್ಕೆ ಕಾರಣ ಪೋರ್ಚುಗೀಸರಿಗೆ ದರ ಸಮರದ ಸಂದೇಶವನ್ನು ರವಾನಿಸುವುದಾಗಿತ್ತು. ಆ ವರ್ಷ ಪೂರ್ತಿ ಕರಿಮೆಣಸು ಇಂಗ್ಲೀಷರಿಗೆ ದೊರೆಯಿತಲ್ಲದೆ, ಅವನು 2 ಹಡಗುಗಳಷ್ಟು ಕರಿಮೆಣಸನ್ನು ಇಂಗ್ಲೀಷರಿಗೆ ಪೂರೈಸಿದ. ಇಂಗ್ಲೀಷರೊಂದಿಗೆ ವೆಂಕಟಪ್ಪನಾಯಕನ ಸಂಪರ್ಕ ಪೋರ್ಚುಗೀಸರನ್ನು ಚಿಂತೆಗೀಡುಮಾಡಿತ್ತು.

ಹಲವು ಬಾರಿ ಸಂಧಾನದ ಪ್ರಕ್ರಿಯೆಗಳು ವಿಫಲವಾದರೂ, ಕ್ರಿ.ಶ. 1620ರಲ್ಲಿ ವೆಂಕಟಪ್ಪ ನಾಯಕನಿಗೂ ಪೋರ್ಚುಗೀಸರಿಗೂ ಒಪ್ಪಂದವಾಗಿತ್ತೆಂದು ತಿಳಿದುಬರುತ್ತದೆ.[27] ಒಪ್ಪಂದವಾದ ಕೂಡಲೇ ವೆಂಕಟಪ್ಪನು ಪೋರ್ಚುಗೀಸರೊಡನೆ ವ್ಯಾಪಾರ ವ್ಯವಹಾರ ಪ್ರಾರಂಭಿಸಿದನು. ಯುದ್ದಕ್ಕೆ ಮುಂಚೆ ವಾಡಿಕೆಯಂತೆ ತನ್ನಿಂದ ಪ್ರತಿವರ್ಷ ಕ್ರಯಕೊಟ್ಟು ತೆಗೆದುಕೊಳ್ಳುತ್ತಿದ್ದ ಒಂದು ಸಾವಿರ ಕ್ವಿಂಟಲ್ ಕರಿಮೆಣಸನ್ನು ಮುಂದಕ್ಕೂ ವರ್ಷಂಪ್ರತಿ ಕೊಳ್ಳಲು ಅವರು ತಯಾರಿರುವರೇ ಎಂದು ವಿಚಾರಿಸಲು ಗೋವೆಯಲ್ಲಿದ್ದ ತನ್ನ ರಾಯಭಾರಿಗೆ ಅಪ್ಪಣೆ ಮಾಡಿದನು. ಕರಿಮೆಣಸಿನ ಕ್ರಯವನ್ನು ಪರಸ್ಪರ ಮಾತುಕತೆ ಮಾಡಿ ಖಚಿತ ಮಾಡಿಕೊಳ್ಳಬಹುದೆಂದೂ, ಒಂದು ಸಾವಿರ ಕ್ವಿಂಟಲುಗಳಿಗಿಂತಲೂ ಜಾಸ್ತಿ ಕರಿಮೆಣಸು ಬೇಕಾಗಿದ್ದರೆ ಪೋರ್ಚುಗೀಸ್ ಒಪ್ಪಂದಕಾರರು ಇಕ್ಕೇರೀ ವ್ಯಾಪಾರಿಗಳಿಂದ ಕೊಂಡುಕೊಳ್ಳಬಹುದೆಂದೂ ತಿಳಿಸಿದನು. ಕ್ರಿ.ಶ.1620ರ ಮಾರ್ಚ್ 7ರಂದು ಪೋರ್ಚುಗೀಸರು ಈ ಷರತ್ತುಗಳ ಪ್ರಕಾರ ವೆಂಕಟಪ್ಪನಿಂದ ಕರಿಮೆಣಸು ಪಡೆಯಲು ತೀರ್ಮಾನಿಸಿದರು.[28] ಅಂದರೆ, ವೆಂಕಟಪ್ಪನ ಕಾಲದಲ್ಲಿ ಸುಮಾರು ಒಂದು ಸಾವಿರ ಕ್ವಿಂಟಾಲ್ ನಷ್ಟು ಅಗಾಧ ಪ್ರಮಾಣದ ಕರಿಮೆಣಸನ್ನು ಕೆಳದಿಯರಸರು ವಿಕ್ರಯಿಸುತ್ತಿದ್ದರು. ಆದರೆ ಮುಂದೆ ಆ ಪ್ರಮಾಣ ಕಡಿಮೆಯಾಗುತ್ತಾ ಹೋದದ್ದು ಗಮನಾರ್ಹ ಅಂಶವಾಗಿದೆ.

ಕರಿಮೆಣಸಿನ ವ್ಯಾಪಾರಕ್ಕೆ ಸಂಬಂಧಿಸಿದಂತೆ ವೀರಭದ್ರನಾಯಕನ ಕಾಲದಲ್ಲಿಯೂ ಭಿನ್ನಾಭಿಪ್ರಾಯಗಳು ಮುಂದುವರೆದವು. ವೀರಭದ್ರನಿಂದ ಆ ವರ್ಷ 500 ಖಂಡಿ ಮತ್ತು ಮುಂದೆ ವರ್ಷಂಪ್ರತಿ 350 ಖಂಡಿ

ಕರಿಮೆಣಸನ್ನು ಖಂಡಿಗೆ 22 ಪ್ರತಾಪಗಳ ದರದಲ್ಲಿ ತೆಗೆದುಕೊಳ್ಳಲು ತಯಾರಿರುವುದಾಗಿ ಪೋರ್ಚುಗೀಸರು ಸೂಚಿಸಿದ್ದರು.[29] ಕ್ರಿ.ಶ. 1633ರ ಏಪ್ರಿಲ್ 5ರಂದು ವೀರಭದ್ರ ಮತ್ತು ಪೋರ್ಚುಗೀಸರೊಳಗೆ ಒಪ್ಪಂದವಾಯಿತು. ಅದರ ಷರತ್ತುಗಳು ಈ ಕೆಳಗಿನಂತಿದ್ದುವು.[30] ಪೋರ್ಚುಗೀಸರು ಪ್ರತೀ ವರ್ಷ ವೀರಭದ್ರನಿಂದ 350 ಖಂಡಿ ಕರಿಮೆಣಸನ್ನು ಖಂಡಿಗೆ 22 ಪ್ರತಾಪಗಳ ದರದಲ್ಲಿ ತೆಗೆದುಕೊಳ್ಳಬೇಕು. ಅವರು 350 ಖಂಡಿಗಳಿಗಿಂತ ಹೆಚ್ಚು ಕರಿಮೆಣಸು ತೆಗೆದುಕೊಳ್ಳಲಿಚ್ಛಿಸಿದರೆ, ಅಂತಹ ವ್ಯವಹಾರವನ್ನು ಪರಸ್ಪರರು ಮಾತುಕತೆ ಮೂಲಕ ಖಚಿತ ಮಾಡುವ ರೀತಿಯಲ್ಲಿ ಮುಗಿಸಬೇಕು, ಇತ್ಯಾದಿ. ಆದರೆ ಸ್ವಲ್ಪವೇ ಸಮಯದಲ್ಲಿ ವೀರಭದ್ರನು ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದನೆಂದು ಪೋರ್ಚುಗೀಸರು ಆರೋಪಿಸಿದರು. ಕ್ರಿ.ಶ.1634ರ ನವಂಬರ 18 ರಂದು ಸಭೆ ಸೇರಿದ ವೈಸರಾಯ್ ಹಾಗೂ ಅವನ ಸಲಹೆಗಾರರ ಸಭೆಯ ವರದಿಯಿಂದ ವೀರಭದ್ರನು ಕರಿಮೆಣಸಿಗೆ ಖಂಡಿ ಒಂದಕ್ಕೆ 28 ಪ್ರತಾಪಗಳ ದರ ಕೇಳುತ್ತಿದ್ದನೆಂದು ತಿಳಿದುಬರುತ್ತದೆ. ಈ ದರವು ಒಪ್ಪಂದದಲ್ಲಿ ನಮೂದಿಸಿದುದಕ್ಕಿಂತ ಆರು ಪ್ರತಾಪ ಜಾಸ್ತಿಯಾಗಿತ್ತು. ಹೆಚ್ಚಿನ ಬೆಲೆಗೆ ಕೇಳಲು ಅವನಿಗೆ ಕಾರಣವಿತ್ತು. ಅವನ ಅಜ್ಜ ವೆಂಕಟಪ್ಪ ನಾಯಕನ ಕಾಲದಲ್ಲಿ 28 ಪ್ರತಾಪಗಳ ಬೆಲೆ ಪೋರ್ಚುಗೀಸರು ಕೊಡುತ್ತಿದ್ದರು. ವೈಸರಾಯನು ಕರಿಮೆಣಸಿನ ಕ್ರಯ ನಿಶ್ಚಯಿಸಬಹುದೆಂದು ವೀರಭದ್ರನು ಒಪ್ಪಂದಪೂರ್ವದಲ್ಲಿ ಬರೆದುದರ ದುರುಪಯೋಗ ಮಾಡಿಕೊಂಡು, ವೈಸರಾಯನು ಒಪ್ಪಂದದಲ್ಲಿ ಕಡಿಮೆ ಕ್ರಯವನ್ನು ನಮೂದಿಸಿದ್ದನು. ಕರಿಮೆಣಸಿಗೆ 28 ಪ್ರತಾಪಗಳ ಬೆಲೆ ಕೊಡದಿದ್ದರೆ, ಪೋರ್ಚುಗೀಸರಿಗೆ ಅಕ್ಕಿ ಪೂರೈಕೆ ಮಾಡಬಾರದೆಂದು ವೀರಭದ್ರನು ತನ್ನ ನೌಕರರಿಗೆ ಅಪ್ಪಣೆ ಮಾಡಿದನು. ಆದರೆ ಪೋರ್ಚುಗೀಸರು ಇದರಿಂದ ಬಗ್ಗಲಿಲ್ಲ. ಕ್ರಿ.ಶ.1635ರ ಫೆಬ್ರವರಿ ತಿಂಗಳಲ್ಲಿ ಖಂಡಿಗೆ 22 ಪ್ರತಾಪಗಳಂತೆ ಕರಿಮೆಣಸಿನ ಪೂರೈಕೆ ಪೋರ್ಚುಗೀಸರಿಗಾಯಿತು.[31]

ಕರಿಮೆಣಸು ದರ ನಿಗದಿಗೆ ಸಂಬಂಧಿಸಿದಂತೆ ಕೆಳದಿಯರಸರು ಮತ್ತು ಪೋರ್ಚುಗೀಸರು ವಿವಿಧ ತಂತ್ರಗಳನ್ನು ಉಪಯೋಗಿಸುತಿದ್ದರು. ವೀರಭದ್ರನು ಕ್ರಿ.ಶ.1637ರ ಮಾರ್ಚ್‌ನಲ್ಲಿ ವೈಸರಾಯನಿಗೆ ಪತ್ರ ಬರೆದು, ಕರಿಮೆಣಸಿಗೆ ಖಂಡಿಯೊಂದಕ್ಕೆ 28 ಪ್ರತಾಪಗಳಂತೆ ಮಾರಲು ಸಿದ್ಧನಿರುವುದಾಗಿಯೂ, ಆಂಗ್ಲರು ಖಂಡಿಗೆ 30 ಪ್ರತಾಪಗಳಂತೆ ಕೊಡಲು ಸಿದ್ಧರಿರುವರೆಂದೂ, ಕರಿಮೆಣಸಿನ ಬದಲು ಸೀಸವನ್ನು ಖಂಡಿಗೆ $22^1/_2$ ಪ್ರತಾಪಗಳಂತೆ ತನಗೆ ಕೊಡಬಯಸುತ್ತಿರುವರೆಂದೂ ತಿಳಿಸಿದನು. ಉತ್ತರರೂಪವಾಗಿ, ಆಂಗ್ಲರು ವೀರಭದ್ರನನ್ನು ಮೋಸಗೊಳಿಸುತ್ತಿದ್ದಾರೆಂದೂ, ಅದೇ ಸೀಸವನ್ನು ಅವರು ಗೋವೆಯಲ್ಲಿ ಸುಮಾರು 12 ಪ್ರತಾಪಗಳಂತೆ ಮಾರುತ್ತಾರೆಂದೂ, ವೀರಭದ್ರನು ತಮ್ಮಿಂದ $22^1/_2$ ದರದಲ್ಲಿ ಸೀಸ ಕೊಂಡರೆ ತಾವೂ ಕರಿಮೆಣಸಿಗೆ 30 ಪ್ರತಾಪಗಳನ್ನು ಕೊಡಲು ತಯಾರಿರುವರೆಂದೂ ಪೋರ್ಚುಗೀಸರು ಬರೆದರು.[32] ಇದು ಪೋರ್ಚುಗೀಸರ ಒಂದು ವ್ಯಾಪಾರ ತಂತ್ರವಾಗಿತ್ತು. ವೀರಭದ್ರನ ಮನ ನೋಯಿಸದೇ ಇಕ್ಕೇರಿ ರಾಜ್ಯದಿಂದ ತಮಗೆ ಬೇಕಾದ ಅಕ್ಕಿ ಮತ್ತು ಕರಿಮೆಣಸು ಪೂರೈಕೆ ಆಗುವಂತೆ ಮಾಡುವುದೇ ಅವರ

ಉದ್ದೇಶವಾಗಿತ್ತು. ಈ ಮಾಹಿತಿ ದರ ನಿಗದಿಗೆ ಸಂಬಂಧಿಸಿದಂತೆ ನಡೆಯುತ್ತಿದ್ದ ಚೌಕಾಸಿಯ ಸ್ವರೂಪವನ್ನು ತಿಳಿಸುತ್ತದೆ.

ಕ್ರಿ.ಶ.1651ರ ಮೇ ತಿಂಗಳಿನಲ್ಲಿ ಪೋರ್ಚುಗೀಸರು ಅಂತೋನಿಯ ಕೊರೆಯ ಎಂಬ ಪಾದ್ರಿಯನ್ನು ಶಿವಪ್ಪನಾಯಕನ ಬಳಿಗೆ ರಾಯಭಾರಿಯಾಗಿ ಕಳುಹಿಸಿದ್ದರು. ಅವನಿಗೆ ವೈಸ್‌ರಾಯಿ ನೀಡಿದ ಸೂಚನೆಗಳು, ಕರಿಮೆಣಸಿನ ದರ ಸಮರವನ್ನು ವಿವರಿಸುತ್ತವೆ.[33] 'ಶಿವಪ್ಪನೂ ಕರಿಮೆಣಸಿಗೆ ಹೆಚ್ಚು ಕ್ರಯ ಕೇಳುತ್ತಿರುವನು. ಅವನಿಂದ ಕೇವಲ ಇನ್ನೂರು ಖಂಡಿಗಳನ್ನು, ಖಂಡಿಗೆ 25 ಪ್ರತಾಪಗಳಂತೆ ಕೊಳ್ಳಲು ಸಮ್ಮತಿಸಬೇಕು. ಇನ್ನೂರು ಖಂಡಿಗಳಿಗಿಂತ ಹೆಚ್ಚು ಕರಿಮೆಣಸು ತೆಗೆದುಕೊಳ್ಳಬೇಕೆಂದು ಅವನು ತಗಾದೆ ಮಾಡಿದರೆ ಖಂಡಿಗೆ 25 ಪ್ರತಾಪಗಳಿಗಿಂತ ಕಡಿಮೆ ಕ್ರಯಕ್ಕೆ ಕೊಳ್ಳಲೊಪ್ಪಬಹುದು. ಅಂದರೆ ಹಿರಿಯ ವೆಂಕಟಪ್ಪನ ಕಾಲದಲ್ಲಿ ಒಂದು ಸಾವಿರ ಕ್ವಿಂಟಾಲ್ ಕರಿಮೆಣಸು ಖರೀದಿಸಲು ಒಪ್ಪಿದ್ದ ಪೋರ್ಚುಗೀಸರು ಶಿವಪ್ಪ ನಾಯಕನ ಕಾಲದಲ್ಲಿ ಕೇವಲ 200 ಖಂಡಿಗಳಿಗೆ ಅಂದರೆ ಸುಮಾರು ಅರ್ಧದಷ್ಟು ಪ್ರಮಾಣಕ್ಕೆ ಅದನ್ನು ಸೀಮಿತಗೊಳಿಸಿದ್ದರು. ಇದಕ್ಕೆ ಕೆಳದಿಯರಸರು ವಿಧಿಸಿದ್ದ ಅಧಿಕ ಬೆಲೆ ಮತ್ತು ಅದಕ್ಕಿಂತ ಅಗ್ಗದಲ್ಲಿ ಸ್ಥಳೀಯರು ಕರಿಮೆಣಸನ್ನು ಒದಗಿಸುತ್ತಿದ್ದುದೂ ಕಾರಣವಾಗಿರಬೇಕು. ಆದರೆ ಈ ಸಂಧಾನ ಫಲಪ್ರದವಾಗಲಿಲ್ಲ.

ಕರಿಮೆಣಸಿನ ದರ ಮತ್ತು ಖರೀದಿಯ ಪ್ರಮಾಣಕ್ಕೆ ಸಂಬಂಧಿಸಿ ಶಿವಪ್ಪನಾಯಕ ಮತ್ತು ಪೋರ್ಚುಗೀಸರ ನಡುವೆ ಬಹಳಷ್ಟು ಭಿನ್ನಾಭಿಪ್ರಾಯಗಳಿತ್ತು. ಕೆಳದಿ ಕಡೆಯಿಂದ ಬರೆಯಲ್ಪಟ್ಟ ಪತ್ರವೊಂದರ ಪ್ರಕಾರ, ಪೋರ್ಚುಗೀಸರು ಈಗಾಗಲೇ ಕೊಳ್ಳಲು ತಯಾರಿದ್ದುದಕ್ಕಿಂತಲೂ ಜಾಸ್ತಿ ಕರಿಮೆಣಸನ್ನು ಹೆಚ್ಚಿನ ದರದಲ್ಲಿ ಕೊಂಡುಕೊಳ್ಳಬೇಕೆಂಬುದೇ ಆ ಕಾಗದದ ತಾತ್ಪರ್ಯವಾಗಿತ್ತು. ಶಿವಪ್ಪನೊಡನೆ ಮತ್ತಷ್ಟು ವೈರತ್ವ ಬೆಳೆಸುವುದು ಹಾನಿಕರವೆಂದು ಆಲೋಚಿಸಿದ ಪೋರ್ಚುಗೀಸರು, ಪಾದ್ರಿ ಇನಾಸಿವು ಎಂಬವನನ್ನು ರಾಯಭಾರಿಯಾಗಿ ಬಿದನೂರಿಗೆ ಕಳುಹಿಸಿದರು.[34] ವೈಸ್ ರಾಯನು ಅವನಿಗೆ ಕೊಟ್ಟ ಸೂಚನೆಗಳು ಕೆಳಗಿನಂತಿದ್ದವು. ಶಿವಪ್ಪನಿಂದ 250 ಖಂಡಿ ಕರಿಮೆಣಸನ್ನು ಖಂಡಿಗೆ 28 ಪ್ರತಾಪಗಳ ದರದಲ್ಲಿ ಕೊಳ್ಳಲೊಪ್ಪಬೇಕು ಶಿವಪ್ಪನಿಂದ ಪ್ರತಿ ವರ್ಷ 300 ಖಂಡಿ ಕರಿಮೆಣಸನ್ನು ಖಂಡಿಗೆ 28 ಪ್ರತಾಪಗಳ ದರದಲ್ಲಿ ಕೊಳ್ಳಲು ತಾವು ಸಿದ್ಧರಿರುವುದಾಗಿ ಹೇಳಬೇಕು. ಅದಕ್ಕೆ ಶಿವಪ್ಪನು ಒಪ್ಪದಿದ್ದರೆ ಹೆಚ್ಚುವರಿ 50 ಖಂಡಿ, ಹೆಚ್ಚೆಂದರೆ ಒಟ್ಟಿಗೆ 350 ಖಂಡಿ ಖರೀದಿ ಮಾಡಲು ಒಪ್ಪಬಹುದು ಎಂಬುದಾಗಿತ್ತು. ಆ ಸಂಧಾನವೂ ವಿಫಲವಾಯಿತಾದರೂ ಮತ್ತೊಮ್ಮೆ ಸಂಧಾನ ಪ್ರಕ್ರಿಯೆ ಮುಂದುವರೆದು,[35] ವರ್ಷಂಪ್ರತಿ 300 ಅಥವಾ 350 ಖಂಡಿ ಕರಿಮೆಣಸನ್ನು ಖರೀದಿ ಮಾಡಿದರೆ ಸಾಲದೆಂದು ಶಿವಪ್ಪನು ಅಸಮಾಧಾನ ತೋರಿಸಿದರೆ ಖಂಡಿಗೆ 28 ಪ್ರತಾಪಗಳಂತೆ, 400 ಖಂಡಿ ಕೊಳ್ಳಲೊಪ್ಪಬೇಕು ಎಂದು ಪೋರ್ಚುಗೀಸರು ನಿರ್ಧರಿಸಿದರಾದರೂ ಇದೂ ಯಶಸ್ವಿಯಾಗಲಿಲ್ಲ. ಆ ಹಂತದಲ್ಲಿ ಶಿವಪ್ಪನಿಂದ ಕೂಡಲೇ 500 ಖಂಡಿ ಕರಿಮೆಣಸು ಖರೀದಿ ಮಾಡಬಹುದು. ಮುಂದೆ ಪ್ರತೀ ವರ್ಷ 300 ಖಂಡಿ ಕೊಳ್ಳಬಹುದು. ಈಗಲೂ

ಮುಂದೆಯೂ ಖಂಡಿಗೆ 28 ಪ್ರತಾಪಗಳ ಕ್ರಯ ಕೊಡಬಹುದು ಎಂದು ಒಪ್ಪಿಕೊಳ್ಳುವ ಹಂತಕ್ಕೆ ಪೋರ್ಚುಗೀಸರು ಬರುತ್ತಾರೆ. ಇದಕ್ಕೆ ಪ್ರತಿಯಾಗಿ ಶಿವಪ್ಪನು ಕುಂದಾಪುರದ ಕೋಟೆಯನ್ನು ಹಿಂತಿರುಗಿಸಲು ಒಪ್ಪಬೇಕು ಎಂಬುದು ಅವರ ಅಭಿಪ್ರಾಯವಾಗಿತ್ತು. ಆದರೆ ಅದೂ ಕೈಗೂಡಲಿಲ್ಲ ಬದಲಿಗೆ ಗಂಗೊಳ್ಳಿ ಕೋಟೆಯನ್ನೂ ಅವರು ಕಳೆದುಕೊಂಡರು.[36] ಈ ನಡುವೆ ಶಿವಪ್ಪನು ಮಲ್ಲಪ್ಪ ಮಲ್ಯನನ್ನು ಹೊನ್ನಾವರಕ್ಕೆ ಕಳುಹಿಸಿ ಅಲ್ಲಿ ಪೋರ್ಚುಗೀಸ್ ಕೋಟೆಯ ಅಧಿಕಾರಿಯಾದ ಫ್ರಾನ್ಸಿಸ್ಕೋ ಡಿಸೋಜ ಅಲ್ಫೊಫರಾದುವಿನೊಂದಿಗೆ ಸಂಧಾನ ನಡೆಸುವಂತೆ ಸೂಚನೆ ನೀಡಿದನು. ಪೋರ್ಚುಗೀಸರು ಶಿವಪ್ಪನಿಂದ ಕೂಡಲೆ 1000 ಖಂಡಿ ಕರಿಮೆಣಸನ್ನು ಖಂಡಿಗೆ 28 ಪ್ರತಾಪಗಳ ದರದಲ್ಲಿ ಕೊಳ್ಳಬೇಕೆಂದೂ, ಮುಂದೆ ಪ್ರತೀ ವರ್ಷ 500 ಖಂಡಿಗಳನ್ನು ಅದೇ ದರದಲ್ಲಿ ಖರೀದಿ ಮಾಡಬೇಕೆಂದೂ, ಮಲ್ಲಪ್ಪನೊಡನೆ ಹೇಳಿ ಕಳುಹಿಸಲಾಯಿತು. ಅದರರ್ಥ ಶಿವಪ್ಪನಾಯಕ ಪೋರ್ಚುಗೀಸರಿಗೆ ಅಸಾಧ್ಯ ಗುರಿಯನ್ನು ನೀಡಿದ್ದ. ಆದರೆ ವೈಸ್‌ರಾಯ್‌ಯ ಅಭಿಪ್ರಾಯ ಹೀಗಿತ್ತು. ಖಂಡಿಗೆ 28 ಪ್ರತಾಪಗಳಂತೆ 500 ಖಂಡಿ ಕರಿಮೆಣಸನ್ನು ಒಡನೆಯೇ ಹಾಗೂ ಮುಂದೆ ವರ್ಷಂಪ್ರತಿ ಅದೇ ದರದಲ್ಲಿ 300 ಖಂಡಿಗಳನ್ನು ಶಿವಪ್ಪನಿಂದ ಖರೀದಿ ಮಾಡಲೊಪ್ಪುವುದು. ಇದಕ್ಕೆ ಪ್ರತಿಯಾಗಿ ಅವನು ತಮ್ಮ ಕೈಯಿಂದ ಕಿತ್ತುಕೊಂಡ ಕೋಟೆಗಳನ್ನು ಹಿಂತಿರುಗಿಸಬೇಕು.[37] ಮೂರು ಜನ ಪೋರ್ಚುಗೀಸ್ ಪ್ರತಿನಿಧಿಗಳನ್ನು ಸಂಧಾನಕ್ಕೆ ನಿಯೋಜಿಸಲಾಯಿತಾದರೂ ಈ ಮಾತುಕತೆಯೂ ವಿಫಲವಾಯ್ತು.[38] ಬೇಷರತ್ತಾಗಿ ತನ್ನಿಂದ ಕೂಡಲೇ 800 ಖಂಡಿ ಮತ್ತು ಮುಂದೆ ಪ್ರತಿವರ್ಷ 300 ಖಂಡಿ ಕರಿಮೆಣಸನ್ನು ಕೊಳ್ಳಲೊಪ್ಪದಿದ್ದರೆ ಮಾತುಕತೆಯ ಅಗತ್ಯವಿಲ್ಲವೆಂದು ಶಿವಪ್ಪನಾಯಕನು ಹೇಳಿದನು.

ಒಟ್ಟಿನಲ್ಲಿ ಈ ದರ ಸಮರದಿಂದಾಗಿ ಶಿವಪ್ಪ ನಾಯಕನ ಕಾಲದಲ್ಲಿ ಪೋರ್ಚುಗೀಸರು ಸಂಪೂರ್ಣವಾಗಿ ಕುಗ್ಗಿ ಹೋಗಿದ್ದರು. ಹೊನ್ನಾವರದ ಅಧಿಕಾರಿ ಫ್ರಾನ್ಸಿಸ್ಕನು ವೈಸ್ ರಾಯನಿಗೆ ಬರೆದ ಕಾಗದದಲ್ಲಿ, ಅಲ್ಲಿಯವರೆಗೆ ಎರಡು ತಿಂಗಳ ಅವಧಿಯಲ್ಲಿ 70 ಮಂದಿ ಸೈನಿಕರು ಹಸಿವೆಯಿಂದ ಸತ್ತರೆಂದೂ, ಆಹಾರ ಧಾನ್ಯಗಳ ಕೊರತೆಯು ಬಹಳವಿದ್ದುದರಿಂದ ಮಳೆಗಾಲದಲ್ಲಿ ತಮ್ಮವರು ಇಲಿ-ಬೆಕ್ಕುಗಳನ್ನು ಕೂಡ ತಿನ್ನಬೇಕಾಯಿತೆಂದೂ, ನೂರಕ್ಕಿಂತಲೂ ಮಿಕ್ಕಿ ಸೈನಿಕರು ಅನಾರೋಗ್ಯಕ್ಕೀಡಾಗಿದ್ದಾರೆಂದೂ, ಡಚ್ಚರು ಶಿವಪ್ಪನ ಕಡೆ ಸೇರಿಕೊಂಡಿರುವರೆಂದೂ, ಶರಾವತಿಯು ಸಮುದ್ರಕ್ಕೆ ಸೇರುವಲ್ಲಿ ಶಿವಪ್ಪನು ಕೋಟೆ ಕಟ್ಟಿರುವನೆಂದೂ ತಿಳಿಸಿದನು. ಬದುಕಿದ್ದ ಸೈನಿಕರು ಯುದ್ಧ ಮಾಡುವ ಸ್ಥಿತಿಯಲ್ಲಿಲ್ಲವೆಂದು ಬರೆದನು.[39] ಶಿವಪ್ಪನಾಯಕನ ಒತ್ತಡದಿಂದಾಗಿ ಪೋರ್ಚುಗೀಸರು ಕಟ್ಟಕಡೆಯದಾಗಿ ಕ್ರಿ.ಶ. 1654ರಲ್ಲಿ ಹೊನ್ನಾವರದ ಕೋಟೆಯನ್ನೂ ನಾಶಮಾಡಿ ಗೋವಾಕ್ಕೆ ಮರಳುವ ಅನಿವಾರ್ಯತೆಯುಂಟಾಯಿತು. ಒಟ್ಟಿನಲ್ಲಿ ಶಿವಪ್ಪನಾಯಕನ ನೀತಿಯಿಂದಾಗಿ ಪೋರ್ಚುಗೀಸರು ನೆಲಕಚ್ಚಿದ್ದರೆಂದು ತಿಳಿಯುತ್ತದೆ. ಅಂತೆಯೇ ಈ ಸಂಘರ್ಷಕ್ಕೆ ಕರಿಮೆಣಸಿನ ದರ ಸಮರವೇ ಪ್ರಮುಖ ಹಿನ್ನೆಲೆಯಾಗಿತ್ತು.

ಕೆಳದಿ ಸೋಮಶೇಖರ ನಾಯಕನ ಆಳ್ವಿಕೆಯ ಕಾಲದಲ್ಲಿ ಆದಿಲ್ ಷಾನ ದಾಳಿ, ತುಳುನಾಡಿನ ಸ್ಥಳೀಯರಸರ ದಂಗೆ, ಮಂಡಲಾಧಿಕಾರಿಗಳ ದಂಗೆ ಮುಂತಾದ ಆಂತರಿಕ ಸಮಸ್ಯೆಗಳಿದ್ದಾಗ ಕೆಳದಿಯಿಂದ ರಿಯಾಯತಿ ಪಡೆಯಲು ತಕ್ಕ ಸಮಯವೆಂದು ಪೋರ್ಚುಗೀಸರು ಭಾವಿಸಿದ್ದರು.[40] ಹಾಗಾಗಿ ಮತ್ತೆ ಸಂಧಾನ ಪ್ರಕ್ರಿಯೆಗಳು ನಡೆದವು. ಇಕ್ಕೇರಿ ನಾಯಕರಿಂದ ಕರಿಮೆಣಸನ್ನು ಕ್ರಯಕ್ಕೆ ತೆಗೆದುಕೊಳ್ಳಲೇಬೇಕೆಂಬ ಕಡ್ಡಾಯದಿಂದ ಪೋರ್ಚುಗೀಸರನ್ನು ಬಿಡುಗಡೆ ಮಾಡಲಾಯಿತು.[41] ಆದರೆ ಈ ನಡುವೆ ಡಚ್ಚರ ಮಧ್ಯಪ್ರವೇಶದಿಂದಾಗಿ ಪೋರ್ಚುಗೀಸರ ಕಾರ್ಯತಂತ್ರಗಳೆಲ್ಲ ವಿಫಲವಾಯಿತು. ಮಂಗಳೂರನ್ನು ಕೊಟ್ಟರೆ ಬಿದನೂರು ರಾಜ್ಯವನ್ನು ಸಂರಕ್ಷಿಸುವುದಲ್ಲದೆ, ತುಳುನಾಡಿನ ಸಾಮಂತರನ್ನು ಹದಮಾಡಿ ರಾಜ್ಯದಲ್ಲಿ ದೊರಕಬಹುದಾದ ಎಲ್ಲ ಅಕ್ಕಿ ಮತ್ತು ಕರಿಮೆಣಸುಗಳನ್ನು ಕ್ರಯ ಕೊಟ್ಟುಕೊಳ್ಳುವುದಾಗಿ ಡಚ್ಚರು ಭರವಸೆಯಿತ್ತರು. ಈ ಹಿನ್ನೆಲೆಯಲ್ಲಿ ಗಂಗೊಳ್ಳಿ ಮಾತ್ರ ಪೋರ್ಚುಗೀಸರ ಕೈಯಲ್ಲಿ ಉಳಿಯಿತು. ಡಚ್ಚರನ್ನು ಎದುರಿಸಿ ಕುಂದಾಪುರ ಅಥವಾ ಮಂಗಳೂರನ್ನು ಪಡೆಯಲು ಪೋರ್ಚುಗೀಸರಿಗೆ ಅಸಾಧ್ಯವಾಗಿತ್ತು.[42] ಹೀಗೆ ಕರಿಮೆಣಸು ಈ ಕಾಲದಲ್ಲಿ ರಾಜಕೀಯ ಶಕ್ತಿಗಳನ್ನು ನಿಯಂತ್ರಿಸುವಷ್ಟು ಪ್ರಭಾವಶಾಲಿ ಸರಕಾಗಿತ್ತು ಎಂದು ತಿಳಿದು ಬರುತ್ತದೆ.

**5.4 ಜಲಯಾನಾಧಿಕಾರ ಪರವಾನಿಗೆ**

ಆರ್ಥಿಕ ರಾಜಕಾರಣದಲ್ಲಿ ಹಲವು ಬಾರಿ ಪೋರ್ಚುಗೀಸರು ಮೇಲುಗೈ ಪಡೆಯಲು ಮತ್ತು ಪಶ್ಚಿಮ ಕರಾವಳಿಯಲ್ಲಿ ಅವರ ನಿಯಂತ್ರಣ ಬಿಗಿಗೊಳಿಸಲು ಅವರು ಬಳಸಿದ 2 ಅಸ್ತ್ರಗಳೆಂದರೆ ಕಾರ್ಟೇಸ್ (ಜಲಯಾನಾಧಿಕಾರ ಪರವಾನಿಗೆ) ಮತ್ತು ಖಫಿಲ್. (ಪೋರ್ಚುಗೀಸ್ ಬೆಂಗಾವಲು ಪಡೆ) ಜಲಯಾನಾಧಿಕಾರ ಪರವಾನಿಗೆಯನ್ನು ಒಂದು ವರ್ಷದ ಅವಧಿಗೆ ನಿರ್ದಿಷ್ಟ ದರವನ್ನು ವಿಧಿಸಿ ವ್ಯಾಪಾರಿಗಳಿಗೆ ನೀಡಲಾಗುತ್ತಿತ್ತು. ಜಲಯಾನಾಧಿಕಾರ ಪತ್ರಗಳನ್ನು ಕೊಡುವ ಮತ್ತು ಅಂತಹ ಪತ್ರಗಳಿಲ್ಲದೆ ಜಲಪ್ರಯಾಣ ಮಾಡುವ ಹಡಗುಗಳನ್ನು ನಿರ್ಬಂಧಿಸುವ ಕಾರ್ಯ ನೀತಿಗಳ ಬಗ್ಗೆ ಸ್ಪಷ್ಟೀಕರಣ ನೀಡುತ್ತಾ ವೈಸ್‌ರಾಯನು ಕ್ರಿ.ಶ 1728ರ ನವೆಂಬರ್ 22ರಂದು ಮಂಗಳೂರಿನ ಶ್ರೀಮಂತ ವ್ಯಾಪಾರಿ ಸುಂದರದಾಸ ವಿಷ್ಣುದಾಸನಿಗೆ ಬರೆಯುತ್ತಾ, ಪೋರ್ಚುಗಾಲದ ದೊರೆಯು ಸಮುದ್ರಗಳ ಒಡೆಯನೆಂದೂ ಆದುದರಿಂದ ಅವನ ನೌಕರರು ಕೊಟ್ಟ ಅಧಿಕಾರ ಪತ್ರ ಪಡೆದುಕೊಳ್ಳದೆ ಸಮುದ್ರಯಾನ ಮಾಡುವ ಹಡಗುಗಳನ್ನು ವಶಪಡಿಸಿ ಕೊಳ್ಳಲಾಗುವುದೆಂದೂ ವಿವರಿಸಿದ್ದನು.[43] ಕ್ರಿ.ಶ. 1621 ಡಿಸೆಂಬರ್‌ನಲ್ಲಿ ವೆಂಕಟಪ್ಪ ನಾಯಕ ತನ್ನ ನಿಕಟವರ್ತಿಯಾದ ವಿಠಲ ಶೆಣ್ಯೆಯನ್ನು ಗೋವಾದ ವೈಸ್‌ರಾಯಿಯಲ್ಲಿಗೆ ಕಳುಹಿಸಿದ್ದ. ಅದರ ಉದ್ದೇಶ ಅವನು ಮೆಕ್ಕಾಗೆ ಭಟ್ಕಳದಿಂದ ಕಳುಹಿಸಲು ಉದ್ದೇಶಿಸಿದ್ದ ವ್ಯಾಪಾರದ ಹಡಗಿಗೆ ಪೋರ್ಚುಗೀಸರ ಕಾರ್ಟೇಜ್‌ನ್ನು ಪಡೆಯುವುದಾಗಿತ್ತು.[44] ವೆಂಕಟಪ್ಪ ನಾಯಕನಂತಹ ಬಲಿಷ್ಠ ರಾಜನೇ ಜಲಯಾನಾಧಿಕಾರ

ಪತ್ರವನ್ನು ಪಡೆಯುತ್ತಿದ್ದನೆಂದರೆ, ಪೋರ್ಚುಗೀಸರು ಎಷ್ಟರ ಮಟ್ಟಿಗೆ ಆ ಅಸ್ತ್ರವನ್ನು ಊರ್ಜಿತಗೊಳಿಸಿದ್ದರು ಎಂದು ತಿಳಿಯಬಹುದು.

ಅದೇ ರೀತಿ ಬಸ್ರೂರಿನ ಸಾರಸ್ವತ ವ್ಯಾಪಾರಿಗಳು ಸ್ವಂತ ಹಡಗುಗಳನ್ನು ಹೊಂದಿದ್ದರು. ಅವರು ಮಸ್ಕತ್, ಕೆಂಪು ಸಮುದ್ರ ಮತ್ತು ಪರ್ಷಿಯನ್ ಗಲ್ಫ್‌ಗಳಿಗೆ ಅಥವಾ ಗೋವಾ ಮತ್ತು ಮಲಬಾರ್ ಬಂದರುಗಳೊಂದಿಗೆ ವ್ಯಾಪಾರ ಸಂಪರ್ಕವನ್ನು ಹೊಂದಿದ್ದರು. ಬಸ್ರೂರಿನಿಂದ ಅಕ್ಕಿ ಮತ್ತು ಇತರ ವಸ್ತುಗಳು ಪೋರ್ಚುಗೀಸರ ಪರವಾನಿಗೆಯಿಂದ ಶ್ರೀಲಂಕಾದಿಂದ ಮೆಲಕಾ ಮತ್ತು ಮೊಜಾಂಬಿಕ್‌ವರೆಗೆ, ಗೋವಾ ಅಥವಾ ಕೊಚ್ಚಿನ್ ಮೂಲಕ ಸಾಗಾಟಗೊಳ್ಳುತ್ತಿದ್ದವು. ಹಾಗೆಯೇ ಬಂಗರಾಜನು ಪೋರ್ಚುಗೀಸರಲ್ಲಿ ಕೆಲವು ಬೇಡಿಕೆಗಳನ್ನು ಮುಂದಿಟ್ಟಿದ್ದ. ಅದರಲ್ಲಿ ವ್ಯಾಪಾರಕ್ಕೋಸ್ಕರ ವರ್ಷಕ್ಕೆ ನಾಲ್ಕು ಜಲಯಾನಾಧಿಕಾರ ಪತ್ರಗಳನ್ನು ಕೊಡಬೇಕೆಂದು ಕಾಗದವೊಂದರಲ್ಲಿ ಭಿನ್ನವಿಸಿದ್ದ.[45] ಶಿವಪ್ಪನಾಯಕನ ಆಳ್ವಿಕೆಯ ಕಾಲದಲ್ಲೂ ಪೋರ್ಚುಗೀಸರು ಜಲಯಾನಾಧಿಕಾರ ಪತ್ರ ಕೊಡುವ ಅಧಿಕಾರವನ್ನು ಹೊಂದಿದ್ದರು. ಕಲ್ಲಿಕೋಟೆಯ ವ್ಯಾಪಾರಿಗಳು ಮತ್ತು ಶಿವಪ್ಪನಾಯಕನ ನಡುವಿನ ವ್ಯಾಪಾರ ಸಂಪರ್ಕವನ್ನು ತಡೆಹಿಡಿಯಲು ಪೋರ್ಚುಗೀಸರು ಜಲಯಾನಾಧಿಕಾರ ಪತ್ರಕೊಡುವುದನ್ನು ನಿಲ್ಲಿಸಿದರಾದರೂ ಮುಂದೆ ವರ್ಷಕ್ಕೆ ನಾಲ್ಕು ಅಧಿಕಾರ ಪತ್ರಗಳನ್ನು ಕೊಡಲೊಪ್ಪಿದರು.[46] ಕ್ರಿ.ಶ.1702ರ ಎಪ್ರಿಲ್ ತಿಂಗಳಲ್ಲಿ ಕೆಳದಿ ಬಸವಪ್ಪನ ಹಡಗನ್ನೂ ಅಧಿಕಾರ ಪತ್ರದ ವಿಚಾರದಲ್ಲಿ ಪೋರ್ಚುಗೀಸರು ವಶಪಡಿಸಿಕೊಂಡರು.[47] ಅಲ್ಲದೇ ಬಿದನೂರು ರಾಜ್ಯದ ರಾಜಪ್ರತಿನಿಧಿಯಾದ ನಿರ್ವಾಣಯ್ಯನ ಹಡಗನ್ನು ರಾಜ ಸೋಮಶೇಖರನಾಯಕನ ಹಡಗನ್ನೂ ಜಲಯಾನಾಧಿಕಾರಪತ್ರದ ವಿಚಾರವಾಗಿ ಪೋರ್ಚುಗೀಸರು ನಿರ್ಬಂಧಿಸಿದ್ದರು.[48] ಅಷ್ಟರಮಟ್ಟಿಗೆ 'ಕಾರ್ಟೇಸ್' ಎನ್ನುವ ಅಸ್ತ್ರ ಈ ಕಾಲದ ಆರ್ಥಿಕ ರಾಜಕಾರಣದಲ್ಲಿ ಪ್ರಮುಖ ಪಾತ್ರ ವಹಿಸಿತ್ತು.

ಚೆನ್ನಮ್ಮನ ಉತ್ತರಾಧಿಕಾರಿ ಬಸಪ್ಪನ ಜೊತೆಯಲ್ಲಾದ ಒಪ್ಪಂದ, ಜಲಯಾನ ಪತ್ರದ ವಿವರವನ್ನು ತಿಳಿಸುತ್ತದೆ.[49] ಅದರ ಪ್ರಕಾರ, ಕೆಳದಿಯರಸನ ಅಥವಾ ಅವನ ಪ್ರಜೆಗಳ ಹಡಗುಗಳು ಪೋರ್ಚುಗೀಸರು ಕೊಟ್ಟ ಅಧಿಕಾರ ಪತ್ರಗಳಿಲ್ಲದೆ ಸಮುದ್ರಯಾನ ಮಾಡಬಾರದು. ಈಗಾಗಲೇ ಪರವಾನಿಗೆ ಪಡೆದ ಬಸಪ್ಪನ ಎರಡು ಹಡಗುಗಳ ಹೊರತಾಗಿ ಉಳಿದವುಗಳಿಗೆ ಅಧಿಕಾರಪತ್ರ ಕೊಡುವಾಗ ಸೂಕ್ತ ದರ ತೆಗೆದುಕೊಳ್ಳಲಾಗುವುದು. ಕನ್ಯಾಕುಮಾರಿ ಮತ್ತು ದೀವ್‌ಗಳ (ಡಿಯು) ಮಧ್ಯೆ ಚಲಿಸುವ ಹಡಗುಗಳಿಗೆ ಮಂಗಳೂರಿನ ಪೋರ್ಚುಗೀಸ ವರ್ತಕ ಕಾರ್ಯಭಾರಿಯು ಕೊಟ್ಟ ಅಧಿಕಾರಪತ್ರ ಸಾಕು. ಆದರೆ ಭಾರತದ ಪೂರ್ವ ಕರಾವಳಿ, ಬಂಗಾಳ, ಕೆಂಪುಸಮುದ್ರದ ಜಲಸಂಧಿ ಅಥವಾ ಪರ್ಶಿಯನ್ ಜಲಸಂಧಿಗೆ ಹೋಗುವ ಹಡಗುಗಳಿಗೆ ಗೋವೆಯಲ್ಲಿ ಅಧಿಕಾರಪತ್ರ ಪಡೆಯಬೇಕು. ಪೋರ್ಚುಗೀಸ ನೌಕೆಗಳೊಂದಿಗೆ ಗೋವೆಗೆ ಹೋಗುವ ಹಡಗುಗಳಿಗೆ ಕೂಡ ಮಂಗಳೂರಿನಲ್ಲಿ ಕೊಟ್ಟ ಅಧಿಕಾರಪತ್ರವಿರಬೇಕಾಗಿತ್ತು. ಈ ನಿಯಮಗಳನ್ನು ಉಲ್ಲಂಘಿಸಿದ ಹಡಗುಗಳನ್ನು ಪೋರ್ಚುಗೀಸರು ವಶಪಡಿಸಿಕೊಳ್ಳಬಹುದಾಗಿತ್ತು.

ಕ್ರಿ.ಶ. 1714ರಲ್ಲಿ ಬಸವಪ್ಪ ಮತ್ತು ಪೋರ್ಚುಗೀಸರ ನಡುವೆ ಆದ ಒಪ್ಪಂದವೊಂದು ಅರಬ್ಬರ ಕುರಿತಾಗಿ ಪೋರ್ಚುಗೀಸರ ಕಠಿಣ ನಿಲುವನ್ನು ತಿಳಿಸುತ್ತದೆ.[50] ಕೊಂಗೊ ಅಥವಾ ಆರ್ಮುಜ್ ಈ ಪ್ರದೇಶಗಳಿಂದ ಕುದುರೆ ತರಲು ಬಸವಪ್ಪನಿಗೆ ವರ್ಷಕ್ಕೆ ಎರಡು ಹಡಗುಗಳಿಗೆ ಪೋರ್ಚುಗೀಸರು ಯಾವುದೇ ದರ ವಿಧಿಸದೆ ಜಲಯಾನಾಧಿಕಾರ ಪತ್ರ ಕೊಡಲು ಒಪ್ಪಿದ್ದರು, ಆದರೆ ಆ ಹಡಗುಗಳು ಮಸ್ಕತ್ ರಾಜ್ಯದ ರೇವುಗಳಿಂದ ಕುದುರೆಗಳನ್ನು ತಂದರೆ ಅಥವಾ ಅರಬರನ್ನು ತಂದರೆ ಪೋರ್ಚುಗೀಸರು ಆ ಹಡಗುಗಳನ್ನು ವಶಪಡಿಸಿಕೊಳ್ಳಬಹುದಾಗಿತ್ತು. ಸಂಶಯ ನಿವಾರಣೆಗೋಸ್ಕರ ಅಂತಹ ಹಡಗುಗಳು ಕೊಂಗೊದಲ್ಲಿ ಅಥವಾ ಆರ್ಮುಜ್‌ನಲ್ಲಿ ಇರುವ ಪೋರ್ಚುಗೀಸ್ ವರ್ತಕ ಕಾರ್ಯಭಾರಿಯ ಸಮರ್ಥನಾ ಪತ್ರ ಪಡೆದುಕೊಳ್ಳಬೇಕಾಗಿತ್ತು. ಬಿದನೂರು ರಾಜ್ಯದ ಹಡಗುಗಳು ಬಸವಪ್ಪನವೇ ಆಗಿದ್ದರೂ ಮತ್ತು ಪೋರ್ಚುಗೀಸರು ಕೊಟ್ಟ ಅಧಿಕಾರಪತ್ರ ಪಡೆದಿದ್ದರೂ, ಆರೇಬಿಯಾದ ರೇವುಗಳಿಗೆ ಹೋದರೆ ಆ ಹಡಗುಗಳನ್ನು ಪೋರ್ಚುಗೀಸರು ವಶಪಡಿಸಿಕೊಳ್ಳಬಹುದಾಗಿತ್ತು. ಅಂದರೆ ಜಲಯಾನಾಧಿಕಾರ ಪತ್ರ ನೀಡಿದರೂ ಅರಬ್ಬರ ಜೊತೆಯಲ್ಲಿ ವ್ಯಾಪಾರ ಸಂಪರ್ಕ ಸಾಧಿಸಿದರೆ, ಅಧಿಕಾರ ಪತ್ರ ಅನೂರ್ಜಿತಗೊಳ್ಳುತ್ತಿತ್ತು.

ಕೆಲವು ಸಂದರ್ಭಗಳಲ್ಲಿ ನಿರ್ದಿಷ್ಟ ಪ್ರಮಾಣದ ಅಕ್ಕಿಯ ಕಪ್ಪವನ್ನು ನೀಡಿದರೆ ವರ್ಷ ಪೂರ್ತಿ ಜಲಯಾನ ಪತ್ರವನ್ನು ನೀಡುವ ಭರವಸೆಯನ್ನು ಪೋರ್ಚುಗೀಸರು ನೀಡುತ್ತಿದ್ದರು. ಕ್ರಿ.ಶ.1728ರಲ್ಲಿ ವೈಸ್‌ರಾಯ್ ಬರೆದ ಪತ್ರದಲ್ಲಿ "ಕೆಳದಿಯರಸರು ತಮಗೆ ಪ್ರತಿವರ್ಷ 5000 ಚೀಲ ಅಕ್ಕಿಯ ಕಪ್ಪ ಕೊಟ್ಟರೆ ಅವನ ಮತ್ತು ಅವನ ಪ್ರಜೆಗಳ ಹಡಗುಗಳಿಗೆಲ್ಲ ಯಾವುದೇ ದರ ವಿಧಿಸದೆ ಜಲಯಾನಾಧಿಕಾರ ಪತ್ರಗಳನ್ನು ಕೊಡಬಹುದು. ಆದರೆ ಅಧಿಕಾರ ಪತ್ರವಿಲ್ಲದ ಹಡಗನ್ನು ತಾವು ಸ್ವಾಧೀನಪಡಿಸಿಕೊಳ್ಳುವೆವು. ಕುದುರೆಗಳನ್ನು ತರುವ ಪ್ರತಿ ಹಡಗು ತಮಗೆ ಎರಡು ಕುದುರೆಗಳನ್ನು ಕೊಡಬೇಕು"ಎಂಬುದಾಗಿ ಹೇಳಲಾಗಿತ್ತು.[51] ಈ ಎಲ್ಲಾ ವಿಚಾರಗಳು ತುಳುನಾಡಿನಲ್ಲಿ ಜಲಯಾನಾಧಿಕಾರ ಪತ್ರದ ಕಾರಣದಿಂದ ಕೆಳದಿಯರಸರಿಗೂ ಪೋರ್ಚುಗೀಸರಿಗೂ ಹಲವು ಸಂಘರ್ಷಗಳಾದವು ಮತ್ತು ಪೋರ್ಚುಗೀಸರು ಆರ್ಥಿಕ ರಾಜಕಾರಣದಲ್ಲಿ ಜಲಯಾನಾಧಿಕಾರ ಪತ್ರದ ಮೂಲಕ ತಮ್ಮ ಹಿಡಿತವನ್ನು ಬಲಪಡಿಸಿದರೆಂಬ ವಿಚಾರವನ್ನು ದೃಢಪಡಿಸುತ್ತವೆ.

### 5.5 ಕೋಟೆ ನಿರ್ಮಾಣ ಮತ್ತು ನಿಯಂತ್ರಣದ ಸಂಘರ್ಷ

ತುಳುನಾಡಿನಲ್ಲಿ ಕೆಳದಿ ರಾಜರು ಕಟ್ಟಿಸಿದಷ್ಟು ಸಂಖ್ಯೆಯ ಕೋಟೆಗಳನ್ನು ಬೇರೆ ಯಾವುದೇ ರಾಜ ಮನೆತನಗಳೂ ಕಟ್ಟಿಸಿರುವ ಸುಳಿವು ನಮಗೆ ದೊರೆಯುವುದಿಲ್ಲ. ಅದೇ ರೀತಿ ಕರಾವಳಿಯ ಪ್ರಮುಖ ಸ್ಥಳಗಳಲ್ಲಿ ಪೋರ್ಚುಗೀಸರೂ ಕೋಟೆಗಳನ್ನು ನಿರ್ಮಾಣ ಮಾಡಿದ್ದರು. ಇನ್ನು ಸ್ಥಳೀಯ ರಾಜರು ತಮ್ಮ ಅರಮನೆಯ ಸುತ್ತ ಅಥವಾ ಆಯಕಟ್ಟಿನ ಸ್ಥಳಗಳಲ್ಲಿ ಕೋಟೆಗಳನ್ನು ನಿರ್ಮಿಸಿಕೊಂಡರು. ಆರ್ಥಿಕ ವಿಚಾರಗಳಿಗೆ ಸಂಬಂಧಿಸಿದಂತೆ ಕೋಟೆಗಳ ನಿರ್ಮಾಣದ ಹಿನ್ನೆಲೆಯು ಅಧ್ಯಯನ ಯೋಗ್ಯವಾಗಿದೆ.

ತುಳುನಾಡು ನೇರವಾಗಿ ಅರಬ್ಬೀ ಸಮುದ್ರಕ್ಕೆ ತೆರೆದುಕೊಂಡಿರುವುದರಿಂದ ಆಫ್ರಿಕಾ, ಅರಬ್ ಹಾಗೂ ಯುರೋಪ್ ದೇಶಗಳಿಂದ ಬರುವ ಹಾಗೂ ಕರಾವಳಿ ತೀರದಲ್ಲಿದ್ದ ಕಡಲುಗಳ್ಳರಿಂದ ಹಾಗೂ ವಸಾಹತುಶಾಹಿಗಳ ದಬ್ಬಾಳಿಕೆಯಿಂದ ತಮ್ಮವರನ್ನು ರಕ್ಷಿಸಿಕೊಳ್ಳಲು ಕೋಟೆಯ ನಿರ್ಮಾಣ ಅಗತ್ಯವಾಗಿತ್ತು. ಹೀಗೆ ನಿರ್ಮಾಣವಾದ ಕೋಟೆಗಳಿಗೆ ಕೆಳದಿಯರಸರು ಕೋಟೆ ಕ್ಷತ್ರಿಯರೆಂಬ ಕನ್ನಡ ಜನರನ್ನು ಕರೆತಂದು ರಕ್ಷಣೆಗೆ ನಿಯೋಜಿಸಿದ್ದು ಗಮನಾರ್ಹವಾಗಿದೆ. ಪೋರ್ಚುಗೀಸರು ಕರಾವಳಿಯಲ್ಲಿ ತಮ್ಮ ಅಸ್ತಿತ್ವವನ್ನು ಗಟ್ಟಿಗೊಳಿಸಲು ಕೋಟೆಗಳನ್ನು ನಿರ್ಮಿಸಿದರು. ಈ ಹಿನ್ನೆಲೆಯಲ್ಲಿ ತುಳುನಾಡಿನಲ್ಲಿರುವ ಕೆಳದಿಯರಸರ ಮತ್ತು ಅಳಿದು ಹೋಗಿರುವ ಪೋರ್ಚುಗೀಸರ ಕೋಟೆಗಳ ಸ್ವರೂಪ ಮತ್ತು ಕೋಟೆ ನಿಯಂತ್ರಣದ ವಿಚಾರವಾಗಿ ನಡೆದ ಸಂಘರ್ಷಗಳನ್ನು ಅಧ್ಯಯನ ಮಾಡಲಾಗಿದೆ.

**ತುಳುನಾಡಿನ ಕೆಳದಿ ಕೋಟೆಗಳ ಸ್ವರೂಪ:** ರಾಜಧಾನಿಯಾದ ಇಕ್ಕೇರಿಯಿಂದ ನೂರಾರು ಮೈಲು ದೂರದಲ್ಲಿ ಹಬ್ಬಿರುವ ರಾಜ್ಯವನ್ನು ಅನ್ಯರು ಆಕ್ರಮಿಸದಂತೆ, ಒಳ ದಂಗೆ ನಡೆಯದಂತೆ ತಮ್ಮ ಅಂಕಿತದಲ್ಲೇ ಇರಿಸಿಕೊಂಡು ಅಲ್ಲಿನ ಕಂದಾಯ ಸರಿಯಾಗಿ ಬೊಕ್ಕಸಕ್ಕೆ ಜಮಾವಣೆಗೊಳ್ಳಲು ಕೆಳದಿಯರಸರಿಗೆ ವಿಶೇಷವಾದ ಆಡಳಿತ ವ್ಯವಸ್ಥೆ ಬೇಕಿತ್ತು. ಬೆರಳೆಣಿಕೆಯ ಸಂಖ್ಯೆಯ ರಾಜ ಪ್ರತಿನಿಧಿಗಳಿಗೆ ಇದು ಕಷ್ಟ ಸಾಧ್ಯ. ಅಲ್ಲಲ್ಲಿನ ಆಡಳಿತ ವೆಚ್ಚಕ್ಕೆ ಸಂಪತ್ತು ಅಲ್ಲಲ್ಲೇ ಕಂದಾಯ ಮೂಲಕ ಶೇಖರಣೆಯಾಗಬೇಕು. ರಕ್ಷಣೆಗೆ ತರಬೇತಿಯನ್ನು ಪಡೆದ ಸೈನಿಕರನ್ನು ನೇಮಿಸಬೇಕು. ಹೀಗೆ ಆಯಾ ಪ್ರದೇಶಗಳ ರಕ್ಷಣೆ, ಆಡಳಿತ, ವೈರಿಗಳ ತಡೆಗಾಗಿ ಇಕ್ಕೇರಿ ಅರಸರು ತಮ್ಮ ಸಾಮ್ರಾಜ್ಯದ ಆಯಕಟ್ಟಿನ ಪ್ರದೇಶಗಳಲ್ಲಿ ಕೋಟೆಗಳನ್ನು ಕಟ್ಟಿ ಸೈನ್ಯವನ್ನಿರಿಸಿದ್ದರು.[52] ಕರಾವಳಿಯುದ್ದಕ್ಕೂ ಇವರ ಕಾಲಕ್ಕೆ ಸೇರಬಹುದಾದ ಹಲವಾರು ಕೋಟೆಗಳನ್ನು ಕಾಣಬಹುದು. ಎಲ್ಲಿ ರಕ್ಷಣೆಯ ಅವಶ್ಯಕತೆ ಹೆಚ್ಚಿದೆಯೋ ಅಲ್ಲಿ ಕೋಟೆಗಳ ಸಂಖ್ಯೆಯೂ ಹೆಚ್ಚಿತ್ತು. ಉದಾಹರಣೆಗೆ ಬೇಕಲ, ಚಂದ್ರಗಿರಿ, ಕಾಸರಗೋಡು, ಕುಂಬಳೆಯ ಕೋಟೆಗಳು 10–15 ಕಿ.ಮೀ. ವ್ಯಾಪ್ತಿಯಲ್ಲಿವೆ. ಇವರು ನಿರ್ಮಿಸಿದ ಕೋಟೆಗಳು ಒಂದು ಕೋಟೆಯಿಂದ ಇನ್ನೊಂದಕ್ಕೆ ಸಂಪರ್ಕ ಸಾಧ್ಯವಾಗುವಷ್ಟು ದೂರವಿದೆ.

ಸಾಮಾನ್ಯವಾಗಿ ಪ್ರತೀ ಕೋಟೆಗಳು ಸ್ವಾವಲಂಬಿಯಾಗಿದ್ದವು. ನದಿಯ ರಕ್ಷಣೆ ಇಲ್ಲದಿದ್ದರೆ, ಕಂದಕ ತೋಡಿ ಅಲ್ಲಿ ನೀರನ್ನು ತುಂಬಿಸಿ ಕೋಟೆಯನ್ನು ರಕ್ಷಿಸಲಾಗುತ್ತಿತ್ತು. ಕೋಟೆಯ ಒಳಗೆ ವಿವಿಧ ರೀತಿಯ ಬಾವಿಗಳಿದ್ದು ಅವುಗಳಲ್ಲಿ ನೀರು, ಎಣ್ಣೆ, ತುಪ್ಪಗಳನ್ನು ತುಂಬಿಡುತ್ತಿದ್ದರು. ಹಾಗೆಯೇ ಆಹಾರ ಧಾನ್ಯಗಳು ಸಂಗ್ರಹಿಸುವ ಕಣಜಗಳು, ದೇವಾಲಯಗಳು, ಅರಮನೆಗಳು, ಮನೆಗಳು, ಆನೆ, ಕುದುರೆಯ ಲಾಯಗಳು, ಕೋವಿ ಮದ್ದಿನ ಉಗ್ರಾಣಗಳು, ಮತ್ತು ಇತರ ಅಗತ್ಯದ ವಸ್ತುಗಳು ಅದರೊಳಗಿರುತ್ತಿತ್ತು.[53]

ಕೆಳದಿಯ ರಾಜರ ಕಾಲದಲ್ಲಿ ಬಂಡೆಗಲ್ಲುಗಳನ್ನು(ಗ್ರಾನೈಟ್) ಮತ್ತು ಲ್ಯಾಟರೈಟ್ ಕಲ್ಲುಗಳನ್ನು ಕೋಟೆ ನಿರ್ಮಿಸಲು ಬಳಸುತ್ತಿದ್ದರು. ಕೋಟೆಯ ಅಡಿಪಾಯ ಚಾಚಿ ಜಾರಿ ಬೀಳದಂತೆ ವ್ಯವಸ್ಥೆಯಿತ್ತು. ಕೋಟೆಯಲ್ಲಿ ಸಮ ದೂರದಲ್ಲಿ ಅಲ್ಲಲ್ಲಿ ಸೈನಿಕರಿಗೆ ನಿಂತು ನೋಡಲು ಅಗಲ ಜಾಗವಿರುವ ಕೊತ್ತಲಗಳಿವೆ.

ಮಧ್ಯದಲ್ಲಿ, ಸುತ್ತಲೂ ದೂರಕ್ಕೆ ದೃಷ್ಟಿ ಹಾಯಿಸಲು, ಧ್ವಜ ಏರಿಸಲು ಎತ್ತರದ ಕೊತ್ತಲಗಳೂ ಇದ್ದವು. ಕೋಟೆಯ ಮೇಲೆ ಎತ್ತರದಲ್ಲಿ ನಡೆದಾಡಲು ಅಗಲವಾದ ಜಗಲಿ, ಗೋಡೆಯಲ್ಲಿ ಕೆಳಮುಖವಾಗಿ ಕೋವಿಯನ್ನಿಟ್ಟು ಗುಂಡು ಹೊಡೆಯಲು ಹೊರಗೆ ನೋಡಲು ತೂತುಗಳು ಇವೆ. ಕೆಳದಿಯರಸರ ಪ್ರತೀ ಕೋಟೆಯಲ್ಲಿ ಕೋಟೆಯ ಹೆಬ್ಬಾಗಿಲಿಗೆ ತಾಗಿದಂತೆ ಹನುಮಂತನ ಗುಡಿಯಿದೆ. ಹೆಬ್ಬಾಗಿಲಿನ ಅಕ್ಕಪಕ್ಕದಲ್ಲಿ ಕಾವಲು ಸೈನಿಕರ ತಾಣವಿರುತ್ತದೆ. ಮಹಾದ್ವಾರ ಮತ್ತು ಉಪದ್ವಾರಗಳಲ್ಲದೆ ಆಪತ್ತಿನ ಸಮಯದಲ್ಲಿ ಪಾರಾಗಲು ಗುಪ್ತ ದ್ವಾರವಿರುತ್ತದೆ. ಬಚ್ಚಿಟ್ಟುಕೊಳ್ಳಲು ನೆಲಮಾಳಿಗೆ, ಮಹಾದ್ವಾರದ ಎದುರಲ್ಲಿ ಕಂದಕವನ್ನು ದಾಟಲು ಸಂಕವಿರುತ್ತದೆ. ಯಾವುದೇ ರೀತಿಯಲ್ಲಿ ಮೇಲೇರಲು ಸಾಧ್ಯವಾಗದಷ್ಟು ಕೋಟೆ ಎತ್ತರವಿರುತ್ತದೆ. ತುಳುನಾಡಿನ ಕೋಟೆಗಳ ವಾಸ್ತು ವಿನ್ಯಾಸಗಳು ಸಾಮಾನ್ಯವಾಗಿ ಪಶ್ಚಿಮ ಕರಾವಳಿಯ ಉದ್ದಕ್ಕೂ ಇರುವ ಕೋಟೆಗಳಂತೆಯೇ ಇದೆ. ಕೆಲವು ಕಡೆಗಳಲ್ಲಿ ರಹಸ್ಯ ದ್ವಾರಗಳನ್ನು ಬಿಡಲಾಗಿದ್ದು ಅವು ಸಮೀಪದ ಸಮುದ್ರಕ್ಕೂ ಅಥವಾ ನದಿಗೋ ಕೆರೆಗೋ, ದಾರಿಯನ್ನು ಹೊಂದಿವೆ. ಸಾಗರಕ್ಕೆ ಮುಖಮಾಡಿದ ಬುರುಜುಗಳ ಮೇಲೆ ತೋಪುಗಳನ್ನು ಇರಿಸಿ ದೂರದಿಂದ ಬರುವ ನಾವೆಗಳನ್ನು ವೀಕ್ಷಿಸಲು ಅಥವಾ ನಾಶಪಡಿಸಲು ವ್ಯವಸ್ಥೆ ಇತ್ತು. ಕೆಳದಿಯರಸರ ಕೋಟೆಗಳು ಒಂದೇ ರೀತಿಯ ವಾಸ್ತು ವಿನ್ಯಾಸವನ್ನು ಹೊಂದಿವೆ.

ಎಸ್.ಕೆ.ಜೋಶಿಯವರು ತುಳುನಾಡಿನಲ್ಲಿದ್ದ ಸುಮಾರು 90ಕ್ಕೂ ಹೆಚ್ಚು ಕೋಟೆಗಳನ್ನು ಉಲ್ಲೇಖಿಸಿದ್ದಾರೆ.[54] ಅವುಗಳಲ್ಲಿ ಹೆಚ್ಚಿನವು ಕೆಳದಿ ಅರಸ ಕಾಲದಲ್ಲಿ ಕೆಳದಿ ರಾಜರುಗಳು ನಿರ್ಮಿಸಿದ್ದ ಕೋಟೆಗಳಾಗಿವೆ. ಕೆಳದಿ ಕಾಲದ ತುಳುನಾಡಿನ ಕೆಲವು ಪ್ರಮುಖ ಕೋಟೆಗಳನ್ನು ಇಲ್ಲಿ ಅಧ್ಯಯನಕ್ಕೊಳ ಪಡಿಸಲಾಗಿದೆ.

**ಕುಂಬಳೆ ಕೋಟೆ:** ಈಗಿನ ಕುಂಬಳೆ, ಕೇರಳದ ಕಾಸರಗೋಡಿನಿಂದ 9 ಮೈಲು ಉತ್ತರಕ್ಕೆ ಇದೆ. ಕುಂಬಳೆ ಕೋಟೆ, ಕುಂಬಳೆ ಪೇಟೆಯಿಂದ ಸುಮಾರು ಒಂದು ಮೈಲು ಉತ್ತರಕ್ಕೆ ಇದೆ. ಮೂಡಣದಿಂದ ಬಲಕ್ಕೆ ಹೋಗಿ ಸಮುದ್ರ ಸೇರುವ ಕುಂಬಳೆ ಹೊಳೆ, ಎಡಕ್ಕೆ ಶೀರೆ(ಸಿರಿಯ) ಹೊಳೆ, ಪಶ್ಚಿಮಕ್ಕೆ ಅರಬ್ಬೀ ಸಮುದ್ರವಿದ್ದು ಜಲಾವೃತವಾದ ದ್ವೀಪದಂತಿರುವ ಕೋಟೆಗೆ ಸರಿಯಾದ ಚಿಕ್ಕ ಗುಡ್ಡವಿರುವ ಪ್ರದೇಶ ಇದಾಗಿದೆ. ಕ್ರಿ.ಶ. 16ನೇ ಶತಮಾನದಲ್ಲಿ ಹಿರಿಯ ವೆಂಕಟಪ್ಪ ನಾಯಕನು ಈ ಕೋಟೆಯನ್ನು ಕಟ್ಟಿಸಿದನು.[55] ಸುಮಾರು 10 ಎಕರೆ ವಿಸ್ತಾರವಿರುವ ಈ ಕೋಟೆಯಲ್ಲಿ ವೀರಾಂಜನೇಯ ಗುಡಿಯಿದ್ದು, ಮಧ್ಯದಲ್ಲಿ ಸುಮಾರು 50 ಅಡಿ ಎತ್ತರವಿರುವ ಕೊತ್ತಲವಿದೆ. ಇದು ಬೇಕಲಕೋಟೆಯ ಬುರುಜನ್ನೇ ಹೋಲುತ್ತದೆ. ಕೋಟೆಯ ಗೋಡೆಯಲ್ಲಿ ಅಲ್ಲಲ್ಲಿ ಕಮಾನಿನಾಕಾರದ ಹಾಗೂ ಆಯತಾಕಾರದ ಸಣ್ಣ ಸಣ್ಣ ಕಿಂಡಿಗಳಿವೆ.

ಕುಂಬಳೆಯು ಆ ಕಾಲದ ಉತ್ತಮ ಬಂದರಾಗಿಯೂ, ಮಾಂಡಲೀಕ ಪ್ರದೇಶವಾಗಿಯೂ ಇತ್ತು. ಕ್ರಿ.ಶ.1514ರಲ್ಲಿ ಬಾರ್ಬೋಸ, ಕ್ರಿ.ಶ.1623ರಲ್ಲಿ ಪಿಯತ್ರೊ ಡೆಲ್ಲಾ ವಲ್ಲೆ ಮತ್ತು ಕ್ರಿ.ಶ. 1801ರಲ್ಲಿ ಬುಕಾನನ್ ಈ ಪ್ರದೇಶವನ್ನು ಸಂದರ್ಶಿಸಿದ್ದರು. ಬಾರ್ಬೋಸನು, "ಕುಂಬಳೆ ಬಂದರಿನಿಂದ ಮಾಲ್ದೀವ್‌ಗಳಿಗೆ ಹೆಚ್ಚು

ಅಕ್ಕಿಯು ಹೋಗುತ್ತದೆ" ಎಂದು ತಿಳಿಸಿದ್ದಾನೆ.[56] ಈ ಹಿನ್ನೆಲೆಯಲ್ಲಿ ಕುಂಬಳೆ ವಿಜಯನಗರದ ಕಾಲದಿಂದಲೇ ಪ್ರಮುಖ ವ್ಯಾಪಾರದ ಕೇಂದ್ರವಾಗಿತ್ತು.

**ಕಾಸರಗೋಡು ಕೋಟೆ:** ಕೆಳದಿ ಅರಸರಲ್ಲಿ ಸದಾಶಿವ ನಾಯಕನು ಮೊದಲ ಬಾರಿಗೆ ಇಲ್ಲಿಯವರೆಗೂ ಬಂದು ಕರಾವಳಿಯ ತುಳು ರಾಜರನ್ನೆಲ್ಲ ಜಯಿಸಿ ಇಲ್ಲಿ ತೊಲಗದ ಕಂಬವನ್ನು ನಿಲ್ಲಿಸಿದನೆಂದು ಲಿಂಗಣ್ಣ ಕವಿ ತಿಳಿಸುತ್ತಾನೆ 'ಶಿವತತ್ವ ರತ್ನಾಕರ' ಗ್ರಂಥವೂ ಇವನು 'ಜಯಸ್ತಂಭ' ವೊಂದನ್ನು ಸ್ಥಾಪಿಸಿದ ಬಗ್ಗೆ ತಿಳಿಸುತ್ತದೆ ಈ ಹಿನ್ನೆಲೆಯಲ್ಲಿ ಕಾಸರಗೋಡು ಕೋಟೆಯನ್ನು ಸದಾಶಿವ ನಾಯಕನೇ ಕಟ್ಟಿಸಿದನೆಂದು ಹೇಳಲಾಗಿದೆ.[57] ಈ ಕೋಟೆಯನ್ನು ವೆಂಕಟಪ್ಪ ನಾಯಕ ಬಲಗೊಳಿಸಿದ ಎಂಬುದಾಗಿ ಕೆಳದಿ ನೃಪ ವಿಜಯ ತಿಳಿಸುತ್ತದೆ.[58] ಕಾಸರಗೋಡು ಕೋಟೆಯ 5 ಎಕರೆ ವಿಸ್ತೀರ್ಣವುಳ್ಳ ಸಣ್ಣಕೋಟೆ. ಪಯಸ್ವಿನಿ ನದಿಗೆ ಹತ್ತಿರವಾಗಿ ಎತ್ತರವಾದ ಗುಡ್ಡದಲ್ಲಿ ಈ ಕೋಟೆಯಿದೆ. ಈ ಕೋಟೆಗೆ ಪಶ್ಚಿಮದಲ್ಲಿ ರಾಜದ್ವಾರವಿದೆ. ಪೂರ್ವದಲ್ಲಿ ಗುಪ್ತದ್ವಾರವಿದ್ದಂತೆ ತಿಳಿದು ಬಂದರೂ ಇಂದಿನ ಸ್ಥಿತಿಯಲ್ಲಿ ಅದನ್ನು ಕಂಡು ಹಿಡಿಯುವುದು ಕಷ್ಟ. ಕೋಟೆಯ ಒಳಗೆ ಕೆರೆಯೊಂದಿದೆ. ಈ ಕೆರೆಯ ರಚನೆ ಬೇಕಲಕೋಟೆಯ ಬಾವಿಯ ರಚನೆಯನ್ನು ಹೋಲುತ್ತದೆ. ಕೋಟೆಯ ಹೊರಗೆ ಸುತ್ತಲೂ ಆಳವಾದ ಕಂದಕವಿದ್ದು ಕೋಟೆ ಎತ್ತರದ ಸ್ಥಳದಲ್ಲಿದೆ. ಪೂರ್ವದಿಕ್ಕಿನಲ್ಲಿ ಅರ್ಧಚಂದ್ರಾಕೃತಿಯ ಬುರುಜೊಂದರ ಸ್ವಲ್ಪ ಭಾಗ ಮಾತ್ರ ಉಳಿದಿದ್ದು, ಕೋಟೆಯ ಗೋಡೆಗಳು ಶಿಥಿಲಗೊಂಡಿವೆ. ಕೋಟೆಯ ದಕ್ಷಿಣ ಭಾಗದ ಬುರುಜಿನ ಮೇಲೆ ನಿಂತು ನೋಡಿದರೆ ಪಯಸ್ವಿನಿ ನದಿ ಮತ್ತು ಚಂದ್ರಗಿರಿ ಕೋಟೆ ಗೋಚರವಾಗುತ್ತದೆ. ಈ ನದಿಯ ಮೂಲಕ ಇತರ ಸ್ಥಳಗಳಿಂದ ಇಲ್ಲಿಗೆ ವ್ಯಾಪಾರಿ ಸರಕುಗಳ ಪೂರೈಕೆಯಾಗುತ್ತಿದ್ದಿರಬೇಕು.

**ಚಂದ್ರಗಿರಿ ಕೋಟೆ:** ಕಾಸರಗೋಡು ಜಿಲ್ಲೆಯಲ್ಲಿ ಸುಸ್ಥಿತಿಯಲ್ಲಿರುವ ಕೆಳದಿಯರಸರ ಕೋಟೆಗಳಲ್ಲಿ ಚಂದ್ರಗಿರಿ ಕೋಟೆ ಪ್ರಮುಖವಾಗಿದೆ. ಬೇಕಲ ಮತ್ತು ಚಂದ್ರಗಿರಿ ಕೋಟೆಗಳು ಇಂದು ಪುರಾತತ್ವ ಇಲಾಖೆಯ ಅಧೀನದಲ್ಲಿವೆ. ಕಾಸರಗೋಡಿನ ಕೋಟೆಯಂತೆಯೇ ಈ ಕೋಟೆಯೂ ಚಂದ್ರಗಿರಿ ನದಿಯ ದಡದಲ್ಲಿದಲ್ಲಿದೆ. ಕೋಟೆಯ ಒಳಗೆ ಆಳವಾದ ದೊಡ್ಡ ಕೆರೆ, ಕಟ್ಟಡಗಳ ಅವಶೇಷಗಳಿವೆ. ಕೆಳದಿಯ ಉಳಿದ ಕೋಟೆಗಳಂತೆ ಈ ಕೋಟೆಯಲ್ಲಿಯೂ ಆಂಜನೇಯ ಗುಡಿಯಿದ್ದ ಸ್ಥಳವನ್ನು ಗುರುತಿಸಬಹುದಾದರೂ ಇಂದು ಇಲ್ಲಿ ಗುಡಿಯಿಲ್ಲ. ಒಂದು ಬದಿಯಲ್ಲಿ ಸಾಗರ, ಇನ್ನೊಂದು ಬದಿಯಲ್ಲಿ ಚಂದ್ರಗಿರಿ(ಪಯಸ್ವಿನಿ) ನದಿ ಹರಿಯುತ್ತಿದ್ದು, ಆಯಕಟ್ಟಿನ ಸ್ಥಳದಲ್ಲಿ ಈ ಕೋಟೆ ನಿರ್ಮಾಣ ಮಾಡಲಾಗಿದೆ. ಕೋಟೆಯ ಸುತ್ತಮುತ್ತ ಕನ್ನಡಿಗರು ಈಗಲೂ ನೆಲೆಸಿದ್ದಾರೆ.

**ಬೇಕಲ ಕೋಟೆ:** ಕಾಸರಗೋಡಿನಿಂದ 14ಕಿ.ಮೀ ಅಂತರದಲ್ಲಿರುವ ಬೇಕಲಕೋಟೆ, ಹೊಸದುರ್ಗ ತಾಲೂಕಿನ ರಾಷ್ಟ್ರೀಯ ಹೆದ್ದಾರಿ 17ರ ಮಗ್ಗುಲಲ್ಲಿದೆ. ಈ ಕೋಟೆಯನ್ನು ಶಿವಪ್ಪನಾಯಕನು ಕ್ರಿ.ಶ 1653ರ ಸುಮಾರಿಗೆ ಸಮುದ್ರ ಬಳಿಯ ಎತ್ತರವಾದ ಸ್ಥಳದ ಮೇಲೆ ನಿರ್ಮಿಸಿದ್ದನು.[59] ಸುಮಾರು 13 ಎಕೆ ವಿಸ್ತೀರ್ಣದಲ್ಲಿ ಈ

ಕೋಟೆ ನಿರ್ಮಾಣವಾಗಿದೆ. ಆದರೆ ಕೋಲತ್ತಿರಿ ಅರಸರು ಈ ಕೋಟೆಯನ್ನು ನಿರ್ಮಿಸಿದ್ದು, ಶಿವಪ್ಪನಾಯಕ ಇದನ್ನು ಬಲಗೊಳಿಸಿದನೆಂಬ ಪ್ರತೀತಿ ಇದೆ. ಈ ಕೋಟೆಯ ಭವ್ಯತೆ, ವಿಸ್ತಾರ, ನಿರ್ಮಾಣದ ಶೈಲಿ ಇವುಗಳನ್ನು ನೋಡಿದರೆ, ಇದು ತುಂಡರಸರಾದ ಕೋಲತ್ತಿರಿಯರಸರ ನಿರ್ಮಾಣವೆಂದು ನಂಬಲು ಸಾಧ್ಯವಾಗದು. ಕೆಳದಿಯರಸರಲ್ಲಿ ಅತ್ಯಂತ ಸಮರ್ಥನಾದ ಶಿವಪ್ಪನಾಯಕನೇ ಇದನ್ನು ಕಟ್ಟಿಸಿರಬೇಕು. ದಕ್ಷಿಣ ಕೇರಳದ ಅರಸರ ಆಕ್ರಮಣವನ್ನು ತಡೆಯಲು ಮತ್ತು ಪೋರ್ಚುಗೀಸರನ್ನು ಹದ್ದುಬಸ್ತಿನಲ್ಲಿಡಲು ಈ ಕೋಟೆ ಕೆಳದಿಯರಸರಿಗೆ ಸಹಕಾರಿಯಾಗಿತ್ತು. ಕೋಟೆಯ ಹೆಬ್ಬಾಗಿಲ ಇಕ್ಕೆಲಗಳಲ್ಲಿ ಆಳವಾದ ಕಂದಕಗಳು ತೆರೆದುಕೊಂಡಿವೆ. ಈ ಕಂದಕಗಳು ಕೋಟೆಯ ಪೂರ್ವ ದಿಕ್ಕಿಗೆ ಹೊರ ವಲಯದಲ್ಲಿ ಬಳಸಿಕೊಂಡು ಮುಂದೊತ್ತಿ ದಕ್ಷಿಣದ ಸಮುದ್ರದಲ್ಲಿ ಪರ್ಯಾವಸಾನಗೊಂಡರೆ, ಇತ್ತ ಪಶ್ಚಿಮ ದಿಕ್ಕಿನಲ್ಲಿ ಸಮುದ್ರದ ಕಿನಾರೆಯಲ್ಲಿ ಅಂತ್ಯಗೊಳ್ಳುತ್ತದೆ. ಯುದ್ಧ ಕಾಲದಲ್ಲಿ ವೈರಿಗಳ ಪ್ರವೇಶಕ್ಕೆ ತಡೆಯೊಡ್ಡಿ ಆತಂಕ ಉಂಟುಮಾಡುವುದೆ ಈ ಕಂದಕಗಳ ನಿರ್ಮಾಣದ ಉದ್ದೇಶವಾಗಿತ್ತು. ಕೋಟೆಯ ಹೆಬ್ಬಾಗಿಲಿನ ಒಳಭಾಗದಲ್ಲಿ ನಿಂತಾಗ ಇಬ್ಬದಿಗಳಲ್ಲಿ ಎರಡು ಸಮತಟ್ಟಾದ ಸುಂದರ ಪಾವಟಿಕೆಗಳನ್ನು ಹೊಂದಿರುವ ಬುರುಜುಗಳು ಕಾಣಸಿಗುತ್ತದೆ. ಕೋಟೆಯ 35 ಎಕ್ರೆ ವಿಸ್ತೀರ್ಣದ ಒಳಗೆ ಒಂದು ಪ್ರಮುಖ ಬತ್ತೇರಿಯನ್ನು ಒಳಗೊಂಡಂತೆ ನಾಲ್ಕು ಸ್ವತಂತ್ರ ಬತ್ತೇರಿಗಳಿವೆ. ಕೋಟೆಯ ಹೊರಗಡೆ ಸಮುದ್ರಕ್ಕೆ ತೆರೆದುಕೊಳ್ಳುವಂತಿರುವ ಎರಡು ಬತ್ತೇರಿಗಳಿವೆ. ಇದಲ್ಲದೆ, ಸುದೃಢವಾದ ಕೋಟೆಯ ಸುತ್ತ ಪ್ರಾಕಾರದಲ್ಲಿ ಅಲ್ಲಲ್ಲಿ ಒಂದೊಂದು ಬುರುಜುಗಳಿವೆ. ಇವುಗಳ ಒಟ್ಟು ಸಂಖ್ಯೆ 14. ಪ್ರಮುಖ ಬತ್ತೇರಿ ಕೋಟೆಯ ಕೇಂದ್ರ ಸ್ಥಾನದಲ್ಲಿದ್ದು ಹತ್ತು ಮೀಟರ್ ಎತ್ತರವೂ, 23 ಮೀಟರ್ ಸುತ್ತಳತೆಯನ್ನು ಹೊಂದಿದೆ. ಕೆಳದಿಯರಸರು ಸಾಗರ ತೀರದಲ್ಲಿ ಕಟ್ಟಿಸಿರುವ ಬಲಿಷ್ಠವಾದ ಕೋಟೆ ಇದಾಗಿದೆ. ಬಹುಶಃ ಇಷ್ಟು ಬಲಿಷ್ಠ ಕೋಟೆಗಳ ಸಹಾಯದಿಂದಲೇ ರಾಜಧಾನಿಯಿಂದ ನೂರಾರು ಮೈಲಿ ದೂರವಿದ್ದರೂ, ಕೆಳದಿ ಆಡಳಿತದ ಕೊನೆಯವರೆಗೂ ಈ ಪ್ರದೇಶಗಳ ಮೇಲೆ ನಿಯಂತ್ರಣ ಹೊಂದಲು ಕೆಳದಿ ಅರಸರಿಗೆ ಸಾಧ್ಯವಾಗಿತ್ತು.

**ಪೊಳಲಿ ಕೋಟೆ:** ಈ ಕೋಟೆ, ಕಾಸರಗೋಡು ಮುಳ್ಳೇರಿಯಾ ರಸ್ತೆಯಲ್ಲಿ ಚರ್ಕಳದಿಂದ ಸುಮಾರು 2 ಮೈಲಿನೊಳಗೆ, ಎಡನೀರು ಮಠದಿಂದ ದಕ್ಷಿಣಕ್ಕೆ 'ಚಂವರಕಾನ' ಎಂಬ ಸ್ಥಳದ ಸಮೀಪವಿದೆ. ಈಗ ಮಲಯಾಳಿಗರು ಇದನ್ನು 'ಪೊವ್ವಾಲ್' ಎಂದು ಕರೆಯುತ್ತಾರೆ. ಕೋಟೆಯ ಬುರುಜುಗಳಿದ್ದು ಕಂದಕವೂ ಇದೆ. ಸುಮಾರು ಹತ್ತು ಎಕರೆ ವಿಸ್ತಾರವಾದ ಈ ಕೋಟೆಯೊಳಗೆ ಬಾವಿ ಹಾಗೂ ಹನುಮಂತ ದೇವಾಲಯ ಇದೆ. ಹನುಮಂತನ ಗುಡಿ ಈಗ ಕೋಟೆಯ ಒಳಭಾಗದಲ್ಲಿದೆ. ಹತ್ತಿರದಲ್ಲಿರುವ ಸಿದ್ದನ ಕೆರೆ, ಮಾಸ್ತಿಗುಂಡಿ ಇತಿಹಾಸ ಸಾರುವ ಹೆಸರುಗಳಾಗಿವೆ. ಕೆಳದಿಯ ಇತರ ಕೋಟೆಗಳಂತೆ ಈ ಕೋಟೆಯ ಸುತ್ತಲೂ ಕೋಟೆ ಕ್ಷತ್ರಿಯರು ಇದ್ದು ಕೆಳದಿ ಇತಿಹಾಸಕ್ಕೆ ಸಾಕ್ಷಿಗಳಾಗಿದ್ದಾರೆ.

**ಅಡ್ಕ ಕೋಟೆ:** ಕೆಳದಿಯರಸರ ಕಾಸರಗೋಡು ಪ್ರದೇಶದ ಕೋಟೆಗಳ ಹೆಚ್ಚಿನ ಮಾಹಿತಿಗಳು ಈಗ ಬೇರೆ

ಬೇರೆ ಕಡೆ ಪ್ರಕಟವಾಗಿದ್ದರೂ ಮಂಗಳೂರು ಕುಂಬಳೆ ಮಾರ್ಗದಲ್ಲಿ ಕುಂಬಳೆಯಿಂದ 6ಕಿ.ಮೀ ಉತ್ತರಕ್ಕೆ ಬಂದ್ಯೋಡು ಎಂಬಲ್ಲಿಂದ ಬಲಕ್ಕೆ 2ಕಿ.ಮೀ ದೂರದಲ್ಲಿ ಸಿರಿಯಾ ಹೊಳೆಯ ಪಕ್ಕದಲ್ಲಿ ಕೆಳದಿಯರಸರಿಗೆ ಸಂಬಂಧಿಸಿದಂತೆ ಕೋಟೆಯೊಂದನ್ನು ಪತ್ತೆ ಹಚ್ಚಲಾಗಿದೆ. ಸುತ್ತ ಮುತ್ತ ಕಾಡು ಬೆಳೆದು ಜನರ ದೃಷ್ಟಿಯಿಂದ ದೂರವಾಗಿರುವ ಈ ಕೋಟೆ ಸುಮಾರು 7 ಎಕರೆ ವಿಸ್ತೀರ್ಣವನ್ನು ಹೊಂದಿದೆ. ಪಕ್ಕದಲ್ಲಿ ಉಳ್ಳಾಕುಲು ಮತ್ತು ವೀರಭದ್ರ ಗುಡಿಯಿದ್ದು ಕೋಟೆ ಶಿಥಿಲಗೊಂಡಿದೆ. ಕೋಟೆಯ 4 ಕಡೆ ಬತ್ತೇರಿಗಳಿದ್ದ ಕುರುಹುಗಳನ್ನು ಇಂದಿಗೂ ಗುರುತಿಸಬಹುದು.[60] ಕಾಸರಗೋಡು ತಾಲೂಕಿನ ಇತರ ಕೋಟೆಗಳಂತೆ ಈ ಕೋಟೆಯನ್ನು ಇಕ್ಕೇರಿಯ ರಾಜರುಗಳೇ ನಿರ್ಮಿಸಿರಬೇಕು ಎನ್ನುವುದು ಸ್ಥಳೀಯರ ಅಭಿಪ್ರಾಯ.[61] ಕೋಟೆಯ ರಚನಾ ಶೈಲಿ ಮತ್ತು ಅದು ನಿರ್ಮಾಣವಾದ ಆಯಕಟ್ಟಿನ ಪ್ರದೇಶವನ್ನು ಗಮನಿಸಿದರೆ ಈ ಅಭಿಪ್ರಾಯಕ್ಕೆ ಪುಷ್ಟಿ ದೊರೆಯುತ್ತದೆ. ಕಾಸರಗೋಡು ಜಿಲ್ಲೆಯ ದಕ್ಷಿಣ ತುದಿಯಲ್ಲಿ ಬೇಕಲಕೋಟೆ ಇದ್ದರೆ ಉತ್ತರದ ಕೊನೆಯ ಕೋಟೆ ಇದಾಗಿದೆ. ಕೋಟೆ ಪಾಳುಬಿದ್ದಿದ್ದರೂ ವಿಸ್ತಾರವಾದ ಬುರುಜುಗಳು ನಾಲ್ಕೂ ಮೂಲೆಗಳಲ್ಲಿ ನಿರ್ಮಿಸಲಾದ ಕಾವಲು ತಾಣಗಳು ಗಮನಾರ್ಹವಾಗಿದೆ. ಸೀರೆ(ಶೀರೆ) ಹೊಳೆಗೆ ತಾಗಿಕೊಂಡಂತೆ ನಿರ್ಮಿಸಲಾಗಿರುವ ಅಡ್ಕದ ಕೋಟೆ, ಸೀರೆ ಬಂಬ್ರಾಣ ಮತ್ತು ಇಚಿಲಂಗೋಡು ಗ್ರಾಮಗಳ ಕೂಡು ಸ್ಥಳದ ಆಯಕಟ್ಟಿನ ಜಾಗದಲ್ಲಿದೆ. 4–5 ಬಾವಿಗಳು ಕೋಟೆಯೊಳಗಿದ್ದವೆಂದು ಪ್ರತೀತಿ. ಈಗ ಹೂಳು ತುಂಬಿದ ಬಾವಿಯೊಂದು ಮಾತ್ರ ಗೋಚರವಾಗುತ್ತಿದೆ. ಕೆಳದಿಯ ಎಲ್ಲಾ ಕೋಟೆಗಳಲ್ಲಿದ್ದಂತೆ ಈ ಕೋಟೆಯೊಳಗೂ ಒಂದು ಆಂಜನೆಯ ಸ್ವಾಮಿ ದೇವಾಲಯ ಇತ್ತೆಂದು ಪ್ರತೀತಿ ಇದೆ. ಈ ಎಲ್ಲಾ ಕುರುಹುಗಳ ಪತ್ತೆಗಾಗಿ ಉತ್ಖನನ ಕಾರ್ಯ ನಡೆಸಬೇಕಾಗಿದೆ. ಕೆಳದಿ ರಾಜರು ಇಂತಹ ಕೋಟೆಗಳ ರಕ್ಷಣೆಗೆ ಕನ್ನಡ ಮಾತೃ ಭಾಷೆಯವರನ್ನೇ ನೇಮಿಸಿದ್ದರು. ಇದಕ್ಕೆ ಸಾಕ್ಷಿ ಎಂಬಂತೆ ಸೀರೆಯ ಕಡಲ ಕಿನಾರೆಯಲ್ಲಿ ಕೋಟೆ ಕ್ಷತ್ರಿಯರ ಕುಟುಂಬವೊಂದಿದೆ. ಕನ್ನಡ ಮಾತನಾಡುವ ದೇವಸ್ಥಾನದ ಅರ್ಚಕರು, ಕೋಟೆಯ ಸಮೀಪವಿರುವ ವೀರಭದ್ರ ದೇವಾಲಯವನ್ನು ಗಮನಿಸಿದರೆ ಇದು ಕೆಳದಿಯ ಕೋಟೆಯೆಂಬುದು ದೃಢವಾಗುತ್ತದೆ.

ಕಾಸರಗೋಡು ಜಿಲ್ಲೆಯ ಬಂದಡ್ಕ ಮತ್ತು ಕಾಂಞಂಗಾಡ್ ಸಮೀಪದ ಹೊಸದುರ್ಗದಲ್ಲಿರುವ ಕೋಟೆಗಳು ಜೀರ್ಣೋದ್ಧಾರಗೊಂಡಿವೆ. ಕುಂಡಂಕುಯಿ ಮತ್ತು ಪಣೆಯಾಲ ಎಂಬಲ್ಲಿಯೂ ಕೆಳದಿ ಅರಸರು ಕಟ್ಟಿಸಿದ ಕೋಟೆಗಳಿದ್ದು, ಅಡ್ಕದ ಕೋಟೆಯಂತೆಯೇ ಅಳಿವಿನಂಚಿನಲ್ಲಿದೆ.

**ಕಾಂತಮಂಗಲ, ಜೆಳ್ಳಾರೆ ಮತ್ತು ಮೂಡುಕೊಡೆಯಾಲ ಕೋಟೆ**

ತುಳುನಾಡಿನ ಪೂರ್ವದ ಗಡಿಯಾದ ಅಮರ ಸುಳ್ಯಕ್ಕೆ ತಾಗಿಕೊಂಡಿರುವ ಘಟ್ಟ ಪ್ರದೇಶದಲ್ಲಿ ಹುಟ್ಟಿ ಪಶ್ಚಿಮಾಭಿಮುಖಿಯಾಗಿ ಹರಿದು ಮಲಬಾರ್ ತೀರದಲ್ಲಿ ಸಮುದ್ರವನ್ನು ಸೇರುವ ಪಯಸ್ವಿನೀ ನದಿ

ಕೆಳದಿ ಕಾಲದ ವ್ಯಾಪಾರ ವ್ಯವಹಾರಗಳಲ್ಲಿ ಪ್ರಮುಖ ಪಾತ್ರ ವಹಿಸಿರಬೇಕು. ಕೆಳದಿಯರಸರು ಸುಳ್ಯ ತಾಲೂಕಿನ ಭಾಗದಲ್ಲಿ 3 ಕೋಟೆಗಳನ್ನು ಬೆಳ್ಳಾರೆ, ಕೊಡೆಯಾಲ ಮತ್ತು ಕಾಂತಮಂಗಲಗಳಲ್ಲಿ ನಿರ್ಮಿಸಿದರೆಂಬುದು ಗಮನಾರ್ಹವಾಗಿದೆ. ಈ ಕೋಟೆಗಳನ್ನು ಹಿರಿಯ ವೆಂಕಟಪ್ಪ ಕಟ್ಟಿಸಿದನೆಂಬ ಉಲ್ಲೇಖ ಕೆಳದಿ ನೃಪವಿಜಯದಲ್ಲಿದೆ.[62] ಕಾಂತಮಂಗಲ ಕೋಟೆಯ ಅಳಿದುಳಿದ ಪಳೆಯುಳಿಕೆಗಳು ಪಯಸ್ವಿನೀ ನದಿಯ ದಡದಲ್ಲಿದ್ದು, ದಕ್ಷಿಣ ದಿಕ್ಕಿಗೆ ಕೋಟೆ ನಿರ್ಮಾಣವಾಗಿರುವುದು ಕಂಡುಬರುತ್ತದೆ. ಹಾಗೆಯೇ ಕಾಸರಗೋಡು ಕೋಟೆಯು ಪಯಸ್ವಿನಿ ನದಿಯ ದಡದಲ್ಲೇ ಸನಿಹದಲ್ಲಿದೆ. ಹಾಗಾಗಿ ತುಳುನಾಡಿನ ಪೂರ್ವಕ್ಕಿರುವ ಸುಳ್ಯದಿಂದ ಕರಾವಳಿಯ ಕಾಸರಗೋಡಿಗೆ ಪಯಸ್ವಿನಿ ನದಿಯ ಮೂಲಕ ಸರಕುಗಳನ್ನು ಸಾಗಿಸುವ ವ್ಯವಸ್ಥೆ ಇದ್ದಿರಬಹುದೆಂಬುದನ್ನು ತಳ್ಳಿಹಾಕುವಂತಿಲ್ಲ. ಕಳೆದ ಕೆಲವು ವರ್ಷಗಳ ಹಿಂದಿನ ವರೆಗೂ ಮಂಗಳೂರಿನಂತೆ ಕಾಸರಗೋಡು ಕೂಡ ಸುಳ್ಯದ ಜನರಿಗೆ ವ್ಯವಹಾರದ ದೃಷ್ಟಿಯಿಂದ ಕೇಂದ್ರವಾಗಿತ್ತು. ಈ ನಂಟಿಗೆ ವ್ಯವಹಾರದ ಹಿನ್ನೆಲೆ ಇರಬಹುದೆಂದು ಅನ್ನಿಸುತ್ತದೆ. ಅಲ್ಲದೆ ಸುಳ್ಯ ತಾಲೂಕಿನ ಭೂತಾರಾಧನೆಯ ಹಿನ್ನೆಲೆಯನ್ನು ಗಮನಿಸುವಾಗ ತಾಲೂಕಿನ ಪ್ರಮುಖ ದೈವಸ್ಥಾನಗಳಲ್ಲಿ, ಉಳ್ಳಾಕುಲು ದೈವದ ಪ್ರಧಾನಿಯಾಗಿ ನಾಯರ್ ಎನ್ನುವ ದೈವ ದೇವಳದ ಜಾತ್ರೆಯ ಉಸ್ತುವಾರಿಯನ್ನು ವಹಿಸುತ್ತದೆ. ಸುಳ್ಯ, ಉಬರಡ್ಕ, ಮರ್ಕಂಜ, ಮುಂತಾದ ಕಡೆಗಳಲ್ಲಿ ಈ ದೈವದ ಆರಾಧನೆಯ ಸಂದರ್ಭದಲ್ಲಿ ದೈವದ ನುಡಿಗಟ್ಟು ಮಲಯಾಳಿ ಭಾಷೆಯಲ್ಲಿಯೇ ಇಂದಿಗೂ ನಡೆಯುತ್ತಿದೆ. ನಾಯರ್ ಜನಾಂಗಕ್ಕೆ ಸೇರಿದ ವ್ಯಕ್ತಿಯೊಬ್ಬ ದೈವವಾದ ಕಥೆ ಈ ಭಾಗದಲ್ಲಿ ಪ್ರಚಲಿತದಲ್ಲಿದೆ.[63] ಈ ಹಿನ್ನೆಲೆಯಲ್ಲಿ ಕೇರಳದ ಕಾಸರಗೋಡು, ಕುಂಬಳೆ ಮತ್ತು ಸುಳ್ಯ ಪರಿಸರದ ನಂಟು ಐತಿಹಾಸಿಕತೆಯನ್ನು ಪಡೆದಿದೆ. ಅಮರ ಸುಳ್ಯದ ಬಲ್ಲಾಳನ ಕೇಂದ್ರವಾದ ಬೂಡು, ಈ ಕೋಟೆಗೆ ಕೇವಲ 1 ಕಿಲೋ ಮೀಟರ್ ದೂರದಲ್ಲಿರುವುದು ಗಮನಾರ್ಹ ವಿಚಾರ.

ಕಾಂತಮಂಗಲದಲ್ಲಿ ಈಗ ನಾಶವಾಗಿರುವ ಆದರೆ ಸುಮಾರು 30–40 ವರ್ಷಗಳ ಹಿಂದೆ ಸೈನ್ಯ ಠಾಣೆಯಿದ್ದ ಸ್ಥಳವನ್ನು ಸ್ಥಳೀಯರು ತೋರಿಸುತ್ತಾರೆ. ಈ ಕೋಟೆಯ ಉಲ್ಲೇಖ ಮೊಗರ್ನಾಡು ಧಾಮರ್ಸ್ಪೈ ದೇವಳದ ನಿರೂಪದಲ್ಲಿ ಕಂಡುಬರುತ್ತದೆ.[64] ಸುಮಾರು 10ಎಕ್ರೆ ಸ್ಥಳದಲ್ಲಿ ನಾಯಕರು ಕಟ್ಟಿಸಿದ ಕೋಟೆ ಸಂಪೂರ್ಣವಾಗಿ ನಾಮಾವಶೇಷವಾಗಿದ್ದು, ಒಂದೆರಡು ಕುರುಹುಗಳು, ಖಾಸಗಿ ಒಡೆತನವಿದ್ದ ತೋಟದ ಒಳಗೆ ಕಾಣ ಸಿಗುತ್ತದೆ. ತೋಟದ ಪಕ್ಕದಲ್ಲಿ ಉದ್ದಕ್ಕೂ ಪಯಸ್ವಿನೀ ನದಿ. ಅದರ ಪಕ್ಕದಲ್ಲಿ ಕೋಟೆಯ ಕುರುಹುಗಳು ಗೋಚರಿಸುತ್ತದೆ. ಕೆಂಪು ಕಲ್ಲು ಅಥವಾ ದೊಡ್ಡ ಗಾತ್ರದ ಮುರ ಕಲ್ಲುಗಳನ್ನು ಪ್ರಧಾನವಾಗಿ ಬಳಸಿಕೊಂಡು ಈ ಕೋಟೆಯನ್ನು ನಿರ್ಮಾಣ ಮಾಡಲಾಗಿದೆ. ಪಯಸ್ವಿನೀ ನದಿಯ ಪೂರ್ವ ದಿಕ್ಕಿನಲ್ಲಿ ತಾಲೂಕು ಕೇಂದ್ರವಾದ ಸುಳ್ಯವಿದ್ದರೆ ನದಿಯ ಪಶ್ಚಿಮಕ್ಕೆ ಆಯಕಟ್ಟಿನ ಸ್ಥಳದಲ್ಲಿ ಕಾಂತಮಂಗಲದ ಈ ಕೋಟೆಯಿದೆ. ಕೆಳದಿಯರಸರ ರಾಜಕೀಯ ಶಕ್ತಿಯ ಕೇಂದ್ರವಾದ ಮಂಗಳೂರಿನಿಂದ ಸುಮಾರು 100 ಕಿಲೋಮೀಟರ್ ದೂರದಲ್ಲಿರುವ ಕಾಂತಮಂಗಲದಲ್ಲಿ ಕೋಟೆ ನಿರ್ಮಾಣವಾಗಿರುವುದು

ಗಮನಾರ್ಹವಾಗಿದೆ.

ಕೆಳದಿಯರಸರು ಕಟ್ಟಿಸಿದ ಬೆಳ್ಳಾರೆಯ ಕೋಟೆ, ಸುಳ್ಯ ತಾಲೂಕಿನ ಬೆಳ್ಳಾರೆಯಲ್ಲಿದೆ. ಇಂದಿನ ಸರಕಾರಿ ಪ.ಪೂ. ಕಾಲೇಜಿನ ಆಟದ ಮೈದಾನದ ಬದಿಯಲ್ಲಿರುವ ಈ ಕೋಟೆಯೂ ಸಂಪೂರ್ಣ ಶಿಥಿಲಾವಸ್ಥೆಯಲ್ಲಿದೆ. ಕೆಳದಿ ಕಾಲದಲ್ಲಿ ಬೆಳ್ಳಾರೆಯನ್ನು ವೆಂಕಟಪ್ಪ ನಾಯಕ ಭೈರವರಸರಿಂದ ವಶಪಡಿಸಿಕೊಂಡ ಎಂದು ಕೆಳದಿ ನೃಪವಿಜಯದಲ್ಲಿ ಹೇಳಲಾಗಿದೆ.[65] ಇಲ್ಲಿ ಉಲ್ಲೇಖಿಸಲಾದ ಬೆಳ್ಳಾರೆಯು, ಸುಳ್ಯ ಸಮೀಪದ ಬೆಳ್ಳಾರೆಯೋ ಅಥವಾ ಬೇರೆ ಪ್ರದೇಶವೋ ಎನ್ನುವುದರ ಬಗ್ಗೆ ಅನುಮಾನವಿದೆ. ಏಕೆಂದರೆ, ಭೈರರಸರ ಸೀಮೆಯಲ್ಲಿ ಸುಳ್ಯ ಪುತ್ತೂರು, ಬಂಟ್ವಾಳ, ಮೂಡಬಿದ್ರಿ ಸೇರಿರಲಿಲ್ಲ. ಬೆಳ್ಳಾರೆ ಸೇರಿದಂತೆ ಸುಳ್ಯ ಪುತ್ತೂರಿನ ಪ್ರದೇಶಗಳು ಬಂಗರಸರ ವ್ಯಾಪ್ತಿಯಲ್ಲಿತ್ತು. ಹಾಗಾಗಿ ವೆಂಕಟಪ್ಪ ನಾಯಕ ಭೈರರಸರಿಂದ ವಶಪಡಿಸಿಕೊಂಡ ಬೆಳ್ಳಾರೆ ಬಹುಶಃ ಭೈರರಸರ ಸೀಮೆಯಲ್ಲಿರುವ ಕಳಸ–ಕಾರ್ಕಳದ ಪ್ರದೇಶವೆಂದು ಗುರುತಿಸುವುದು ಹೆಚ್ಚು ಸೂಕ್ತವೆನಿಸುತ್ತದೆ. ಮಹಾನಾಡ ಶೆಟ್ಟಿಗಳ ದಾನ ಶಾಸನವೊಂದು ಸುಂಕ ಠಾಣೆಗಳನ್ನು ಹೆಸರಿಸುವಾಗ, "ಮೊಸರೂರು, ಪೊಂಬುಚ, ದಾನಿವಾಸ, ಆರಗದುರ್ಗ, ಆಗುಂಬೆ, ಕೋವಿಬಗುಂಜಿ, ಬೆಳರೆ, ಕಳಸ, ವೇಗುಂದರೆ.... ಮುಂತಾದ ಸಕಲ ಠಾಣೆಗಳ"ನ್ನು ಹೆಸರಿಸುತ್ತದೆ.[66] ಅಂದರೆ ಕಳಸದ ಸಮೀಪದ ಬೆಳರೆ ಎನ್ನುವ ಸ್ಥಳವನ್ನು ಬೆಳ್ಳಾರೆ ಎಂದು ಗುರುತಿಸಿರಬೇಕು. ಕೆಳದಿ ನೃಪವಿಜಯವೂ ವೆಂಕಟಪ್ಪ ನಾಯಕ ಭೈರರಸರಿಂದ ಗೆದ್ದ ಪ್ರದೇಶಗಳನ್ನು ಹೆಸರಿಸುವಾಗಲೂ "ಕೊಪ್ಪಮಂ ಬೆಳ್ಳರೆಯಂ ಕಾರಕಳ ಕಳಸ ಖಾಂಡ್ಯದ" ಎಂಬ ಕ್ರಮದಲ್ಲಿ ಬೆಳ್ಳಾರೆಯನ್ನು ಗುರುತಿಸಿದೆ. ಕೋಟೆಯಿಂದ ಸ್ವಲ್ಪ ದೂರದಲ್ಲಿ ಇಲ್ಲಿಂದ ಆಳ್ವಿಕೆ ಮಾಡಿದ ಬೆಳ್ಳಾರೆ ಬಲ್ಲಾಳರ ಪಾಳು ಬೀಡು ಇದ್ದು, ಹತ್ತಿರದಲ್ಲಿ ಬಸದಿಯ ಪಳೆಯುಳಿಕೆಗಳಿವೆ. ಬೆಳ್ಳಾರೆ ಬಲ್ಲಾಳರ ಆಡಳಿತಕ್ಕೊಳಪಟ್ಟ ಬೆಳ್ಳಾರೆ, ಇತಿಹಾಸ ಕಾಲದಲ್ಲಿ ಪ್ರಮುಖ ವ್ಯಾಪಾರಿ ಕೇಂದ್ರವಾಗಿತ್ತು. ಕೆಳದಿಯರಸ ವೆಂಕಟಪ್ಪನ ದಾಳಿಯ ಕಾರಣದಿಂದ ಈ ಬಲ್ಲಾಳರು ನಾಶವಾಗಿರಬೇಕು. ಇದಕ್ಕೆ ಕೆಳದಿ ನೃಪವಿಜಯ ಕೊಡುವ ಮಾಹಿತಿಗಳು ಪೂರಕವಾಗಿದೆ.[67]

ಬೆಳ್ಳಾರೆಯ ಸಮೀಪ ಕೊಡೆಯಾಲ ಎಂಬ ಸ್ಥಳವಿದೆ. ಮಂಗಳೂರಿನ ಕೊಡೆಯಾಲದಲ್ಲಿಯೂ ಕೆಳದಿಯ ಕೋಟೆಯೊಂದು ಇತ್ತು ಎನ್ನುವ ಮಾಹಿತಿ ದೊರೆಯುತ್ತದೆ. ಆದರೆ ಮೂಡುಕೊಡೆಯಾಲದಲ್ಲಿ ವೆಂಕಟಪ್ಪನು ಕೋಟೆ ನಿರ್ಮಿಸಿದ ಎಂದು ಕೆಳದಿ ನೃಪವಿಜಯದಲ್ಲಿ ಉಲ್ಲೇಖವಿರುವುದರಿಂದ,[68] ತುಳುನಾಡಿನ ಮೂಡು ದಿಕ್ಕಿಗಿರುವ ಬೆಳ್ಳಾರೆಯ ಕೊಡೆಯಾಲವೇ ಇದಾಗಿರಬೇಕೆಂದು ನಿರ್ಧರಿಸಬಹುದಾಗಿದೆ. ಹಾಗಿದ್ದರೆ ಬೆಳ್ಳಾರೆಯ ಕೋಟೆಯಲ್ಲದೆ, ಸಮೀಪದ ಕೊಡೆಯಾಲದಲ್ಲಿ ಕೋಟೆಯನ್ನು ನಿರ್ಮಿಸಿರುವ ಸಾಧ್ಯತೆ ಇದೆ.

**ಮೂಡಬಿದ್ರಿ ಕೋಟೆ:** ಮೂಡಬಿದಿರೆಯಲ್ಲಿ ವೆಂಕಟಪ್ಪ ನಾಯಕ ಕೋಟೆ ಕಟ್ಟಿಸಿದನೆಂದು ಕೆಳದಿ ನೃಪ ವಿಜಯ ತಿಳಿಸುತ್ತದೆ.[69] ಈ ಕೋಟೆ ಮೂಡಬಿದಿರೆಯ ಜೈನರ ಪೇಟೆಯಿಂದ ಶಿರ್ತಾಡಿ ರಸ್ತೆಯಲ್ಲಿ ಸುಮಾರು 2ಕಿ.ಮೀ. ದೂರದ ಕೋಟೆ ಬಾಗಿಲು ಎಂಬ ಸ್ಥಳದಲ್ಲಿದೆ. ಚೌಟರಸರ ಮೂಡಬಿದಿರಿ ಅರಮನೆ

ಬಾಗಿಲು ಕೋಟೆಗೂ, ಈ ಕೋಟೆಗೂ 2ಕಿ.ಮೀ. ಅಂತರವಷ್ಟೇ. ಸುಮಾರು 10 ಎಕರೆಗಳಷ್ಟು ವಿಸ್ತಾರವಾಗಿರುವ ಈ ಕೋಟೆ ದಿವ್ಯ ನಿರ್ಲಕ್ಷ್ಯಕ್ಕೆ ಒಳಗಾಗಿ ಅಳಿವಿನಂಚಿನಲ್ಲಿದೆ. ಮುಖ್ಯ ರಸ್ತೆಗೆ ತಾಗಿಕೊಂಡಿದ್ದರೂ ಖಾಸಗಿಯವರ ಅತಿಕ್ರಮಣದಿಂದ ಬತ್ತೇರಿ ಬುರುಜುಗಳು, ಒಂದೊಂದಾಗಿ ನಾಮಾವಶೇಷಗೊಳ್ಳುತ್ತಿವೆ. ಹನುಮಂತ ಗುಡಿ ಕೋಟೆಯ ಹೊರ ಆವರಣದಲ್ಲಿದ್ದು ನವೀಕರಣಗೊಂಡಿದೆ. ಕೆಳದಿಯರಸರ ಉಳಿದ ಕೋಟೆಗಳನ್ನು ಹೋಲುವ ಈ ಕೋಟೆಯು ಆಳವಾದ ಕಂದಕಗಳು ಉನ್ನತವಾದ ಬತ್ತೇರಿ ಬುರುಜುಗಳು ಕೋಟೆಯೊಳಗಿನ 3-4 ಬಾವಿಗಳು ಮುಂತಾದ ಪಳೆಯುಳಿಕೆಗಳಿಂದ ಗಮನ ಸೆಳೆದಿದ್ದು ಕೆಳದಿಯರಸರ ಪ್ರಾಮುಖ್ಯ ಕೋಟೆಯಾಗಿತ್ತು ಎಂಬುದಕ್ಕೆ ಸಾಕ್ಷಿಗಳಾಗಿವೆ.

**ಇತರ ಕೋಟೆಗಳು:** ಸಾಮಂತರಸರನ್ನು ಸೋಲಿಸಿದ ವೆಂಕಟಪ್ಪ ನಾಯಕ ಮೂಲ್ಕಿಯಲ್ಲಿ ಕೋಟೆ ಕಟ್ಟಿಸಿದನೆಂದು ಕೆಳದಿಯ ನೃಪವಿಜಯ ತಿಳಿಸುತ್ತದೆ.[70] ಈ ಕೋಟೆಯ ಕುರುಹುಗಳನ್ನು ಕೋಟೆಕೇರಿ ಬಸದಿಯ ಪೂರ್ವದಲ್ಲಿ ನೋಡಬಹುದು. ಹೀಗೆ ತುಳುನಾಡಿನ ವಿವಿಧ ಸ್ಥಳಗಳಲ್ಲಿ ಕೆಳದಿಯರಸರ ಕೋಟೆಗಳ ಪಳೆಯುಳಿಕೆಗಳು ದೊರೆಯುತ್ತವಾದರೂ, ಹೆಚ್ಚಿನ ಸ್ಥಳಗಳು ಖಾಸಗೀ ವ್ಯಕ್ತಿಗಳ ಆಸ್ತಿಯಾಗಿದ್ದರೆ, ಇನ್ನು ಕೆಲವು ಕಡೆ ಅವುಗಳಿದ್ದ ಸ್ಥಳಗಳನ್ನು ಗುರುತಿಸಲೂ ಸಾಧ್ಯವಿಲ್ಲ. ಉದಾಹರಣೆಗೆ ನಂದಾವರ, ಉಪ್ಪಿನಂಗಡಿ, ಕೊಡೆಯಾಲಬೈಲ್, ಮಂಗಳೂರು ಮುಂತಾದವುಗಳು.[71] ಇನ್ನು ಕೆಲವು ಕೋಟೆಗಳು ಕಾಡಿನಿಂದ ಆವೃತವಾಗಿದ್ದು ಜನರ ನಂಟಿನಿಂದ ದೂರವಾಗಿದೆ. ಉದಾಹರಣೆಗೆ ಶಿಶಿಲ, ಅಡ್ಕದ ಕೋಟೆಗಳು.

ಕೆಳದಿಯರಸರು ಕಟ್ಟಿಸಿದರೆಂದು ಹೇಳಲಾದ ಕೋಟೆಗಳಲ್ಲಿ ಹಲವು ಕೋಟೆಗಳು ಮೂಲತಃ ಸ್ಥಳೀಯ ಅರಸರಿಂದ ಅಥವಾ ಬೀಡು ಬಲ್ಲಾಳರಿಂದ ನಿರ್ಮಿಸಲ್ಪಟ್ಟಿವೆ ಎಂಬ ಅಭಿಪ್ರಾಯವಿದೆ. ಇದನ್ನು ಸಂಪೂರ್ಣವಾಗಿ ಅಲ್ಲಗಳೆಯಲು ಸಾಧ್ಯವಿಲ್ಲ. ಕೆಳದಿ ನೃಪವಿಜಯ ತಿಳಿಸುವಂತೆ ವೆಂಕಟಪ್ಪ ನಾಯಕ ತುಳುನಾಡಿನಲ್ಲಿ ಹಲವು ಕೋಟೆಗಳನ್ನು ಬಲಿಯಿಸಿದ. ಇದು ಬಲಗೊಳಿಸಿದ ಎಂಬ ಅರ್ಥದಲ್ಲಿ ನೋಡುವುದಿದ್ದರೆ ಈ ಮೇಲಿನ ಅಭಿಪ್ರಾಯ ಸರಿಯೆನಿಸುತ್ತದೆ. ಬೀಡು ಬಲ್ಲಾಳರು ತಮ್ಮ ವ್ಯಾಪ್ತಿಯಲ್ಲಿ ಕಟ್ಟಿಸಿದ್ದ ಕೋಟೆಗಳನ್ನು. ಮುಂದೆ ಕೆಳದಿಯರಸರು ಬಲಗೊಳಿಸಿದ ಸಾಧ್ಯತೆಗಳಿವೆ. ಆದರೆ ಇದನ್ನು ದೃಢಪಡಿಸಲು ಯಾವುದೇ ಪುರಾವೆಗಳು ಲಭ್ಯವಿಲ್ಲ.

**ತುಳುನಾಡಿನಲ್ಲಿ ಪೋರ್ಚುಗೀಸರ ಕೋಟೆಗಳು**

ಪೋರ್ಚುಗೀಸರು, ಅವರ ಹಡಗುಗಳನ್ನು ತಾತ್ಕಾಲಿಕವಾಗಿ ಲಂಗರು ಹಾಕಿ ದುರಸ್ತಿ ಮಾಡಲು ಮತ್ತು ಕುಡಿಯುವ ನೀರಿನ ಪೂರೈಕೆಗೆ ಕ್ರಿ.ಶ.1505ರಷ್ಟು ಹಿಂದೆಯೇ, ಅಂಜಿದ್ವೀಪದಲ್ಲಿ ಒಂದು ಕೋಟೆಯನ್ನು ಕಟ್ಟಿಸಿದ್ದರು. ಆದರೆ ಅದರ ರಕ್ಷಣೆಯ ತೊಂದರೆಯಿಂದ ಅದನ್ನು ಕ್ರಿ.ಶ.1507ರಲ್ಲಿ ನೆಲಸಮ ಮಾಡಿದರು.[72] ಕೋಟೆಗಳು ನಿರುಪಯೋಗಿ ಎಂದು ಕಂಡು ಬಂದಾಗ ಅಥವಾ ಆ ಕೋಟೆಗಳನ್ನು ರಕ್ಷಿಸಲು ಬಹಳಷ್ಟು

ವೆಚ್ಚಗಳಾದಾಗ ಅವುಗಳನ್ನು ಪೋರ್ಚುಗೀಸರು ನೆಲಸಮ ಮಾಡುತ್ತಿದ್ದ ಉದಾಹರಣೆಗಳಿವೆ. ಭಟ್ಕಳದಲ್ಲಿ ಇವರು ಕೋಟೆ ಕಟ್ಟಲು ಪ್ರಯತ್ನಿಸಿದರಾದರೂ ಅದಕ್ಕೆ ವಿಜಯನಗರದರಸ ಕೃಷ್ಣದೇವರಾಯನ ಸಮ್ಮತಿ ದೊರೆಯದೆ ಅದು ಕೈಗೂಡಲಿಲ್ಲ. ಕ್ರಿ.ಶ.1568ರಲ್ಲಿ ಮಂಗಳೂರಿನಲ್ಲಿ, ಕ್ರಿ.ಶ.1569ರಲ್ಲಿ ಹೊನ್ನಾವರ ಮತ್ತು ಕುಂದಾಪುರಗಳಲ್ಲಿ, ಆನಂತರ ಬಸ್ರೂರಿನಲ್ಲಿಯೂ ಒಂದು ಕೋಟೆಯನ್ನು ಕಟ್ಟಿಸಿದರು. ಇವುಗಳಲ್ಲದೆ, ಹದಿನೇಳನೆಯ ಶತಮಾನದಲ್ಲಿ ಗಂಗೊಳ್ಳಿಯಲ್ಲಿ(ಕ್ರಿ.ಶ. 1630–33) ಹಾಗೂ ಅಂಜಿ ದ್ವೀಪದಲ್ಲಿ(ಕ್ರಿ.ಶ. 1682) ಕೋಟೆಗಳನ್ನು ಕಟ್ಟುವುದರ ಮೂಲಕ ಆ ಸ್ಥಳಗಳಲ್ಲಿ ಅಧಿಕಾರವನ್ನು ಸ್ಥಾಪಿಸಲು ಪೋರ್ಚುಗೀಸರು ಪ್ರಯತ್ನಿಸಿದರು.[73] ಅವರ ಸೈನ್ಯವನ್ನು ಇಟ್ಟುಕೊಳ್ಳಲು, ಮದ್ದು ಗುಂಡುಗಳು, ಶಸ್ತ್ರಾಸ್ತ್ರಗಳು, ವ್ಯಾಪಾರದ ಸರಕುಗಳು, ಆಹಾರ ಧಾನ್ಯಗಳು, ಆರಾಧನಾ ಕೇಂದ್ರಗಳು ಈ ಎಲ್ಲಾ ಉದ್ದೇಶಗಳನ್ನು ಪೂರೈಸಲು ಈ ಕೋಟೆಗಳು ಅವರಿಗೆ ಸಹಕಾರಿಯಾದವು. ಈ ಕೋಟೆಗಳ ನಿರ್ಮಾಣದ ಹಿನ್ನೆಲೆ, ಆ ಮೂಲಕ ನಡೆಸುತ್ತಿದ್ದ ಆರ್ಥಿಕ ರಾಜಕಾರಣ, ಪೋರ್ಚುಗೀಸರ ಆರ್ಥಿಕ ಮತ್ತು ಸೈನಿಕ ಸ್ಥಿತಿಗತಿಗಳು, ಕೆಳದಿಯರಸರು ಮತ್ತು ಸ್ಥಳೀಯ ರಾಜರುಗಳೊಂದಿಗೆ ಅವರ ಸಂಬಂಧಗಳನ್ನು ತಿಳಿಯಲು ಈ ಅಧ್ಯಯನ ಸಹಕಾರಿಯಾಗಿದೆ.
**ಮಂಗಳೂರು:** ಪೋರ್ಚುಗೀಸರು ಕೆನರಾ ಕರಾವಳಿ ತೀರದಲ್ಲಿ ಕಟ್ಟಿಸಿದ ಮೊದಲ ಮುಖ್ಯ ಕೋಟೆಯೆಂದರೆ ಅದು ಮಂಗಳೂರಿನ ಕೋಟೆ. ಈ ಕೋಟೆಯನ್ನು ಕ್ರಿ.ಶ 1568ರಲ್ಲಿ ನಿರ್ಮಿಸಲಾಯ್ತು. ಈ ಕೋಟೆ ನಿರ್ಮಾಣಕ್ಕೆ ದೊಡ್ಡ ಹಿನ್ನೆಲೆಯಿದೆ. ಕ್ರಿ.ಶ.1513ರಲ್ಲಿ ಅಲ್ಬುಕರ್ಕ್ ಮಂಗಳೂರಿಗೆ ಸೈನಿಕ ಹಡಗೊಂದನ್ನು ನಿಯೋಜಿಸಿದ್ದನು. ಮಂಗಳೂರಿನಲ್ಲಿ ಠಿಕಾಣಿ ಹೂಡಿದ್ದ ಜಾಮೋರಿನ್ ದೊರೆಯ 2 ಹಡಗುಗಳನ್ನು ತಮಗೆ ಒಪ್ಪಿಸುವಂತೆ ಪೋರ್ಚುಗೀಸರು ವಿಜಯನಗರದ ಮಂಗಳೂರು ರಾಜ್ಯಪಾಲನಿಗೆ ಒತ್ತಾಯಿಸಿದರು. ಒಂದುವೇಳೆ ರಾಜ್ಯಪಾಲ ಒಪ್ಪದಿದ್ದರೆ ಬಂದರಿನ ಚಟುವಟಿಕೆಗಳನ್ನು ತಡೆಯುವಲ್ಲಿಯವರೆಗೂ ಇವರು ಆಲೋಚಿಸಿದ್ದರು. ಇದನ್ನು ಗಮನಿಸಿದಾಗ ಭಾರತಕ್ಕೆ ಆಗಮಿಸಿದ ಪೋರ್ಚುಗೀಸರು ಕಾಲಕ್ರಮೇಣ ಹೆಚ್ಚು ಹೆಚ್ಚು ಆಕ್ರಮಣಶೀಲರಾಗಿದ್ದರೆಂದು ತಿಳಿಯಬಹುದಾಗಿದೆ. ಮುಂದೆ ಪೋರ್ಚುಗೀಸರು ಕಲ್ಲಿಕೋಟೆಯ ಹಡಗುಗಳನ್ನು ವಶಕ್ಕೆ ಪಡೆಯುವಲ್ಲಿ ಯಶಸ್ವಿಯಾದರು.[74] ಸ್ಥಳೀಯರ ಮತ್ತು ಮುಸ್ಲಿಮರ ವ್ಯಾಪಾರವನ್ನು ತಡೆಯುವುದು ಪೋರ್ಚುಗೀಸರ ಮುಖ್ಯ ಉದ್ದೇಶವಾಗಿತ್ತು. ಅದಕ್ಕಾಗಿ ಅವರು ಯಾವ ಮಟ್ಟದ ಆಕ್ರಮಣಕ್ಕೂ ಸಿದ್ಧರಾಗಿದ್ದರೆಂದರೆ ಕ್ರಿ.ಶ. 1525ರಲ್ಲಿ ಪೋರ್ಚುಗೀಸರು ಮಂಗಳೂರಿಗೆ 4 ಹಡಗು ಪಡೆಗಳೊಂದಿಗೆ ಆಗಮಿಸಿ ನದೀ ಮುಖದಲ್ಲಿ ನೂರಕ್ಕಿಂತಲೂ ಅಧಿಕ ಮುಸ್ಲಿಂರ ಹಡಗುಗಳಿಗೆ ತಡೆಯೊಡ್ಡಿದ್ದರು. ಈ ಸಂಘರ್ಷದಲ್ಲಿ ಪೋರ್ಚುಗೀಸರಿಗೆ ನಿರೀಕ್ಷಿಸಿದ ಜಯ ಸಿಗಲಿಲ್ಲ. ಆದರೆ ಹಲವಾರು ಹಡಗುಗಳನ್ನು ನದಿಯಲ್ಲೇ ನಾಶ ಮಾಡುವುದರಲ್ಲಿ ಅವರು ಯಶಸ್ವಿಯಾಗಿದ್ದರು.[75]

ಕ್ರಿ.ಶ 1530ರಲ್ಲಿ ಪೋರ್ಚುಗೀಸರು ಮಂಗಳೂರಿನಲ್ಲಿ ಬಹಳಷ್ಟು ಕಷ್ಟ ನಷ್ಟಗಳನ್ನುಂಟು ಮಾಡಿದರು. ಮಂಗಳೂರಿನ ಶ್ರೀಮಂತ ಶೆಟ್ಟಿ ವ್ಯಾಪಾರಿಯೊಬ್ಬ ಜಾಮೋರಿನ್‌ನೊಂದಿಗೆ ವ್ಯಾಪಾರ ಸಂಪರ್ಕದಲ್ಲಿದ್ದುದು

ಪೋರ್ಚುಗೀಸರಿಗೆ ತಲೆನೋವಾಗಿತ್ತು. ಪೋರ್ಚುಗೀಸರ ಉಪಟಳದಿಂದ ಕೆಂಪುಸಮುದ್ರದ ಜಲಸಂಧಿಗೆ ತನ್ನ ಸರಕುಗಳನ್ನು ಸಾಗಿಸಲು ವಿಫಲನಾದ ಜಾಮೋರಿನ್ ಆ ಸರಕುಗಳನ್ನು ಭೂ ಮಾರ್ಗದಲ್ಲಿ ಈ ಶೆಟ್ಟಿಗೆ ಕಳುಹಿಸಿದ್ದು, ಮಂಗಳೂರಿನಿಂದ ಈ ಸರಕುಗಳು ಮೆಕ್ಕಾದ ಮುಸ್ಲಿಂ ವ್ಯಾಪಾರಿಗಳ ಹಡಗುಗಳಲ್ಲಿ ಕೆಂಪು ಸಮುದ್ರವನ್ನು ಸೇರುತ್ತಿದ್ದವು. ಇದನ್ನು ತಡೆಯಲು ಶೆಟ್ಟಿಯೊಂದಿಗೆ ಯುದ್ಧ ಮಾಡಿದ ಪೋರ್ಚುಗೀಸರು ಅದರಲ್ಲಿ ಯಶಸ್ವಿಯಾದರು.[76] ಕ್ರಿ.ಶ.1539ರಲ್ಲಿ ಅಂದಿನ ವೈಸ್‌ರಾಯಿಯ ಮಗ ಆಲ್ವೆರೋ ಡಿ ನೊರೋನ್ಹ ಕಲ್ಲಿಕೋಟೆಗೆ ಸೇರಿದ್ದ 25 ಹಡಗುಗಳ ಮೇಲೆ ದಾಳಿ ನಡೆಸಿದ್ದ.[77] ಕ್ರಿ.ಶ. 1555ರಲ್ಲಿ ಮತ್ತೊಮ್ಮೆ ಮಂಗಳೂರು ಅಂತಹ ಅನಾಹುತವನ್ನು ಎದುರಿಸಿತು. ನಗರವನ್ನು ಸುಟ್ಟು ಅನೇಕ ನಗರವಾಸಿಗಳನ್ನು ಕೊಲ್ಲಲಾಯಿತು. ಶ್ರೀಮಂತ ದೇವಾಲಯವೊಂದು ವಿಗ್ರಹದ ಸಹಿತ ನಾಶವಾಯಿತು.[78] ಕಣ್ಣಾನೂರಿನ ಮುಸ್ಲಿಮರ ಹಡಗೊಂದು ಮಂಗಳೂರಿನಲ್ಲಿ ಆಶ್ರಯ ಪಡೆದಿದೆ ಎಂದು ತಿಳಿದ ಮಲಬಾರ್ ತೀರದ ಪೋರ್ಚುಗೀಸ್ ಸೇನಾಧಿಕಾರಿ ಲೂಯಿಸ್ ಮೆಲ್ಲೋಡ ಸಿಲ್ವಾ ಅದನ್ನು ತೆರವುಗೊಳಿಸಲು ಸೂಚಿಸುತ್ತಾನೆ. ಆ ಸಂದರ್ಭದಲ್ಲಿ ಮಂಗಳೂರಿನ ಸ್ಥಳೀಯರು ಈ ಮುಸ್ಲಿಮರ ಸಹಾಯಕ್ಕೆ ನಿಂತದ್ದನ್ನು ಗಮನಿಸಿ ಹೆಂಗಸರು, ಗಂಡಸರು ಮುದುಕರೆನ್ನದೆ ಸಾಮೂಹಿಕ ಹತ್ಯೆಗೆ ಮುಂದಾಗುತ್ತಾರೆ. ಕ್ರಿ.ಶ.1558ರಲ್ಲಿ ನಡೆದ ಈ ಘಟನೆಯ ಉದ್ದೇಶವೂ ಶತ್ರುಗಳಲ್ಲಿ ಭಯ ಹುಟ್ಟಿಸುವುದಾಗಿತ್ತು. ನಗರಕ್ಕೆ ಬೆಂಕಿ ಹಚ್ಚಿದ್ದಲ್ಲದೆ ವೈಭವದಿಂದ ಮೆರೆಯುತ್ತಿದ್ದ ದೇವಾಲಯವೊಂದಕ್ಕೆ ಬೆಂಕಿ ಹಚ್ಚಲಾಯಿತು.[79]

ಈ ಎಲ್ಲಾ ಹಿನ್ನೆಲೆಗಳಲ್ಲಿ ಕ್ರಿ.ಶ.1568ರಲ್ಲಿ ಅಂತಿಮವಾಗಿ ಪೋರ್ಚುಗೀಸರಿಂದ ಮಂಗಳೂರಿನಲ್ಲಿ ಕೋಟೆ ನಿರ್ಮಿಸಲ್ಪಟ್ಟಿತು.[80] ವಿವಿಧ ಕಾರಣಗಳಿಗೆ ಅಲ್ಲಿ ಕೋಟೆ ನಿರ್ಮಿಸುವುದು ಅವರಿಗೆ ಅನಿವಾರ್ಯವಾಯಿತು. ಮೊದಲು ನೇತ್ರಾವತಿ ನದಿಯ ದಕ್ಷಿಣಕ್ಕೆ ಸ್ಥಳ ನೋಡಲಾಯಿತಾದರೂ ಅಂತಿಮವಾಗಿ ವೈಸರಾಯ್ ಆಂಟವೂ ಡಿ ನೊರೋನ್ಹನ ನಿರ್ದೇಶನದಂತೆ ಮಂಗಳೂರಿನಲ್ಲಿ ನೇತ್ರಾವತಿ ನದಿಯ ಉತ್ತರ ದಡದಲ್ಲಿ ಕೋಟೆ ನಿರ್ಮಿಸಲು ನಿಶ್ಚಯಿಸಲಾಯ್ತು. ಅದು ಪೋರ್ಚುಗೀಸರೊಂದಿಗೆ ಮಿತ್ರತ್ವದಲ್ಲಿದ್ದ ಬಂಗ ರಾಜನಿಗೆ ಸೇರಿದ ಪ್ರದೇಶವಾಗಿತ್ತು. ಬಂಗರ ಮುಖ್ಯಸ್ಥ ವೈಸ್‌ರಾಯ್‌ಯನ್ನು ಭೇಟಿ ಮಾಡಿ ಸರ್ವ ಸಹಕಾರವನ್ನು ನೀಡುವ ಒಂದು ಒಪ್ಪಂದಕ್ಕೆ ಸಹಿ ಹಾಕಲಾಯಿತು ಮತ್ತು ಆ ಪ್ರಕಾರ ಕೋಟೆಯ ರಕ್ಷಣೆಗೆ ಅಗತ್ಯ ಬಿದ್ದರೆ ಸೈನ್ಯ ಕಳುಹಿಸಿ ರಕ್ಷಣೆ ಒದಗಿಸುವುದಾಗಿ ಬಂಗರಸ ಒಪ್ಪಿಕೊಳ್ಳುತ್ತಾನೆ. ಇದರಿಂದ ಒಂದು ವಿಚಾರ ಸ್ಪಷ್ಟವಾಗುತ್ತದೆ. ಆ ಕಾಲಕ್ಕೆ ತುಳುನಾಡು ಕೆಳದಿಯರಸರ ಆಳ್ವಿಕೆಗೆ ಸೇರಿದ್ದರೂ, ಈ ಕೋಟೆ ನಿರ್ಮಾಣಕ್ಕೆ ಕೆಳದಿ ಅರಸರ ಒಪ್ಪಿಗೆಯನ್ನು ಪಡೆದ ಉಲ್ಲೇಖ ಲಭ್ಯವಿಲ್ಲ. ಇದನ್ನು ಗಮನಿಸಿದರೆ ವೆಂಕಟಪ್ಪನ ಆಳ್ವಿಕೆ ಪ್ರಾರಂಭವಾಗುವವರೆಗೆ ಇಲ್ಲಿಯ ರಾಜರ ಮೇಲಾಗಲೀ ಅಥವಾ ಪೋರ್ಚುಗೀಸರ ಮೇಲಾಗಲೀ ಕೆಳದಿಯರಸರಿಗೆ ಸ್ಪಷ್ಟವಾದ ನಿಯಂತ್ರಣವಿದ್ದಂತೆ ತೋರುವುದಿಲ್ಲ.

ನದಿಯ ಕಡೆ ಮುಖ ಮಾಡಿದ್ದ ಕೋಟೆಯನ್ನು ಸೈಂಟ್ ಸಬಾಸ್ಟಿಯನ್ ಎಂದು ಹೆಸರಿಸಲಾಯ್ತು.

ಕೋಟೆಯಲ್ಲಿ ಒಂದು ಗೋದಾಮು ಹಾಗೂ ಕ್ಯಾಪ್ಟನ್‌ನ ನಿವಾಸಗಳೂ ತಯಾರಾದವು. 3 ಧ್ವಜಗಳ ದಂಡನಾಯಕರೂ 300 ಸೈನಿಕರು ಮತ್ತು ಒಬ್ಬ ಕ್ಯಾಪ್ಟನ್‌ನನ್ನು ಕೋಟೆಗೆ ನಿಯೋಜಿಸಲಾಗಿತ್ತು.[81] ಆದರೆ ವೈಸ್‌ರಾಯ್‌ಯ ಆದೇಶ ಪತ್ರದಿಂದ ಕೋಟೆಗೆ ನಿಯೋಜಿಸಿದ ಜನರ ಸಂಖ್ಯೆ 200 ಮಾತ್ರ ಎಂದು ತಿಳಿಯುತ್ತದೆ. ಅದರಲ್ಲಿ 100 ಜನ ರೈಫಲ್ ಪಡೆಯವರಾದರೆ, ಆ ನೂರು ಜನರನ್ನು 25 ಜನರಂತೆ 4 ಗುಂಪುಗಳಾಗಿಸಿ ಅವರಿಗೆ ಒಟ್ಟು 4 ಜನ ಮುಖ್ಯಸ್ಥರನ್ನು ನಿಯೋಜಿಸಲಾಗಿತ್ತು. ಸ್ಥಳೀಯರನ್ನೂ ಈ ಸೇನೆ ಒಳಗೊಂಡಿತ್ತು ಎಂದು ಹೇಳಲಾಗಿದೆ.[82] ಬೊಕಾರೊ ಕ್ರಿ.ಶ 1635ರಲ್ಲಿ ಬರೆಯುತ್ತಾ ಮಂಗಳೂರು ಕೋಟೆಯು ಚೌಕಾಕಾರದಲ್ಲಿದ್ದು 4 ಮೂಲೆಗಳಲ್ಲಿ 4 ಕಟೆಕಟೆಗಳಿವೆ. ಕೋಟೆಯ ಗೋಡೆಗಳು 22 ಮೀಟರ್ ಉದ್ದ 8.8 ಮೀಟರ್ ಎತ್ತರ ಮತ್ತು 6 ಅಂಗುಲ ಅಗಲವಾಗಿತ್ತು ಎಂದಿದ್ದಾನೆ.[83] ಕೋಟೆಗೆ ಸಮೀಪ 35 ಪೋರ್ಚುಗೀಸ್ ಅಧಿಕಾರಿಗಳ ವಾಸಸ್ಥಾನವಿತ್ತು. ಸುತ್ತಲೂ ಅನೇಕ ಕಾವಲು ಗೋಪುರ ಮತ್ತು ವೃತ್ತಾಕಾರದ ರಕ್ಷಣಾ ಗೋಡೆಗಳಿತ್ತು. ಮುಂಭಾಗದಲ್ಲಿ ಗೋಡೆ ಸ್ವಲ್ಪ ಎತ್ತರವಾಗಿದ್ದು ಅಲ್ಲಿ ಸಣ್ಣ ಕಂದಕವಿತ್ತು.[84] ಕೋಟೆ ರಚನೆಯಾದ 3 ವರ್ಷಗಳಲ್ಲಿ ಜಾಮೋರಿನ್‌ನ ಸೇನೆ ಕ್ರಿ.ಶ.1571ರಲ್ಲಿ ಕೋಟೆಯನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿತ್ತು. ಹಾಗೆಯೇ ಉಳ್ಳಾಲದ ರಾಣಿಯ ಸೂಚನೆಯ ಮೇರೆಗೆ ಕಲ್ಲಿಕೋಟೆಯ ನೌಕಾಪಡೆಯ ನಾಯಕ ಕುಟ್ಟಿಪೋಕರೆ ರಾತ್ರಿಯ ವೇಳೆ ದಾಳಿಗೆ ಪ್ರಯತ್ನಿಸಿದನಾದರೂ ವಿಫಲನಾದ.[85] ಆ ನಂತರ ಕ್ರಿ.ಶ.17ನೇ ಶತಮಾನದ ಮೊದಲ ಭಾಗದವರೆಗೂ ಅಂದರೆ ಕೆಳದಿ ವೆಂಕಟಪ್ಪನ ಆಳ್ವಿಕೆಯ ವರೆಗೂ ಕೋಟೆ ಹಾನಿ ಮುಕ್ತವಾಗಿತ್ತು.

**ಬಸ್ರೂರು:** ಅಲ್ಬುಕರ್ಕನ ಕಾಲದಿಂದಲೂ ಪೋರ್ಚುಗೀಸರು ಬಸ್ರೂರಿನೊಂದಿಗೆ ಶಾಂತಿಯುತ ವಾಣಿಜ್ಯ ಸಂಪರ್ಕ ಹೊಂದಿದ್ದರು. ಗೇರುಸೊಪ್ಪೆಯ, ಗಂಗೊಳ್ಳಿಯ ಆಡಳಿತದಾರರು ಮತ್ತು ತೋಳಹರು ಬಸ್ರೂರು ಕೋಟೆಯ ರಕ್ಷಣೆಗೆ ಸಿದ್ದವಾಗಿದ್ದರು. ಹಾಗಾಗಿ ಹಿಂದೊಮ್ಮೆ ಪೋರ್ಚುಗೀಸರು ಕೋಟೆಯ ಮೇಲೆ ದಾಳಿ ನಡೆಸಿದರೂ ಅದು ಯಶಸ್ವಿಯಾಗಿರಲಿಲ್ಲ.[86] ಈ ಪ್ರದೇಶವನ್ನು ವಶಪಡಿಸಿಕೊಂಡ ನಂತರ ಪೋರ್ಚುಗೀಸರು 2999 ಬೇಲ್ಸ್ ರಪ್ಟು ರಪ್ಟು ಅಕ್ಕಿಯನ್ನು ಮತ್ತು 1500 ಖಂಡಿಗಳಷ್ಟು ಕರಿಮೆಣಸನ್ನು ಪಡೆಯುವ ನಿರೀಕ್ಷೆಯನ್ನು ಹೊಂದಿದ್ದರು.[87] ಆದಾಗ್ಯೂ ಅಲ್ಲಿ ಕೋಟೆ ನಿರ್ಮಾಣದ ಉದ್ದೇಶದಿಂದಲೇ ಕ್ರಿ.ಶ 1569ರಲ್ಲಿ ಬಸ್ರೂರಿನ ಮೇಲೆ ದಾಳಿ ನಡೆಯಿತು. ವೈಸ್‌ರಾಯ್ ಲೂಯಿಸ್ ಡೆ ಅಟ್ಯಡ್, ತನ್ನ ನೌಕಾ ಪಡೆಯೊಂದಿಗೆ ಪಂಚಗಂಗಾವಳಿ ನದಿಯನ್ನು ಪ್ರವೇಶಿಸಿದ್ದ. ನದಿಯ ದಕ್ಷಿಣ ಭಾಗಕ್ಕೆ ಬಸ್ರೂರು ಇದೆ. ಇಲ್ಲಿಯ ಕೋಟೆಯ ರಕ್ಷಣೆಗೆ ತೋಳಹರು ಸಹಕರಿಸುತಿದ್ದರು ಮತ್ತು ಬಸ್ರೂರಿನ ಶೆಟ್ಟಿ ವ್ಯಾಪಾರಿಗಳು ಕೋಟೆಯ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದರು. ಒಂದು ಗಣರಾಜ್ಯದ ರೀತಿಯಲ್ಲಿ ಬಸ್ರೂರು ಆಳ್ವಿಕೆಗೆ ಒಳಪಟ್ಟಿತ್ತು. ಎತ್ತರವಾದ ಗೋಡೆಗಳು, ರಕ್ಷಣಾ ಗೋಪುರ, ಕೆಲವು ಫಿರಂಗಿಗಳಿಂದ ಅದು ಸನ್ನದ್ಧವಾಗಿತ್ತು.[88] ಆದರೂ ವೈಸ್‌ರಾಯ್ ಅದನ್ನು ವಶಪಡಿಸಿಕೊಳ್ಳುವಲ್ಲಿ ಯಶಸ್ವಿಯಾದ.[89] ಒಪ್ಪಂದದ

ಪ್ರಕಾರ ಪೋರ್ಚುಗೀಸರು ಬಸ್ರೂರಿನಲ್ಲಿ ತಮಗೆ ಬೇಕಾದ ಜಾಗದಲ್ಲಿ ಕೋಟೆ ನಿರ್ಮಾಣ ಮಾಡಿದರು.[90] ಬಹುಶಃ ಈ ಹಿಂದೆ ಅಲ್ಲಿದ್ದ ಕೋಟೆ ದುರ್ಬಲವಾಗಿತ್ತು. ಇಲ್ಲಿಯ ಕೋಟೆ ನದಿಯ ದಕ್ಷಿಣ ದಂಡೆಯಲ್ಲಿದ್ದು ಬೆಟ್ಟವೊಂದರ ತುದಿಯಲ್ಲಿ ನಿರ್ಮಾಣವಾಗಿತ್ತು. ಬಸ್ರೂರಿನ ಜನ ವಾರ್ಷಿಕ ಕಪ್ಪವಾಗಿ ಅಕ್ಕಿಯನ್ನು ಕೊಡುತ್ತಿದ್ದು ಅದರಿಂದ ಅಲ್ಲಿಯ ಕೋಟೆಯ ನಿರ್ವಹಣೆ ನಡೆಯುತ್ತಿತ್ತು.[91] ಬೊಕಾರೊ ಹೇಳುವಂತೆ ನದಿಯನ್ನು ಪ್ರವೇಶಿಸಿದರೆ ಕೋಟೆ ಬಲಬದಿಗೆ ಕಾಣುತ್ತಿದ್ದು ಹೆಚ್ಚು ಕಡಿಮೆ ಚೌಕಾಕಾರದಲ್ಲಿತ್ತು. ಅದರ ಗೋಡೆಗಳು 6.6 ಮೀಟರ್ ಎತ್ತರ ಮತ್ತು 5 ಅಂಗುಲ ದಪ್ಪವಿತ್ತು. 6 ವೃತ್ತಾಕಾರದ ರಕ್ಷಣಾಗೋಪುರಗಳು ಇದ್ದರೂ ಕಂದಕವಿರಲಿಲ್ಲ. ಕೋಟೆಯ ಸುತ್ತಳತೆ 220 ಮೀಟರ್‌ಗಳಾಗಿತ್ತು. ಗೋಡೆಯ ಬದಿಯಲ್ಲಿ ಒಳಗಡೆ ಕ್ಯಾಪ್ಟನ್‌ನ ನಿವಾಸವಿತ್ತು.[92] ಒಪ್ಪಂದದ ಪ್ರಕಾರ ಇಲ್ಲಿಯ ಶೆಟ್ಟಿಗಳು 500 ಲೋಡ್ ಅಕ್ಕಿಯನ್ನು ಪೋರ್ಚುಗೀಸರಿಗೆ ನೀಡುತ್ತಿದ್ದರು ಮತ್ತು ಆ ಪ್ರದೇಶದ ಕರಿಮೆಣಸು ಅವರಿಗೇ ನೀಡಬೇಕಾಗಿತ್ತು.[93]

**ಗಂಗೊಳ್ಳಿ:** ಗಂಗೊಳ್ಳಿಯನ್ನು ಪೋರ್ಚುಗೀಸರು ಕಾಂಬೋಲಿಮ್ ಎಂದು ಕರೆಯುತ್ತಿದ್ದು ಕೆನರಾದ ಕೊನೆಯ ಕೋಟೆಯನ್ನು ಅಲ್ಲಿ ನಿರ್ಮಿಸಿದರು. ಬಹುಶಃ ಕ್ರಿ.ಶ.1630–1633ರ ನಡುವೆ ಇದು ರಚನೆಯಾಗಿರಬೇಕು.[94] ಈ ಕೋಟೆ ಗಂಗೊಳ್ಳಿ ನದಿ ಮತ್ತು ಸಮುದ್ರದಿಂದ ಸೃಷ್ಟಿಯಾದ ಪರ್ಯಾಯ ದ್ವೀಪದಲ್ಲಿ ರಚನೆಯಾಗಿತ್ತು. ಮತ್ತು ಬಸ್ರೂರು ಕೋಟೆಯ ವಿರುದ್ಧ ದಿಕ್ಕಿನಲ್ಲಿತ್ತು. ಕೋಟೆಯ ಎದುರು ನದಿ 13.2 ಮೀಟರ್ ಆಳವಾಗಿತ್ತು. ಹಾಗಾಗಿ ಹಡಗು ಸಂಚಾರಕ್ಕೆ ಯೋಗ್ಯವಾಗಿತ್ತು. ಚೌಕಾಕಾರದ ಈ ಕೋಟೆಯ 4 ಬದಿಗಳಲ್ಲಿ ರಕ್ಷಣಾ ಗೋಪುರಗಳಿತ್ತು. ಕೋಟೆಯ ಪ್ರತೀ ಗೋಡೆ 41.8 ಮೀಟರ್ ಉದ್ದವಿದ್ದು ತಳದಲ್ಲಿ 10 ಅಂಗುಲ ಅಗಲವಿದ್ದರೆ, ತುದಿ 6 ಅಂಗುಲ ಅಗಲ ಮತ್ತು 25 ಅಂಗುಲ ಎತ್ತರವಿತ್ತು. ರಕ್ಷಣಾಗೋಪುರಗಳು ವೃತ್ತಾಕಾರವಾಗಿದ್ದವು. ಕ್ರಿ.ಶ.1635ರಲ್ಲಿ ಈ ಕೋಟೆಯಲ್ಲಿ ಫಿರಂಗಿಪಡೆಯಿತ್ತು.[95] ಈ ಕೋಟೆಯ ನಿರ್ಮಾಣದಿಂದ ಗಂಗೊಳ್ಳಿ ದ್ವೀಪದ ಮೇಲೆ ಪೋರ್ಚುಗೀಸರು ನಿಯಂತ್ರಣ ಹೊಂದುವಂತಾಯಿತು. ಈ ಪ್ರದೇಶದಿಂದ 30,000 ಚೀಲಗಳಷ್ಟು ಅಕ್ಕಿ ಬರುತ್ತಿದ್ದು ಕೋಟೆಯ ನಿರ್ವಹಣೆಗೆ ಅನುಕೂಲವಾಗಿತ್ತು.[96]

**ಹೊನ್ನಾವರ:** ಕ್ರಿ.ಶ.1568ರಲ್ಲಿ ಪೋರ್ಚುಗೀಸ್ ವೈಸ್ ರಾಯ್ ಲೂಯಿಸ್ ಡಿ ಅಟೈಡ್ ಹೊನ್ನಾವರದಲ್ಲಿ ತಮ್ಮ ಕೋಟೆಯೊಂದನ್ನು ಹೊಂದಲು ಯೋಚಿಸಿದ್ದ. ತಮ್ಮ ವ್ಯವಹಾರಗಳಿಗೆ ಸಹಕರಿಸದ ಹೊನ್ನಾವರ ಮತ್ತು ಬಾರ್ಕೂರಿನ ಮುಖ್ಯಸ್ಥರನ್ನು ಶಿಕ್ಷಿಸಲು ಈ ಕೋಟೆಗಳು ಅವರಿಗೆ ಅಗತ್ಯವಾಗಿತ್ತು. ಕಾಲ ಕಾಲಕ್ಕೆ ನೀಡಬೇಕಾದ ಕಪ್ಪ ಕಾಣಿಕೆಗಳನ್ನೂ ಇವರು ನೀಡುತ್ತಿರಲಿಲ್ಲ. ಕ್ರಿ.ಶ.1569ರಲ್ಲಿ ಹೊನ್ನಾವರದ ಮೇಲೆ ದಾಳಿ ಮಾಡಿದ ಪೋರ್ಚುಗೀಸರು ಗೇರುಸೊಪ್ಪೆಯ ಮುಖ್ಯಸ್ಥರನ್ನು ಸೋಲಿಸಿ ಕೋಟೆಯನ್ನು ವಶಪಡಿಸಿಕೊಂಡರು. ಈ ಕೋಟೆಯನ್ನು ಹೊನ್ನಾವರ ನದಿಯ ದಡದಲ್ಲಿ ನಿರ್ಮಿಸಲಾಗಿತ್ತು.[97] ತುಳುನಾಡಿನ ಉತ್ತರ ಭಾಗದ ಮೇಲೆ ನಿಯಂತ್ರಣ ಹೊಂದಲು ಈ ಕೋಟೆ ಪೋರ್ಚುಗೀಸರಿಗೆ ಅನುಕೂಲಕರವಾಗಿತ್ತು.

ಕೆಳದಿಯ ಕೋಟೆಗಳಿಗೆ ಹೋಲಿಸಿದರೆ ಪೋರ್ಚುಗೀಸರ ಕೋಟೆಗಳು ಅಷ್ಟೊಂದು ವಿಶಾಲವಾಗಿರಲಿಲ್ಲ ಎಂದು ತಿಳಿಯುತ್ತದೆ. ಕೆಳದಿಯ ಕೋಟೆಗಳು ಸುಮಾರು 5 ಎಕರೆಯಿಂದ 13 ಎಕರೆಗಳಷ್ಟು ವಿಶಾಲವಾಗಿದ್ದರೆ ಪೋರ್ಚುಗೀಸರ ಕೋಟೆಗಳು ಹೆಚ್ಚು ಕಡಿಮೆ 2 ಎಕರೆಗಳಷ್ಟು ವಿಶಾಲವಾಗಿತ್ತು ಅಷ್ಟೆ. ಉದಾಹರಣೆಗೆ ಗಂಗೊಳ್ಳಿಯ ಕೋಟೆಯ ಗೋಡೆ ಚೌಕಾಕಾರದಲ್ಲಿದ್ದು 41.8 ಮೀಟರ್ ಉದ್ದವಿತ್ತು.[98] ಬೊಕಾರೊ ಹೇಳುವಂತೆ ಬಸ್ರೂರಿನ ಕೋಟೆ 220 ಮೀಟರ್ ಸುತ್ತಳತೆಯನ್ನು ಹೊಂದಿತ್ತು.[99] ಪೋರ್ಚುಗೀಸರ ಕೋಟೆಗಳಲ್ಲಿದ್ದ ಹೆಚ್ಚಿನ ಸೈನಿಕರು ಪೋರ್ಚುಗೀಸರಾದರೂ ಸ್ಥಳೀಯ ಸೈನಿಕರೂ ಇದ್ದರೆಂದು ತಿಳಿದು ಬರುತ್ತದೆ. ಆದರೆ ಸ್ಥಳೀಯರಿಗೆ ಉನ್ನತ ಹುದ್ದೆಗಳನ್ನು ನೀಡದೆ ಕೇವಲ ಕೆಳಮಟ್ಟದ ಜವಾನರ ಹುದ್ದೆಗಳನ್ನು ನೀಡಲಾಗುತ್ತಿತ್ತು. ಇನ್ನು ಕೆಳದಿಯರಸರು ಸ್ಥಳೀಯರನ್ನು ಅವಲಂಬಿಸದೆ, ತಮ್ಮ ನಂಬುಗೆಯ ಕನ್ನಡ ಮೂಲದ ಕ್ಷತ್ರಿಯರನ್ನೇ ಕೋಟೆಯ ರಕ್ಷಣೆಗಿರಿಸಿದ್ದರು. ಈ ಕಾಲದ ಕೋಟೆಗಳ ಅವಲೋಕನದಿಂದ ಕೆಳದಿಯರಸರ, ಸ್ಥಳೀಯರಸರ, ಸ್ಥಳೀಯ ವ್ಯಾಪಾರಸ್ಥರ ಮತ್ತು ಪೋರ್ಚುಗೀಸರ ಆರ್ಥಿಕ ಸಂಘರ್ಷಗಳು, ತುಳುನಾಡಿನ ನಿಯಂತ್ರಣದ ಸ್ವರೂಪ, ಸೇನಾ ಸಾಮರ್ಥ್ಯ ಇತ್ಯಾದಿ ವಿಚಾರಗಳನ್ನು ತಿಳಿಯಬಹುದಾಗಿದೆ. ಹಾಗೆಯೇ ಕರಾವಳೀ ತೀರದ ಪ್ರಮುಖ ವ್ಯಾಪಾರಿ ಕೇಂದ್ರಗಳಲ್ಲದೆ, ಒಳನಾಡಿನ ಆಯಕಟ್ಟಿನ ಸ್ಥಳಗಳನ್ನು ತಿಳಿಯಲೂ ಈ ಕೋಟೆಗಳ ಅಧ್ಯಯನ ಪೂರಕವಾಗಿದೆ. ಒಟ್ಟಿನಲ್ಲಿ ಬೇರೆ ಕಾಲಘಟ್ಟಕ್ಕೆ ಹೋಲಿಸಿದಾಗ ಈ ಕಾಲ ಕೋಟೆ ನಿರ್ಮಾಣಕ್ಕೆ ವಿಶೇಷ ಮಹತ್ವವನ್ನು ನೀಡಿ, ತುಳುನಾಡಿನ ಆರ್ಥಿಕ, ಸಾಮಾಜಿಕ ಸ್ಥಾನ ಪಲ್ಲಟಗಳಿಗೆ ಕಾರಣವಾಯಿತೆಂದು ತಿಳಿದುಬರುತ್ತದೆ.

ಕರಿಮೆಣಸು, ಅಕ್ಕಿ ಪೂರೈಕೆ ಮೊದಲಾದ ವಿಚಾರಗಳಲ್ಲಿ ಕೆಳದಿಯರಸರು ಮತ್ತು ಪೋರ್ಚುಗೀಸರ ನಡುವೆ ಭಿನ್ನಾಭಿಪ್ರಾಯಗಳಿದ್ದಂತೆ, ಕೋಟೆ ನಿರ್ಮಾಣ ಮತ್ತು ನಿಯಂತ್ರಣದ ವಿಚಾರದಲ್ಲಿಯೂ, ಈ ಕಾಲದಲ್ಲಿ ಸಂಘರ್ಷ ಕಾಣಿಸಿಕೊಂಡಿತ್ತು. ವೆಂಕಟಪ್ಪ ನಾಯಕನ ಸಾಮ್ರಾಜ್ಯ ವಿಸ್ತರಣಾ ನೀತಿ ಕರಾವಳಿಯ ಕೆಲವೆಡೆ ಆಗಲೇ ಕೋಟೆ ನಿರ್ಮಿಸಿ ಬಲಿಷ್ಠರಾಗಿದ್ದ ಪೋರ್ಚುಗೀಸರನ್ನು ಸಹಜವಾಗಿ ಚಿಂತೆಗೀಡು ಮಾಡಿದ್ದವು. ಈ ಹಿನ್ನೆಲೆಯಲ್ಲಿ ಪೋರ್ಚುಗೀಸ್ ದೊರೆ ಕ್ರಿ.ಶ.1598ನೆಯ ಇಸವಿ ನವೆಂಬರ್ 21ರಂದು ಭಾರತದ ತನ್ನ ಪ್ರತಿನಿಧಿಗೆ ಪತ್ರ ಬರೆದು ವೆಂಕಟಪ್ಪನ ಚಲನವಲನಗಳ ಮೇಲೆ ಕಣ್ಣಿಟ್ಟುಕೊಳ್ಳುವಂತೆಯೂ ಅವನ ಯೋಜನೆಗಳನ್ನು ಎದುರಿಸುವಂತೆಯೂ ಆದೇಶಿಸಿದ್ದನು.[100] ಗೇರುಸೊಪ್ಪೆಯ ರಾಣಿ ಚೆನ್ನಭೈರಾ ದೇವಿಯನ್ನು ಬಂಧಿಸಿ, ಸೆರೆಯಲ್ಲಿರಿಸಿದ ವೆಂಕಟಪ್ಪ, ಬಿಜಾಪುರದ ಆದಿಲ್ ಷಾನೊಂದಿಗೆ ಕ್ರಿ.ಶ. 1611ರಲ್ಲಿ ಒಪ್ಪಂದ ಮಾಡಿಕೊಂಡ ಮತ್ತು ಈ ಒಪ್ಪಂದದ ಬಳಿಕ ವೆಂಕಟಪ್ಪನಾಯಕನಿಗೆ ಉತ್ತರ ಭಾಗದ ಚಿಂತೆ ಕಡಿಮೆಯಾಗಿ ತುಳುನಾಡಿನ ಮೇಲೆ ರಾಜ್ಯ ವಿಸ್ತರಣೆಗೆ ಅನುಕೂಲವಾಯ್ತು. ಕಾರ್ಕಳದ ಭೈರರಸರ ವಿರುದ್ಧ ವೆಂಕಟಪ್ಪನ ಸಹಾಯ ಪಡೆದ ಬಂಗವಾಡಿಯ ರಾಜ ವೆಂಕಟಪ್ಪನ ಸಾಮಂತನಾಗಲು ಒಪ್ಪಬೇಕಾಯಿತು. ಈ ಘಟನೆ ಮಂಗಳೂರಿನ ಸುತ್ತ ಮುತ್ತಲಿನ ಆರ್ಥಿಕ ವಲಯಕ್ಕೆ ಕೆಳದಿಯರಸರು

ನೇರ ಪ್ರವೇಶ ಪಡೆಯಲು ಸಹಕಾರಿಯಾಯಿತು. ಅಲ್ಲದೆ ಕ್ರಿ.ಶ 1612ರಲ್ಲಿ ವೆಂಕಟಪ್ಪನಾಯಕ ಮಂಗಳೂರಿನಲ್ಲಿ ಪೋರ್ಚುಗೀಸರ ಕೋಟೆಯಿಂದ ಸ್ವಲ್ಪ ದೂರದ ಬೋಳಾರದಲ್ಲಿ ಹೊಸತೊಂದು ಕೋಟೆ ಕಟ್ಟಿಸಿದ.[101] ಇದರಿಂದ ಧೃತಿಗೆಟ್ಟ ಬಂಗರಾಜ ಪೋರ್ಚುಗೀಸರ ಸಹಾಯ ಕೇಳಬೇಕಾಯಿತು.

ಕ್ರಿ.ಶ. 1617ರ ಆರಂಭದಲ್ಲಿ ವೆಂಕಟಪ್ಪನು ಕೊಡಿಯಾಲ ಬೈಲಿನಲ್ಲಿದ್ದ ಬಂಗರ ಕೋಟೆಯನ್ನು ತನಗೆ ನೀಡುವಂತೆ ಕೇಳಿದನು. ಅಲ್ಲದೇ ಅಲ್ಲಿಯೇ ಸಮೀಪದಲ್ಲಿ ಇನ್ನೊಂದು ಕೋಟೆ ಸ್ಥಾಪಿಸುವ ಉದ್ದೇಶವನ್ನೂ ಹೊಂದಿದ್ದನು. ಆದರೆ ಬಂಗ ರಾಜ ಜಾಣ್ಮೆಯಿಂದ ತನ್ನ ಕೋಟೆಯ ಬೀಗದ ಕೈಯನ್ನು ಮಂಗಳೂರಿನ ಪೋರ್ಚುಗೀಸ್ ಕೋಟೆಯ ಅಧಿಕಾರಿಗೆ ಕೊಟ್ಟು ಅವರಿಂದ ಕೋಟೆಯನ್ನು ಪಡೆದುಕೊಳ್ಳುವಂತೆ ಹೇಳಿ ಬುದ್ಧಿವಂತಿಕೆ ತೋರಿದನು.[102] ಆದರೆ ಕ್ರಿ.ಶ.1617ರಲ್ಲಿ ವೆಂಕಟಪ್ಪನು ಆ ಕೋಟೆಯನ್ನು ವಶಪಡಿಸಿ ಕೊಂಡನೆಂದು ತೋರುತ್ತದೆ. ಬಂಗರಾಜನು ಎರಡು ತಿಂಗಳ ಕಾಲ ಯುದ್ಧಮಾಡಿ ಕೊಡಿಯಾಲಬೈಲಿನ ಇದೇ ಕೋಟೆಯನ್ನು ವೆಂಕಟಪ್ಪನ ಕೈಯಿಂದ ಕ್ರಿ.ಶ 1618ರ ಫೆಬ್ರವರಿ 20ರಂದು ಮರಳಿ ವಶಪಡಿಸಿಕೊಂಡ.[103]

ಬಂಗರಾಜನು ಪೋರ್ಚುಗೀಸ್‌ರ ಸಹಾಯದಿಂದ ಅದನ್ನು ಮರಳಿ ಪಡೆದಿರಬೇಕು. ಆದರೆ ಮುಂದೆ ಆ ಕೋಟೆಯನ್ನು ವೆಂಕಟಪ್ಪನಾಯಕ ವಶಪಡಿಸಿಕೊಳ್ಳುವ ಭಯ ಬಂಗರಸನಿಗೆ ಮತ್ತು ಪೋರ್ಚುಗೀಸರಿಗಿತ್ತು. ಬಂಗರಾಜನು ಅದನ್ನು ಪೋರ್ಚುಗೀಸರ ರಕ್ಷಣೆಗೆ ಬಿಟ್ಟುಕೊಟ್ಟು ಕಣ್ಣೂರಿನ ರಾಜನ ಮತ್ತು ಇತರರ ಸಹಾಯ ಪಡೆಯಲು ಕಾಸರಗೋಡಿಗೆ ಓಡಿಹೋದನು. ಆದರೆ ಅಲ್ಲಿಂದ ಯಾವ ಸಹಾಯವೂ ಅವನಿಗೆ ಸಿಗಲಿಲ್ಲ.[104]

ಆದರೆ ಬಂಗರಾಜನ ಕೋಟೆಯ ವಿಚಾರವಾಗಿ ಹಲವು ಬಾರಿ ಪೋರ್ಚುಗೀಸ್ ವೈಸ್‌ರಾಯ್ ಮತ್ತು ವೆಂಕಟಪ್ಪನಾಯಕ ಹಾಗೂ ಬಂಗರಾಜರ ನಡುವೆ ಪತ್ರ ವ್ಯವಹಾರ ನಡೆದಿತ್ತು. ಈ ಕೋಟೆಯ ಮೇಲೆ ಹಿಡಿತ ಸಾಧಿಸಲು ವೆಂಕಟಪ್ಪನ ಸೈನ್ಯ ಹಲವು ಬಾರಿ ಈ ಕೋಟೆಯ ಮೇಲೆ ಮತ್ತು ಪೋರ್ಚುಗೀಸ್ ಸೈನ್ಯದ ಮೇಲೆ ಆಕ್ರಮಣ ಮಾಡಿತ್ತು. ಮಂಗಳೂರಿನಲ್ಲಿ ವೆಂಕಟಪ್ಪ ನಾಯಕ ಕಟ್ಟಿಸುತ್ತಿದ್ದ ಹೊಸ ಕೋಟೆಯನ್ನು ಪೂರ್ತಿಗೊಳಿಸಲು ಬಿಡಬಾರದೆಂಬ ಪೋರ್ಚುಗೀಸರ ಯೋಜನೆ ಫಲ ನೀಡಲಿಲ್ಲ. ಗೋವೆಯಿಂದ ಯುದ್ಧಕ್ಕೆ ಸೈನ್ಯ ಕಳುಹಿಸಲಾಯಿತಾದರೂ ಕ್ರಿ.ಶ. 1619ರ ಜನವರಿ 7ರಂದು ನಡೆದ ಯುದ್ಧದಲ್ಲಿ 20 ದಂಡನಾಯಕರು, ಸುಮಾರು 200 ಸೈನಿಕರೂ ಸತ್ತರು. ಸುಮಾರು 20 ಮಂದಿ ವೆಂಕಟಪ್ಪನ ಖೈದಿಗಳಾದರು. ಮೂವತ್ತಕ್ಕಿಂತಲೂ ಅಧಿಕ ಜನ ಯುದ್ಧ ಭೂಮಿಯಿಂದ ಓಡಿ ಹೋದರು.[105] ಒಟ್ಟಿನಲ್ಲಿ ಈ ಹಂತದ ವರೆಗೆ ಈ ತ್ರಿಕೋನ ಸಂಘರ್ಷದ ಕಾರಣ ಮಂಗಳೂರು ಕೋಟೆಯಾಗಿತ್ತು ಮತ್ತು ಆ ಮೂಲಕ ಮಂಗಳೂರಿನ ಆರ್ಥಿಕ ಸಾಮ್ರಾಜ್ಯದ ಮೇಲೆ ಹಿಡಿತ ಸಾಧಿಸುವುದಾಗಿತ್ತು.

ಕ್ರಿ.ಶ.1619ರಲ್ಲಿ ಪೋರ್ಚುಗೀಸ್ ಅಧಿಕಾರಿ ಲೈತಾಂವ್‌ನ ಸಂಧಾನ ಯತ್ನದ ಫಲವಾಗಿ ವೆಂಕಟಪ್ಪನು ಕೆಲವು ಷರತ್ತುಗಳಿಗೆ ಒಪ್ಪಿಗೆ ಇತ್ತನು. ಇಲ್ಲಿಯೂ ಕೋಟೆಗಳ ವಿಚಾರದ ಪ್ರಸ್ತಾಪವಿತ್ತು. ಬಂಗರಾಜನು

ಕೊಡಿಯಾಲ ಬೈಲಿನ ತನ್ನ ಕೋಟೆಯನ್ನು ಕೆಡವಿ ಹಾಕಬೇಕು. ವೆಂಕಟಪ್ಪನು ನಂದಾವರ ಮತ್ತು ಉಪ್ಪಿನಂಗಡಿಗಳಲ್ಲಿ ಕಟ್ಟಿಸಿದ್ದ ಕೋಟೆಗಳೆರಡನ್ನು ಹಾಗೂ ಯುದ್ಧಕಾಲದಲ್ಲಿ ಕಟ್ಟಿಸಿದ್ದ ಇನ್ನಿತರ ಸಣ್ಣಪುಟ್ಟ ಕೋಟೆಗಳನ್ನು ಕೆಡವಿ ಹಾಕಬೇಕು ಎಂಬುದು ಪ್ರಮುಖ ಷರತ್ತಾಗಿತ್ತು. ಆದರೆ ಅದು ಕೈಗೂಡಲಿಲ್ಲ. ಆದರೂ ಪೋರ್ಚುಗೀಸರು ಬಂಗರಾಜನಿಗೆ ವೆಂಕಟಪ್ಪನಿಂದ ಹೆಚ್ಚು ಪರಿಹಾರ ಸಿಕ್ಕುವಂತೆ ಮಾಡಲು ಯತ್ನಿಸಿದರು ಹಾಗೂ ಅದರಲ್ಲಿ ತಾತ್ಕಾಲಿಕವಾಗಿ ಸಫಲರಾದರು. ಒಟ್ಟಿಗೆ ಸುಮಾರು ಏಳುಸಾವಿರ ಪ್ರತಾಪಗಳಷ್ಟು ಉತ್ಪತ್ತಿಯುಳ್ಳ ಭೂಮಿಯನ್ನು ವೆಂಕಟಪ್ಪನು ಬಂಗರಸನಿಗೆ ಕೊಡಲೊಪ್ಪಿದ. ಪ್ರತಿಯಾಗಿ ಬಂಗರಾಜನು–ನಂದಾವರದ ಕೋಟೆಯಲ್ಲಾಗಲೀ ಅಥವಾ ಇಕ್ಕೇರಿ ರಾಜ್ಯದ ಯಾವುದಾದರೂ ಸ್ಥಳದಲ್ಲಾಗಲೀ ಬಂದು ವಾಸಿಸಬೇಕೆಂದು ತಿಳಿಸಲಾಯಿತು.[106] ವೆಂಕಟಪ್ಪನೊಡನೆ ಮೈತ್ರಿಯಿಂದಿರುವುದು ಪೋರ್ಚುಗೀಸರಿಗೆ ಅನಿವಾರ್ಯವಾಗಿತ್ತು. ಅವನ ರಾಜ್ಯದ ಸರಹದ್ದುಗಳಲ್ಲಿ, ಅಂದರೆ ಮಂಗಳೂರು, ಹೊನ್ನಾವರ ಹಾಗೂ ಕುಂದಾಪುರಗಳಲ್ಲಿ ಅವರ ಕೋಟೆಗಳಿದ್ದವು. ಈ ಕೋಟೆಗಳಿಗೆ ಮತ್ತು ಗೋವೆ, ಆರ್ಮುಜ್ ಮತ್ತು ಮಸ್ಕತ್ ಗಳಿಗೆ ಬೇಕಾದ ಆಹಾರ ಧಾನ್ಯಗಳು ಅವನ ರಾಜ್ಯದಿಂದಲೇ ಪೂರೈಕೆ ಆಗಬೇಕಾಗಿತ್ತು.[107] ಆದಾಗ್ಯೂ ವೆಂಕಟಪ್ಪನು ಕ್ರಿ.ಶ.1629ರ ನವಂಬರ 10 ರಂದು ತೀರಿಹೋದ ಬಳಿಕವೇ ತನ್ನ ಕಳೆದುಹೋದ ರಾಜ್ಯವನ್ನು ಹಿಂದೆ ಪಡೆಯುವ ಸುಯೋಗ ಬಂಗರಾಜನಿಗೆ ಸಿಕ್ಕಿತು.[108] ಕ್ರಿ.ಶ. 16ನೇ ಶತಮಾನದ ಆದಿಯಿಂದ ಪಶ್ಚಿಮ ಕರಾವಳಿ ತೀರದಲ್ಲಿ ಪ್ರಶ್ನಾತೀತ ಹಿರಿಮೆಯನ್ನು ಹೊಂದಿದ್ದ ಪೋರ್ಚುಗೀಸರು ವೆಂಕಟಪ್ಪನಾಯಕನ ಆಳ್ವಿಕೆಯಲ್ಲಿ ಸಂಪೂರ್ಣ ಹಿನ್ನಡೆಯನ್ನು ಕಾಣಬೇಕಾಯಿತೆಂದು ಮೇಲಿನ ಅಧ್ಯಯನ ದೃಢಪಡಿಸುತ್ತದೆ. ಸ್ಥಳೀಯ ಬಂಗರಸನ ದುರ್ಬಲತೆ, ಬ್ರಿಟೀಷರ ಪ್ರವೇಶ, ವೆಂಕಟಪ್ಪನ ಸಾಮರ್ಥ್ಯ ಇವುಗಳಿಂದ ಈ ಕಾಲದಲ್ಲಿ ಪೋರ್ಚುಗೀಸರ ಪ್ರಾಬಲ್ಯ ಕುಗ್ಗಿ ಹೋದದ್ದು ಸ್ಪಷ್ಟವಾಗುತ್ತದೆ

ಹಿರಿಯ ವೆಂಕಟಪ್ಪನಾಯಕನ ಕಾಲದಲ್ಲಿ ಬಂಗ ರಾಜನ ಮಂಗಳೂರಿನ ಕೋಟೆ ಸಂಘರ್ಷದ ಕೇಂದ್ರವಾಗಿದ್ದರೆ, ಅವನ ಮೊಮ್ಮಗ ಹಾಗೂ ಉತ್ತರಾಧಿಕಾರಿ ವೀರಭದ್ರನಾಯಕನ ಕಾಲದಲ್ಲಿ (ಕ್ರಿ.ಶ.1629–1645) ಗಂಗೊಳ್ಳಿಯ ಪರ್ಯಾಯ ದ್ವೀಪ ಸಂಘರ್ಷದ ಮೂಲವಾಗಿತ್ತು. ಪೋರ್ಚುಗೀಸರು ಗಂಗೊಳ್ಳಿಯ ಪರ್ಯಾಯ ದ್ವೀಪವನ್ನು ವಶಪಡಿಸಿ, ಅಲ್ಲಿ ಕೋಟೆ ಕಟ್ಟಿಕೊಳ್ಳಲು ಬಯಸಿದರು. ಗಂಗೊಳ್ಳಿ ಪರ್ಯಾಯ ದ್ವೀಪವನ್ನು ನಿಯಂತ್ರಣಕ್ಕೆ ಪಡೆಯಲು ಪೋರ್ಚುಗೀಸರು ಪ್ರಯತ್ನಿಸುತ್ತಿದ್ದುದಕ್ಕೆ ಅಕ್ಕಿಯ ಲಭ್ಯತೆಯೂ ಒಂದು ಕಾರಣವಾಗಿತ್ತು. ಅಲ್ಲಿ ವರ್ಷಕ್ಕೆ 20000 ಚೀಲ ಅಕ್ಕಿ, 1500 ಖಂಡಿ ಕರಿಮೆಣಸನ್ನು ಪಡೆಯಬಹುದೆಂದು ನಿರೀಕ್ಷಿಸಿದ್ದರು. ಅಗತ್ಯವಿದ್ದಷ್ಟು ಮಂದಿ ನಾವಿಕರನ್ನು ಅಲ್ಲಿಂದ ಪೋರ್ಚುಗೀಸ ನೌಕೆಗಳಿಗೆ ಸೇರಿಸಿಕೊಳ್ಳಬಹುದಲ್ಲದೆ, ವರ್ಷಕ್ಕೆ 10000ಕ್ಕೂ ಮಿಕ್ಕಿ ಕುಸಾದುಗಳನ್ನು(1 ಕುಸಾದು ಅಂದರೆ 400 ರೀಸ್) ಗಳಿಸಬಹುದು ಎಂದು ಅಭಿಪ್ರಾಯಪಟ್ಟರು.[109] ಆದರೆ ವೆಂಕಟಪ್ಪನ ಜೀವಿತ ಕಾಲದಲ್ಲಿ ಗಂಗೊಳ್ಳಿಯನ್ನು ವಶಪಡಿಸಿಕೊಳ್ಳುವ ಪ್ರಯತ್ನಕ್ಕೆ ಪೋರ್ಚುಗೀಸರು ಕೈಹಾಕಿರಲಿಲ್ಲ. ಅವನ ನಿಧನದ

ಬಳಿಕ ಗಂಗೊಳ್ಳಿಯ ಬಗೆಗೆ ಅವರು ಪುನ: ಅಲೋಚಿಸತೊಡಗಿದರು.

ಗಂಗೊಳ್ಳಿಯ ಮೇಲೆ ನ್ಯಾಯಬದ್ಧ ಹಕ್ಕು ಇರುವಂತಾಗಲು ಬಸರೂರಿನ ಸ್ಥಳೀಯ ಆಡಳಿತ ಸಂಸ್ಥೆಯಿಂದ ದಾನಪತ್ರ ಪಡೆಯಲು ಪೋರ್ಚುಗೀಸರು ನಿರ್ಧರಿಸಿದರು ಹಾಗೂ ಅದರಲ್ಲಿ ಸಫಲರಾದರು.[110] ಅವರು ಕೋಟೆಯ ಕೆಲಸವನ್ನು ಪ್ರಾರಂಭಿಸಿದೊಡನೆ ವೀರಭದ್ರನು ಅವರೊಡನೆ ಗಂಗೊಳ್ಳಿ ಮತ್ತು ಕುಂದಾಪುರದಲ್ಲಿ ಯುದ್ಧ ಪ್ರಾರಂಭಿಸಿದನು. ಗಂಗೊಳ್ಳಿಯಲ್ಲಿದ್ದ ಅವರ ಕಾಪು ಗೋಡೆಗಳ ಎದುರಾಗಿಯೇ ತಾನೊಂದು ಕಾಪು ಗೋಡೆಯನ್ನು ಕಟ್ಟಿಸಿ ಅವರ ಅಪೂರ್ಣ ಕೋಟೆಯನ್ನು ವಶಪಡಿಸಿಕೊಳ್ಳಲೆತ್ನಿಸಿದನು. ಆದರೆ ಪೋರ್ಚುಗೀಸರು ಗಂಗೊಳ್ಳಿಯನ್ನು ಸಂರಕ್ಷಣೆ ಮಾಡಿಕೊಂಡರಲ್ಲದೆ ವೀರಭದ್ರನ ಹಲವು ಸೈನಿಕರನ್ನು ಕೊಂದುಹಾಕಿದರು. ಈ ಮಧ್ಯೆ ವೀರಭದ್ರನ ಸಂಬಂಧಿಕನಾದ ವೀರಪ್ಪನಾಯಕನೂ ದಂಗೆಯೆದ್ದನು. ವೀರಭದ್ರನು ಆದಾಗಲೇ ಪೋರ್ಚುಗೀಸರ ವೈರಿಯಾಗಿದ್ದುದರಿಂದ ಅವರು ವೀರಪ್ಪನ ಪಕ್ಷ ಸೇರಲು ನಿರ್ಧರಿಸಿದರು. ಗಂಗೊಳ್ಳಿಯಲ್ಲಿನ ಪೋರ್ಚುಗೀಸ್ ಕಾಪುಗೋಡೆಗಳ ಎದುರಿಗೆ ವೀರಭದ್ರನು ಕಟ್ಟಿಸಿದ ಕಾಪುಗೋಡೆಯನ್ನು ವೀರಪ್ಪನ ಆಜ್ಞೆಯ ಪ್ರಕಾರ ಕೆಡವಿಹಾಕಲಾಯಿತು.[111] ಆದರೆ ಮುಂದೆ ವೀರಪ್ಪನ ಮರಣದ ನಂತರ ವೀರಭದ್ರನು ಬಸ್ರೂರನ್ನು ವಶಪಡಿಸಿಕೊಂಡನಲ್ಲದೆ, ಗಂಗೊಳ್ಳಿಯಲ್ಲಿ ಒಂದು ಕೋಟೆ ನಿರ್ಮಾಣಕ್ಕೆ ಮುಂದಾದನು. ಮುಂದೆ ಪೋರ್ಚುಗೀಸರೊಂದಿಗೆ ಹಲವು ಸುತ್ತಿನ ಮಾತುಕತೆಗಳಾದರೂ ಅದು ಯಶಸ್ವಿಯಾಗದೆ ಗಂಗೊಳ್ಳಿಯ ಪೋರ್ಚುಗೀಸರ ಕೋಟೆ ಮತ್ತು ಅದರ ನಿಯಂತ್ರಣಕ್ಕೆ ಸಂಬಂಧಿಸಿದ ವಿವಾದಗಳು ಅವನ ಮರಣದವರೆಗೂ ಮುಂದುವರೆದಿತ್ತು.

ಕೆಳದಿಯ ರಾಜರಲ್ಲಿ ಅತ್ಯಂತ ಪ್ರಖ್ಯಾತನಾದ ಶಿವಪ್ಪನಾಯಕನ ಕಾಲದಲ್ಲಿಯೂ ಕರಿಮೆಣಸು, ಅಕ್ಕಿ, ಕೋಟೆ, ಕಂದಾಯ ವಿಚಾರಗಳ ಹಗ್ಗ ಜಗ್ಗಾಟ ಮುಂದುವರೆದಿತ್ತು. ಈ ಕಾಲದಲ್ಲಿಯೂ ಗಂಗೊಳ್ಳಿ ಮತ್ತು ಕುಂದಾಪುರ ಕೋಟೆಗಳ ವಿಚಾರದಲ್ಲಿ ಶಿವಪ್ಪನಾಯಕ ಹಾಗೂ ಪೋರ್ಚುಗೀಸರ ನಡುವೆ ಸಂಘರ್ಷವೇರ್ಪಟ್ಟಿತ್ತು. ಈ ನಾಯಕನ ಕಾಲದಲ್ಲಿ ಮಂಗಳೂರು, ಕುಂದಾಪುರ, ಬಸ್ರೂರು, ಗಂಗೊಳ್ಳಿ, ಹೊನ್ನಾವರ ಸೇರಿದಂತೆ ಇಡೀ ಪಶ್ಚಿಮ ಕರಾವಳಿ ವಾಣಿಜ್ಯ ಸಂಘರ್ಷದ ಕೇಂದ್ರವಾಗಿತ್ತು ಮತ್ತು ಇಲ್ಲಿರುವ ಎಲ್ಲಾ ಕೋಟೆಗಳು ಶಿವಪ್ಪ ನಾಯಕನ ವಶವಾಯಿತು. ಇಲ್ಲಿಯ ವಾಣಿಜ್ಯ, ಆರ್ಥಿಕ ಮೇಲಾಟದಲ್ಲಿ ಶಿವಪ್ಪ ನಾಯಕ ಸಂಪೂರ್ಣ ಮೇಲುಗೈ ಸಾಧಿಸಿದ. ಸೋಮಶೇಖರ ನಾಯಕನ ಕಾಲದಲ್ಲಿ ಮತ್ತೆ ಸಂಧಾನ ಪ್ರಕ್ರಿಯೆಗಳು ನಡೆದವು. ಗಂಗೊಳ್ಳಿ, ಕುಂದಾಪುರ ಮತ್ತು ಮಂಗಳೂರುಗಳನ್ನು ಪೋರ್ಚುಗೀಸರಿಗೆ ಹಿಂತಿರುಗಿಸುವುದೆಂದು ನಿಶ್ಚಯಿಸಲಾಗಿತ್ತು.[112] ಆದರೆ ಈ ಮಧ್ಯೆ ಕೋಟೆ ರಾಜಕೀಯಕ್ಕೆ ಡಚ್ಚರ ಪ್ರವೇಶದಿಂದಾಗಿ ಈ ಕೋಟೆಗಳು ಪೋರ್ಚುಗೀಸರ ವಶವಾಗಲಿಲ್ಲ. ಮುಂದೆ ಗಂಗೊಳ್ಳಿ ಮಾತ್ರ ಪೋರ್ಚುಗೀಸರ ಕೈಯಲ್ಲಿ ಉಳಿಯಿತು. ಡಚ್ಚರನ್ನು ಎದುರಿಸಿ ಕುಂದಾಪುರ ಅಥವಾ ಮಂಗಳೂರನ್ನು ಪಡೆಯಲು ಪೋರ್ಚುಗೀಸರಿಗೆ ಅಸಾಧ್ಯವಾಗಿತ್ತು.[113]

ಕ್ರಿ.ಶ.1671ರಲ್ಲಿ ಸೋಮಶೇಖರನು ಪೋರ್ಚುಗೀಸರೊಡನೆ ಮತ್ತೆ ಸಂಧಾನ ಪ್ರಾರಂಭಿಸಿದನು. ಫೆಬ್ರುವರಿ 14ರಂದು ವೈಸ್ ರಾಯನಿಗೆ ಬರೆದ ಪತ್ರದಲ್ಲಿ ಈ ಕೆಳಗಿನ ಷರತ್ತುಗಳನ್ನು ವಿಧಿಸಿದ್ದನು.[114] ಮಂಗಳೂರು, ಕುಂದಾಪುರ ಮತ್ತು ಹೊನ್ನಾವರಗಳಲ್ಲಿ ಪೋರ್ಚುಗೀಸ್ ವ್ಯಾಪಾರ ಕೇಂದ್ರಗಳನ್ನು ಸ್ಥಾಪಿಸಲು ಅನುಮತಿ ಕೊಡಲಾಗುವುದು. ಪ್ರತಿ ವ್ಯಾಪಾರ ಕೇಂದ್ರಕ್ಕೆ ಅದರ ಸುತ್ತಲೂ ಒಂದು ಗುಂಡು ಹಾರುವಷ್ಟು ದೂರ ನೆಲ ಬಿಟ್ಟುಕೊಡಲಾಗುವುದು. ವ್ಯಾಪಾರಕೇಂದ್ರದ ಸುತ್ತ ಕಲ್ಲಿನ ಗೋಡೆಯನ್ನಾಗಲಿ, ಕೊತ್ತಲವನ್ನಾಗಲಿ, ಪಾಗಾರವನ್ನಾಗಲಿ, ಕಂದಕವನ್ನಾಗಲಿ ಸ್ಥಾಪಿಸಬಾರದು. ಕೊಡಲ್ಪಟ್ಟದ್ದಕ್ಕಿಂತ ಹೆಚ್ಚು ಜಾಗೆ ವಶಪಡಿಸಿಕೊಳ್ಳಲು ಪೋರ್ಚುಗೀಸರು ಯತ್ನಿಸಬಾರದು. ಈ ಷರತ್ತುಗಳಲ್ಲಿ ಕೆಲವು ಸಣ್ಣ ಪುಟ್ಟ ಮಾರ್ಪಾಟುಗಳೊಂದಿಗೆ ಪೋರ್ಚುಗೀಸರು ಒಪ್ಪಂದ ಮಾಡಿಕೊಂಡರು.

ಕ್ರಿ.ಶ. 1734ರಲ್ಲಿ ಮಂಗಳೂರು ಬಂದರಿನಲ್ಲಿ ಪೋರ್ಚುಗೀಸರು ನಿರ್ಮಿಸುತ್ತಿದ್ದ ಕೋಟೆಯೊಂದು ಪೂರ್ತಿಯಾಯಿತೆಂದು ತಿಳಿದುಬರುತ್ತದೆ.[115] ಅಂದರೆ ಶಿವಪ್ಪ ನಾಯಕನ ಕಾಲದಲ್ಲಿ ಕರಾವಳಿ ಕೋಟೆಗಳ ಮೇಲೆ ನಿಯಂತ್ರಣ ಕಳೆದುಕೊಂಡಿದ್ದ ಪೋರ್ಚುಗೀಸರು, ಎರಡನೆಯ ಸೋಮಶೇಖರ ನಾಯಕನ ಕಾಲದಲ್ಲಿ ಮತ್ತೆ ಪ್ರಾಬಲ್ಯ ಹೊಂದಿದರು. ಕ್ರಿ.ಶ.1750ರಲ್ಲಿ ಎರಡನೇ ಬಸಪ್ಪನಾಯಕನ ಆಳ್ವಿಕೆಯ ಸಂದರ್ಭದಲ್ಲಿ ಮರಾಠ ತುಳಾಜಿಯು ಹೊನ್ನಾವರ ಮತ್ತು ಗೋಕರ್ಣದ ಮೇಲೆ ದಾಳಿ ಮಾಡುವಾಗ ಬಸವಪ್ಪನು ಪೋರ್ಚುಗೀಸರ ಸಹಾಯ ಕೇಳಿದನು. ತಮಗೆ ಹೊನ್ನಾವರ ಮತ್ತು ಕುಂದಾಪುರಗಳಲ್ಲಿ ವ್ಯಾಪಾರ ಕೇಂದ್ರಗಳನ್ನು ಸ್ಥಾಪಿಸಲು ಸಮ್ಮತಿ ನೀಡಿದರೆ ಮತ್ತು ಮಂಗಳೂರಿನ ಕೇಂದ್ರವನ್ನು ಕೋಟೆಗಳಿಂದ ಭದ್ರಪಡಿಸಲು ಅನುಮತಿ ನೀಡಿದರೆ ಸಹಾಯ ಮಾಡುವುದಾಗಿ ಪೋರ್ಚುಗೀಸರು ಬಸವಪ್ಪನಿಗೆ ಸೂಚಿಸಿದರು.[116] ಮಲಬಾರಿಗರು ಬಸವಪ್ಪನನ್ನು ಸೋಲಿಸಿ ಅವನಿಂದ ಚಂದ್ರಗಿರಿ ಕೋಟೆಯನ್ನು ಕಿತ್ತುಕೊಂಡರು. ಕ್ರಿ.ಶ.1754ನೇ ಜನವರಿಯಲ್ಲಿ ಬಸವಪ್ಪನ ಕೋರಿಕೆಯ ಮೇರೆಗೆ ಪೋರ್ಚುಗೀಸರು ಅವನಿಗೆ ಸಹಾಯ ಮಾಡಿ ಚಂದ್ರಗಿರಿ ಮರಳಿ ಸಿಗುವಂತೆ ಮಾಡಿದರು.[117] ಹೀಗೆ, ಕೋಟೆಗಳ ಮೇಲಿನ ನಿಯಂತ್ರಣಕ್ಕಾಗಿ ಪೋರ್ಚುಗೀಸರ ಮತ್ತು ಕೆಳದಿ ಅರಸರ ಮಧ್ಯೆ ದೀರ್ಘವಾದ ಸಂಘರ್ಷವೇರ್ಪಟ್ಟಿರುವುದನ್ನು ಗಮನಿಸಬಹುದು.

ಈ ಅಧ್ಯಯನದಿಂದ ಭಾರತದಲ್ಲಿ ಪೋರ್ಚುಗೀಸರು ಕೆಳದಿಯರಸರ ಆಳ್ವಿಕೆಯ ಉದ್ದಕ್ಕೂ ವಾಣಿಜ್ಯ ಸಂಘರ್ಷದಲ್ಲಿ ತೊಡಗಿದ್ದನ್ನು ಗಮನಿಸಬಹುದು. ಭಾರತದಲ್ಲಿ ಪೋರ್ಚುಗೀಸರ ಯಶಸ್ಸಿಗೆ ಅವರ ಯಶಸ್ವೀ ನೌಕಾ ಪಡೆಯೇ ಪ್ರಮುಖ ಕಾರಣವಾಗಿತ್ತು. ಕ್ರಿ.ಶ.15ನೇ ಶತಮಾನದಲ್ಲಿ ಅವರು ಸಾಗರ ವ್ಯಾಪಾರಕ್ಕಾಗಿಯೇ ವಿಶೇಷವಾದ ಹಡಗುಗಳನ್ನು ನಿರ್ಮಿಸಿದ್ದರಲ್ಲದೆ ಅವುಗಳು ಫಿರಂಗಿಗಳಿಂದ ಸನ್ನದ್ಧವಾಗಿದ್ದವು. ಈ ಹಡಗುಗಳು ಭಾರತಕ್ಕೆ ಬಂದಾಗ ಈ ಭಾಗದಲ್ಲಿ ಅದು ವಿಶೇಷವಾಗಿತ್ತು.[118] ಯುರೋಪಿನಿಂದ ಹೊರಗೆ ಆಟ್ಟೋಮಾನ್ ಟರ್ಕರು ಮಾತ್ರ ಅಂತಹ ಹಡಗುಗಳನ್ನು ಹೊಂದಿದ್ದರು.

ಆದರೆ ಪೋರ್ಚುಗೀಸರು ಭಾರತಕ್ಕೆ ಬಂದಾಗ ಅವರಿಗೆ ಪ್ರತಿಸ್ಪರ್ಧೆ ನೀಡಲು ಭಾರತದ ತೀರಗಳಲ್ಲಿ ಟರ್ಕರ ಹಡಗುಗಳಿರಲಿಲ್ಲ. ಟರ್ಕರು ಪೋರ್ಚುಗೀಸರ ಮೇಲೆ ದಾಳಿ ನಡೆಸಲು ಸನ್ನದ್ಧರಾದಾಗ ಪೋರ್ಚುಗೀಸರು ಭಾರತದ ಕರಾವಳಿ ತೀರದಲ್ಲಿ ನೆಲೆಯೂರಿಯಾಗಿತ್ತು. ವಿಜಯನಗರ ಸಾಮ್ರಾಟರು ಬಲಿಷ್ಠರಾಗಿದ್ದರೂ ಅವರ ನೌಕಾಪಡೆಯಲ್ಲಿ ತೋಪುಗಾರಿಕೆ ಇಲ್ಲದೆ ಪೋರ್ಚುಗೀಸರನ್ನು ಎದುರು ಹಾಕಿಕೊಳ್ಳುವಂತಿರಲಿಲ್ಲ. ಹಾಗಾಗಿ ಪೋರ್ಚುಗೀಸರ ಕಿರುಕುಳಕ್ಕೆ ಸ್ಥಳೀಯ ಮುಖ್ಯಸ್ಥರು ಒಳಗಾದುದರಲ್ಲಿ ಆಶ್ಚರ್ಯವೇನೂ ಇಲ್ಲ. ತಿಮ್ಮಯ್ಯನ ನೇತೃತ್ವದಲ್ಲಿ ಗೇರುಸೊಪ್ಪೆ ನೌಕಾಪಡೆ ಹೊಂದಿದ್ದರೂ ಫಿರಂಗಿ ಬಲ ಇಲ್ಲದೆ ಮತ್ತು ಆಳ ಸಮುದ್ರಕ್ಕೆ ಹೊಂದಿಕೆಯಾಗದ ಕಾರಣ ಪೋರ್ಚುಗೀಸರನ್ನು ಎದುರಿಸಲು ಸಾಧ್ಯವಿರಲಿಲ್ಲ.[119]

ಇದಲ್ಲದೆ ಪೋರ್ಚುಗೀಸರು ಕರಾವಳಿಯ ಬಂದರುಗಳ ಮೇಲೆ ಅಥವಾ ನಗರಗಳ ಮೇಲೆ ದಾಳಿ ಮಾಡಿದರೂ ವಿಜಯನಗರದರಸರು ಅದನ್ನು ಪ್ರತಿಭಟಿಸುವ ಸಾಹಸಕ್ಕೆ ಹೋಗಲಿಲ್ಲ. ಅದಕ್ಕೆ ಕಾರಣ ಬಲಿಷ್ಠರಾದ ಪೋರ್ಚುಗೀಸರೊಂದಿಗೆ ಸಂಘರ್ಷ ಅವರಿಗೆ ಬೇಕಾಗಿರಲಿಲ್ಲ. ಇದಕ್ಕೆ ಇನ್ನೊಂದು ಕಾರಣ ಈ ಇಬ್ಬರಿಗೂ ಮುಸ್ಲಿಮರೇ ಸಮಾನ ಶತ್ರುಗಳು. ವಿಜಯನಗರದರಸರಿಗೆ ದಖ್ಖನ್‌ನ ಮುಸಲ್ಮಾನ ಸಾಮ್ರಾಜ್ಯಗಳು ಶತ್ರುಗಳಾದರೆ ಪೋರ್ಚುಗೀಸರಿಗೆ ಅರಬ್ಬರಂತಹ ಮುಸ್ಲಿಂ ವ್ಯಾಪಾರಿಗಳು ಪ್ರತಿಸ್ಪರ್ಧಿಗಳಾಗಿದ್ದರು. ಪೋರ್ಚುಗೀಸರೊಂದಿಗಿನ ಸ್ನೇಹ ವಿಜಯನಗರದರಸರಿಗೆ ಯುದ್ಧೋಪಕರಣಗಳನ್ನು ಪಡೆಯಲು, ವಿಶೇಷವಾಗಿ ಆರ್ಮುಜ್‌ನಿಂದ ಕುದುರೆಯನ್ನು ಪಡೆಯಲು ಅನುಕೂಲಕರವಾಗಿತ್ತು. ವಿರಸ ತಲೆದೋರಿದರೆ ಅವುಗಳನ್ನು ವಿಜಯನಗರದ ಶತ್ರುಗಳು ಗೋವಾದ ಬಂದರುಗಳಿಂದ ಪಡೆದುಕೊಳ್ಳುವ ಸಾಧ್ಯತೆ ಇತ್ತು. ಹಾಗಾಗಿಯೇ ಪೋರ್ಚುಗೀಸರು ಗೋವಾವನ್ನು ವಶಪಡಿಸಿಕೊಂಡಾಗ ಕೃಷ್ಣದೇವರಾಯ ಮಿತ್ರತ್ವವನ್ನೇ ಮುಂದುವರೆಸಿದ್ದ.[120] ವಿಜಯನಗರದ ಈ ನಡೆ ಪೋರ್ಚುಗೀಸರು ಕರಾವಳಿಯ ಬಂದರು ಪಟ್ಟಣಗಳಲ್ಲಿ ಭದ್ರವಾಗಿ ನೆಲೆಯೂರಲು ಕಾರಣವಾಯಿತು. ಹಾಗಾಗಿ ಕೆಳದಿಯರಸರು ಅವರೊಂದಿಗೆ ನಿರಂತರ ಸಂಘರ್ಷದಲ್ಲಿ ತೊಡಗಬೇಕಾದ ಅನಿವಾರ್ಯತೆಯುಂಟಾಯಿತು. ಪೋರ್ಚುಗೀಸರು ತಮ್ಮ ಆಗಮನದ ಮೊದಲ ಹಂತದಲ್ಲಿ, ಅವರ ಕುರಿತಾಗಿ ಮೃದು ಧೋರಣೆ ಹೊಂದಿದ್ದ ವಿಜಯನಗರದರಸರ ವ್ಯಾಪ್ತಿಯ ಗೇರುಸೊಪ್ಪೆ, ಭಟ್ಕಳದಲ್ಲಿ ಸಕ್ರಿಯರಾಗಿದ್ದರು. ಆದರೆ ಕೆಳದಿಯರಸರು ತುಳುನಾಡಿನ ಉತ್ತರ ಭಾಗವನ್ನು ತಮ್ಮ ಸುಪರ್ದಿಗೆ ತೆಗೆದುಕೊಂಡ ಮೇಲೆ ಗೇರುಸೊಪ್ಪೆಯ ದಕ್ಷಿಣ ಭಾಗಕ್ಕೆ ಪೋರ್ಚುಗೀಸರು ಹೆಚ್ಚು ಗಮನ ನೀಡಿದಂತೆ ತೋರುತ್ತದೆ. ಹಾಗಾಗಿಯೇ ಕ್ರಿ.ಶ.1568ರಲ್ಲಿ ಅವರು ಮಂಗಳೂರಿನಲ್ಲಿ ಬಂಗರಸನ ಸಹಕಾರದಿಂದ ತಮ್ಮ ಮೊದಲ ಕೋಟೆ ಕಟ್ಟಿದರು. ಹಾಗೆಯೇ ಕುಂದಾಪುರದಲ್ಲಿ ಮತ್ತು ಹೊನ್ನಾವರಗಳಲ್ಲಿ ಕೋಟೆ ಕಟ್ಟಿಸಿದರು. ಆದರೆ ವೆಂಕಟಪ್ಪನಾಯಕನ ಪ್ರಾಬಲ್ಯ ಅವರನ್ನು ಮುಂದಡಿ ಇಡದಂತೆ ಮಾಡಿತು. ತನ್ನ ಸೈನಿಕ ಶಕ್ತಿಯಿಂದ ವೆಂಕಟಪ್ಪ ಸ್ಥಳೀಯರಸರನ್ನು ಮತ್ತು ಪೋರ್ಚುಗೀಸರನ್ನು ತನ್ನ ನಿಯಂತ್ರಣಕ್ಕೆ ತೆಗೆದುಕೊಂಡನು. ಹಾಗಾಗಿ ಆರ್ಥಿಕವಾಗಿಯೂ ಸ್ಥಳೀಯ ರಾಜರು ಮತ್ತು

ಪೋರ್ಚುಗೀಸರು ಕಷ್ಟನಷ್ಟಗಳನ್ನು ಅನುಭವಿಸಬೇಕಾಯಿತು. ಕ್ರಿ.ಶ.1619ರಲ್ಲಿ ಮಂಗಳೂರು ಕೋಟೆಯ ಅಧಿಕಾರಿ ಗಸ್ಪಾರ್ ಅಪೋನ್ಸೋ ದೆ ಮೇಲ್ಲುವಿನ(Gasper Afonso de Mello) ಪತ್ರ ಪೋರ್ಚುಗೀಸರು ಎಷ್ಟು ಕುಗ್ಗಿ ಹೋಗಿದ್ದರೆಂದು ತಿಳಿಸುತ್ತದೆ.

ವೆಂಕಟಪ್ಪನ ಕಾಲದಲ್ಲಿ ಮಂಗಳೂರು, ಕುಂದಾಪುರ ಕೋಟೆಗಳು, ಅಕ್ಕಿ, ಕರಿಮೆಣಸಿನ ವಿಚಾರ ಪ್ರಮುಖ ಆದ್ಯತೆಯಾಗಿದ್ದರೆ, ವೀರಭದ್ರ ನಾಯಕನ ಕಾಲದಲ್ಲಿ ಗಂಗೊಳ್ಳಿ ಕೋಟೆ ನಿರ್ಮಾಣ ಪ್ರಮುಖ ಆದ್ಯತೆಯಾಗಿತ್ತು. ಪರಾಕ್ರಮಿಯಾದ ಶಿವಪ್ಪನಾಯಕನ ಕಾಲದಲ್ಲಿಯಂತೂ ಪೋರ್ಚುಗೀಸರು ಮಂಗಳೂರು, ಕುಂದಾಪುರ, ಗಂಗೊಳ್ಳಿ ಬಸ್ರೂರು ಮತ್ತು ಕೊನೆಗೆ ಹೊನ್ನಾವರದಂತಹ ತಮ್ಮ ಪ್ರಮುಖ ವ್ಯಾಪಾರ ಕೇಂದ್ರಗಳ ಮೇಲಿನ ಹಿಡಿತವನ್ನು ಸಂಪೂರ್ಣವಾಗಿ ಕಳೆದುಕೊಂಡು ಗೋವಾಕ್ಕೆ ಮಾತ್ರ ಸೀಮಿತವಾದರು. ಈ ಹಿಂದೆ ವಾರ್ಷಿಕ 200–300 ಖಂಡಿಗಳಷ್ಟು ಕರಿಮೆಣಸು ಖರೀದಿಸುತ್ತಿದ್ದ ಪೋರ್ಚುಗೀಸರಿಗೆ 800, 1000 ಖಂಡಿ ಕರಿಮೆಣಸನ್ನು ಖಂಡಿಗೆ 28 ಪ್ರತಾಪಗಳಂತೆ ಖರೀದಿಸಬೇಕೆಂಬ ಶಿವಪ್ಪನ ಒತ್ತಡವೇ ಅವರ ಪಲಾಯನಕ್ಕೆ ಪ್ರಮುಖ ಕಾರಣವಾಗಿತ್ತು. ಕೊನೆಗೆ 700 ಖಂಡಿಯಷ್ಟು ಕರಿಮೆಣಸು ಖರೀದಿಗೆ ತಯಾರಾದರೂ ದರ ಸಮರಕ್ಕೆ ಹಿಂಜರಿದ ಪೋರ್ಚುಗೀಸರು ಅವನ ಸೈನಿಕ ಶಕ್ತಿಗೂ ಶರಣಾದರು. ಶಿವಪ್ಪನಾಯಕನ ಕಾಲದಲ್ಲಿ ಕಳೆದುಕೊಂಡ ಮಂಗಳೂರಿನ ಕೋಟೆಯನ್ನು ಇಮ್ಮಡಿ ಬಸವಪ್ಪನ ಕಾಲದಲ್ಲಿಯಷ್ಟೇ ಮರಳಿ ಪಡೆಯುವಂತಾಯಿತು. ಕಾರ್ಟೇಜೆಸ್ ಮುಖಾಂತರ ಸಾಗರೋತ್ತರ ವಾಣಿಜ್ಯ ಅಧಿಕಾರವನ್ನು ಸ್ವಯಂ ಘೋಷಿಸಿಕೊಂಡು ಪೋರ್ಚುಗೀಸರು ತಮ್ಮ ಪರವಾನಿಗೆಯಿಲ್ಲದ ಹಡಗನ್ನು ಬಿಡುತ್ತಿರಲಿಲ್ಲ. ಇದರಿಂದ ವಿನಾಕಾರಣದ ಸ್ವಾಭಿಮಾನಕ್ಕೆ ಧಕ್ಕೆಯುಂಟಾಗಿ ಗಲಭೆಗೆ ಕಾರಣವಾಗುತ್ತಿತ್ತು. ದೇಶೀಯರು ಮೊದಲುಗೊಂಡು ಫ್ರೆಂಚ್, ಅರಬ್, ಡಚ್, ಇಂಗ್ಲೀಷರಿಗೂ ಇದು ನೆಮ್ಮದಿಗೆ ಧಕ್ಕೆಯುಂಟು ಮಾಡುತ್ತಿದ್ದುದರಿಂದ ಗಲಭೆಯುಂಟಾಗುತ್ತಲೇ ಇತ್ತು. ಆದರೆ ಈ ಜಲಯಾನಾಧಿಕಾರ ಪತ್ರ ಮತ್ತು ಖಫಿಲ್ ಮೂಲಕ ಪೋರ್ಚುಗೀಸರು ಈ ಪ್ರದೇಶದ ಮೇಲೆ ಹಲವು ಬಾರಿ ಹಿಡಿತವನ್ನು ಸಾಧಿಸಿದ್ದಂತೂ ಸ್ಪಷ್ಟವಾಗಿದೆ.

ವಿಜಯನಗರ ಕಾಲದಲ್ಲಿಯೂ ಹಂಜಮಾನರು ಎನ್ನುವ ಮುಸ್ಲಿಂ ವರ್ತಕ ಸಂಘ ವ್ಯಾಪಾರದಲ್ಲಿ ಮಾತ್ರವಲ್ಲದೆ ಆಡಳಿತ ವ್ಯವಹಾರಗಳಲ್ಲಿಯೂ ಮುಂಚೂಣಿಯಲ್ಲಿತ್ತೆಂದು ತಿಳಿಯುತ್ತದೆ. ತುಳುನಾಡಿನ ಬಂದರು ಪಟ್ಟಣಗಳ ಮೇಲೆ ಪೋರ್ಚುಗೀಸರು ಕಣ್ಣಿಟ್ಟಾಗ ಸಹಜವಾಗಿ ಮುಸ್ಲಿಂ ವ್ಯಾಪಾರಿಗಳು ಮತ್ತು ಅವರೊಳಗೆ ಸಂಘರ್ಷವೇರ್ಪಟ್ಟಿತ್ತು. ಕ್ರಿ.ಶ.16ನೇ ಶತಮಾನದ ಪ್ರಾರಂಭದಿಂದ ಕೊನೆಯವರೆಗೂ ಪೋರ್ಚುಗೀಸರು ಅರಬ್ಬರನ್ನು ಮಟ್ಟ ಹಾಕುವುದರಲ್ಲೇ ತಮ್ಮ ಶ್ರಮವನ್ನು ವ್ಯಯಿಸಿದ್ದರು. ದೇಶೀಯ ವ್ಯಾಪಾರಿಗಳು, ದೇಶೀಯ ರಾಜರುಗಳೊಡನೆ ಪೋರ್ಚುಗೀಸರ ಸಂಘರ್ಷಕ್ಕೆ ಒಂದು ಪ್ರಧಾನ ಕಾರಣ ಇವರೆಲ್ಲರೂ ಅರಬ್ಬರೊಂದಿಗೆ ವ್ಯಾಪಾರ ಸಂಪರ್ಕವನ್ನು ಹೊಂದಿದ್ದುದೇ ಆಗಿತ್ತು. ಕ್ರಿ.ಶ.16 ಮತ್ತು ಕ್ರಿ.ಶ.

17ನೇ ಶತಮಾನದ ಪೂರ್ವಾರ್ಧದಲ್ಲಿ ಅರಬ್ಬರನ್ನು ತುಳುನಾಡಿನ ಬಂದರುಗಳಿಂದ ಹೊರಹಾಕುವಲ್ಲಿ ಪೋರ್ಚುಗೀಸರು ಭಾಗಷಃ ಯಶಸ್ವಿಯಾದರೂ ಕ್ರಿ.ಶ.17ನೇ ಶತಮಾನದ ಉತ್ತರಾರ್ಧದಲ್ಲಿ ಚೆನ್ನಮ್ಮಾಜಿ ಅರಬ್ಬರಿಗೆ ಕುಂದಾಪುರ, ಹೊನ್ನಾವರ, ಮತ್ತು ಮಂಗಳೂರುಗಳಿಂದ ಅಕ್ಕಿ ಸಾಗಿಸಲು ಹಾಗೂ ವ್ಯಾಪಾರ ಕೇಂದ್ರಗಳನ್ನು ಸ್ಥಾಪಿಸಲು ಅನುಮತಿ ಕೊಟ್ಟು ಅವರನ್ನು ಪ್ರೋತ್ಸಾಹಿಸಿದ್ದಳು. ಸ್ಥಳೀಯರು ಅರಬ್ಬರಿಗೆ ಅಕ್ಕಿಯನ್ನು ಕೋರ್ಜಿಗೆ 8 ಪ್ರತಾಪಗಳಂತೆ ಮಾರಿ ಪೋರ್ಚುಗೀಸರಿಗೆ 14 ಪ್ರತಾಪಗಳಂತೆ ಬೆಲೆ ನಿಗದಿಮಾಡಿದ್ದರು. ಅಂದರೆ ಅರಬ್ಬರ ಅಸ್ತಿತ್ವವನ್ನು ತುಳುನಾಡಿನ ವ್ಯಾಪಾರ ವ್ಯವಹಾರಗಳಿಂದ ಸಂಪೂರ್ಣವಾಗಿ ಹೊರಹಾಕಲು ಪೋರ್ಚುಗೀಸರಿಗೆ ಸಾಧ್ಯವಾಗಲಿಲ್ಲ. ಮಾತ್ರವಲ್ಲ ಸ್ಥಳೀಯರು ಮತ್ತು ಕೆಳದಿಯರಸರು ಲಾಭಾಂಶದ ಮತ್ತು ಸ್ಪರ್ಧೆಯ ದೃಷ್ಟಿಯಿಂದ ಅರಬ್ಬರನ್ನು ವ್ಯಾಪಾರಿಗಳಾಗಿ ಈ ಅಧ್ಯಯನ ಕಾಲಘಟ್ಟದುದ್ದಕ್ಕೂ ಉಳಿಸಿಕೊಂಡರೆಂದು ಸ್ಪಷ್ಟವಾಗುತ್ತದೆ. ಅಂತೂ ಲಾಭದ ದೃಷ್ಟಿಯಿಂದ ತುಳುನಾಡಿನ ಆಡಳಿತದಾರರ ಸ್ನೇಹ ಸಂಬಂಧಗಳು ಪದೇ ಪದೇ ಸ್ಥಾನಪಲ್ಲಟಗೊಳ್ಳುತ್ತಿದ್ದವೆಂದು ತಿಳಿಯಬಹುದಾಗಿದೆ. ಕರಾವಳಿಯ ವ್ಯಾಪಾರದಲ್ಲಿ ಅಲ್ಲಿಯವರೆಗಿದ್ದ ಮುಸ್ಲಿಂ ವ್ಯಾಪಾರದ ಏಕಸ್ವಾಮ್ಯತೆಯನ್ನು ಮುರಿಯುವುದು ಪೋರ್ಚುಗೀಸರಿಗೆ ಅನಿವಾರ್ಯವಾಗಿತ್ತು. ವಿಜಯನಗರದರಸರಿಗೂ ಅದೇ ಬೇಕಿತ್ತು. ಹಾಗಾಗಿಯೇ ಪೋರ್ಚುಗೀಸರನ್ನು ಬೆಂಬಲಿಸುವ ಜಾಣ ನಡೆ ವಿಜಯನಗರದರಸರದಾಗಿತ್ತು. ಇದರಿಂದಾಗಿ ಪೋರ್ಚುಗೀಸರು ಇಲ್ಲಿಯ ಮುಸ್ಲಿಂ ವ್ಯಾಪಾರಿಗಳ ವಿರುದ್ಧ ಯಶಸ್ವಿಯಾಗಲು ಕಾರಣವಾಯಿತು.

ಹೀಗೆ ಕೆಳದಿಯರಸರ ಕಾಲದ ತುಳುನಾಡಿನ ಆರ್ಥಿಕ ಸಂಘರ್ಷವೆಂದರೆ ಅದು ಕೋಟೆಯ ನಿಯಂತ್ರಣದ ಸಂಘರ್ಷ, ಕರಿಮೆಣಸು ಮತ್ತು ಅಕ್ಕಿಯ ದರ ಸಮರದ ಸಂಘರ್ಷ, ಖರೀದಿಮಾಡುವ ಪ್ರಮಾಣದ ವಿಚಾರದ ಸಂಘರ್ಷ, ಜಲಯಾನಾಧಿಕಾರ ನೀಡಿಕೆಯ ಸಂಘರ್ಷ ಮತ್ತು ಅರಬ್ಬರ ವ್ಯಾಪಾರ ಸಂಬಂಧದ ಸಂಘರ್ಷಗಳಾಗಿವೆ. ಉಳಿದೆಲ್ಲಾ ವಿಚಾರಗಳು ನಗಣ್ಯವಾಗಿ ಈ ಮೇಲಿನ ವಿಚಾರಗಳು ಮಾತ್ರ ಕೆಳದಿ ಆಳ್ವಿಕೆಯ ತುಳುನಾಡಿನ ಕಾಲಘಟ್ಟದ ಸುಮಾರು 200 ವರ್ಷಗಳ ತುಳುನಾಡಿನಲ್ಲಿ ನಡೆದ ಯುದ್ಧಗಳ, ಒಪ್ಪಂದಗಳ ಮತ್ತು ಸಂಘರ್ಷಗಳ ಮೂಲಭೂತ ವಿಚಾರವಾಗಿದ್ದವು ಎಂಬುದು ಈ ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಅಕ್ಕಿ ಮತ್ತು ಕರಿಮೆಣಸಿನ ವಿಚಾರವಾಗಿ ನಡೆದ ಸಂಘರ್ಷಗಳಿಂದ ಹಲವು ವಿಚಾರಗಳು ಸ್ಪಷ್ಟವಾಗುತ್ತದೆ. ಅಕ್ಕಿ ಈ ಭಾಗದಲ್ಲಿ ಯಥೇಚ್ಛವಾಗಿ ಬೆಳೆಯುತ್ತಿದ್ದು, ಲಾಭಾಂಶವನ್ನು ಪಡೆಯಲು ಸ್ಥಳೀಯ ವ್ಯಾಪಾರಿಗಳು ಕೆಲವು ಭಾರಿ ನೇರವಾಗಿ ಅವುಗಳನ್ನು ಮಾರಾಟ ಮಾಡುತ್ತಿದ್ದರು. ಉದಾಹರಣೆಗೆ ಚೆನ್ನಾಮ್ಮಾಜಿಯ ಕಾಲದಲ್ಲಿ ಅರಬ್ಬರಿಗೆ ಕೋರ್ಜಿಗೆ 8 ಪ್ರತಾಪಗಳಂತೆ ಅಕ್ಕಿ ಮಾರಿದ್ದ ತುಳುನಾಡಿನ ಸ್ಥಳೀಯರು ಪೋರ್ಚುಗೀಸರಿಗೆ 14 ಪ್ರತಾಪಗಳ ಬೆಲೆ ಹೇಳಿದ್ದರು. ಇನ್ನು ಪೋರ್ಚುಗೀಸರು ನಿಗದಿತ ದರಗಳಲ್ಲಿ ಪ್ರತೀ ವರ್ಷ ಅಕ್ಕಿಯನ್ನು ಕೆಳದಿಯರಸರಿಂದಲೂ ಕೊಳ್ಳಬೇಕಾಗಿತ್ತು. ಅದು ಆಹಾರ ಧಾನ್ಯವಾದುದರಿಂದ ಅವರಿಗೆ ಅನಿವಾರ್ಯವೂ ಆಗಿತ್ತು. ಜಲಯಾನಾಧಿಕಾರ ಪಡೆದುಕೊಳ್ಳಲು ಅಥವಾ

ಪೋರ್ಚುಗೀಸರ ಬಂದರುಗಳಲ್ಲಿ ಅಥವಾ ಸಮುದ್ರಮಾರ್ಗದಲ್ಲಿ ಹಡಗುಗಳನ್ನು ನಿರಾತಂಕವಾಗಿ ಸಾಗಲು ಬಿಡುವ ಕಾರಣಕ್ಕೆ ಅವರಿಗೆ ನೀಡುವ ಕಾಣಿಕೆಯೇ ಈ ಕಪ್ಪವಾಗಿತ್ತು. ಸ್ಥಳೀಯರು ಮತ್ತು ಕೆಳದಿಯರಸರು ಪೋರ್ಚುಗೀಸರಿಗೆ ಅಕ್ಕಿಯ ರೂಪದಲ್ಲಿ ಕಪ್ಪವನ್ನು ನೀಡಬೇಕಾಗಿತ್ತು. ಅಂದರೆ ಪೋರ್ಚುಗೀಸರು ಅಕ್ಕಿಯನ್ನು ಖರೀದಿಸುವುದಲ್ಲದೆ ಕಪ್ಪವನ್ನು ಪ್ರತ್ಯೇಕವಾಗಿ ಪಡೆದುಕೊಳ್ಳುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಕೆಳದಿಯರಸರು ಮತ್ತು ಪೋರ್ಚುಗೀಸರ ನಡುವೆ ವೆಂಕಟಪ್ಪನಿಂದ ಪ್ರಾರಂಭವಾಗಿ ಚೆನ್ನಮ್ಮಾಜಿಯವರೆಗಿನ ಒಪ್ಪಂದಗಳನ್ನು ಗಮನಿಸಿದರೆ ಕರಿಮೆಣಸಿನ ಖರೀದಿಯ ಪ್ರಮಾಣ ನಮ್ಮ ಗಮನ ಸೆಳೆಯುತ್ತದೆ. ಸರಾಸರಿ ವಾರ್ಷಿಕವಾಗಿ ಸುಮಾರು 750–1000 ಕ್ವಿಂಟಾಲ್ ಕರಿಮೆಣಸನ್ನು ಕೆಳದಿ ರಾಜ್ಯದಿಂದ ಪೋರ್ಚುಗೀಸರು ಪಡೆಯುತ್ತಿದ್ದರೆಂಬುದು ತಿಳಿಯುತ್ತದೆ. ಇದು ಅಷ್ಟು ದೊಡ್ಡ ಪ್ರಮಾಣವೇನಲ್ಲ. ಪ್ರಮಾಣದ ದೃಷ್ಟಿಯಲ್ಲಿ ಅಷ್ಟು ಹೆಚ್ಚಲ್ಲದ ಕರಿಮೆಣಸನ್ನು ಖರೀದಿಸಲು ಪೋರ್ಚುಗೀಸರು ಹಿಂಜರಿಯಲು ಕಾರಣವೇನೆಂದರೆ, ಅದಕ್ಕೆ ನಿಗದಿ ಮಾಡಿದ್ದ ಹೆಚ್ಚಿನ ದರ. ಬಹುಶಃ ಅದಕ್ಕಿಂತ ಕಡಿಮೆ ಬೆಲೆಗೆ ಅವರಿಗೆ ನೇರವಾಗಿ ಕರಿಮೆಣಸು ಸ್ಥಳೀಯರಿಂದ ಲಭ್ಯವಾಗುತ್ತಿತ್ತು. ಆ ಕಾರಣಕ್ಕಾಗಿ ಅವರು ಕೆಳದಿಯರಸರಿಂದ ಆ ಸಣ್ಣ ಪ್ರಮಾಣವನ್ನು ಖರೀದಿಸಲೂ ಹಿಂದೆ ಮುಂದೆ ನೋಡುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಒಟ್ಟಿನಲ್ಲಿ ಈ ಆರ್ಥಿಕ ರಾಜಕಾರಣದಿಂದಾಗಿ ತುಳುನಾಡಿನ ಸ್ಥಳೀಯ ರಾಜರು, ಭೂ ಹಿಡುವಳಿದಾರರು, ವ್ಯಾಪಾರಿಗಳು, ಅಷ್ಟೇಕೆ ಜನಸಾಮಾನ್ಯರೂ ಅನೇಕ ಯುದ್ಧ ಸನ್ನಿವೇಶಗಳನ್ನು ಎದುರಿಸಬೇಕಾಯಿತು. ಆರ್ಥಿಕ ರಾಜಕಾರಣ ದಿಂದಾಗಿ ಬಂಗ ರಾಜ ಸಾವಿರಾರು ಪಗೋಡ ಆದಾಯದ ಸಾಮ್ರಾಜ್ಯವನ್ನು ಕಳೆದುಕೊಂಡು ದೇಶಭ್ರಷ್ಟನಾಗಿ ಅಲೆಯಬೇಕಾಯಿತು.

**ಅಡಿಟಿಪ್ಪಣಿಗಳು**

1 Pissurlencer, P.S.S. 1953-57, Assentos Do Conselho Do Estado, IV. PP. 274-5; 278-80, ಶಾಸ್ತ್ರಿ ಬಿ.ಎಸ್. 1972, ಕೆಳದಿ ಅರಸರು ಹಾಗೂ ಪೋರ್ಚುಗೀಸರು ಕರ್ನಾಟಕ ವಿ.ವಿ. ಧಾರವಾಡ, ಪು.129
2 Assentos, IV.PP 57-8; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.138
3. ಶಾಸ್ತ್ರಿ ಬಿ. ಎಸ್, ಪೂರ್ವೋಕ್ತ, ಪು.140
4 Arquivo Portugues Oriental, A.B. De Braganca Pereira, pp 239; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು. 141
5. APO(BP), Op.Cit, pp 266-8
6. APO(BP), Op.Cit, pp. 266-8,393,394; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.143.
7. APO(BP), Op.Cit, p 435; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.144
8. APO(BP), Op.Cit, pp 453-6; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.144
9. Shridhar Naik. B, 2004, The society and politics in South canara1500-1800 A.D. Unpublished P.hd. Thesis, Manglore University, p.132
10. Assentos, I.PP 104-6; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.32–33
11. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.51
12. Assentos, I.PP 528-9, ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.67
13. Assentos, I.PP 54-6, ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.67
14. Assentos, IV.PP 274-5, 278-80, ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.129

15. APO(BP), Op.Cit,Pt.II, pp 79-80;. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.145
16. APO(BP), Op.Cit,Pt.II, pp 94-94;. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.145–146
17. APO(BP), Op.Cit,Pt.II, pp 97-106; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.147
18. APO(BP), tomo I,Vol.III, pt. IV pp 94-5
19. APO(BP), Op.Cit, P,288
20. M.D.David, 1973,History of Bombay, p.398
21. Nagendra A Rao, Craft production and Trade in South Canara- 1000-1763, Manglore University p.163
22. Swaminathan, K.D. 1954, The Nayakas of Ikkeri, Madras, p.135,136.
23. Assentos, III.PP 199-200, ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.88)
24. Shridhar Naik.b,2004, The society and politics in South canara1500-1800 A.D. Unpublished P.hd. Thesis, Manglore University, p.132
25. Vasco-da-gama"s Three Voyages, Hakluyt society, pp.310-312.
26. William Foster, English Factories in India, 1618-21 PP.56,61
27. Assentos, I.PP, 111-2,. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.36
28. Assentos, I.P 115; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.37
29. Assentos, I.PP 469-70; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.63
30. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.63
31. Assentos, I.PP 528-9; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.67
32. Assentos, I.PP 167-9; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.72
33. Assentos, III, p.522, ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.85
34. Assentos, III. PP 199-200, ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.88
35. Assentos, III.PP 530-3, ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.94.
36. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.98
37. Assentos, III.PP 319-22. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.102
38. Assentos, III.PP 329-30. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.105
39. Assentos, III. PP.555-557
40. Assentos, IV. PP 537-38
41. Assentos, IV. PP 552-3; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.119
42. Assentos, IV. PP 549-52; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.123
43. APO (BP) OP.Cit,P.126-127
44. Sanjay Subrahmanyam,1990, The Political Economy of Commerce Southern India1500-1650, Cambridge University Press, P.231
45. Assentos, III. PP 565-7; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.104.
46. Assentos, III. PP 329-30.; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.105
47. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.140
48. Assentos, III.PP 395-7; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.110
49. Biker, J.F.J Op.Cit, PP, 207–12; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.132
50. Assentos, III.P 311; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.102
51. APO(BP), tomo I,Vol.III, pt.IV, pp 94-5
52. ಹೆಚ್.ಕೆ. ಜೋಶಿ, ದಕ್ಷಿಣ ಕನ್ನಡ ಜಿಲ್ಲೆಯ ಕೋಟೆ ಕೊತ್ತಲಗಳು, 2007(ಸಂ). ಡಾ. ಆರ್. ಗೋಪಾಲ್, ದ.ಕ. ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.216
53. ಕ್ಷೇತ್ರ ಕಾರ್ಯದ ಮಾಹಿತಿ
54. ಹೆಚ್.ಕೆ.ಜೋಶಿ, ಪೂರ್ವೋಕ್ತ, ಪು.207–209
55. ಉಪ್ಪಂಗಳ ರಾಮ ಭಟ್, 1994. ಗಡಿನಾಡು ಕಾಸರಗೋಡು ಅಕಲಂಕ ಪ್ರಕಾಶನ, ಉಡುಪಿ, ಪು.45
56. ಉಪ್ಪಂಗಳ ರಾಮ ಭಟ್, 1994. ಗಡಿನಾಡು ಕಾಸರಗೋಡು ಅಕಲಂಕ ಪ್ರಕಾಶನ, ಉಡುಪಿ, ಪು.45
57. John Sturrock,1864, Madras District Manuals, South canara,2 volumes, Madras, p.54
58. ಗುಂಡಾ ಜೋಯಿಸ ಕೆಳದಿ, 1977, ಲಿಂಗಣ್ಣ ಕವಿಯ ಕೆಳದಿ ನೃಪ ವಿಜಯ, ಕಸಾಪ ಬೆಂಗಳೂರು, ಪು.103
59. ಗುಂಡಾ ಜೋಯಿಸ ಕೆಳದಿ. ಪೂರ್ವೋಕ್ತ, ಪು.136
60. ಕ್ಷೇತ್ರ ಕಾರ್ಯ
61. ಸಂದರ್ಶನ: ಮಲಾರ್ ಜಯರಾಮ ರೈ ಮತ್ತು ಪ್ರದೀಪ್ ಬೇಕಲ
62. ಗುಂಡಾ ಜೋಯಿಸ ಕೆಳದಿ. ಪೂರ್ವೋಕ್ತ, ಪು.103
63. ಸಂದರ್ಶನ : ರಘುರಾಮ ರೈ ಮತ್ತು [illegible]

64. ವೆಂಕಟೇಶ್ ಜೋಯಿಸ್, ಲೇ. 2015, ಇತಿಹಾಸ ದರ್ಶನ ಸಂ.30 ಪು.172
65. ಗುಂಡಾ ಜೋಯಿಸ ಕೆಳದಿ. ಪೂರ್ವೋಕ್ತ. ಪು.103
66. ಗಂಗಾನಾಯಕ್ ಕೆ.ಎನ್, ಕೆಳದಿ ವೆಂಕಟೇಷ್ ಜೋಯಿಸ್(ಸಂ) 2011, ಕೆಳದಿ ಅರಸರ ಶಾಸನ ಸಂಪುಟ, ಮೈಸೂರು, ವಿ.ವಿ. ಸಂ.44
67. ಗುಂಡಾ ಜೋಯಿಸ ಕೆಳದಿ, ಪೂರ್ವೋಕ್ತ, ಪು.105
68. ಗುಂಡಾ ಜೋಯಿಸ ಕೆಳದಿ, ಪೂರ್ವೋಕ್ತ, ಪು.103
69 ಗುಂಡಾ ಜೋಯಿಸ ಕೆಳದಿ, ಪೂರ್ವೋಕ್ತ, ಪು.103
70. ಗುಂಡಾ ಜೋಯಿಸ ಕೆಳದಿ, ಪೂರ್ವೋಕ್ತ, ಪು.103
71. ಶಾಸ್ತ್ರಿ ಬಿ. ಎಸ್, ಪೂರ್ವೋಕ್ತ, ಪು.29
72. Shastry, B. S, Goa- Kanara-Portuguese Relations, Op.Cit, P.75
73. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.6; D-De.VIII.PP.128-30; Assentos I, pp-561-2; Ibid, IV, 388-90
74. Shastry, B. S, Op.Cit, p.78.
75. Historia,VIII,p.291; Shastry, B.S, Op.Cit, p.79
76. Historia,VIII,pp.211-2p;. Shastry, B.S, Op.Cit, p.79
77. Historia,IX,p.532. Shastry, B. S, Op.Cit, p.81.
78. Manual de Faria e Sousa, Asia Portuguesa, III.p.267. Shastry, B. S, Op.Cit, p.81;
79. Da Asia by Diogo de Couto.(D-DC,)VII, pt.II, pp.61-3; Shastry, B. S, Op.Cit, p.82
80. CEO,II, pp.229-30; Shastry, B.S, Op.Cit, p.82
81. D-DC,VIII, pp.128-30; Shastry, B.S, Op.Cit, p.83
82. Regimento, pp.496,498; Shastry, B.S, Ibid.
83. LPFCP", in APO-BP,Op.cit; p.318; Shastry, B. S, Ibid.
84. "LPFCP", in APO-BP,Op.cit; p.320; Shastry, B. S, Ibid.
85. F.C.Danvers,The Portuguese in India, Op.Cit, I, pp.569-70; George M. Moras, 1927, Manglore A Historical sketch, New Delhi, pp.12
86. Faria e souse, op.cit, IV, pp.62-3; Shastry, B.S, Ibid., p.90;
87. Heras Henry, The expansion of wars of Venkatappa Nayaka of Ikkeri, 1928,PIHRC, XI.p.108-113
88. D-DC, VIII, P.279 ; Shastry, B.S, Ibid, p.89
89. Shastry, B.S, Ibid.p.88
90. Regimentos, pp.427-8; Shastry, B.S, Ibid.p.90
91. LCF,fls.pp 41-2; Shastry, B.S, Ibid.p.91
92. APO-BP,Op.cit;p.313 ; B.S.Shastry, Op.Cit, p.91
93. D-DC,X,pt.I,pp.385-9; Shastry, B.S, Ibid.p.94
94. Shastry, B. S, Ibid., p.95
95. APO-BP,Op.cit; pp 311-2 ; Shastry, B. S, Ibid. p.95
96. APO-BP,Op.cit; p.312, ; Shastry, B. S, Ibid.p.96
97. Shastry, B. S, Ibid.p, 85-88
98. Shastry, B. S, Ibid.p.95
99. Shastry, B. S, Ibid.p.95
100. ಶಾಸ್ತ್ರಿ ಬಿ.ಎಸ್.1972, ಕೆಳದಿ ಅರಸರು ಹಾಗೂ ಪೋರ್ಚುಗೀಸರು ಕರ್ನಾಟಕ ವಿ.ವಿ.ಧಾರವಾಡ, ಪು.8
101. DRI.II.P.294
102. DRI.IV,PP,196-8
103. ಶಾಸ್ತ್ರಿ ಬಿ.ಎಸ್, ಕೆಳದಿ ಅರಸರು ಹಾಗೂ ಪೋರ್ಚುಗೀಸರು, ಪೂರ್ವೋಕ್ತ, ಪು.18
104. DRI.IV, P.237.
105. DRI.V, PP.244-6; CEO, II PP.240- ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.22
106. Assentos, I.PP 95-7; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.29
107. Assentos, I.PP 99; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.31
108. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.41
109. Heras Henry, The Expansion Wars of Venkatappa Nayaka of Ikkeri, PIHRC, p.27
110. Assentos, I.Pp 256-8;
111. Assentos, I.PP 389-90.
112. Assentos, IV.PP 552-3

113. Assentos, IV.PP 549-52
114. ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.127
115. APO(BP), Op.Cit, Pt.II, p.320
116. LCC.II.fls 49-50
117. LCC.II.fl,107; ಶಾಸ್ತ್ರಿ ಬಿ.ಎಸ್, ಪೂರ್ವೋಕ್ತ, ಪು.174
118. Shastry.B.S, Goa- Kanara-Portuguese Relations, Op.Cit. p.21
119. Shastry, B. S, Goa- Kanara-Portuguese Relations, Op.Cit P.21
120. Shastry, B. S, Goa- Kanara-Portuguese Relations, Op.Cit P.22

ಅಧ್ಯಾಯ – 6

# ಕೆಳದಿ ಆಳ್ವಿಕೆಯ ಕಾಲದ ತುಳುನಾಡಿನ ಸಮಾಜ

ಇತಿಹಾಸ ಅಧ್ಯಯನಕ್ಕೆ ಸಂಬಂಧಿಸಿದಂತೆ ರಾಜಕೀಯ ಇತಿಹಾಸವನ್ನು ರಾಷ್ಟ್ರೀಯ ಸಂಪ್ರದಾಯವನ್ನು ರಕ್ಷಿಸುವ, ದೇಶ ಪ್ರೇಮವನ್ನು ಬೋಧಿಸುವ ಮಹತ್ವದ ಶಾಸ್ತ್ರ ಎಂಬುದಾಗಿ ಗೌರವಿಸಲಾಗಿತ್ತು. ಆದರೆ ಸಾಮಾಜಿಕ ಇತಿಹಾಸವನ್ನು ಕುತೂಹಲವನ್ನು ತಣಿಸುವ ಮತ್ತು ವಿಚಿತ್ರ ಕಲ್ಪನೆಗಳನ್ನು ಉಂಟುಮಾಡುವ ಒಂದು ವಿನೋದ ಎಂಬುದಾಗಿ ನಿರ್ಲಕ್ಷಿಸಲಾಗಿದ್ದಿತು. ಶಾಸ್ತ್ರಗಳು ಚೆನ್ನಾಗಿ ವಿಕಾಸಗೊಂಡು ರಾಜ್ಯಕ್ಕಿಂತ ಸಮಾಜವೇ ಹೆಚ್ಚು ಮುಖ್ಯವಾದುದು, ಮೂಲಭೂತವಾದುದು ಎಂಬುದನ್ನು ಪ್ರತಿಪಾದಿಸಿ ಸಮರ್ಥಿಸಿದಾಗ ರಾಜಕೀಯ ಇತಿಹಾಸದ ಜೊತೆಗೆ ಸಾಮಾಜಿಕ ಇತಿಹಾಸವೂ ಪ್ರಾಮುಖ್ಯತೆಯನ್ನು ಪಡೆಯಿತು. ಅಲ್ಲಿಂದ ಸಾಮಾಜಿಕ ಇತಿಹಾಸ ಮುಖ್ಯವಾದ ಶಾಖೆಯಾಗಿ ಬೆಳೆಯುವುದಕ್ಕೆ ಹೆಚ್ಚು ಅವಕಾಶವಾಯಿತು. ಪಿ.ಜೆ. ಬ್ಲಾಕ್ ಎಂಬ ಡಚ್ ಚರಿತ್ರೆ ಲೇಖಕನು ಇದನ್ನು 'ಜನರ ಇತಿಹಾಸ' ಎಂಬುದಾಗಿ ವ್ಯಾಖ್ಯಾನಿಸಿ ಇದು ನಮ್ಮ ಪೂರ್ವಿಕರ ಆಲೋಚನೆ, ಕಾರ್ಯಸಾಧನೆ, ದಿನನಿತ್ಯದ ಜೀವನ ನಂಬಿಕೆ, ಅವಶ್ಯಕತೆ, ಅಭ್ಯಾಸಗಳನ್ನು ಕುರಿತು ವಿಚಾರ ಮಾಡುತ್ತದೆ ಎಂಬುದಾಗಿ ಹೇಳುತ್ತಾನೆ.[1] ಇಂದು ಈ ಶಾಖೆಯಲ್ಲಿ ಸಾಮಾಜಿಕ ರಚನೆಯನ್ನು ಕುರಿತ ಐತಿಹಾಸಿಕ ಅಧ್ಯಯನಗಳು ಮುಖ್ಯವಾಗುತ್ತಿವೆ. ಜನಾಂಗದ ಇತಿಹಾಸ ರಚನೆ ಸಾಮಾಜಿಕ ಇತಿಹಾಸಕಾರನ ಕರ್ತವ್ಯವಾಗಿದೆ. ಆದ್ದರಿಂದ ಇವನಿಗೆ ಯಾವ ವಿಷಯವೂ ಅತಿ ದೊಡ್ಡದಾದುದಲ್ಲ. ಯಾವುದೂ ಅತಿ ಅಲ್ಪವಾದುದಲ್ಲ. ಅವನು ಜನರ ಆಹಾರ, ನಡೆ–ನುಡಿ, ಉಡುಗೆ ತೊಡುಗೆ, ಇತ್ಯಾದಿಗಳ ಕಡೆಗೂ ಗಮನ ನೀಡಬೇಕಾಗುತ್ತದೆ. ಗತಕಾಲದ ರಾಜಮಾರ್ಗಗಳಲ್ಲಿ ಮಾತ್ರವಲ್ಲದೆ, ಅನ್ಯ ಹಾದಿಗಳಲ್ಲೂ ನುಗ್ಗಿ ವಿಷಯಗಳನ್ನು ಸಂಗ್ರಹಿಸಿ ಒಂದು ಸಮಗ್ರ ಚಿತ್ರಣವನ್ನು ನೀಡುವುದು ಅಗತ್ಯವಾಗುತ್ತದೆ. ಅಧಿಕೃತ ವರದಿಗಳು, ಸಾಹಿತ್ಯ ಕೃತಿಗಳು, ಕಾನೂನಿನ ದಾಖಲೆಗಳು, ವೃತ್ತ ಪತ್ರಿಕೆಗಳು, ಲಘು ಪುಸ್ತಕಗಳು, ಕಲಾ ವಸ್ತುಗಳು, ಗೋಡೆ ಮುಂತಾದವುಗಳ ಮೇಲೆ ಇರುವ ಬರಹ, ಚಿತ್ರಕಲೆ, ಕುಸುರಿಕೆಲಸ, ದಿನಚರಿಗಳು, ನಿಯತಕಾಲಿಕೆಗಳು, ವೈಯಕ್ತಿಕ ದಾಖಲೆಗಳು ಇತ್ಯಾದಿಗಳು ಇದಕ್ಕೆ ವಿಭಿನ್ನವಾಗಿರುವ ಮೂಲಾಧಾರಗಳಾಗಿವೆ. ಮಾನವ ಹಾಗೂ ಸಮಾಜದ ಅಧ್ಯಯನವನ್ನು ಭದ್ರವಾದ ಅನುಭವಿಕ ಆಧಾರದ ಮೇಲೆ ಬೆಳೆಸಬೇಕೆಂಬ ಆಸೆ ಹೆಚ್ಚಿದಂತೆ ಸಾಮಾಜಿಕ ಇತಿಹಾಸವು ಒಂದು ನಿರ್ದಿಷ್ಟ ಬಗೆಯ ಶಾಸ್ತ್ರವಾಗಿ ಬೆಳೆಯಿತು. ಜಸ್ಟಿಸ್ ಮೋಸರನನ್ನು ಈ ಶೈಲಿಯ ಪ್ರಜನಕ ಅಥವಾ ಆದಿಪ್ರವರ್ತಕನೆಂಬುದಾಗಿ ಸಾಂಪ್ರದಾಯಿಕವಾಗಿ ಕರೆದರೂ ವಾಲ್ಟೇರನು ನಿಜವಾಗಿ ಇದರ ಉದಯಕ್ಕೆ ಮೂಲ ಕಾರಣನಾಗಿದ್ದಾನೆ.[2]

ಸಾಮಾನ್ಯವಾಗಿ ಇತಿಹಾಸ ಅಧ್ಯಯನ ನಡೆಸುವಾಗ ಸಮಾಜದ ಉನ್ನತ ವರ್ಗದವರೇ ಆ ಇತಿಹಾಸದ ಮುಖ್ಯ ಭಾಗವಾಗಿ ಕಂಡುಬರುತ್ತಾರೆ. ಇದಕ್ಕೆ ಮುಖ್ಯ ಕಾರಣ ಸಮಾಜದ ಕೆಳಸ್ತರದ ಜನರ ಜೀವನ, ಆಚಾರ ವಿಚಾರಗಳ ಮಾಹಿತಿ ಲಿಖಿತ ರೂಪದಲ್ಲಿ ದೊರಕದಿರುವುದು. ತುಳುನಾಡಿನಲ್ಲಿ ಲಭ್ಯ ಶಾಸನಗಳೂ ಮುಖ್ಯವಾಗಿ ದಾನ ಶಾಸನಗಳಾಗಿದ್ದು, ಅವು ದೇವಾಲಯ ಮತ್ತು ತತ್ಸಂಬಂಧೀ ಆಡಳಿತ ವರ್ಗವನ್ನೋ ಅಥವಾ ಸಮುದಾಯಗಳನ್ನೋ ಹೆಸರಿಸುತ್ತದೆ ಹೊರತು ಕೆಳವರ್ಗದವರ ಮಾಹಿತಿಗಳು ಶಾಸನಗಳಲ್ಲಿ ಬಹಳ ಅಪರೂಪವೆಂಬಂತೆ ಪ್ರಕಟಗೊಂಡಿದೆ. ಶಾಸನಗಳು, ಸಾಹಿತ್ಯಗಳು, ವಿದೇಶಿಯರ ಬರಹಗಳು ಮತ್ತು ಪಾಡ್ದನಗಳು ತುಳುನಾಡಿನಲ್ಲಿ ಈ ಅಧ್ಯಯನ ಕಾಲಘಟ್ಟದಲ್ಲಿದ್ದಂತಹ ಜಾತಿ ವ್ಯವಸ್ಥೆ ಮತ್ತು ಒಟ್ಟು ಸಮಾಜದ ಚಿತ್ರಣ ದೊರಕುವುದಕ್ಕೆ ಸಹಾಯಮಾಡಿದೆ. ದಾಖಲೆಗಳು ಸಾಮಾನ್ಯವಾಗಿ ಸಮುದಾಯದ ಜೀವನದ ಮೇಲೆ ಬೆಳಕು ಚೆಲ್ಲುವುದಿಲ್ಲ. ಅಧ್ಯಯನ ಕಾಲಘಟ್ಟದ ಸಮಾಜದ ಚಿತ್ರಣವನ್ನು ಶಾಸನಗಳಿಗಿಂತಲೂ ವಿದೇಶೀ ಬರವಣಿಗೆಗಳು ಹೆಚ್ಚಾಗಿ ವಿವರಿಸುತ್ತವೆ. ತುಳುನಾಡಿನ ಭೂತಾರಾಧನೆಯ ಹೆಚ್ಚಿನ ಪಾಡ್ದನಗಳ ರಚನೆಯ ಕಾಲವನ್ನು ಬಹುಮಟ್ಟಿಗೆ ಕ್ರಿ.ಶ.16 ಮತ್ತು 17ನೇ ಶತಮಾನ ಎಂಬುದಾಗಿ ವಿದ್ವಾಂಸರು ಗುರುತಿಸಿದ್ದಾರೆ. ಅತ್ತಾವರ ದೈಯೊಂಗೊಳು ಪಾಡ್ದನದ ಕಾಲ ಸ್ಪಷ್ಟವಾಗಿ ಕೆಳದಿಯರಸರ ಆಳ್ವಿಕೆಯ ಕಾಲವಾಗಿದೆ.[3] ಅದೇ ರೀತಿ ಐತಿಹಾಸಿಕ ಘಟನೆಗಳ ಆಧಾರದಲ್ಲಿ, ಕಲ್ಕುಡ ಕಲ್ಲುರ್ಟಿ, ಕೋಟಿ ಚೆನ್ನಯ್ಯ, ತೋಡಕುಕ್ಕಿನಾರ್, ಜುಮಾದಿ, ಸಾರಾಲ ಜುಮಾದಿ ಮುಂತಾದ ಪಾಡ್ದನಗಳ ರಚನೆಯ ಕಾಲವೂ ಕೆಳದಿ ಆಡಳಿತದ ಕಾಲವೆಂದು ತಿಳಿಯಬಹುದು.[4] ತುಳುನಾಡಿನ ಮಟ್ಟಿಗೆ ಪಾಡ್ದನಗಳು, ಚರಿತ್ರೆ ನಿರ್ಮಾಣದ ಕಾರ್ಯದಲ್ಲಿ ಪ್ರಮುಖ ಮೌಖಿಕ ಆಕರಗಳಾಗಿದ್ದು ಅವುಗಳನ್ನೂ ಬಳಸಿಕೊಂಡು ಆ ಕಾಲದ ಸಾಮಾಜಿಕ ಇತಿಹಾಸವನ್ನು ಕಟ್ಟುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

### 6.1 ಸಮುದಾಯಗಳ ಸಾಮಾಜಿಕ ಸ್ಥಿತಿಗತಿ

ಕೆಳದಿಯರಸರ ಆಳ್ವಿಕೆಯ ತುಳುನಾಡಿನ ಸಮಾಜ ಹಲವು ಧರ್ಮ ಜಾತಿ ಮತ್ತು ವರ್ಗಗಳನ್ನು ಒಳಗೊಂಡಿತ್ತು. ನಾಡವರು ಅಥವಾ ಬಂಟರು ಮತ್ತು ಬಿಲ್ಲವರು ಬಹು ಸಂಖ್ಯೆಯಲ್ಲಿದ್ದರೆ, ಬ್ರಾಹ್ಮಣರು ಮತ್ತು ಜೈನರು ಇತರ ಪ್ರಮುಖ ಸಮುದಾಯದವರಾಗಿದ್ದರು. ವಲಸೆ ಬಂದ ಸಾರಸ್ವತರು, ವ್ಯಾಪಾರಿಗಳಾಗಿ ಬಂದು ನೆಲೆಯೂರಿದ ಮುಸ್ಲಿಮರು, ಕ್ರಿಶ್ಚಿಯನ್ನರು ಅಲ್ಲದೇ ಮೊಗವೀರರು, ಗಾಣಿಗರು, ಕುಂಬಾರರು ಮೊದಲಾದವರು ಈ ಕಾಲದಲ್ಲಿ ಕಾಣಿಸಿಕೊಳ್ಳುತ್ತಾರೆ. ಅಸ್ಪೃಶ್ಯರೆನಿಸಿಕೊಂಡ ವರ್ಗದಲ್ಲಿ ಪಂಬದರು, ಬಾಕುಡರು, ನಲ್ಕೆಯವರು, ಪರವರು ಇತ್ಯಾದಿ ವರ್ಗದವರಿದ್ದರು. ಆದರೆ ಬ್ರಾಹ್ಮಣರು, ಜೈನರು, ನಾಡವರು, ಮೊಗವೀರರು ಮತ್ತು ಬಿಲ್ಲವರ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕು ಇತರರಿಗಿಂತ ಹೆಚ್ಚಾಗಿ ದಾಖಲಿಸಲ್ಪಟ್ಟಿದೆ. ವಿಜಯನಗರ ಮತ್ತು ಅದಕ್ಕಿಂತಲೂ ಹಿಂದಿನ ಸಮಾಜದಲ್ಲಿದ್ದ ನಾಲ್ಕು ವರ್ಗಗಳು,

ಬ್ರಾಹ್ಮಣರ ಮೇಲ್ಮೆ, ಜೈನ ಮತ್ತು ಉನ್ನತವರ್ಗದ ಶೂದ್ರರ ಭೂ ಒಡೆತನ ಇವುಗಳೆಲ್ಲವೂ ಕೆಳದಿ ಕಾಲದಲ್ಲಿಯೂ ಮುಂದುವರೆಯುತ್ತವೆ. ಆದರೆ ವೀರಶೈವರು, ಸಾರಸ್ವತರು, ಗೋವಾ ಕ್ರಿಶ್ಚಿಯನ್ನರು, ಗೌಡರು ಕೋಟೆ ಕ್ಷತ್ರಿಯರಂತಹ ಹೊಸ ಸಮುದಾಯಗಳ ಆಗಮನ ಈ ಕಾಲಘಟ್ಟದ ವೈಶಿಷ್ಟತೆಯಾಗಿದೆ. ಹಾಗೆಯೇ ಹಿಂದೂ ಧರ್ಮದ ವಿವಿಧ ಆರಾಧನಾ ಕೇಂದ್ರಗಳಿಗೆ ವೀರಶೈವರ ಮಠಗಳು ಹೊಸ ಸೇರ್ಪಡೆಯಾಗಿವೆ.

**ಬ್ರಾಹ್ಮಣರು:** ಕರ್ನಾಟಕದ ಉಳಿದ ಪ್ರದೇಶಗಳಲ್ಲಿದ್ದಂತೆ ತುಳುನಾಡಿನಲ್ಲಿಯೂ ಬ್ರಾಹ್ಮಣರು ದೇವಾಲಯದ ಪರಿಸರದಲ್ಲಿ ವಾಸವಿದ್ದು, ಧಾರ್ಮಿಕ ಮತ್ತು ಸಾಂಸ್ಕೃತಿಕ ವಿಭಾಗಗಳಲ್ಲಿ ಮುಂಚೂಣಿಯಲ್ಲಿದ್ದರು. ಅವರು ಆಧ್ಯಾತ್ಮಿಕ ಮಾರ್ಗದರ್ಶಿಗಳಾಗಿ ಮತ್ತು ಧಾರ್ಮಿಕ ಮುಖಂಡರಾಗಿ ಕಾಣಿಸಿಕೊಳ್ಳುತ್ತಾರೆ. ದೇವಳದ ಮೂಲದಿಂದ ಪಡೆದ ಪಟ್ಟ ಮಾನ್ಯ, ಸರ್ವಮಾನ್ಯ, ಉಂಬಳಿ, ಉತ್ತಾರ, ಬ್ರಹ್ಮಸ್ವಂ, ಪುರೋಹಿತ ಸ್ಥಳ ಇತ್ಯಾದಿ ವಿಧಗಳಲ್ಲಿ ಅವರು ಪಡೆದ ಫಲವತ್ತಾದ ಭೂಮಿಯನ್ನು ಹೊಂದಿದ್ದರು. ಬ್ರಾಹ್ಮಣರಿಗೆ ಪ್ರಭುತ್ವ ಬೆನ್ನೆಲುಬಾಗಿ ಇದ್ದ ಕಾರಣ ಜನರೂ ಅವರ ಆಸ್ತಿ ಪಾಸ್ತಿಗಳನ್ನು ಗೌರವಿಸುತ್ತಿದ್ದರು. ತೆರಿಗೆ ವಿನಾಯತಿ ಅಪಾರ ಭೂ ಆಸ್ತಿಯ ಒಡೆತನ, ಧಾರ್ಮಿಕ ಸಂಸ್ಥೆಗಳ ಮತ್ತು ಅವುಗಳ ಆಸ್ತಿ ಪಾಸ್ತಿಗಳ ನಿರ್ವಹಣೆಯ ಅಧಿಕಾರವನ್ನೂ ಇವರು ಹೊಂದಿದ್ದರು.

ಹಲವಾರು ಅಗ್ರಹಾರಗಳು ವಿದ್ಯಾ ಕೇಂದ್ರಗಳಾಗಿ ಬೆಳೆದು ಬಂದಿದ್ದವು. ಕೆಳದಿ ಕಾಲದಲ್ಲಿ ಹೊಸ ಅಗ್ರಹಾರಗಳ ನಿರ್ಮಾಣವನ್ನೂ ಮಾಡಲಾಗಿತ್ತು. ಕ್ರಿ.ಶ.1736ರಲ್ಲಿ ಸೋಮಶೇಖರ ನಾಯಕ ಬಂಟ್ವಾಳ ತಾಲೂಕಿನ ಶಂಭೂರು, ನಾಟಿ, ಸರಪಾಡಿ, ನಾವೂರುಗಳಲ್ಲಿ ಅಗ್ರಹಾರಗಳನ್ನು ಸ್ಥಾಪಿಸಿದ್ದ.[5] ಸರಪಾಡಿ ದೇವಾಲಯ ಇಂದಿಗೂ ಹಲಸನಾಡು ಮನೆತನಕ್ಕೆ ಸಂಬಂಧಿಸಿರುವುದು ಹಾಗೂ ಹಲಸನಾಡಿಗೂ ಕೆಳದಿಯರಸರಿಗೂ ನೇರ ಸಂಬಂಧವಿರುವುದು ಗಮನಾರ್ಹವಾಗಿದೆ. ಶಂಕರನಾರಾಯಣ ಸಮೀಪದ ಸಾಂಬ ಸದಾಶಿವ ದೇವಳದ ಪಕ್ಕದಲ್ಲಿ ಇಂದಿಗೂ ಅಗ್ರಹಾರ ಬೀದಿಯನ್ನು ಗಮನಿಸಬಹುದಾಗಿದೆ. ಬಂಟ್ವಾಳ ಸಮೀಪದ ನಗರ ಅಗ್ರಹಾರದಲ್ಲಿ ಕೆಳದಿ ಸೋಮಶೇಖರ ನಾಯಕ ತನ್ನ ಮಂತ್ರಿ ಬ್ರಾಹ್ಮಣನಾದ ಕೊಳಾಲ ವೆಂಕಟೇಶಯ್ಯ ಎನ್ನುವವನ ವಿನಂತಿಯ ಮೇರೆಗೆ ಬ್ರಾಹ್ಮಣರಿಗೆ ಅಗ್ರಹಾರ ನಿರ್ಮಾಣ ಮಾಡಿ ನೆಲೆಗೊಳಿಸಿದ್ದ.[6] ರಾಜರುಗಳು ತಾವು ವರ್ಣಾಶ್ರಮ ಧರ್ಮದ ರಕ್ಷಕರೆಂದು ಹೇಳಿಕೊಂಡಿದ್ದಾರೆ. ಬ್ರಾಹ್ಮಣರಿಗೆ ಹಾನಿಯನ್ನುಂಟುಮಾಡುವುದು ಅಥವಾ ಅವರ ಆಸ್ತಿಯ ನಾಶ ಮಹಾ ಪಾತಕವೆಂದು ಪರಿಗಣಿಸಲಾಗಿತ್ತು.[7]

ಕೆಳದಿ ಕಾಲದಲ್ಲಿ ಬ್ರಾಹ್ಮಣರು ದೇವಾಲಯದ ಅರ್ಚಕರಾಗಿ, ಕೆಲವರು ಕೃಷಿಯೋಗ್ಯ ಭೂಮಿಯ ಒಡೆಯರಾಗಿ, ಇನ್ನು ಕೆಲವರು ವ್ಯಾಪಾರಗಾರರಾಗಿಯೂ ಕಾಣಿಸಿಕೊಳ್ಳುತ್ತಾರೆ. ಕೆಲವರು ಸಂತರಾಗಿ ಸನ್ಯಾಸಿಗಳಾಗಿಯೂ ಕಾಣಿಸಿಕೊಳ್ಳುತ್ತಾರೆ. ಹಲವು ಬ್ರಾಹ್ಮಣರು ರಾಜಕೀಯದಲ್ಲಿ ಗುರುತಿಸಿಕೊಂಡರೆ,

ಕೆಲವರು ಆಡಳಿತಗಾರರಾಗಿ ಮತ್ತು ಸೇನಾಧಿಪತಿಗಳಾಗಿದ್ದರು. ಉದಾಹರಣೆಗೆ ರಾಮಕೃಷ್ಣ ಎನ್ನುವ ವೀರಭದ್ರನಾಯಕನ ಸೇನಾಪತಿ ಬ್ರಾಹ್ಮಣನಾಗಿದ್ದ. ಅದೇ ರೀತಿ ರಾಯಸದ ತಿಮ್ಮರಸಯ್ಯ, ಕರಣಿಕ ವೆಂಕಟಪ್ಪಯ್ಯ, ಪುರಾಣಿಕ ಅಪ್ಪು ಭಟ್ಟ ಮುಂತಾದವರು ಆಡಳಿತದ ವಿವಿಧ ಸ್ತರಗಳಲ್ಲಿ ಗುರುತಿಸಿಕೊಂಡಿದ್ದರು. ಕೆಳದಿ ಆಸ್ಥಾನದ ಹೆಚ್ಚಿನ ರಾಯಭಾರಿಗಳು ಬ್ರಾಹ್ಮಣರಾಗಿದ್ದರು. ವೆಂಗಂಭಟ್ಟ ಎನ್ನುವವನು ಕೆಳದಿ ಅರಸರ ಕೆಳಗೆ ಕಾರ್ಕಳದ ಅಧಿಕಾರಿಯಾಗಿದ್ದ.[8] ಬ್ರಾಹ್ಮಣರು ರಾಜ್ಯದಲ್ಲಿ ಪ್ರಮುಖ ಹುದ್ದೆಗಳಲ್ಲಿ ಮುಖ್ಯವಾಗಿ ಸ್ವಾಗತಕಾರರಾಗಿ, ಪಾರುಪತ್ಯಗಾರರಾಗಿ, ರಾಯಭಾರಿಗಳಾಗಿ ಕೆಲಸ ನಿರ್ವಹಿಸುತ್ತಿದ್ದ ವಿಷಯವನ್ನು ವಾನ್ ಲಿಂಕೊಟೆನ್ ತಿಳಿಸುತ್ತಾನೆ.[9] ಅವರು ಮೇಧಾವಿಗಳಾಗಿದ್ದು ರಾಜರುಗಳು ಅವರ ಅಭಿಪ್ರಾಯಕ್ಕೆ ಮನ್ನಣೆ ನೀಡಿಯೇ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಿದ್ದರು. ಪಿಯತ್ರೋ ಡೆಲ್ಲಾ ವೆಲ್ಲೆ ಹೇಳುವಂತೆ ಬ್ರಾಹ್ಮಣರು ಕಲಿಕೆ ಮತ್ತು ದೇವಳದ ಸೇವೆಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದರು ಮತ್ತು ಎಲ್ಲಾ ಜನಾಂಗಗಳಲ್ಲಿ ಮೇಲ್ವರ್ಗದವರಾಗಿದ್ದರು. ಪಿಯತ್ರೋ ಡೆಲ್ಲಾ ವಲ್ಲೆಯ ಜೊತೆಯಲ್ಲಿ ದುಭಾಷಿಯಾಗಿ ನರಸು ಎಂಬ ಒಬ್ಬ ಬ್ರಾಹ್ಮಣನಿದ್ದ ಎನ್ನುವುದೂ ಅವರ ಜ್ಞಾನದ ಮೇಲ್ಮೆಗೆ ಉದಾಹರಣೆಯಾಗಿದೆ.[10] ಗ್ರಾಮದ ಅಧಿಕಾರಿಗಳಾದ ಗ್ರಾಮಣಿಗಳಲ್ಲಿ ಕೆಲವರು ಬ್ರಾಹ್ಮಣರಾಗಿದ್ದು ಗ್ರಾಮದಲ್ಲಿ ಪ್ರಭಾವಶಾಲಿಯಾಗಿದ್ದರು. ಉದಾಹರಣೆಗೆ ಕ್ರಿ.ಶ 1554ರಲ್ಲಿ ಕುಂದಾಪುರ ತಾಲೂಕಿನ ಕಂದಾವರ ಗ್ರಾಮದ ಅಣ್ಣ ಉಡುಪ ಗ್ರಾಮಣಿ, ತಿಮ್ಮಸೆಟ್ಟಿ ಎಂಬವನ ಭೂಮಿಗೆ ಮಾರಾಟ ಪತ್ರವನ್ನು ಮಾಡಿದ್ದಾಗಿ ಹೇಳಲಾಗಿದೆ.[11]

ಬ್ರಾಹ್ಮಣರು ಬೇರೆ ಬೇರೆ ಹಂತದ ಅಧಿಕಾರಿಗಳಾಗಿ ದೇವಳದಲ್ಲಿ ನಿಯುಕ್ತಿಗೊಂಡಿದ್ದರು. ಸ್ಥಾನಿಕ, ದೇವಾಲಯದ ಆಡಳಿತದ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದ.[12] ಕ್ರಿ.ಶ 1559ರ ದಾಖಲೆ ಉಲ್ಲೇಖಿಸುವಂತೆ ಎರ್ಮಾಳಿನ ಜನಾರ್ಧನ ದೇವಾಲಯಕ್ಕೆ ಮಾಡಲಾದ ದಾನ ದತ್ತಿಗಳನ್ನು ದೇಶಪತಿ ಮತ್ತು ಸ್ಥಾನಪತಿಗಳು ನೋಡಿಕೊಳ್ಳಬೇಕಾಗಿತ್ತು.[13] ದೇವಳದ ಇನ್ನೊಂದು ಪ್ರಧಾನ ಹುದ್ದೆ ತಂತ್ರಿಗಳದಾಗಿತ್ತು. ಆಗಮ ತತ್ವಗಳಿಗೆ ಅನುಸಾರವಾಗಿ ದೇವಳದ ವಿಧಿ ವಿಧಾನಗಳನ್ನು ನಡೆಸುವ ಪೌರ್ಣಮಿ, ಅಮವಾಸ್ಯೆ, ಅಥವಾ ವಾರ್ಷಿಕ ಜಾತ್ರೋತ್ಸವದ ಸಂದರ್ಭದಲ್ಲಿ ಧಾರ್ಮಿಕ ಕಾರ್ಯಕ್ರಮಗಳ ನೇತೃತ್ವವನ್ನು ವಹಿಸುವುದು ಇವರ ಪ್ರಮುಖ ಕೆಲಸ. 'ಜಾರಂತಾಯ' ಪಾಡ್ದನದಲ್ಲಿ 'ಬಾಲೆ ವೈಲ್ತ ಬಟ್ಟೆರ್, ದೇರೆ ಬೈಲ್ ತಂತ್ರಿ' ಎನ್ನುವ ಉಲ್ಲೇಖ ಇದೆ.[14] ಕೊಲ್ಲೂರು ಬಸ್ರೂರು ಮುಂತಾದ ದೇವಳಗಳ ಪೂಜಕರನ್ನು ಅಡಿಗಳು ಎಂಬುದಾಗಿ ಕರೆಯಲಾಗಿದೆ.[15] ಕ್ರಿ.ಶ. 1562ರ ಕೋಟೇಶ್ವರದ ಶಾಸನ ದೇವಳದ ಅರ್ಚಕರನ್ನು ಅಸ್ರಣ್ಣ ಎಂದು ಉಲ್ಲೇಖಿಸಿದೆ.[16] ಈ ಎಲ್ಲಾ ಹುದ್ದೆಗಳು ಇಂದಿಗೂ ಯಾವುದೇ ಬದಲಾವಣೆ ಇಲ್ಲದೆ ಹೆಚ್ಚು ಕಡಿಮೆ ಯಥಾವತ್ತಾಗಿ ಮುಂದುವರೆದಿದೆ.

ಉಡುಪಿ ಪರಿಸರದ ಬ್ರಾಹ್ಮಣರ ಕುರಿತಾಗಿ ಬುಕಾನನ್‌ನ ಉಲ್ಲೇಖಿಸುತ್ತಾನೆ. ತುಳು ಬ್ರಾಹ್ಮಣ ಸಮಾಜದಲ್ಲಿ ಪುರುಷರಿಗೆ ಒಂದಕ್ಕಿಂತ ಹೆಚ್ಚು ಮದುವೆಯಾಗಲು ಅವಕಾಶವಿತ್ತು. ಹೆಣ್ಣು ದೊಡ್ಡವಳಾಗುವುದಕ್ಕೆ

ಮೊದಲೇ ವಿವಾಹ ಮಾಡುತ್ತಾರೆ. ವಿಧವಾ ವಿವಾಹಕ್ಕೆ ಅವಕಾಶ ಇಲ್ಲ. ಹಾಗೆಯೇ ಬ್ರಾಹ್ಮಣ ಜಾತಿಯಿಂದ ಹೊರಗಿನ ಹೆಣ್ಣಿನ ಸಹವಾಸ ಮಾಡಿದರೆ ಆ ವ್ಯಕ್ತಿ ಬಹಿಷ್ಕೃತನಾಗುತ್ತಾನೆ.[17] ಹಾಗೆಯೇ ಅವರ ಧಾರ್ಮಿಕ ನಂಬಿಕೆಗಳ ಕುರಿತಾಗಿ ಹೇಳುತ್ತಾ ಮಾಧ್ವ ಮತ್ತು ಶ್ರೀ ವೈಷ್ಣವರು ಇಬ್ಬರು ಶ್ರೀ ವಿಷ್ಣುವಿನ ಆರಾಧಕರಾಗಿದ್ದಾರೆ. ಸ್ಮಾರ್ತ ಬ್ರಾಹ್ಮಣರು ಶಿವನ ಮತ್ತು ವಿಷ್ಣುವಿನ ಪೂಜೆ ಮಾಡುತ್ತಾರೆ. ತುಳುವ ಮಲಯಾಳ ಬ್ರಾಹ್ಮಣರು ಒಂದೇ ದೇವಾಲಯದಲ್ಲಿ ಶಿವ, ವಿಷ್ಣು, ದೇವರುಗಳನ್ನು ಸ್ಥಾಪಿಸುವಷ್ಟು ಉದಾರವಾಗಿದ್ದಾರೆ. ಇತರೆ ಬ್ರಾಹ್ಮಣರು ಅಷ್ಟು ಉದಾರವಾಗಿಲ್ಲ. ಕೇವಲ ವಿಷ್ಣುವನ್ನು ಮಾತ್ರ ದೇವರೆಂದು ನಂಬುತ್ತಾರೆ ಎಂಬುದಾಗಿ ಹೇಳುತ್ತಾನೆ.[18]

ಭೂತಾರಾಧನೆಗೆ ಸಂಬಂಧಿಸಿದ ಭೂತದ ಮಹಿಮೆಯನ್ನು ಹೇಳುವ ಎಲ್ಲಾ ಪಾಡ್ದನಗಳಲ್ಲಿಯೂ ಬ್ರಾಹ್ಮಣರು 'ಬಲ್ಮೆ'ಯ (ನಿಮಿತ್ತ ನೋಡುವ) ಭಟ್ಟರಾಗಿ, ಪಂಚಾಂಗ ನೋಡುವ ಭಟ್ಟರಾಗಿ, ಪ್ರಶ್ನೆಯ ರೂಪದ ಭವಿಷ್ಯ ಹೇಳುವ ಭಟ್ಟರಾಗಿ, ಭೂತದ ಸ್ಥಾನದ ನಿರ್ಮಾಣದಲ್ಲಿ ಎಲ್ಲಾ ಧಾರ್ಮಿಕ ವಿಧಿಗಳನ್ನು ನಡೆಸಿ ಕೊಡುವ ಆಚರಣೆಯ ಭಟ್ಟರಾಗಿ ಕಂಡು ಬರುತ್ತಾರೆ. ಎಲ್ಲಿಯಾದರೂ ಒಂದು ಕಡೆ ಭೂತದ ಉಪದ್ರ ಕಂಡುಬಂದಾಗ ಆ ಮನೆಯ ಯಜಮಾನರು ಬಲ್ಮೆಯ ಭಟ್ಟರಲ್ಲಿಗೆ ಬರುತ್ತಾರೆ. ಅವರು ಬಲ್ಮೆಯ ಮೂಲಕ ಅಥವಾ ಪಂಚಾಂಗ ನೋಡಿ, 'ಅದು ಇಂತಹ ಭೂತದ ಉಪದ್ರ, ಅದಕ್ಕೆ ಸ್ಥಾನ ಕಟ್ಟಿಸಿ, ಬಲಿ ನೇಮ ಕೊಡಬೇಕು' ಎಂದು ಹೇಳುತ್ತಾರೆ.[19] ಇವರು ದೇವಳಗಳ ನಿರ್ಮಾಪಕರೂ ಆಗಿದ್ದರು ಎನ್ನುವುದು 'ಸಾರಾಲ ಜುಮಾದಿ'ಯ ಪಾಡ್ದನ, 'ಮುಡದೇರ್ ಕಾಳಭೈರವ' ಪಾಡ್ದನಗಳಲ್ಲಿ 'ಬ್ರಾಣೆ ಕಟ್ಟಾಯಿ ದೇವಸ್ಥಾನೋ'(ಬ್ರಾಹ್ಮಣ ಕಟ್ಟಿಸಿದ ದೇವಸ್ಥಾನ) ಎನ್ನುವ ಮಾತಿನ ಮೂಲಕ ವ್ಯಕ್ತವಾಗಿದೆ. ಬ್ರಾಹ್ಮಣರು ಕೆಲವು ಸಲ ಹೊಲದ ಬೇಸಾಯವನ್ನು ಮಾಡುತ್ತಿದ್ದರು ಎನ್ನುವುದಕ್ಕೆ ಕೋಟಿ ಚೆನ್ನಯ ಪಾಡ್ದನದಲ್ಲಿ ಒಂದು ಆಧಾರ ದೊರೆಯುತ್ತದೆ. ಎಣ್ಮೂರಿನ ಬಲ್ಲಾಳನು ಕೋಟಿ ಚೆನ್ನಯರಲ್ಲಿ ನಿಮಗೆ ಎಂತಹ ಗದ್ದೆ ಬೇಕು ಎಂದು ಕೇಳುವಾಗ, 'ಬ್ರಾಹ್ಮಣರು ಬೇಸಾಯ ಮಾಡುವ ಬೆರಂಪೊಳ್ಳಿ ಗದ್ದೆ ಬೇಕೆ' ಎಂದು ಕೇಳುತ್ತಾನೆ.[20] ಹೀಗೆ ಈ ಕಾಲದ ತುಳುನಾಡಿನಲ್ಲಿ ಬ್ರಾಹ್ಮಣರು ಧಾರ್ಮಿಕ ಮುಂದಾಳುಗಳಾಗಿ ಸಾಮಾಜಿಕವಾಗಿ ಉನ್ನತ ಸ್ಥಾನ ಮಾನವನ್ನು ಹೊಂದಿದ್ದರೆನ್ನುವುದು ಸ್ಪಷ್ಟವಾಗುತ್ತದೆ. ಧಾರ್ಮಿಕ ಹಿನ್ನೆಲೆಯಲ್ಲಿ ಬ್ರಾಹ್ಮಣರು ವಿಶಾಲವಾದ ಭೂಮಿಯನ್ನು ಹೊಂದಿದರಾದರೂ, ಈ ದಾನದ ಹಿಂದೆ ಇನ್ನೊಂದು ಪ್ರಮುಖ ಉದ್ದೇಶವಿತ್ತು. ಅದೇನಂದರೆ, ಮೂಲತಃ ತುಳುನಾಡಿನಿಂದ ಹೊರಗಿನವರಾದ ವ್ಯಾಪಾರಿಗಳಿಗೆ ಅಥವಾ ವ್ಯಾಪಾರಿ ಸಂಘಗಳಿಗೆ ತಮ್ಮ ಸ್ಥಾನವನ್ನು ಭದ್ರ ಪಡಿಸಲು ಹಾಗೂ ಇನ್ನಿತರರಿಗೆ ತಮ್ಮ ಸ್ಥಾನವನ್ನು ಸಮಾಜದಲ್ಲಿ ಭದ್ರ ಪಡಿಸಲು ಬ್ರಾಹ್ಮಣರ ಸಹಾಯದ ಅಗತ್ಯವಿತ್ತು. ಈ ಹಿನ್ನೆಲೆಯಲ್ಲಿಯೂ ಈ ದಾನವನ್ನು ನೀಡಲಾಗಿತ್ತು.

**ಜೈನರು:** ವಿಜಯನಗರ ಅರಸರ ಕಾಲದ ಸಂದರ್ಭದಲ್ಲಿ ಅನೇಕ ಸಣ್ಣ ಪುಟ್ಟ ಜೈನ ಅರಸುಮನೆತನಗಳು

ತುಳುನಾಡಿನಲ್ಲಿ ತಲೆಯೆತ್ತಿದ್ದವು. ಈ ಮನೆತನಗಳು ಕೆಳದಿ ಕಾಲದಲ್ಲೂ ಪ್ರಭಾವಶಾಲಿಗಳಾಗಿದ್ದವು. ಇವರಲ್ಲಿ ಗೇರುಸೊಪ್ಪೆ – ಹಾಡುವಳ್ಳಿಯ ಸಾಳುವರು, ಕಳಸ ಕಾರ್ಕಳದ ಭೈರರಸರು ಪ್ರಬಲರಾಗಿದ್ದರು. ಉಳಿದ ಬಂಗ, ಚೌಟ, ಅಜಿಲ, ಸಾವಂತ, ತೋಳಹರ, ಇವರೊಂದಿಗೆ ಅನೇಕ ಹೆಗ್ಗಡೆ, ಬಲ್ಲಾಳರುಗಳು ಕೂಡ ತಮ್ಮ ತಮ್ಮ ಪ್ರದೇಶಗಳಲ್ಲಿ ಸಾಕಷ್ಟು ಪ್ರಾಧಾನ್ಯತೆಯನ್ನು ಗಳಿಸಿಕೊಂಡಿದ್ದರು. ಇವರೆಲ್ಲರೂ ಜೈನರಾಗಿದ್ದು, ತಮ್ಮ ಮತಾಚರಣೆಯ ಜೊತೆಗೆ ಸ್ಥಳೀಯ ಧಾರ್ಮಿಕ ಆಚರಣೆಗಳನ್ನು ಪೋಷಿಸುತ್ತ ಸಾಮಾಜಿಕ ಸಾಮರಸ್ಯವನ್ನುಂಟು ಮಾಡುವಲ್ಲಿ ಮುಖ್ಯ ಪಾತ್ರವನ್ನು ವಹಿಸಿದ್ದರು. ಈ ಅವಧಿಯಲ್ಲಿ ಕಾರ್ಕಳ, ಮೂಡುಬಿದಿರೆ, ವೇಣೂರು, ಬೆಳ್ತಂಗಡಿ, ಕಾಪು, ಬೈಂದೂರು, ಬಾರ್ಕೂರು, ಬಸ್ರೂರು, ಹಟ್ಟಿಯಂಗಡಿ, ವರಂಗ, ಭಟ್ಕಳ, ಕಾಯ್ಕಿಣಿ, ಹಾಡುವಳ್ಳಿ, ಗೇರುಸೊಪ್ಪೆ ಪ್ರದೇಶಗಳು ಪ್ರಮುಖ ಜೈನ ಕೇಂದ್ರಗಳಾಗಿ ಬೆಳವಣಿಗೆ ಹೊಂದಿದವು. ಜೊತೆಗೆ ಬಾರಕೂರು, ಬಸ್ರೂರು ಪಟ್ಟಣಗಳನ್ನೂ ವಿಶೇಷವಾಗಿ ಇಲ್ಲಿ ಉದಾಹರಿಸಬಹುದು. ಇಲ್ಲಿ ಮುಂಚೂಣಿಯಲ್ಲಿದ್ದ ಸೆಟ್ಟಿಕಾರರು, ಹಲರು, ಎಳಮೆಗಳು ಈ ಹೆಸರಿನ ವ್ಯಾಪಾರೀ ಸಂಘಗಳು ಜೈನರ ವ್ಯಾಪಾರೀ ಸಂಘಗಳಾಗಿದ್ದವೆಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ತುಳುನಾಡಿನಲ್ಲಿ ಜೈನರು ವಿಶಾಲವಾದ ಭೂ ಆಸ್ತಿಯನ್ನು ಹೊಂದಿದ್ದು ಕೃಷಿ ಚಟುವಟಿಕೆಗಳ ಮೇಲೂ ಬಹಳಷ್ಟು ಪ್ರಭಾವ ಬೀರುತ್ತಿದ್ದರು.[21] ಜೈನ ಮುಖ್ಯಸ್ಥರು ಪ್ರತೀ ಮಾಗಣೆಗೆ ಬೀಡಿಗೆ ಒಬ್ಬೊಬ್ಬ ಬಲ್ಲಾಳರನ್ನು ನೇಮಕ ಮಾಡುತ್ತಿದ್ದರು. ಈ ಬಲ್ಲಾಳರು ಭೂಮಿಯನ್ನು ಹೊಂದಿದ್ದು ತಮ್ಮ ತಮ್ಮ ಮಾಗಣೆಯ ಭೂ ನಿಯಂತ್ರಣ ವ್ಯವಸ್ಥೆಯಲ್ಲಿ ಮುಂಚೂಣಿಯಲ್ಲಿದ್ದರು.[22] ಅವರ ಕೆಳಗೆ ಇತರ ವರ್ಗದ ಜನ ಗೇಣಿದಾರರಾಗಿ ಅಥವಾ ಕೂಲಿಯಾಳುಗಳಾಗಿ ದುಡಿಯುತ್ತಿದ್ದರು. ತುಳುನಾಡಿನಲ್ಲಿ ಜೈನ ಸಮಾಜದ ಅಭ್ಯುದಯಕ್ಕೆ, ಆಳುವರಸರ ಆಶ್ರಯ, ಜೈನ ಮುನಿಗಳು ಮತ್ತು ಮಠಾಧಿಪತಿಗಳ ಮಾರ್ಗದರ್ಶನ, ವ್ಯಾಪಾರಿ ಸಂಘಗಳು ಮತ್ತು ವ್ಯಾಪಾರಿಗಳು, ಆಡಳಿತಗಾರರು, ಹಾಗೂ ಇದರ ಅನುಯಾಯಿಗಳು ಕಾರಣರಾಗಿದ್ದರು.

ತುಳುನಾಡಿನ ಜೈನರಲ್ಲಿ, ಪುರೋಹಿತ ವರ್ಗ ಅಥವಾ ಇಂದ್ರರು, ಸೆಟ್ಟಿಗಳು ಅಥವಾ ಶೆಟ್ಟಿಗಳು ಮತ್ತು ತುಳು ಜೈನರು ಎಂಬ ಮೂರು ಪ್ರಮುಖ ಪಂಗಡಗಳನ್ನು ಗುರುತಿಸಲಾಗಿದೆ.[23] ಪುರೋಹಿತ ವರ್ಗದವರಾದ ಇಂದ್ರರು ಉನ್ನತ ವರ್ಗದವರಾಗಿದ್ದರು. ಬಸದಿಯ ಪೂಜಾದಿಗಳನ್ನು ಇವರು ನಡೆಸುತ್ತಿದ್ದರು. ಇತರ ಜೈನ ಪಂಗಡದವರೊಂದಿಗೆ ಸಹಪಂಕ್ತಿ ಭೋಜನ ಇತ್ಯಾದಿ ವಿಚಾರಗಳಲ್ಲಿ ಸಹಮತವಿದ್ದರೂ ಇತರ ಜೈನ ಪಂಗಡದವರೊಂದಿಗೆ ಇವರ ವಿವಾಹ ಕಾರ್ಯಗಳು ಹೆಚ್ಚಾಗಿ ಜರಗುತ್ತಿರಲಿಲ್ಲ. ಪ್ರಾರಂಭದಿಂದಲೂ ಪಿತ್ರಾರ್ಜಿತವಾಗಿ ತಂದೆಯ ಮೂಲಕ ಸಂಬಂಧ ಗುರುತಿಸುವಿಕೆ ಅಥವಾ ಆಸ್ತಿಯ ಹಂಚಿಕೆ ವಿಧಿಗಳನ್ನು ಇವರು ಅನುಸರಿಸುತ್ತಿದ್ದರು. ಜೈನರಲ್ಲಿ ಪ್ರಬಲ ಪಂಗಡವಾಗಿದ್ದ ಶೆಟ್ಟಿಗಳಲ್ಲಿ ಮಕ್ಕಳ ಸಂತಾನ ವಿಧಿಗಳನ್ನು ಅನುಸರಿಸುವವರು ಇದ್ದರೂ ಸ್ಥಳೀಯ ಜೈನ ರಾಜ ಮನೆತನಗಳು ಅಳಿಯ

ಕಟ್ಟುನ್ನೇ ಪಾಲಿಸುತ್ತಿದ್ದರು. ಅರಮನೆ ಮತ್ತು ಬೀಡುಗಳಿಂದ ಆಳ್ವಿಕೆ ಮಾಡಿದ ಇವರು ವ್ಯಾಪಾರ ವ್ಯವಹಾರಗಳಲ್ಲಿ ಮುಂಚೂಣಿಯಲ್ಲಿದ್ದರು. ಈ ಹಿನ್ನೆಲೆಯಲ್ಲಿ ಪೇಟೆ ಪಟ್ಟಣಗಳಲ್ಲಿ ವಾಸಿಸುತ್ತಿದ್ದರು. ತುಳು ಜೈನರು ಅಳಿಯಸಂತಾನ ವ್ಯವಸ್ಥೆಯನ್ನು ಒಪ್ಪಿಕೊಂಡಿದ್ದರು. ಕೃಷಿ ಇವರ ಪ್ರಧಾನ ಉದ್ಯೋಗವಾಗಿದ್ದು ಬಂಟ ವರ್ಗದವರಂತೆ, ಹಳ್ಳಿಗಳಲ್ಲಿ ವಾಸವಿದ್ದು, ಇಂದಿಗೂ ಗುತ್ತುಗಳ ಯಜಮಾನರಾಗಿ ಮುಂದುವರೆದಿದ್ದಾರೆ. ಜೈನ ಧರ್ಮದ ಅನುಯಾಯಿಗಳನ್ನು ಶ್ರಾವಕರು ಎಂಬುದಾಗಿ ಕರೆಯಲಾಗುತ್ತಿದ್ದು ಹಲವು ಶಾಸನಗಳು ಇವರನ್ನು ಹೆಸರಿಸಿವೆ. ಜಿನದತ್ತರಾಯ ಚರಿತ್ರೆ ಮೂಲ್ಕಿಯ ಶ್ರಾವಕರು ಹೇಗೆ ತಮ್ಮ ಧರ್ಮಕ್ಕೆ ವಿಧೇಯರಾಗಿದ್ದರು ಮತ್ತು ಅವರ ಭಕ್ತಿಯನ್ನು ತಿಳಿಸುತ್ತದೆ. ಈ ಶ್ರಾವಕರು ವಿದ್ವಾಂಸರಾಗಿದ್ದರು ಮತ್ತು ಧಾರ್ಮಿಕ ಸಾಹಿತ್ಯಗಳ ಅಧ್ಯಯನ ನಡೆಸುತ್ತಿದ್ದರು.[24] ಜೈನರು ಕೂಡ ಬಂಟ, ಬಿಲ್ಲವ, ಗೌಡ ಮುಂತಾದ ಪಂಗಡದವರಂತೆ ಬಳಿಗಳಾಗಿ ವಿಂಗಡಣೆಗೊಂಡಿದ್ದು ನಾಡವರು ಅಥವಾ ಬಂಟರ ಹಲವು ಸಾಮ್ಯತೆಗಳನ್ನು ತುಳುನಾಡಿನ ಜೈನರಲ್ಲಿಯೂ ಕಾಣಬಹುದಾಗಿದೆ.

ತುಳುನಾಡಿನ ಜೈನ ಬಸದಿಗಳಿಗೆ ಸ್ಥಳೀಯ ರಾಜರು, ವ್ಯಾಪಾರಿಗಳು ಮತ್ತು ಪ್ರಮುಖ ವ್ಯಕ್ತಿಗಳು ಹಣ ಅಥವಾ ಭೂಮಿಯ ರೂಪದಲ್ಲಿ ದಾನ ದತ್ತಿಗಳನ್ನು ನೀಡುತ್ತಿದ್ದರು. ಈ ದತ್ತಿಗಳ ಉಲ್ಲೇಖದ ಸಂದರ್ಭದಲ್ಲಿ ಆಗಾಗ ಹಲರು, ಸಮಸ್ತ ಹಲರು, ಸೆಟ್ಟಿಕಾರರು, ಎಳಮೆಗಳ ಹೆಸರುಗಳು ಬಂದಿವೆ. ಶಾಸನಗಳ ಅಧ್ಯಯನ ಈ ಪದಗಳು ಬಸದಿಗೆ ದಾನ ನೀಡಿದ ಜೈನ ವ್ಯಾಪಾರಿಗಳ ಗುಂಪು ಎಂಬ ಮಾಹಿತಿಯನ್ನು ನೀಡುತ್ತದೆ. ಹಲರು ಯಾರು ಎಂಬ ಬಗ್ಗೆ ಬಹಳಷ್ಟು ಚರ್ಚೆಗಳಿವೆ.[25] ಧಾರ್ಮಿಕ ಸಂಸ್ಥೆಗಳಿಗೆ ದಾನ ದತ್ತಿ ನೀಡುವ ವಿಚಾರದಲ್ಲಿ ಊರಿನ ಪ್ರಮುಖ ನಾಗರೀಕರಾಗಿ ಇವರು ಕಂಡುಬರುತ್ತಾರೆ. ಅಲ್ಲದೆ ಆಡಳಿತಾತ್ಮಕ ವಿಚಾರದಲ್ಲಿ ಸಂಪರ್ಕಿಸುತ್ತಿದ್ದ ವ್ಯಕ್ತಿಗಳ ಗುಂಪು ಎಂದೂ ಪರಿಗಣಿಸಬಹುದಾಗಿದೆ. ಚಂದ್ರಮನ ಪ್ರಕಾರ ತುಳುನಾಡಿನ 32 ನಗರಗಳಲ್ಲಿದ್ದ ಹಲರೆಲ್ಲರೂ ಕಾರ್ಕಳದ ಮಹಾಮಸ್ತಕಾಭಿಷೇಕಕ್ಕೆ ಸಹಕರಿಸಿದ್ದರು.[26] ಈ ಹಿನ್ನೆಲೆಯಲ್ಲಿ ಅವರು ಜೈನರಾಗಿರಬೇಕು. ಶಾಸನಗಳು ಹಲರು ಪದದೊಂದಿಗೆ ಇತರರರನ್ನೂ ಉಲ್ಲೇಖಿಸುತ್ತವೆ. ಉದಾಹರಣೆಗೆ ಕಾರ್ಕಳದಲ್ಲಿ ಬಸ್ತಿಕರ್ತರು, ಭಟ್ಕಳ, ಮೂಡಬಿದ್ರಿ, ವೇಣೂರು, ಬಸ್ರೂರು ಮತ್ತು ಪಡುಬಿದ್ರಿಗಳಲ್ಲಿ ಸೆಟ್ಟಿಕಾರರು, ಎಳಮೆಗಳು ಉಲ್ಲೇಖಗೊಂಡಿದ್ದಾರೆ.[27] ಸೆಟ್ಟಿಕಾರರು ಮತ್ತು ಎಳಮೆಗಳು ಬಸದಿಯ ದಾನ ದತ್ತಿಗಳ ಜಾರಿಯ ವಿಚಾರದಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. 'ಸೆಟ್ಟಿಕಾರರು' ಇದು ವ್ಯಾಪಾರಿಗಳ ಗುಂಪು ಆಗಿದ್ದು ಮೂಡಬಿದ್ರಿ, ಕಾರ್ಕಳ, ವೇಣೂರು, ಬಸ್ರೂರು ಮತ್ತು ಭಟ್ಕಳದಲ್ಲಿ ಅವರು ಜೈನರಾಗಿದ್ದರು ಎಂದು ಸ್ಪಷ್ಟವಾಗಿ ಹೇಳಬಹುದು. ಎಳಮೆಗಳು ವ್ಯಾಪಾರಿ ಸಂಘಟನೆ (ವೃತ್ತಿ ಸಂಘಟನೆ) ಯಾಗಿದ್ದು ತಮ್ಮದೇ ಆದ ನೀತಿ ನಿಯಮಗಳಿಗೆ ಒಳಪಟ್ಟಿದ್ದರು. ಮೂಡಬಿದ್ರಿ ಮತ್ತು ವೇಣೂರಿನ ಶಾಸನಗಳು ಹೇಳುವಂತೆ ಸೆಟ್ಟಿಕಾರರು ಮತ್ತು ಎಳಮೆಗಳನ್ನು ದಾನ ದತ್ತಿಗಳ ಜಾರಿಯ ಸಂದರ್ಭದಲ್ಲಿ ಸಂಪರ್ಕಿಸಲಾಗುತ್ತಿತ್ತು.[28] ಉದಾಹರಣೆಗೆ ಕ್ರಿ.ಶ. 1622ರಲ್ಲಿ ಜೈನ

ಮುನಿ ತುಳು ಸಮಂತಭದ್ರರು ಮೂಡಬಿದ್ರಿಯಲ್ಲಿ ತ್ರಿಭುವನ ತಿಲಕ ಚೂಡಾಮಣಿ ಬಸದಿಯನ್ನು 8 ಸೆಟ್ಟಿಕಾರರು ಮತ್ತು 4 ಎಳಮೆಗಳ ಸಹಕಾರದೊಂದಿಗೆ ಜೀರ್ಣೋದ್ಧಾರಗೊಳಿಸಿದರು.[29]

ಕರ್ನಾಟಕವನ್ನಾಳಿದ ಪ್ರಸಿದ್ಧ ರಾಜವಂಶಗಳ ಜೈನ ಹಿನ್ನೆಲೆ ಅಥವಾ ಪ್ರೋತ್ಸಾಹ ಮತ್ತು ವ್ಯಾಪಾರ ವ್ಯವಹಾರಗಳು, ವಿಶಾಲವಾದ ಭೂಮಿಯ ಒಡೆತನ ಈ ಎಲ್ಲಾ ಹಿನ್ನೆಲೆಯಲ್ಲಿ ಈ ಕಾಲದಲ್ಲಿ ಜೈನ ಸಮಾಜ ತುಳುನಾಡಿನ ಮೇಲ್ವರ್ಗವಾಗಿ ಪರಿಗಣಿಸಲ್ಪಟ್ಟಿತ್ತು. ಹಿಂದೂ ದೇವಳಗಳು ಮತ್ತು ಭೂತಾರಾಧನೆಯ ನಂಟು ಜೈನ ಸಮಾಜ ಮತ್ತಷ್ಟು ಮುಂಚೂಣಿಗೆ ಬರಲು ಕಾರಣವಾಯಿತು. ಆದರೆ ಕ್ರಿ.ಶ.17ನೇ ಶತಮಾನದಲ್ಲಿ ಕೆಳದಿಯರಸರ ಪ್ರಾಬಲ್ಯದಿಂದಾಗಿ ಹಲವು ಜೈನ ಮನೆತನಗಳು ಸಂಕಷ್ಟವನ್ನು ಎದುರಿಸಬೇಕಾಯಿತಲ್ಲದೆ, ಜೈನರು ಕೇವಲ ಭೂ ಹಿಡುವಳಿದಾರರಾಗಿ ಮುಂದುವರಿಯಬೇಕಾಯಿತು.[30]

**ಬಂಟರು ಅಥವಾ ನಾಡವರು:** ಕೆಳದಿ ಆಳ್ವಿಕೆಯ ತುಳುನಾಡಿನಲ್ಲಿ ಬಂಟರ ಉಪಸ್ಥಿತಿ ವಿವಿಧ ಹಿನ್ನೆಲೆಗಳಲ್ಲಿ ಪ್ರಧಾನವಾಗಿತ್ತು. ಶಾಸನಗಳು ಮತ್ತು ದಾಖಲೆಗಳು ಸೂಚಿಸುವಂತೆ ಬಂಟ ಹಾಗು ಜೈನ ಈ ಎರಡು ವರ್ಗದ ಉಪನಾಮಗಳು ಒಂದೇ ಆಗಿದ್ದು ಗೊಂದಲವನ್ನು ಮೂಡಿಸುತ್ತವೆ. ಶೆಟ್ಟಿ, ಅಧಿಕಾರಿ, ಆಳ್ವ, ಬಲ್ಲಾಳ ಹೆಗ್ಗಡೆ ಮುಂತಾದ ಉಪನಾಮಗಳ ಸಾಮ್ಯತೆ, ವ್ಯಕ್ತಿತ್ವದ ಸಾಮ್ಯತೆ, ನಾಯಕತ್ವದ ಸಾಮ್ಯತೆ ಮುಂತಾದವುಗಳಿಂದ ತುಳುನಾಡಿನ ಮಟ್ಟಿಗೆ ತುಳು ಜೈನರು ಮತ್ತು ಇವರು ಒಂದೇ ಮೂಲದವರೆಂದು ತಿಳಿಯಲಾಗಿದೆ. ಆದರೆ ಬೇರೆ ಬೇರೆ ಕಾಲಘಟ್ಟದಲ್ಲಿ ಬಂಟ– ಜೈನ ಮತಾಂತರದ ಪ್ರಕ್ರಿಯೆ ಮುಂತಾದ ವಿಚಾರಗಳಲ್ಲಿ ಬಹಳಷ್ಟು ಚರ್ಚೆಗಳಿವೆ.

ಕವಿರಾಜ ಮಾರ್ಗದ 'ನಾಡವರ್ಗಳ್' ಉಲ್ಲೇಖದಿಂದ ಅಳುಪರವರೆಗೂ ಬಂಟರ ಇತಿಹಾಸದ ಹುಡುಕಾಟ ಮುಂದುವರೆದರೂ ನಿರ್ದಿಷ್ಟವಾಗಿ ಅವರ ಮೂಲದ ನಿರೂಪಣೆಗೆ ಜೈನ–ಬಂಟ ಉಪನಾಮದ(Surname) ಗೊಂದಲದಿಂದಾಗಿ ಖಚಿತ ದಾಖಲೆಗಳನ್ನು ಒದಗಿಸಲು ಸಾಧ್ಯವಾಗುತ್ತಿಲ್ಲ. 'ನಾಡವರು' ಪದ ಸ್ಪಷ್ಟವಾಗಿ ಬಂಟ ಸಮುದಾಯವನ್ನು ಪ್ರತಿನಿಧಿಸುವುದಾದರೂ ಉಳಿದ ಉಪನಾಮಗಳು ಜೈನರಲ್ಲಿಯೂ ಇರುವುದರಿಂದ ದಾಖಲೆಗಳು ಯಾರನ್ನು ಉಲ್ಲೇಖಿಸುತ್ತವೆ ಎಂಬ ಗೊಂದಲಗಳಿವೆ. ಬಂಟ ಹೆಸರಿಗಿಂತ ಹೆಚ್ಚಾಗಿ ಈ ಸಮುದಾಯ ತುಳುವಿನಲ್ಲಿ 'ಒಕ್ಕೆಲ್ಮೆ' ಎಂದೂ ತುಳುನಾಡಿನ ಕನ್ನಡ ಮಾತನಾಡುವ ಪ್ರದೇಶದಲ್ಲಿ 'ಶೆಟ್ರು' ಅಥವಾ ನಾಡವರು ಎಂದೂ ಗುರುತಿಸಲ್ಪಡುತ್ತಿತ್ತು. ಸಾಮಾಜಿಕವಾಗಿ ಬಂಟರು, ಬ್ರಾಹ್ಮಣರಿಂದ ನಂತರದ ಶಾಸ್ತ್ರೋಕ್ತ ಸ್ಥಾನವನ್ನು ಪಡೆದಿರುವಂತೆ ತೋರುತ್ತದೆ. ತಮ್ಮ ಭೂ ಒಡೆತನ ಮತ್ತು ವ್ಯಾಪಾರೋದ್ಯಮಗಳ ಫಲವಾಗಿ ಅವರು ಸಂಪಾದಿಸಿದ ಸಂಪತ್ತು ಮತ್ತು ಪ್ರಭಾವಗಳು ಅವರನ್ನು ತುಳು ಸಮಾಜದಲ್ಲಿ ಬಹಳಷ್ಟು ಪರಿಣಾಮಕಾರಿ ಗುಂಪಾಗಿ ತೋರಿಸುತ್ತವೆ. ಶಾಸನಗಳಲ್ಲಿ ಬರುವ 'ಬಳಂಜು' ಎಂದು ಕರೆಯಲ್ಪಡುವ ವ್ಯಾಪಾರ ಸಂಘಗಳು ಬಂಟರನ್ನು ಉಲ್ಲೇಖಿಸುತ್ತವೆ ಎನ್ನುವ ಅಭಿಪ್ರಾಯವೂ ಇದೆ.[31]

ತುಳುನಾಡಿನಲ್ಲಿ ನಾಯರು ಮೂಲದ ಹಿಡುವಳಿಯು ಬ್ರಾಹ್ಮಣರು ಮಾತ್ರ ದೇವಾಲಯ ಮತ್ತು ಮಠಗಳಂತಹ ಧಾರ್ಮಿಕ ಸಂಸ್ಥೆಗಳಿಂದ ಪಡೆದದ್ದಾಗಿತ್ತು. ಆದರೆ ವಿಜಯನಗರ ಕಾಲದಲ್ಲಿ ಬಂಟರು ಕೂಡ ನಾಯರು ಮೂಲ ಹಿಡುವಳಿ ಪಡೆದಿದ್ದರು.[32] ಕೆ.ವಿ ರಮೇಶ್ ಹೇಳುವಂತೆ ಬಂಟ ಮಹಿಳೆಯರು ಬ್ರಾಹ್ಮಣರಿಗೆ ಸಂಬಂಧಿಸಿದ ಬ್ರಹ್ಮದೇಯ ಹೊಲಗಳನ್ನೂ ಹೊಂದಿದ್ದರು.[33] ಬ್ರಾಹ್ಮಣರಿಗೆ ನೀಡಲಾದ ಭೂಮಿಯನ್ನು ಬಹುಶಃ ಕಾಲಾನಂತರದಲ್ಲಿ ವಿಕ್ರಯ ಅಥವಾ ಅಡವಿನ ಮೂಲಕ ಬಂಟರಿಗೆ ವರ್ಗಾವಣೆಯಾಗಿರುವ ಸಾಧ್ಯತೆ ಇದೆ. ಇದು ಸ್ಪಷ್ಟವಾಗಿ ಬಂಟರು ಸಾಮಾಜಿಕ ಮತ್ತು ರಾಜಕೀಯ ಸ್ತರದಲ್ಲಿ ಮೇಲಕ್ಕೆ ಏರಲು ಸಹಕರಿಸಿತು.

ಬಂಟರ ಕುರಿತಾಗಿ ಸ್ಪಷ್ಟ ಮಾಹಿತಿ ನೀಡುವ ಶಾಸನಗಳು ಸಂಖ್ಯೆಯ ದೃಷ್ಟಿಯಲ್ಲಿ ವಿರಳ. 'ನಾಡವರು' ಪದವನ್ನು ಕೆಲವು ಶಾಸನಗಳು ಉಲ್ಲೇಖಿಸುತ್ತವೆ. ಕ್ರಿ.ಶ.1293ರ ಮುಂಡ್ಕೂರು ಶಾಸನ ನಾಡವರನ್ನು ಹೆಸರಿಸಿದರೆ, ಕ್ರಿ.ಶ 1399ರ ಶಾಸನ ನಾಡವರು ಬಾರ್ಕೂರಿನ ಆಡಳಿತದಲ್ಲಿ ಭಾಗವಹಿಸುತ್ತಿದ್ದ ಮಾಹಿತಿ ನೀಡುತ್ತದೆ. ಇದರಲ್ಲಿ ಅವರನ್ನು 'ಕಟ್ಟಳೆಯವರು' ಎಂದು ಕರೆಯಲಾಗಿದೆ. ಕ್ರಿ.ಶ.1425ರ ಬಾರ್ಕೂರಿನ ಶಾಸನ ಹಿಂಸೆ ಮತ್ತು ಘಾತಕ ಕೃತ್ಯಕ್ಕೆ ಸಂಬಂಧಿಸಿದಂತೆ ' ಪಡುವ ಕೋಣ ನಾಡವರು' ಎಂಬುದಾಗಿ ಉಲ್ಲೇಖಿಸುತ್ತದೆ. ಕ್ರಿ.ಶ. 1417ರ ಕಾಯ್ಕಿಣಿಯ ಶಾಸನ 'ಮಣಿ–ನಾಡವರ' ಕುಟುಂಬವನ್ನು ಹೆಸರಿಸುತ್ತದೆ.[34] ತುಳುನಾಡಿನ ಉತ್ತರ ಭಾಗಕ್ಕಿರುವ ಪ್ರದೇಶಗಳಲ್ಲಿ ಇಂದಿಗೂ ಬಂಟರನ್ನು ನಾಡವರು ಎಂದು ಕರೆಯಲಾಗುತ್ತಿದ್ದು, ಇದು ಲೋಗನ್ ಹೇಳಿದಂತೆ ಮಲಬಾರ್ ತೀರದಲ್ಲಿರುವಂತೆ 'ನಾಡು' ಎನ್ನುವ ಭೂ ವರ್ಗೀಕರಣದಿಂದ ಬಂದಿರಬೇಕು.[35] ಥರ್ಸ್ಟನ್ ಹೇಳುವಂತೆ 'ನಾಡವರು ಎನ್ನುವುದು ಬಂಟ ಜಾತಿಯೇ' ಆಗಿದ್ದು ಒಂದು ಉಪವಿಭಾಗವಾಗಿದೆ. ನಾಡವ ಅಥವಾ ನಾಡವರು ಪದ 'ನಾಡು' ಅಥವಾ 'ದೇಶ'ಎನ್ನುವ ಪದಕ್ಕೆ ಸಂವಾದಿಯಾಗಿದೆ.[36]

ನಾಡವರಂತೆ ಬಂಟ ಪದವೂ ಕೆಲವು ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಉದ್ಯಾವರದ ಶಾಸನದಲ್ಲಿ 'ಚೊಕ್ಕಾಡಿಯ ಬಂಟರು' ಉಲ್ಲೇಖಿಸಲ್ಪಟ್ಟರೆ, ಪೊಳಲಿಯ ಶಾಸನ 'ಬಂಟವರ್ತನೆ' ಪದವನ್ನು ಉಲ್ಲೇಖಿಸುತ್ತದೆ. ಬಂಟರು ಉಡುಪಿ ಸಮೀಪದ ಆರೂರು ಶಾಸನದ ಪ್ರಕಾರ, ಕೆಲವು ಕಾಲದವರೆಗೆ ಅರಮನೆ ಪ್ರವೇಶಕ್ಕೆ ನಿಷೇಧವನ್ನು ಹೊಂದಿದ್ದರು.[37] ಆದರೆ ಈ ಶಾಸನಗಳು ತುಳುನಾಡಿನ ಸಮಾಜದಲ್ಲಿ ಬಂಟರ ಸ್ಪಷ್ಟ ಚಿತ್ರಣವನ್ನು ನೀಡುವುದಿಲ್ಲ. ಬಂಟರು ಮತ್ತು ನಾಡವರು ಒಂದೇ ಸಮುದಾಯ ಎಂದು ನಿರೂಪಿಸಲು ಶಾಸನಾಧಾರಗಳಿಲ್ಲ. ಇತ್ತೀಚಿನವರೆಗೂ ಬಂಟರು ಮತ್ತು ನಾಡವರ ನಡುವೆ ವೈವಾಹಿಕ ಸಂಬಂಧಗಳು ಹೆಚ್ಚಾಗಿ ಇರಲಿಲ್ಲ. ಆದರೆ ಅವರ ದೈಹಿಕ ಲಕ್ಷಣಗಳು, ನಾಯಕತ್ವದ ಗುಣಗಳು ಅವರು ಒಂದೇ ಮೂಲದವರೆಂಬ ವಿಚಾರಕ್ಕೆ ಪುಷ್ಟಿ ನೀಡುತ್ತದೆ.

ನಾಡವರು ಮತ್ತು ಬಂಟರು ಒಂದೇ ಸಮುದಾಯ ಎಂಬುದಾಗಿ ಗುರುತಿಸಿರುವ ಥರ್ಸ್ಟನ್,

ಅವರ ಸ್ಥಾನಮಾನ ಸಮಾಜದಲ್ಲಿ ಹೇಗಿತ್ತೆಂದು ತಿಳಿಯಲು ಅವರ ಸಮುದಾಯದಲ್ಲಿ ವ್ಯಕ್ತಿಯೊಬ್ಬನ ಸಾವು ಸಂಭವಿಸಿದಾಗ ಉಳಿದವರ ಪ್ರತಿಕ್ರಿಯೆಯನ್ನು ಅವಲಂಜಿಸಿ ಹೀಗೆ ದಾಖಲಿಸುತ್ತಾನೆ. "ಸಾವಿನ ಸುದ್ದಿಯನ್ನು ಹೊಲೆಯ ತಿಳಿಸುತ್ತಾನೆ. ಮರದ ಆಚಾರಿ ವಾದ್ಯದವರೊಂದಿಗೆ ಹೆಣ ಸುಡಲು ಬೇಕಾಗುವ ಮಾವಿನ ಮರ ಕಡಿಯಲು ತೆರಳುತ್ತಾನೆ. ದೇಹವನ್ನು ಸ್ನಾನ ಮಾಡಿಸಿ ಮರದ ಹಲಗೆಯಲ್ಲಿ ಮಲಗಿಸಲಾಗುತ್ತದೆ. ಹೊಸ ಬಟ್ಟೆ ತೊಡಿಸಲಾಗುತ್ತದೆ. ಇದನ್ನು ವಾದ್ಯದೊಂದಿಗೆ ಹೆಣ ಸುಡುವ ಪ್ರದೇಶಕ್ಕೆ ತಿಳಿಸಲಾಗುತ್ತದೆ. ಕ್ಷೌರಿಕನೊಬ್ಬ ಬೆಂಕಿಯಿರುವ ಮಡಿಕೆಯನ್ನು ಹಿಡಿಯುತ್ತಾನೆ. ಶವವನ್ನು ಬಳಿಗೆ ತಂದಿಡುತ್ತಾರೆ ಮತ್ತು ಹೊಸ ಬಟ್ಟೆಗಳನ್ನು ಹೊರಗೆಳೆಯುತ್ತಾರೆ ಮತ್ತು ಅದನ್ನು ಕ್ಷೌರಿಕ, ಅಗಸ, ಆಚಾರಿ, ಬಿಲ್ಲವ ಮತ್ತು ಹೊಲೆಯರಿಗೆ ಹಂಚುತ್ತಾರೆ. ಚಿತೆಗೆ ಬಿಲ್ಲವ ಬೆಂಕಿ ಇಡುತ್ತಾನೆ.[38] ಬಂಟರು ಗುರಿಕಾರರಾಗಿ ಅಥವಾ ಗುತ್ತೇದಾರರಾಗಿ ಬ್ರಾಹ್ಮಣರನ್ನು ಹೊರತುಪಡಿಸಿ ಸಮಾಜದ ಇತರ ವರ್ಗಗಳಿಂದ ನಿಷ್ಠೆಯನ್ನು ಸಹಾಯವನ್ನು ಪಡೆಯುತ್ತಿದ್ದರು ಎಂಬುದು ಇದರಿಂದ ತಿಳಿಯುತ್ತದೆ. ಅವರ ಲಕ್ಷಣಗಳನ್ನು ಹೇಳುತ್ತಾ, ಸ್ವತಂತ್ರ ಸ್ವಭಾವದ, ದೃಢಕಾಯರಾದ ಹಿಂದಿನ ಪರಂಪರೆಯಂತೆ ಇಂದೂ ಕೂಡ ತಲೆ ಎತ್ತಿ ನಿಲ್ಲುವ ವ್ಯಕ್ತಿಗಳಾಗಿದ್ದಾರೆ, ಎಂಬುದಾಗಿ ಥರ್ಸ್ಟನ್ ಹೇಳುತ್ತಾನೆ.[39]

ಫ್ರಾನ್ಸಿಸ್ ಬುಕಾನನ್‌ನ ವರದಿಗಳೂ ತುಳುನಾಡಿನಲ್ಲಿ ಬಂಟರ ಮಹತ್ವದ ಉಪಸ್ಥಿತಿಯನ್ನು ಗುರುತಿಸಿದೆ. ಬುಕಾನನ್ ಬಂಟರಲ್ಲಿದ್ದ ವಿವಿಧ ಪಂಗಡಗಳನ್ನು ಹೆಸರಿಸುತ್ತಾನೆ.[40] ಅವುಗಳೆಂದರೆ, 1.ಮಾಸಾದಿಕ ಬಂಟರು, 2.ಜೈನ ಬಂಟರು, 3.ಪರಿವಾರ ಬಂಟರು. ಮಾಸಾದಿಕ ಬಂಟರು ಪ್ರಮುಖ ಬಂಟ ಸಮುದಾಯವಾಗಿದ್ದು, ಇವರು ಮಾಂಸಾಹಾರಿಗಳು. ತುಳುನಾಡಿನ ಉತ್ತರ ಭಾಗದಲ್ಲಿ ನಿರ್ದಿಷ್ಟವಾಗಿ ಬಾರ್ಕೂರು ಮತ್ತು ಬಸ್ರೂರಿನ ಕೇಂದ್ರಗಳ ಸುತ್ತಮುತ್ತ ಈ ಸಮುದಾಯ "ನಾಡವ" ಅಥವಾ "ಶೆಟ್ರು" ಹೆಸರಿನಿಂದ ಗುರುತಿಸಲ್ಪಟ್ಟಿದೆ. ಜೈನ ಬಂಟರು ಸಸ್ಯಾಹಾರಿಗಳು. ಪರಿವಾರ ಬಂಟರು ವಲಸೆ ಬಂದವರೆಂದು ಪರಿಗಣಿಸಲಾಗಿದೆ. ವಿದ್ವಾಂಸರು, ಪರಿವಾರ ಬಂಟರ ಕುರಿತಾಗಿ ಚರ್ಚಿಸಿದ್ದಾರೆ. ಪರಿವಾರ ಬಂಟರನ್ನು ಒಂದು ಬಂಟ ಉಪಜಾತಿಯೆಂದು ಪರಿಗಣಿಸಿರುವರಾದರೂ ಸಾಮಾನ್ಯವಾಗಿ ಅವರನ್ನು ಪ್ರತ್ಯೇಕ ಜಾತಿಗೆ ಸೇರಿದವರೆಂದು ಹೇಳಲಾಗಿದೆ. ಪರಿವಾರ ಬಂಟರು ವಿಜಯನಗರ ಅಥವಾ ಇಕ್ಕೇರಿ ಕಾಲದಲ್ಲಿ ಈ ಪ್ರದೇಶಕ್ಕೆ ವಲಸೆ ಬಂದವರೆಂದು ಹೇಳಲಾಗಿದ್ದು ಆ ಕಾರಣಕ್ಕೆ ಅವರು ತುಳು ಆಡಳಿತದಲ್ಲಿ ಸಾಂಪ್ರದಾಯಿಕ ಅಜಲು ಏರ್ಪಾಟಿನ ಒಂದು ಅಂಗವಾಗಿರಲಿಲ್ಲ.[41] ಉಳಿದ ಬಂಟರಿಗಿಂತ ಭಿನ್ನವಾಗಿ ಅವರು ಪಿತೃಪ್ರಧಾನ ಕುಟುಂಬ ಪದ್ಧತಿಯನ್ನು ಅನುಸರಿಸುತ್ತಾರೆ. ಬುಕಾನನ್ ಹೆಸರಿಸಿರುವ ಜೈನ ಬಂಟರು, ತುಳು ಜೈನರಾಗಿದ್ದು ಇವರು ಇಂದು ಜೈನ ಸಮುದಾಯದವರೇ ಆಗಿದ್ದಾರೆ. ವಿವಾಹ ಸಂಬಂಧ ಸಂಪ್ರದಾಯಗಳಲ್ಲಿ ಉಳಿದ ಬಂಟರಿಗಿಂತ ಪ್ರತ್ಯೇಕತೆಯನ್ನು ಹೊಂದಿದ್ದಾರೆ.[42]

ಸ್ಟುರಕ್ ಹೇಳುವಂತೆ, ಭೂ ಒಡೆಯರಾಗಿ ಬೇಸಾಯಗಾರರಾಗಿ ಬಂಟರು ಸಮಾಜದಲ್ಲಿ ಮೇಲ್ಮೆಯನ್ನು

ಹೊಂದಿದ್ದರು. ಅದೇ ರೀತಿ ಬಂಟರು ಹೆಸರು ಸೂಚಿಸುವಂತೆ ಮೂಲತಃ ಸೈನಿಕ ವರ್ಗದವರಾಗಿದ್ದು ಮಲಬಾರ್‌ನ ನಾಯರ್ ಜನಾಂಗಕ್ಕೆ ಅನುಗುಣವಾದ ಲಕ್ಷಣಗಳನ್ನು ಹೊಂದಿದ್ದಾರೆ.[43] ಆದರೆ ಬಂಟರು ಸೈನಿಕ ವರ್ಗದ ಲಕ್ಷಣಗಳನ್ನು ಹೊಂದಿರುವರಾದರೂ ಕೇರಳದ ನಾಯರ್ ಸಮುದಾಯಕ್ಕೆ ಅಥವಾ ಕರಾವಳಿ ಕರ್ನಾಟಕದಲ್ಲಿ ಕಾಣಿಸಿಕೊಳ್ಳುವ ನಾಯರ್ ಸಮುದಾಯ ಮತ್ತು ಬಂಟ ಅಥವಾ ನಾಡವರ ನಂಟನ್ನು ನಿರೂಪಿಸಲು ಯಾವುದೇ ಸ್ಪಷ್ಟ ಆಧಾರಗಳಿಲ್ಲ. ಅಳಿಯ ಸಂತಾನ ಪದ್ಧತಿಯನ್ನು ಅನುಸರಿಸುತ್ತಿದ್ದ ಬಂಟರು ಮತ್ತು ನಾಡವರಲ್ಲಿ ಉತ್ತರಾಧಿಕಾರತ್ವ ಮಾತೃ ಮೂಲದಿಂದ ಮುಂದುವರೆಯುತ್ತಿತ್ತು. ಬ್ರಾಹ್ಮಣರಲ್ಲಿ ಗೋತ್ರಗಳಿದ್ದಂತೆ ನಾಡವರು ಬೇರೆ ಬೇರೆ ಬಳಿಗಳಾಗಿ ವಿಂಗಡಣೆ ಹೊಂದಿದ್ದರು.

ಭೂತ ಸ್ಥಾನಗಳ ಆಡಳಿತದಲ್ಲಿಯೂ, ಭೂತಾರಾಧನೆಯಲ್ಲಿಯೂ ಬಂಟರು ಮುಂಚೂಣಿಯಲ್ಲಿದ್ದರು ತುಳುನಾಡಿನ ಬಂಟ ಸಮಾಜದ ಬಗ್ಗೆ ಸಮಗ್ರವಾಗಿ ಸಿರಿಯ ಪಾಡ್ದನವು ವಿವೇಚಿಸುತ್ತದೆ. ಕೋಟಿ ಚೆನ್ನಯ, ಸಾರಾಲ ಜುಮಾದಿ ಮುಂತಾದ ಪಾಡ್ದನಗಳಲ್ಲಿಯೂ ಬಂಟ ಸಮಾಜದ ಉಲ್ಲೇಖವನ್ನು ಕಾಣಬಹುದು. ಕೋಟಿ ಚೆನ್ನಯ ಪಾಡ್ದನದಲ್ಲಿ ಬರುವ 'ಬಂಟ ಮಗೆ ಬಾರಗೆ' 'ಒಕ್ಕಲಾಯರು' ಪದಗಳು ಬಂಟರನ್ನು ಕುರಿತಾದ ಉಲ್ಲೇಖಗಳಾಗಿದ್ದು ಅವರ ಬೇಸಾಯದ ಕಸುಬನ್ನು ಸೂಚಿಸುತ್ತದೆ. ಪಾಡ್ದನದಲ್ಲಿ ಬರುವ ಭಂಡಾರಿ, ಕೋಚರೈ, ತಾಂಪರೈ ಹೆಸರುಗಳಲ್ಲಿ 'ಭಂಡಾರಿ' ಮತ್ತು 'ರೈ' ಎನ್ನುವ ಉಪನಾಮಗಳು ಬಂಟ ಸಮಾಜದಲ್ಲಿ ಇಂದಿಗೂ ಪ್ರಚಲಿತವಾಗಿವೆ. 'ಸಿರಿ'ಯ ಪಾಡ್ದನದಲ್ಲಿ ಬಂಟ ಸಮಾಜದ ಬೇರೆ ಬೇರೆ ವ್ಯಕ್ತಿಗಳು ಮತ್ತು ಅವರ ಅನೇಕ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಗತಿಗಳ ವಿವರಗಳು ಸಿಗುತ್ತವೆ. ಆಳ್ವ, ಹೆಗ್ಗಡೆ, ಪೂಂಜ, ಮರ್ದ, ಮಾರ್ಲ, ಶೆಟ್ಟಿ ಮೊದಲಾದ ಬಂಟರ ಉಪನಾಮಗಳು ಇಲ್ಲಿ ದೊರೆಯುತ್ತವೆ. ಬಂಟರ ಬೀಡುಗಳಾದ ಗುತ್ತು, ಬಾಳಿಕೆ, ಪರಾರಿ, ಬಾವ–ಈ ವ್ಯವಸ್ಥೆಯ ವಿಚಾರವಿದೆ. ಬಂಟ ಸಮಾಜದ ಸ್ತ್ರೀ ಪ್ರಾಧಾನ್ಯ, ಅಳಿಯ ಸಂತಾನ ಪದ್ಧತಿ, ವಿವಾಹ ವಿಚ್ಛೇದನದ ಕ್ರಮ, ವರದಕ್ಷಿಣೆ ಸ್ವರೂಪ ಮುಂತಾದ ಅಂಶಗಳು ಪ್ರತಿಪಾದಿತವಾಗಿವೆ.[44]

ಕೆಳದಿ ಕಾಲದ ರಾಜಕೀಯ ಕ್ಷೇತ್ರದಲ್ಲಿಯೂ ಬಂಟರು ಪ್ರಮುಖ ಸ್ಥಾನ ಹೊಂದಿದ್ದರು. ಕೆಳದಿ ಅರಸರು ಕೆಲವು ಬಂಟ ಮುಖಂಡರನ್ನು ಆಯಕಟ್ಟಿನ ಸ್ಥಾನಗಳಿಗೆ ನೇಮಿಸಿದ್ದರು. ಕ್ರಿ.ಶ 1594 ಮತ್ತು 1610ರ ಮೊಗೇರಿ ಮತ್ತು ಶಿರೂರಿನ 2 ಅಪ್ರಕಟಿತ ತಾಮ್ರ ಪತ್ರಗಳು ಗ್ರಾಮದಲ್ಲಿ 'ಸೇನಭೋವ' ಮತ್ತು 'ಜೋಯಿಸರ' ಆಯ್ಕೆಯಲ್ಲಿ ಅಭಿಪ್ರಾಯ ಕೊಡುವ ಅವಕಾಶ ಸೆಟ್ಟಿಗಳಿಗೆ ಇತ್ತು ಎನ್ನುವುದನ್ನು ಸೂಚಿಸುತ್ತದೆ.[45] ಕ್ರಿ.ಶ 1604ರ ಕಡತವೊಂದರ ಮಾಹಿತಿಯಂತೆ, ಕೆಳದಿ ವೆಂಕಟಪ್ಪ ನಾಯಕನು ಕೊಂಕಣ ಬ್ರಾಹ್ಮಣರು ವೇದ ಪಠಿಸದಂತೆ ಮತ್ತು ಕೊಂಕಣೇತರ ಬ್ರಾಹ್ಮಣರ ಪೌರೋಹಿತ್ಯ ವಹಿಸದಂತೆ ತಡೆಯುವ ಅಧಿಕಾರವನ್ನು ಹಂಬಂಣ ಸೆಟ್ಟಿಗೆ ನೀಡಿದ್ದ.[46] ಕ್ರಿ.ಶ.1746 ದಾಖಲೆಯಂತೆ ಸಿದ್ದಪ್ಪ ಸಿವಪ್ಪ ಸೆಟ್ಟಿ ಎಂಬುವವನು ಆಜ್ಞೆಯೊಂದನ್ನು ಹೊರಡಿಸಿ ಶೃಂಗೇರಿ ಮಠದ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಲ್ಲಿ ಸ್ತ್ರೀಯರ ಮೇಲೆ

ಅಪರಾಧವೆಸಗುವ ವ್ಯಕ್ತಿಗಳಿಂದ ದಂಡ ವಸೂಲು ಮಾಡುವ ಅಧಿಕಾರವು ಶೃಂಗೇರಿ ಗುರುಗಳಿಗೆ ಮಾತ್ರ ಇದೆ ಎಂದು ಸಾರಿದ.[47] ಕ್ರಿ.ಶ 1747ರ ಎರಡು ಕಡತಗಳು ಭುವನಗಿರಿದುರ್ಗದಲ್ಲಿ ಕೋಟೆ ಕಟ್ಟಲು ಅವಕಾಶ ಕೊಡಬಾರದೆಂದು ಕಾವಡಿ ತಿಮ್ಮನಿಗೆ ಸಿದ್ದಪ್ಪ ಶೆಟ್ಟರ್ ಶಿವಪ್ಪ ಆಜ್ಞೆ ಮಾಡಿದ್ದಾಗಿ ತಿಳಿಸುತ್ತದೆ.[48] ಬಹುಶಃ ಅವರು ಪರಿಸರದ ಅಧಿಕಾರಿಗಳಾಗಿರಬೇಕು. ಹೀಗೆ ಕೆಳದಿ ಆಡಳಿತದ ಕಾಲದಲ್ಲಿ ಬಂಟರ ಮುಂದಾಳುತನವನ್ನು ಗುರುತಿಸಬಹುದು. ನಾಡವರಲ್ಲಿ ಇಂದು ಇರುವ ಅನೇಕ ಉಪನಾಮಗಳಾದ ಅಧಿಕಾರಿ, ಬಲ್ಲಾಳ, ಜಿನ್ನಾಣ, ಭಂಡಾರಿ, ಹೆಗ್ಗಡೆ, ಕಂಬಳಿ, ನಾಡವ, ನಾಯಕ, ಸೆಟ್ಟಿ, ಸಾಮಣಿ ಮುಂತಾದವು ಅನೇಕ ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿರುವುದು ಬಂಟರ ಕೃಷಿ ಮತ್ತು ಆಡಳಿತದ ಆಸಕ್ತಿಯ ದ್ಯೋತಕವಾಗಿದೆ ಎಂದು ಹೇಳಬಹುದಾಗಿದೆ. ಕೆಳದಿಯರಸರ ಆಳ್ವಿಕೆಯ ಕೊನೆಯ ಕಾಲದಲ್ಲಿ ಸೆಟ್ಟಿಗಳು ಮತ್ತು ನಾಡವರು ತುಳುನಾಡಿನ ಕೃಷಿ ವ್ಯವಸ್ಥೆಯಲ್ಲಿ ಎಷ್ಟರಮಟ್ಟಿಗೆ ಪ್ರಾಮುಖ್ಯತೆಯನ್ನು ಹೊಂದಿದ್ದರೆಂದರೆ ಅವರು ಹೆಚ್ಚಿನ ಭೂ ಹಿಡುವಳಿಯನ್ನು ಹೊಂದಿದ್ದು ಭೂ ಮಾಲಕರಾಗಿ ಕಾಣಿಸಿಕೊಳ್ಳುತ್ತಾರೆ.[49] ಜೈನ ಅರಸರು ತುಳುನಾಡಿನ ಆಡಳಿತ ನಡೆಸಿದ ಸಂದರ್ಭದಲ್ಲಿ, ಬಂಟರು ಗುತ್ತು ಆಡಳಿತದ ಮುಖ್ಯಸ್ಥರಾಗಿ ಹಳ್ಳಿಗಳಲ್ಲಿ ಅಧಿಕಾರ ಸ್ಥಾಪಿಸಿದರು. ಅವರು ಬೀಡಿನ ಬಲ್ಲಾಳರಿಗೆ ಅಥವಾ ಸ್ಥಳೀಯ ಅರಸರಿಗೆ ಅಧೀನರಾಗಿ ಪರಸ್ಪರ ಸಹಕಾರದಿಂದ ಆಡಳಿತವನ್ನು ನಡೆಸುತ್ತಿದ್ದರು.[50]

ಜೈನರು ಬಂಟರಾದರೇ ಅಥವಾ ಬಂಟರು ಮತಾಂತರ ಹೊಂದಿ ಜೈನರಾದರೇ ಎಂಬ ವಿಚಾರದಲ್ಲಿ ವಿದ್ವಾಂಸರ ನಡುವೆ ಭಿನ್ನಾಭಿಪ್ರಾಯಗಳಿವೆ. ಉಪನಾಮಗಳ ಸಾಮ್ಯತೆ, ನಾಯಕತ್ವದ ಪರಂಪರೆ, ವಿಶಾಲವಾದ ಭೂ ಹಿಡುವಳಿಯ ಹಿನ್ನೆಲೆಯಲ್ಲಿ ಈ ಎರಡು ಸಮುದಾಯಗಳ ನಡುವೆ ಬಹಳಷ್ಟು ಹೋಲಿಕೆಗಳಿವೆ. ಉತ್ತರದಿಂದ ತುಳುನಾಡಿಗೆ ಆಗಮಿಸಿದ ಜೈನ ಧರ್ಮದ ಅನುಯಾಯಿಗಳಲ್ಲಿ ಕಲವರು ಸ್ಥಳೀಯ ಪರಂಪರೆಗೆ ಮನಸೋತು, ಅಥವಾ ಮಾಂಸಾಹಾರಿಗಳಾಗಿ, ಅಥವಾ ಇನ್ನಿತರ ಯಾವುದೋ ಕಾರಣಕ್ಕಾಗಿ ಬಂಟರಾಗಿ ಮತಾಂತರ ಹೊಂದಿದರು ಎಂಬುದಾಗಿ ಕೆಲವು ವಿದ್ವಾಂಸರ ಅಭಿಪ್ರಾಯ.[51] ಇದಕ್ಕೆ ಪೂರಕವಾಗಿ ಹಲವು ಮಾಹಿತಿಗಳನ್ನು ನೀಡಲಾಗಿದೆ. ಮೊದಲನೆಯದಾಗಿ ಇಂದಿಗೂ ಕೆಲವು ಬಂಟರ ಮನೆಗಳಲ್ಲಿ ಮರಣ ಹೊಂದಿದ ಹಿರಿಯರಿಗೆ ವಾರ್ಷಿಕ ಅನ್ನ ಹಾಕುವಾಗ 'ಜೈನ ಎಡೆ' ಎಂಬ ಪ್ರತ್ಯೇಕ ಎಲೆಯನ್ನು ಮೀಸಲಿಡುವ ಕಾರ್ಯಕ್ರಮವಿದೆ. ಅಂದು ಅವರು ಮಾಂಸಾಹಾರ ಸ್ವೀಕರಿಸುವುದಿಲ್ಲ. ಅದು ಅವರ ಹಿರಿಯರು ಜೈನರಾಗಿರುವ ಕಾರಣದಿಂದ ಎಂದು ಅಭಿಪ್ರಾಯ ಪಡಲಾಗಿದೆ. ಹಾಗೆಯೇ ಅವರಿಗೆ ಗುರು ಮಠವಿಲ್ಲ, ಪ್ರತ್ಯೇಕ ದೇವರಿಲ್ಲ. ಜೈನರ ಗಂಟು ನಾಡವರಿಗೆ ಎಂಬ ಉತ್ತರ ತುಳುನಾಡಿನ ಜನಜನಿತ ಮಾತೂ ಮೊದಲು ಈ ಸಮುದಾಯ ಜೈನರಾಗಿದ್ದರೆಂಬ ಕುರುಹಾಗಿದೆ. ಇಂದಿಗೂ ವೀರ ಪೂಜಕರಾಗಿರುವ ಇಲ್ಲಿಯ ನಾಡವರು ಜೈನ ಪುರೋಹಿತರಿಂದಲೇ ತಾವು ನಂಬಿರುವ ವೀರರ ಸ್ಮಾರಕಗಳಿಗೆ ಪೂಜೆ ನೆರವೇರಿಸುತ್ತಾರೆ. ಜಿನದೇವನಾಯಕ, ದೇವರಾಯ ನಾಯಕ ಮೊದಲಾದ ನಾಡವರ ಹೆಸರೂ ಜೈನ

ಮೂಲವನ್ನೇ ಸೂಚಿಸುತ್ತದೆ.[52]

ಆದರೆ ಇನ್ನು ಕೆಲವು ವಿದ್ವಾಂಸರು ತುಳುನಾಡಿನ ಬಂಟರು ಅಥವಾ ನಾಡವರು ಜೈನರಾಗಿ ಮತಾಂತರ ಹೊಂದಿದರೆಂಬ ಅಭಿಪ್ರಾಯವನ್ನು ಹೊಂದಿದ್ದಾರೆ.[53] ತುಳುನಾಡಿನ ಜೈನರಲ್ಲಿ ಜೈನ ಶೆಟ್ಟರು, ತುಳು ಜೈನರು ಮತ್ತು ಇಂದ್ರರೆಂಬ ಮೂರು ಪ್ರಮುಖ ವಿಧಗಳಿವೆ. ಇವರಲ್ಲಿ ಶೆಟ್ಟರು ಮತ್ತು ಇಂದ್ರರ ಆಚಾರ ವಿಚಾರಗಳಲ್ಲಿ ಸಾಮ್ಯತೆಯಿದ್ದರೆ, 'ತುಳು ಜೈನರು' ಎನ್ನುವ ಪಂಗಡಕ್ಕೆ ಮತ್ತು ಬಂಟರಿಗೆ ಬಹಳಷ್ಟು ಸಾಮ್ಯತೆಯಿದೆ.[54] ಉದಾಹರಣೆಗೆ 1. ಅಜಿಲ, ಆಳ್ವ, ಅಧಿಕಾರಿ, ಬಲ್ಲಾಳ, ಬಂಗ, ಭಂಡಾರಿ, ಚೌಟ, ಹೆಗ್ಡೆ, ಕಡಂಬ, ಕಾಡವ, ಕೊಂಡೆ, ಮಲ್ಲಿ, ಪೂವಣಿ, ಬಲಿಪ, ರೈ ಮೊದಲಾದ ಉಪನಾಮ (Surname) ಅದೇ ರೀತಿ ರೂಢಿಯಲ್ಲಿರುವ ಬಳಿಗಳ ಮಧ್ಯದ ಸಾಮ್ಯತೆ. ಮಾತೃ ಪ್ರಧಾನ ಕುಟುಂಬ ಪದ್ಧತಿ. ಭೂತಾರಾಧನೆ, ಪಿತೃ ಆರಾಧನೆ, ವ್ಯವಸಾಯ ಪ್ರಧಾನ ವೃತ್ತಿ, ಹಳ್ಳಿಗಳಲ್ಲಿ ವಾಸಿಸುವುದು, ಗುತ್ತುಗಳ ಯಜಮಾನಿಕೆ ಇತ್ಯಾದಿ. ಈ ಎಲ್ಲಾ ವಿಚಾರಗಳನ್ನು ಗಮನಿಸುವಾಗ ಯಾವುದೋ ಕಾಲಘಟ್ಟದಲ್ಲಿ ಈ ಮತಾಂತರ ಪ್ರಕ್ರಿಯೆ ನಡೆದಿರುವುದು ದೃಢ ಪಡುತ್ತದೆ. ಬಹುಶಃ, ಒಂದು ಹಂತದಲ್ಲಿ ಸ್ಥಳೀಯ ಬಂಟರು ಜೈನರಾಗಿ ಮತಾಂತರ ಹೊಂದಿದ್ದರೆ, ಇನ್ನೊಂದು ಹಂತದಲ್ಲಿ ಜೈನರೂ ಮತಾಂತರ ಹೊಂದಿ ಬಂಟರಾಗಿರಬೇಕು.

ಕರಾವಳಿಯ ವ್ಯಾಪಾರ ಮತ್ತು ವಿದೇಶೀಯರ ಪ್ರವೇಶವು ಬಂಟರು ಜಮೀನುದಾರಿಕೆಯೊಂದಿಗೆ ಶ್ರೀಮಂತ ವ್ಯಾಪಾರಿಗಳಾಗಿ ಬೆಳೆಯಲು ಕಾರಣವಾಯಿತು ಎಂಬ ಅಭಿಪ್ರಾಯಗಳಿವೆ. ವಿಜಯನಗರ ಮತ್ತು ಕೆಳದಿ ಕಾಲಾವಧಿಯು ವಾಣಿಜ್ಯ ಕ್ಷೇತ್ರದಲ್ಲಿ ಪೋರ್ಚುಗೀಸರ ಬಲವಾದ ಭಾಗವಹಿಸುವಿಕೆಯನ್ನು ಕಂಡಿತು. ಅದು ತುಳುನಾಡಿನಲ್ಲಿ ಬಂಟರ ಬಲ ಮತ್ತು ಪ್ರಭಾವ ವರ್ಧನೆಗೆ ನೆರವು ನೀಡಿತು. ವಿಜಯನಗರೋತ್ತರ ಅವಧಿಯಲ್ಲಿ ಹಲವು ಮಂದಿ ಬಂಟರು ತಮ್ಮ ಕೃಷಿ ಭೂಮಿಯನ್ನು ಬಿಡದೆ ವ್ಯಾಪಾರದತ್ತ ಆಕರ್ಷಿತರಾಗಿ, ಪೋರ್ಚುಗೀಸರಂತಹ ದೊಡ್ಡ ಹೊಸ ಶಕ್ತಿಗಳ ಗಮನ ಸೆಳೆದು ವ್ಯಾಪಾರಿಗಳಾಗಿ ಕೂಡ ತಮ್ಮ ಸ್ಥಿತಿಯನ್ನು ಭದ್ರ ಪಡಿಸಿಕೊಂಡಿರಬೇಕು ಎಂಬುದಾಗಿ ಸುರೇಂದ್ರ ರಾವ್ ಅಭಿಪ್ರಾಯ ಪಡುತ್ತಾರೆ.[55] ಪೋರ್ಚುಗೀಸ್ ದಾಖಲೆಗಳು ಕುಂದಾಪುರ ಮತ್ತು ಬಸ್ರೂರು ಪ್ರದೇಶಗಳಲ್ಲಿದ್ದ ಪ್ರಮುಖ ಶೆಟ್ಟಿ ವ್ಯಾಪಾರಿಗಳನ್ನು ಉಲ್ಲೇಖಿಸುತ್ತವೆ. ಕೆಲವೊಮ್ಮೆ ವಿದೇಶೀ ವ್ಯಾಪಾರಿಗಳೊಂದಿಗೆ ಅವರ ಹೋರಾಟಗಳ ಉಲ್ಲೇಖವೂ ಬರುತ್ತದೆ.[56] ಪೋರ್ಚುಗೀಸ್ ದಾಖಲೆಗಳು ಮಂಗಳೂರಿನ ಶ್ರೀಮಂತ ರತ್ನ ಶೆಟ್ಟಿ ಎಂಬ ವ್ಯಾಪಾರಿಯೊಂದಿಗಿನ ಆರ್ಥಿಕ ಸಂಘರ್ಷಗಳ ಮಾಹಿತಿ ನೀಡುತ್ತವೆ. ಪಶ್ಚಿಮ ಕರಾವಳಿಯಲ್ಲಿಯೇ ಅತ್ಯಂತ ಶ್ರೀಮಂತನಾಗಿದ್ದ ಅವನನ್ನು ಕ್ರಿ.ಶ.1530ರಲ್ಲಿ ಪೋರ್ಚುಗೀಸರು ಸದೆಬಡಿಯುತ್ತಾರೆ.[57] ಕ್ರಿ.ಶ.1560ರ ದಶಕದಲ್ಲಿ ಬಸ್ರೂರು ಮತ್ತು ಕುಂದಾಪುರ ಪ್ರದೇಶದ ಶೆಟ್ಟಿಗಳು ಪೋರ್ಚುಗೀಸರೊಂದಿಗೆ ಮತ್ತೆ ಸಂಘರ್ಷಕ್ಕೆ ಮುಂದಾದರು.[58] ಕ್ರಿ.ಶ.1629ರ ಹೊತ್ತಿಗೆ ವೆಂಕಟಪ್ಪ ನಾಯಕನು 50,000 ಪಗೋಡ ಮೌಲ್ಯದ ಜಮೀನನ್ನು

ಬಿಟ್ಟುಕೊಡುವಂತೆ ಶೆಟ್ಟಿ ವರ್ತಕರನ್ನು ಬಲಾತ್ಕರಿಸಿದ್ದಾಗಿ ಹೇಳಲಾಗಿದೆ.[59] ಆದರೆ ವೆಂಕಟಪ್ಪ ನಾಯಕನ ಮರಣಾ ನಂತರ ಕೆಲಮಂದಿ ಶೆಟ್ಟಿ ಮುಂದಾಳುಗಳು ಪುನಃ ಕೆಳದಿಯ ಆಳ್ವಿಕೆಯನ್ನು ಉಲ್ಲಂಘಿಸಲು ಬಯಸಿದ್ದು ಇವರಲ್ಲಿ ಬಸ್ರೂರಿನ ಶೆಟ್ಟಿಗಳು ಸೇರಿಕೊಂಡರು. ಆದರೆ ಕೆಳದಿ ವೀರಭದ್ರ ನಾಯಕನು ಅವರನ್ನು ಬೆದರಿಸಿ ಅಧೀನತೆಗೆ ತಂದನು.[60] ಶೆಟ್ಟಿಗಳಲ್ಲಿ ಕೆಲವರು ಕೆಳದಿಯ ಆಸ್ಥಾನದಲ್ಲಿ ರಾಜರ ವಿಶ್ವಾಸಕ್ಕೆ ಪಾತ್ರರಾಗಿದ್ದರು. ಶೃಂಗೇರಿ ಮಠದ ಕೆಲವು ಕಡತಗಳು ಇದನ್ನು ಸೂಚಿಸುತ್ತವೆ.

ಈ ಮೇಲೆ ಉಲ್ಲೇಖಿಸಲಾದ 'ಶೆಟ್ಟಿಗಳ' ಉಲ್ಲೇಖ ಬಂಟರನ್ನು ಕುರಿತಾಗಿಯೋ ಅಥವಾ ಜೈನರನ್ನೋ ಅಥವಾ ಕರ್ನಾಟಕದ ಇತರ ಭಾಗಗಳಲ್ಲಿ ಉದ್ಯಮಶೀಲ ವ್ಯಾಪಾರಿಗಳಾಗಿದ್ದ ವೈಶ್ಯ ಸೆಟ್ಟಿಗಳನ್ನೋ ಎಂಬ ಸಂಶಯ ವ್ಯಕ್ತವಾಗುತ್ತದೆ. ತುಳುನಾಡಿನಲ್ಲಿ ವೈಶ್ಯ ಸೆಟ್ಟಿಗಳು ತೀರಾ ವಿರಳರಾಗಿದ್ದಿರಬಹುದು. ಉಳಿದ ಎರಡು ಪಂಗಡಗಳು ಇಲ್ಲಿ ದೃಢ ಉಪಸ್ಥಿತಿ ಹೊಂದಿದ್ದವು. ಜೈನ ಶೆಟ್ಟಿಗಳ ಮತ್ತು ಬಂಟ ಶೆಟ್ಟಿಗಳ ಭದ್ರ ನೆಲೆಗಳಾಗಿ ಗುರುತಿಸಲ್ಪಟ್ಟ ಮಂಗಳೂರು ಮತ್ತು ಬಸ್ರೂರುಗಳಲ್ಲಿ ಘಟ್ಟದ ಮೇಲಿನ ವೈಶ್ಯ ಸಮುದಾಯದ ಸೆಟ್ಟಿಗಳ ಬಲವಾದ ಉಪಸ್ಥಿತಿ ಇದ್ದಿರಲು ಸಾಧ್ಯವಿಲ್ಲ. ಹಾಗಾಗಿ ಇವರು ಬಂಟ ಶೆಟ್ಟಿಗಳು ಅಥವಾ ಜೈನ ಶೆಟ್ಟಿಗಳಾಗಿರಬೇಕು. ಕೃಷಿ ವ್ಯವಸ್ಥೆಯಲ್ಲಿ ಪ್ರಧಾನವಾಗಿ ತೊಡಗಿಸಿಕೊಂಡಿದ್ದ ಬಂಟರು ವ್ಯಾಪಾರದಲ್ಲಿ ಮುಂಚೂಣಿಯಲ್ಲಿದ್ದರೆಂದು ಹೇಳಲು ಸರಿಯಾದ ದಾಖಲೆಗಳಿಲ್ಲ. ಕೆಳದಿ ಸಾಮ್ರಾಜ್ಯ ಅವನತಿಯಾಗಿ 3 ದಶಕಗಳ ನಂತರ ಬುಕಾನನ್ ಕೊಡುವ ಅಭಿಪ್ರಾಯದಂತೆ, ಬಂಟರು ಆಗ ತಾನೆ ವಾಣಿಜ್ಯ ವ್ಯವಹಾರಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ಪ್ರಾರಂಭಿಸಿದ್ದರು.[61] ಅಂದರೆ ಅಲ್ಲಿಯವರೆಗೂ ವಾಣಿಜ್ಯದಲ್ಲಿ ಅವರು ಮುಂಚೂಣಿಯಲ್ಲಿರಲಿಲ್ಲ ಎಂಬುದು ದೃಢವಾಗುತ್ತದೆ. ಹಾಗಾಗಿ ಈ ಕಾಲದಲ್ಲಿ ವ್ಯಾಪಾರಿ ಕ್ಷೇತ್ರದಲ್ಲಿ ಹೆಸರಿಸಲ್ಪಟ್ಟ ಶೆಟ್ಟಿ ಕುಲನಾಮದ ವ್ಯಕ್ತಿಗಳು ಜೈನರಾಗಿರುವ ಸಾಧ್ಯತೆಯೂ ಇದೆ. ಜೈನ ಶ್ರೇಷ್ಠಿಗಳು ತುಳುನಾಡಿನಲ್ಲಿ ಬಹಳ ಸಂಖ್ಯೆಯಲ್ಲಿದ್ದು ವ್ಯಾಪಾರದ ಮೂಲಕ ಇಲ್ಲಿಯ ಇತಿಹಾಸದಲ್ಲಿ ದಾಖಲಾಗಿದ್ದಾರೆ. ಈ ಸೆಟ್ಟಿಗಳು ತಮ್ಮ ವ್ಯಾಪಾರದ ವಿಕ್ರಮದಿಂದಾಗಿ ಸಮಾಜದಲ್ಲಿ ಬಹಳಷ್ಟು ಪ್ರಭಾವಶಾಲಿಗಳಾಗಿದ್ದರು. ತುಳುನಾಡನ್ನು ಆಳ್ವಿಕೆ ಮಾಡಿದ ಎಲ್ಲಾ ಸ್ಥಳೀಯ ಜೈನ ಅರಸುಮನೆತನಗಳು, ಬೀಡು ಬಲ್ಲಾಳರು ಈ 'ಜೈನ ಸೆಟ್ಟಿ' ಸಮುದಾಯಕ್ಕೆ ಸೇರಿದವರೆಂಬುದೂ ಉಲ್ಲೇಖನೀಯ.[62]

ಮಧ್ಯಕಾಲೀನ ಕನ್ನಡ ಶಾಸನಗಳು 'ಶೆಟ್ಟಿ' ಎನ್ನುವ ಬದಲಿಗೆ 'ಸೆಟ್ಟಿ' ಎಂದು ಸಂಭೋಧಿಸುತ್ತವೆ. ಕ್ರಿ.ಶ.7 ಮತ್ತು 8ನೇ ಶತಮಾನದಲ್ಲಿಯೇ ಪುಲಿಗೆರೆಯ ನಕರದ ಗುಳ್ಳಿ ಸೆಟ್ಟಿಯು ದಾನ ಪಡೆದ ನಿದರ್ಶನವು ಹಟ್ಟಿಯಂಗಡಿ ಶಾಸನದಲ್ಲಿ ಬಂದಿದೆ.[63] ವ್ಯಾಪಾರಕ್ಕಾಗಿ ತುಳುನಾಡಿಗೆ ಆಗಮಿಸಿದ ಜೈನ ಶೆಟ್ಟಿಗಳು ತುಳುನಾಡಿನ ನಗರ, ಪೇಟೆ, ಪಟ್ಟಣಗಳಲ್ಲಿ ನೆಲೆ ನಿಂತರು. ವ್ಯಾಪಾರ ಸಂಘಗಳಿಗೆ ಸೆಟ್ಟಿಕಾರರು ಎಂದು ಇಲ್ಲಿಯ ಶಾಸನಗಳು ಹೆಸರಿಸುತ್ತವೆ.[64] ಇನ್ನು ಮೂಡಬಿದಿರೆ, ವೇಣೂರು, ಕಾರ್ಕಳ, ಭಟ್ಕಳ, ಬಾರ್ಕೂರು, ಬಸ್ರೂರುಗಳಲ್ಲಿ ದೊರೆತಿರುವ ನೂರಾರು ಶಾಸನಗಳಲ್ಲಿ ಈ ಸೆಟ್ಟಿಕಾರರು ಬಸದಿ ದೇವಳಗಳ ಅಥವಾ

ಇತರ ದಾನ ಪ್ರಕ್ರಿಯೆಯಲ್ಲಿ ಪ್ರಧಾನವಾಗಿ ಕಾಣಿಸಿಕೊಂಡಿದ್ದಾರೆ. ಅವರು ಸ್ಪಷ್ಟವಾಗಿ ಜೈನರೆಂದು ತಿಳಿಯಬಹುದು.[65] ಹೀಗೆ ವ್ಯಾಪಾರವನ್ನೇ ಮುಖ್ಯವಾಗಿ ಇಟ್ಟುಕೊಂಡ ಇವರನ್ನು 'ಪೇಟೆ' ಯವರೆಂದು ಕರೆಯಲಾಗುತ್ತದೆ.[66] ಈ ಹಿನ್ನೆಲೆಯಲ್ಲಿ ಇಂದು ಕೂಡ ಜೈನರ ಕೇರಿಗಳನ್ನು ಪೇಟೆ ಎಂದು ಕರೆಯಲಾಗಿದೆ. ಅಥವಾ ಅವರಿದ್ದ ಸ್ಥಳಗಳಿಗೆ ಸೆಟ್ಟಿ ಉಪನಾಮದ ಸಂಪರ್ಕವಿದೆ. ಉದಾಹರಣೆಗೆ ಸುಳ್ಯದ ಬಲ್ನಾಡು ಪೇಟೆ, ಶೆಟ್ಟಿ ಮಜಲು, ಶೆಟ್ಟಿ ಪೇಟೆ, ಮೂಡಬಿದ್ರಿ ಸಮೀಪದ ಕೇಳಪೇಟೆ, ಜೈನರ ಪೇಟೆ ಇತ್ಯಾದಿ ಸ್ಥಳಗಳಲ್ಲಿ ಜೈನರೇ ಪ್ರಧಾನವಾಗಿದ್ದರು ಎಂಬುದಕ್ಕೆ ಕುರುಹುಗಳು ದೊರೆಯುತ್ತವೆ.[67] ಹಾಗೆಯೇ ತುಳುನಾಡಿನ ಪ್ರಾಚೀನ ನಗರಗಳಲ್ಲಿ ಸಂಖ್ಯೆಯ ದೃಷ್ಟಿಯಲ್ಲಿ ಹೆಚ್ಚಿದ್ದ ಶ್ರೇಷ್ಠಿಗಳಲ್ಲಿ ನಿರ್ದಿಷ್ಟ ಮನೆತನಕ್ಕೆ ಪಟ್ಟಣ ಶೆಟ್ಟಿ ಎಂಬ ಹುದ್ದೆ ದೊರೆಯುತ್ತಿತ್ತು. ಮೂಡಬಿದಿರಿ, ಕಾರ್ಕಳ, ನಾರಾವಿ, ವೇಣೂರು, ಪುತ್ತೂರು, ಮೊದಲಾದ ನಗರಗಳಲ್ಲಿ ಇಂದು ಜೈನ ಶ್ರೇಷ್ಠಿಗಳ ಸಂಖ್ಯೆ ಕ್ಷೀಣಿಸಿದ್ದರೂ 'ಪಟ್ಟಣ ಶೆಟ್ಟಿ' ಹುದ್ದೆಯ ಮನೆತನಗಳನ್ನು ಗಮನಿಸಬಹುದು.[68] ಅಂದಿನ ಅಧಿಕಾರ ಸೂಚಕವಾದ ಹೆಗ್ಗಡೆ, ಬಲ್ಲಾಳ, ಹೆಸರುಗಳು ಹಾಗೂ ಅಜಿಲ, ಮೂಲ, ಚೌಟ, ಸಾಮಂತ, ತೋಳಹರ, ಬಂಗ, ಬಿನ್ನಾಣಿ ಮುಂತಾದ ಅರಸರುಗಳ ಹೆಸರುಗಳೂ ರೂಢಿಯಿಂದ ಬಂದಿದ್ದರೂ ಮೂಲತಃ ಇವರೆಲ್ಲರೂ ಶ್ರೇಷ್ಠಿ ವರ್ಗಕ್ಕೆ ಸೇರಿದವರಾಗಿದ್ದಾರೆ. ಇಂದಿಗೂ ಈ ಬೀಡು ಬಲ್ಲಾಳರು, ಅರಸರು ಶ್ರೇಷ್ಠಿಪಂಗಡದವರೇ ಆಗಿದ್ದಾರೆ. ವ್ಯಕ್ತಿ ನಾಮದ ಆಧಾರದಲ್ಲಿ ಬಂಟ–ಜೈನ ಶೆಟ್ಟಿಗಳನ್ನು ಗುರುತಿಸುವ ಪ್ರಯತ್ನ ಮಾಡಿದರೂ ಅವರ ಸಮುದಾಯವನ್ನು ನಿರ್ಧರಿಸುವುದು ಸುಲಭವಲ್ಲ. ಏಕೆಂದರೆ ಹಿಂದೂ ದೇವರುಗಳಾದ ಶಂಕರ, ನಾರಾಯಣ, ಮಹಾಲಿಂಗ ಮೊದಲಾದ ಹೆಸರುಗಳು ಜೈನರಲ್ಲಿಯೂ ಇತ್ತು ಎಂಬುದಾಗಿ ಹೇಳಲು ಸಾಕಷ್ಟು ದಾಖಲೆಗಳಿವೆ.[69] ಭೂತಾರಾಧನೆಯ ಪಾಡ್ದನಗಳೂ ಜೈನರ ಶೆಟ್ಟಿ ಉಪನಾಮವನ್ನು ತಿಳಿಸುತ್ತವೆ. ಸಾರಾಲ ಜುಮಾದಿ ಪಾಡ್ದನದಲ್ಲಿ, 'ಶೆಟ್ಟಿ ಕಟ್ಪಾಯಿ ಬಸ್ತಿ ಕಡತೆ' ಎಂದೂ ಮುಡದೇರ್ ಕಾಳಭೈರವ ಪಾಡ್ದನಗಳಲ್ಲಿ 'ಶೆಟ್ಟಿಲು ಕಟ್ಟಿ ಬಸ್ತಿ ಕಡತೆರ್' ಎಂದೂ ಹೇಳಲಾಗಿದೆ. ಇಲ್ಲಿ ಬಸದಿಗಳನ್ನು ಕಟ್ಟಿಸಿದವರು ಜೈನ ಶೆಟ್ಟಿಗಳು ಎಂದು ಹೇಳಲಾಗಿದೆ.[70]

ಅದೇ ರೀತಿ ಶಾಸನಗಳಲ್ಲಿ ಬರುವ 'ಹಲರು' ನಗರಾಡಳಿತದಲ್ಲಿ ಭಾಗವಹಿಸುವವರಾಗಿದ್ದು ಅದು ಬಂಟರನ್ನು ಕುರಿತ ಉಲ್ಲೇಖ ಎಂದು ಅಭಿಪ್ರಾಯವಿದೆಯಾದರೂ,[71] ಇದನ್ನು ಪೂರ್ಣ ಪ್ರಮಾಣದಲ್ಲಿ ಒಪ್ಪಿಕೊಳ್ಳುವುದು ಕಷ್ಟಕರ. ಯಾಕೆಂದರೆ ಚದುರ ಚಂದ್ರಮನ ಗ್ರಂಥದಲ್ಲಿ ಹಲರನ್ನು ಜೈನ ಹಿನ್ನೆಲೆಯಲ್ಲಿ ವರ್ಣಿಸಲಾಗಿದೆ.

**ಬಿದುರೆಗೆ ಹೊಂದಿದ ಮೂವತ್ತೆರಡು ನಗ । ರದ ಹಲರೆಲ್ಲದಾರತಿಯ ॥**

**ಮುದದಿಂದಿದಿರ್ಗೊಂಡು ವಿನಯ ಸನ್ಮಾನದಿಂ । ದೊದಗಿಸಿ ಕೊಟ್ಟರು ಧನವ ॥**

ಅಂದರೆ, 32 ನಗರದ ಹಲರು ಕಾರ್ಕಳದ ಮಹಾಮಸ್ತಕಾಭಿಷೇಕದ ಸಂದರ್ಭದಲ್ಲಿ ಯಾವ ರೀತಿ ಸಹಕರಿಸಿದರೆಂದು ವಿವರಿಸುತ್ತಾನೆ.[72] ಕ್ರಿ.ಶ.1641ರಲ್ಲಿ ಬಸ್ರೂರಿನ 153 ಸೆಟ್ಟಿಕಾರರು ಮತ್ತು ಸಮಸ್ತ

ಹಲರು ತಮ್ಮ ಮತ್ತು ಆದಿನಾಥ ಬಸದಿಗೆ ಜಂಟಿಯಾಗಿ ಸೇರಿದ್ದ ಭೂಮಿಯನ್ನು ನೀಡಿ ಮಠಕಟ್ಟಲು ಸಹಾಯ ಮಾಡಿದ್ದರು.[73] ಇಂತಹ ಹಲವಾರು ಉದಾಹರಣೆಗಳು ಹಲರು ಜೈನರಾಗಿರಬೇಕೆಂಬುದನ್ನು ಸೂಚಿಸುತ್ತವೆ.

ಈ ಎಲ್ಲಾ ಹಿನ್ನೆಲೆಗಳನ್ನು ಗಮನಿಸುವಾಗ ತುಳುನಾಡಿನ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ದಾಖಲೆಗಳಲ್ಲಿ ಉಲ್ಲೇಖಿತವಾಗಿರುವ 'ಸೆಟ್ಟಿ' ಉಪನಾಮ ಜೈನರಿಗೇ ಹೆಚ್ಚು ಹೊಂದಿಕೆಯಾಗುತ್ತದೆ. ಯಾಕೆಂದರೆ ಮಧ್ಯಕಾಲದಲ್ಲಿ ಜೈನರ ಪ್ರಮುಖ ವೃತ್ತಿ ವ್ಯಾಪಾರವೇ ಆಗಿತ್ತು. ಅಹಿಂಸೆಯ ತಳಹದಿಯ ಜೈನ ಧರ್ಮದವರಿಗೆ ಭೂ ಒಡೆತನವಿತ್ತಾದರೂ ಕೃಷಿ ಅವರ ಪ್ರಧಾನ ಕಸುಬಾಗಿರಲು ಸಾಧ್ಯವಿರಲಿಲ್ಲ. ಅವರ ಧರ್ಮಕ್ಕೆ ಸೂಕ್ತವಾದ ವ್ಯಾಪಾರವೇ ಇವರ ಪ್ರಮುಖ ವೃತ್ತಿಯಾಗಿತ್ತು. ಶಾಸನಗಳ ಉಲ್ಲೇಖಗಳು ಈ ಸೆಟ್ಟಿಗಳನ್ನು ಜೈನ ಧರ್ಮೀಯರೆಂದು ದೃಢಪಡಿಸುವುದಲ್ಲದೆ ವ್ಯಾಪಾರ ಪ್ರಧಾನ ವೃತ್ತಿಯಾಗಿದ್ದ ಜೈನರೇ ಸೆಟ್ಟಿಗಳಲ್ಲದೆ, ಭೂ ಹಿಡುವಳಿದಾರರಾಗಿದ್ದ ಬಂಟರು ಅಥವಾ ನಾಡವರು ಪ್ರಮುಖ ವ್ಯಾಪಾರೀ ಸಮುದಾಯಗಳಲ್ಲ. ನಾಡವರಲ್ಲಿಯೂ ಬರುವ ಸೆಟ್ಟಿ ಉಪನಾಮವನ್ನು ಜೈನ ಬಂಟ ಸಂಪರ್ಕದ ಹಿನ್ನೆಲೆಯಲ್ಲಿ ಅವಲೋಕಿಸಬೇಕಾಗುತ್ತದೆ. ದಾಖಲೆಗಳಲ್ಲಿ ಉಲ್ಲೇಖಿಸಲ್ಪಟ್ಟ 'ಸೆಟ್ಟಿ'ಗಳು ಬಂಟರೆಂದು ನಿರೂಪಿಸಲು ನಮಗೆ ಬೇರಾವ ಸ್ಪಷ್ಟ ದಾಖಲೆಗಳೂ ಲಭ್ಯವಿಲ್ಲ.

ಸುಳ್ಯ ಭಾಗದಲ್ಲಿ ಬೀಡುಗಳಿಂದ ಆಳಿದ ಬಲ್ಲಾಳರು ಜೈನರೋ ಬಂಟರೋ ಎಂಬ ಚರ್ಚೆಗಳಿವೆ. ಇಂದು ಈ ಭಾಗದಲ್ಲಿ ಜೈನ ಸಂತತಿ ಕ್ಷೀಣಿಸಿದ್ದು ಜೈನರ ಕುರುಹುಗಳಿಲ್ಲ ಎನ್ನುವ ಕಾರಣಕ್ಕೆ ಕೆಲವು ವಿದ್ವಾಂಸರು ಬಲ್ಲಾಳರ ಬಂಟ ಮೂಲಕ್ಕೆ ಒಲವು ತೋರಿಸಿದ್ದಾರೆ. ಆದರೆ ಇದು ಸರಿಯಲ್ಲ. ಕೆಲವು ಶಾಸನಗಳು ಬಲ್ಲಾಳ ಮತ್ತು ಬಂಟ ಶಬ್ದಗಳನ್ನು ಪ್ರತ್ಯೇಕವಾಗಿ ಉಲ್ಲೇಖಿಸುತ್ತವೆ.[74] ಗಣಪತಿರಾವ್ ಐಗಳ್ ಅವರು 1920ರ ದಶಕದಲ್ಲಿ ತುಳುನಾಡಿನಾದ್ಯಂತ ಓಡಾಡಿ ತುಳುನಾಡಿನ ಹತ್ತು ಹಲವು ಬೀಡು ಬಲ್ಲಾಳರುಗಳ ಕುರಿತು ಮಾಹಿತಿ ಸಂಗ್ರಹಿಸಿದ್ದಾರೆ. ಸ್ಥಳೀಯ ಸಾಮಂತರಸರಿಗೆ ಸಹಾಯಕರಾಗಿದ್ದ ಆ ನೂರಾರು ಬಲ್ಲಾಳರು ಅಥವಾ ಹೆಗ್ಗಡೆಗಳು ಜೈನರಾಗಿದ್ದು ತಮ್ಮದೇ ಆದ ಅಧಿಕಾರ ವ್ಯಾಪ್ತಿಯನ್ನು ಹೊಂದಿದ್ದರು. ಅವರು ನಿರ್ಮಿಸಿದ ಪಾಳು ಬಿದ್ದ ಬಸದಿಯ ಅವಶೇಷಗಳು ಬೆಳಕಿಗೆ ಬರುತ್ತಿವೆ. ಶಾಸನಗಳಲ್ಲಿ ಈ ಸ್ಥಳೀಯ ಆಡಳಿತಗಾರರ ಹೆಸರುದೊಡ್ಡ ಮಟ್ಟದಲ್ಲಿ ಕಾಣಿಸಿಕೊಳ್ಳದಿದ್ದರೂ ಭೂತಾರಾಧನೆಗೆ ಸಂಬಂಧಿಸಿದ ಪಾಡ್ದನಗಳಲ್ಲಿ ಇವರು ಪ್ರಧಾನವಾಗಿ ಕಾಣಿಸಿಕೊಳ್ಳುತ್ತಾರೆ.[75] ಬಲ್ಲಾಳರು ನಿಸ್ಸಂತತಿಯಾಗಿ ಸ್ಥಳೀಯ ಗೌಡರಿಗೆ ಅಧಿಕಾರ ಸ್ಥಾನ ಪಲ್ಲಟವಾಯಿತೆಂದು ಹೇಳುವಲ್ಲಿ ನಿಸ್ಸಂತತಿಯಾದವರು ಜೈನರೇ ಹೊರತು ಬಂಟರಲ್ಲ. ಬಂಟರು ಇಂದಿಗೂ ಈ ಭಾಗದಲ್ಲಿ ಪ್ರಬಲ ಸಮುದಾಯವಾಗಿ ಉಳಿದಿದ್ದಾರೆ. ಹಾಗಾಗಿ ಈ ಬಲ್ಲಾಳರು ಜೈನರೇ ಆಗಿದ್ದರು. ಹಾಗಾಗಿ ಬಲ್ಲಾಳ ಪರಂಪರೆಯ ಆಡಳಿತಗಾರರು ಜೈನರೇ ಆಗಿದ್ದು ಬಂಟರು ಗುತ್ತಿನ ಪ್ರತಿನಿಧಿಗಳಾಗಿದ್ದರು. ಬಲ್ಲಾಳ ಸಂತತಿ ನಾಶವಾದಾಗ ಆ ನಂತರದ ಆಡಳಿತ ಶ್ರೇಣಿಯು

ಬಂಟರು ಕೆಲವು ಸಂದರ್ಭಗಳಲ್ಲಿ ಬಲ್ಲಾಳರ ಸ್ಥಾನವನ್ನು ತುಂಬಿರುವುದನ್ನು ನೋಡಬಹುದು. ಇನ್ನು, "ಬಂಟೆ ಸೊರ್ಕುಂಡ ಬಲ್ಲಾಳೆ, ಒಳ್ಳೆ ಸೊರ್ಕುಂಡ ಮಂಡೆಲಿ" ಅಂದರೆ ಬಂಟ ಕೊಬ್ಬಿದರೆ ಬಲ್ಲಾಳ, ನೀರುಹಾವು ಕೊಬ್ಬಿದರೆ ಮಂಡಲಿ ಹಾವಾಗುತ್ತದೆ ಎನ್ನುವ ಹೇಳಿಕೆ, ವಿವಿಧ ಹಿರಿಮೆಗಳಿಂದ ಮೆರೆಯುತ್ತಿದ್ದ ಬಂಟರು ಪ್ರಬಲರಾದಾಗ ತಮ್ಮ ತೋಳ್ಬಲ ಅಥವಾ ಬುದ್ಧಿವಂತಿಕೆಯ ಕಾರಣದಿಂದ ಜೈನ ಬೀಡುಗಳನ್ನು ವಶಪಡಿಸಿಕೊಂಡು ತಮ್ಮದಾಗಿಸಿರಬೇಕು. ಈ ಹಿನ್ನೆಲೆಯಲ್ಲಿ ಈ ನಾಣ್ಣುಡಿ ಬಂದಿರಬೇಕು. ಇನ್ನು ಉತ್ತರ ಕನ್ನಡ ಭಾಗದಲ್ಲಿ ಜೈನರ ಗಂಟು ನಾಡವರಿಗೆ ಎನ್ನುವ ಮಾತು ಪ್ರಚಲಿತದಲ್ಲಿದೆ.[76] ಅಂದರೆ ಜೈನರ ಅವಸಾನದ ನಂತರ ಈ ಒಡೆತನ ಬಂಟರಿಗೆ ಹೋಗಿರಬೇಕು. ಈ ಹಿನ್ನೆಲೆಯಲ್ಲಿ ಅಲ್ಲಿಯ ಬೀಡುಗಳಿಂದ ಆಳಿದ ಬಲ್ಲಾಳರು ಮೂಲತಃ ಜೈನರಾಗಿದ್ದರೆಂಬುದು ಸ್ಪಷ್ಟ. ಹಲವು ವಿದ್ವಾಂಸರು ಶೆಟ್ಟಿ ಕುಲನಾಮವನ್ನು ಬಂಟರಿಗೆ ಅನ್ವಯಿಸಿದ್ದಾರೆ. ಆದರೆ ಈ ಮೇಲಿನ ಅವಲೋಕನದ ಮೂಲಕ ಹೆಚ್ಚಿನ ಸಂದರ್ಭಗಳಲ್ಲಿ ಅವರು ಜೈನರಾಗಿದ್ದರು ಎಂದು ತಿಳಿದು ಬರುತ್ತದೆ. ಬಂಟರಲ್ಲಿ ಶೆಟ್ಟಿ ಕುಲನಾಮ ಇದೆಯಾದರೂ ಅವರು ವ್ಯಾಪಾರಿಗಳಾಗಿ ಕಾಣಿಸಿಕೊಳ್ಳುವ ಸನ್ನಿವೇಷಗಳು ಅನಿವಾರ್ಯವೇನಲ್ಲ. ಆದರೆ ಅಹಿಂಸಾ ಧರ್ಮ ಪಾಲನೆಯ ಜೈನರಿಗೆ ಅದು ಹಿಂದಿನಿಂದಲೂ ಅನಿವಾರ್ಯವಾಗಿತ್ತು. ಇನ್ನು ಬಸದಿ ದೇವಾಲಯಗಳಂತಹ ಶ್ರದ್ಧಾ ಕೇಂದ್ರಗಳಿಗೆ ದಾನ ನೀಡುವಾಗ ಜೈನ ಶ್ರೇಷ್ಠಿಗಳ ಪಾಲುಗೊಳ್ಳುವಿಕೆ ಸ್ಪಷ್ಟವಾಗಿ ಶಾಸನೋಕ್ತವಾಗಿ ಗೋಚರಿಸಿದರೆ, ಬಂಟ ಶ್ರೇಷ್ಠಿಗಳ ಉಪಸ್ಥಿತಿಯನ್ನು ಆ ರೀತಿ ಸ್ಪಷ್ಟವಾಗಿ ಗುರುತಿಸಲು ಸಾಧ್ಯವಾಗುವುದಿಲ್ಲ.

ಸಂಪತ್ತಿನ ದೃಷ್ಟಿಯಿಂದ ನೋಡುವುದಾದರೆ ಶ್ರೀಮಂತರಾಗಿದ್ದ ಬಂಟರು ಅಥವಾ ನಾಡವರು ರಾಜಕೀಯ ವಲಯದಲ್ಲಿಯೂ ಪ್ರಭಾವಶಾಲಿಗಳಾಗಿದ್ದರು. ಭೂ ಒಡೆಯರಾದ ಇವರು ಪ್ರಾಂತ್ಯದ ಆಡಳಿತಗಾರರಾಗಿಯೂ ಕೆಲಸಮಾಡಿದವರು. ಆರ್ಥಿಕವಾಗಿ ಬಲಿಷ್ಟರಾದರೂ ಸಾಮಾಜಿಕವಾಗಿ ಬ್ರಾಹ್ಮಣರಷ್ಟು ಎತ್ತರದ ಸ್ಥಾನವನ್ನು ಅವರು ಹೊಂದಿರಲಿಲ್ಲ. ಆದರೆ ತಮ್ಮ ದೈಹಿಕ ದೃಢತೆ, ಮತ್ತು ನಾಯಕತ್ವದ ಗುಣಗಳಿಂದ ಜೈನ ಅರಸರ ಸಹವರ್ತಿಗಳಾಗಿ, ಗುತ್ತುಗಳ ಒಡೆಯರಾಗಿ ಕೆಳದಿ ಕಾಲದಲ್ಲಿಯೂ ಇವರು ಪ್ರಮುಖ ಸ್ಥಾನ ಪಡೆದಿದ್ದರು. ಬಂಟರು ಜೈನರೊಂದಿಗೆ ಅವಿನಾಭಾವ ಸಂಬಂಧ ಹೊಂದಿದ್ದು ಸ್ಥಳೀಯ ಅರಸರ ಪಟ್ಟಾಭಿಷೇಕ ಸಂದರ್ಭದಲ್ಲಿ, ಆಡಳಿತದ ವಿವಿಧ ಹಂತಗಳಲ್ಲಿ ಮುಂಚೂಣಿಯಲ್ಲಿದ್ದು ಕಾರ್ಯ ನಿರ್ವಹಿಸುತ್ತಿದ್ದರು. ಕೆಳದಿ ಕಾಲದಲ್ಲಿ ತುಳುನಾಡಿನ ಅರಮನೆಗಳಿಂದ ಆಳಿದ ರಾಜರು, ಬೀಡಿನಿಂದ ಆಳಿದ ಬಲ್ಲಾಳರು, ಹೆಗ್ಗಡೆಯವರು, ಶಾಸನೋಕ್ತ ಶ್ರೀಮಂತ ಶೆಟ್ಟಿ ವ್ಯಾಪಾರಿಗಳು, ಜೈನ ಶೆಟ್ಟಿಗಳಾಗಿದ್ದು ಗುತ್ತುಗಳಿಂದ ಅಧಿಕಾರ ನಡೆಸಿದ ಭೂ ಮಾಲೀಕರು ಬಂಟರಾಗಿದ್ದರೆಂದು ತಿಳಿಯಬಹುದಾಗಿದೆ.

**ಬಿಲ್ಲವರು:** ತುಳುನಾಡಿನ ಇನ್ನೊಂದು ಪ್ರಮುಖ ಪಂಗಡದವರಾದ 'ಬಿಲ್ಲವರು'. ಬಿರುವ, ಬೈದ್ಯ ಪೂಜಾರಿ ಹಳೇಪೈಕ ಮೊದಲಾದ ಉಪನಾಮಗಳ ರೂಪದಲ್ಲಿ ತುಳುನಾಡಿನಲ್ಲಿ ಕಾಣಿಸಿಕೊಳ್ಳುತ್ತಾರೆ.

ತುಳುನಾಡಿನಲ್ಲಿ ಬಿಲ್ಲವರು ಹೆಚ್ಚಿನ ಸಂಖ್ಯೆಯಲ್ಲಿದ್ದರು ಮತ್ತು ಸಮಾಜದ ಚಟುವಟಿಕೆಗಳಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಆದರೆ ಶಾಸನಗಳು ಇವರ ಬಗ್ಗೆ ಹೆಚ್ಚು ಮಾಹಿತಿಯನ್ನು ನೀಡುವುದಿಲ್ಲ. ದೈವಸ್ಥಾನದ ಪೂಜಾರಿಗಳಾಗಿ, ಬೇಸಾಯಗಾರರಾಗಿ, ಭೂ ಹಿಡುವಳಿದಾರರಾಗಿ ಹಾಗೂ ಕಳ್ಳು ಕೊಯ್ಯುವವರಾಗಿ, ಅಂತೆಯೇ ಕಾರ್ಮಿಕರಾಗಿಯೂ ಬಿಲ್ಲವರು ಸಮಾಜದಲ್ಲಿ ಕೆಲಸಮಾಡಿದ್ದರು. ಭೂತಾರಾಧನೆಯಲ್ಲಿ ಈ 'ಪೂಜಾರಿಗಳ' ಪಾತ್ರ ಮಹತ್ವದ್ದು. ಆರಾಧನೆಯ ಸಂದರ್ಭದಲ್ಲಿ ದೈವವನ್ನು ಮೈಮೇಲೆ ಆಹ್ವಾನಿಸಿಕೊಳ್ಳುವ ದೈವ ಪಾತ್ರಿಯಾಗಿಯೂ ಇವರು ಕಾಣಿಸಿಕೊಳ್ಳುತ್ತಾರೆ. ಹಾಗೆಯೇ ಮಲಯಾಳಿ ಮಾತೃ ಭಾಷೆಯ ತೀಯರು ಅಥವಾ ಬಿಲ್ಲವರು ತುಳುನಾಡಿನಲ್ಲಿ ಬೆಳ್ಚಡರೆಂದು ಕರೆಯಲ್ಪಡುತ್ತಾರೆ. ಬಿಲ್ಲವರಂತೆ ದೈವದ ಪಾತ್ರಿಗಳಾಗಿರುವ ಇವರು ಸ್ಪಷ್ಟ ತುಳು ಮಾತಾಡಬಲ್ಲರು. ಈ ಕಾಲದಲ್ಲಿ ಘಟ್ಟದ ಮೇಲೆಯೂ ಈ ಸಮುದಾಯದ ಜನರಿದ್ದರು ಮತ್ತು ಇವರೊಳಗೆ ವೈವಾಹಿಕ ಸಂಬಂಧಗಳಿದ್ದವೆಂದು ತಿಳಿಯುತ್ತದೆ.[77]

ಬಿಲ್ಲವ ಎನ್ನುವ ಪದ ಸರಳವಾದ ಅರ್ಥದಲ್ಲಿ ಬಿಲ್ಲುಗಾರ ಅಥವಾ ಬೇಟೆಗಾರನ ಅರ್ಥವನ್ನು ನೀಡುತ್ತದೆ. ಇದಕ್ಕೆ 2 ಶಾಸನಾಧಾರಗಳಿವೆ. ಹೆರೂರಿನ ಶಾಸನ ಬಿಲ್ಲ ಬಿರುವ ಪದವನ್ನು ಉಲ್ಲೇಖಿಸುತ್ತದೆ. ಇದು ಬಿಲ್ಲವನ ಪ್ರಮುಖ ಕೆಲಸ ಬಿಲ್ಲಿನೊಂದಿಗೆ ಎಂದು ಸೂಚಿಸುತ್ತದೆ.[78] ಉಡುಪಿ ತಾಲೋಕಿನ ಚೊಕ್ಕಾಡಿಯ ಶಾಸನವೊಂದು ಬಿಲ್ಲವರ ಕೆಲಸ ಕಾರ್ಯಗಳನ್ನು ಉಲ್ಲೇಖಿಸುವುದರೊಂದಿಗೆ ಬಿಲ್ಲ ಗುಡ್ಡೆ ಯನ್ನು ಹೆಸರಿಸುತ್ತದೆ.[79] ಅಂತೆಯೇ ಬಾರ್ಕೂರು ಪ್ರದೇಶದಲ್ಲಿ ಬಿಲ್ಲವರನ್ನು ಉನ್ನತ ವರ್ಗದವರು ಬೇಸಾಯದಲ್ಲಿ ನಿಯೋಜಿಸುತ್ತಿದ್ದರೆಂದು ತಿಳಿಯುತ್ತದೆ. ಬಿರುವ(ಬಿಲ್ಲವ) ಎಂದರೆ ಬಿಲ್ಲಿನ ಮೂಲಕ ಬೇಟೆಯಾಡುವವ ಅಥವಾ ಯದ್ಧ ಮಾಡುವವ ಎಂದು ಅರ್ಥ. ಬೈದ್ಯ ಎಂದರೆ ವೈದ್ಯ ಅಂದರೆ ಔಷಧ, ಮದ್ದುಗಳನ್ನು ಕೊಡುವಾತ. ಪೂಜಾರಿ ಎಂದರೆ ಭೂತದ ಉತ್ಸವಗಳಲ್ಲಿ ಪೂಜಾರಿ ಅಥವಾ ಅರ್ಚಕನಾಗಿ ಕೆಲಸ ಮಾಡುವಾತ. ಪಾಡ್ದನಗಳಲ್ಲಿ ಹೆಚ್ಚಾಗಿ ಬಿರುವ ಮತ್ತು ಬೈದ್ಯ ಎನ್ನುವ ಪದಗಳು ಸಿಗುತ್ತವೆ. ಆದರೆ ಹೆಚ್ಚಾಗಿ ಪಾಡ್ದನಗಳಲ್ಲಿ ಇವರ ಕಸುಬು ತಾಳೆ ಮರಗಳಿಂದ ಕಳ್ಳು ಇಳಿಸುವುದಾಗಿದೆ. ಕಳ್ಳು ತೆಗೆಯುವ ಈ ವೃತ್ತಿ ಬಿಲ್ಲವರ ಸಾಂಪ್ರದಾಯಿಕ ಕಸುಬಿನಂತೆ ನಡೆದುಕೊಂಡು ಬಂದಿದೆ. ಆದರೂ ಇವರ ಬಿಲ್ಲು ವಿದ್ಯೆಯ ಮತ್ತು ವೈದ್ಯಕೀಯ ವಿದ್ಯೆಯ ಸ್ವರೂಪ ಪಾಡ್ದನಗಳಲ್ಲಿ ಕೆಲವೊಮ್ಮೆ ದೊರೆಯುತ್ತದೆ. ಜನಪ್ರಿಯ ಪಾಡ್ದನವಾದ 'ಕೋಟಿ ಚೆನ್ನಯ'ದಲ್ಲಿ ಬಿಲ್ಲವ ವೀರರಾದ ಕೋಟಿ ಚೆನ್ನಯರ ಮೂಲಕ ಆ ಸಮಾಜದ ಸಮಗ್ರ ಚಿತ್ರಣವನ್ನು ಕೊಡಲಾಗಿದೆ. ಪೆರ್ಮಲೆ ಬಲ್ಲಾಳನ ಕಾಲಿಗೆ ಮುಳ್ಳು ತಾಗಿದಾಗ ಅದಕ್ಕೆ ಮದ್ದು ಮಾಡಲು ಮೊದಲು ಬಿರ್ಮಣ ಬೈದ್ಯ ಬರುತ್ತಾನೆ. ಆಮೇಲೆ ಸಾಯನ ಬೈದ್ಯ ಮತ್ತು ತಂಗಿ ದೇಯಿ ಬೈದ್ಯತಿಯರಿಗೆ ಕರೆ ಹೋಗುತ್ತದೆ. ಇಲ್ಲಿ 'ಬೈದ್ಯ' ಎನ್ನುವ ಪದ ವೈದ್ಯ ಅಂದರೆ ಔಷಧ ಕೊಡುವವ. ಮದ್ದು ಕೊಡುವವ ಎನ್ನುವ ಅರ್ಥದಲ್ಲಿ ಬಂದಿದೆ. ಅದು ವೃತ್ತಿನಾಮದ ಹಾಗೆ ಕಾಣಿಸುತ್ತದೆ. ಬೈದ್ಯ ಎನ್ನುವ ಪದ ಬಿಲ್ಲವರ ಜಾತಿ ಸೂಚಕವಾಗಿಯೂ ಅನೇಕ ಪಾಡ್ದನಗಳಲ್ಲಿ ಸಿಗುತ್ತದೆ. ಇಲ್ಲಿ ತಾಳೆ

ಮರದಿಂದ ಕಳ್ಳು ಇಳಿಸುವ ಉದ್ಯೋಗದವರಾಗಿ ಬೈದ್ಯರು ಚಿತ್ರಿತರಾಗಿದ್ದಾರೆ. "ಕೊರಗ ತನಿಯ" ಪಾಡ್ದನದಲ್ಲಿ ಕಳ್ಳು ಮಾರುವ ಮರಕ್ಕೆ ಬೈದ್ಯದಿ, ಬೊಬ್ಬರ್ಯ ಪಾಡ್ದನಗಳಲ್ಲಿ ಪೊಂಗದೇರ್ ಬೈದ್ಯ, ಜುಮಾದಿ ಭೂತದ ಪಾಡ್ದನದಲ್ಲಿ ಅಡೂರ ದೇರಬೈದ್ಯ, ಕೋಟಿ ಚೆನ್ನಯ ಪಾಡ್ದನದಲ್ಲಿ ಪೈಯಬೈದ್ಯ ಮುಂತಾದವರನ್ನು ಕಾಣಬಹುದು. ಹಾಗೆಯೇ ಬುದ್ಯಂತನು ಕೋಟಿ ಚೆನ್ನಯರಲ್ಲಿ 'ಸಾಗುವಳಿ ಕೆಲಸ ನಿಮಗೆ ಬಿಲ್ಲವರ ಹುಡುಗರಿಗೆ ಯಾರು ಕೊಟ್ಟದ್ದು?' ಎಂದು ಕೇಳುತ್ತಾನೆ. ಇಲ್ಲಿ ' ಬಿರುಪೆರ್' ಎನ್ನುವ ಪದ ಜಾತಿಸೂಚಕ ಪದವಾಗಿದೆ. ಬುದ್ಯಂತನ ಮಾತಿನ ಮೂಲಕ ಬಿಲ್ಲವರಿಗೆ ಸಾಂಪ್ರದಾಯಿಕವಾಗಿ ಬೇಸಾಯ ಮಾಡುವ ಉದ್ಯೋಗ ಇಲ್ಲ ಎಂಬುದು ತಿಳಿಯುತ್ತದೆ.[80]

ಕೋಟಿ ಚೆನ್ನಯ ಪಾಡ್ದನದಲ್ಲಿ ಕೋಟಿ ಚೆನ್ನಯರನ್ನು ಅನೇಕ ಕಡೆಗಳಲ್ಲಿ ಬಂಬೆಲ್(ಬಂಟರು) ಎಂದು ಕರೆಯಾಗಿದೆ. ಬುದ್ಯಂತನ ಹೆಂಡತಿ ಕೋಟಿ ಚೆನ್ನಯರಿಗೆ ಹೇಳುವ ಮಾತು "ಬರಂದಿ ಬಂಬೆಲ್ ದಾನೆ ಬತ್ತರ್"('ಬಾರದ ಬಂಟರು ಏನು ಬಂದಿರಿ') ಹಾಗೆ ಇನ್ನೊಂದು ಕಡೆ "ಬಂಬೆರೆ ತಿಗಲೆಡ್" (ಬಂಟರ ಎದೆಯಲ್ಲಿ) ಎನ್ನುವ ಮಾತು ಬರುತ್ತದೆ. ಕೋಟಿ ಚೆನ್ನಯರ ಸಂಧಿಯನ್ನು ರೂಢಿಯಲ್ಲಿ 'ಬಂಬೆರೆ ಸಂಧಿ' ಎಂದು ಕರೆಯುತ್ತಾರೆ. ಇಲ್ಲಿ ಬಂಟರು ಎನ್ನುವ ಪದ 'ವೀರರು', 'ಸಾಹಸಿಗಳು' ಎನ್ನುವ ಅರ್ಥದಲ್ಲಿ ಪ್ರಯೋಗವಾಗಿದೆಯೇ ಹೊರತು ಬಂಟರು ಎನ್ನುವ ಜಾತಿಯ ಅರ್ಥದಲ್ಲಿ ಅಲ್ಲ. ಆ ಕಾಲದಲ್ಲಿ ಬಿಲ್ಲವರು ಸಮಾಜದ ಕೆಳಸ್ತರದಲ್ಲಿ ಗುರುತಿಸಿಕೊಂಡಿದ್ದರು. ಅದಕ್ಕೆ ಕಾರಣವೇನೆಂದು ತಿಳಿಯುವುದಿಲ್ಲ. ಇವರು ಸಾಮಾನ್ಯವಾಗಿ ಉನ್ನತ ವರ್ಗದ ಶೂದ್ರರ ಭೂಮಿಗಳಲ್ಲಿ ಕೆಲಸ ಮಾಡುತ್ತಿದ್ದರು ಅಥವಾ ಗೇಣಿದಾರರಾಗಿದ್ದರು ಎಂದು ತಿಳಿದುಬರುತ್ತದೆ.[81] ಸಮಾಜದ ಜನರ ಚಟುವಟಿಕೆಗಳನ್ನು ನಿಯಂತ್ರಿಸಲು ಗುರಿಕಾರನೆಂಬ ವ್ಯಕ್ತಿಯೊಬ್ಬನಿದ್ದು ಅವನು ಸರಕಾರದ ಮಾನ್ಯತೆಯನ್ನು ಪಡೆದಿದ್ದ. ಹಿರಿಯರ ಸಮಿತಿಯೊಂದರ ಮೂಲಕ ಸಮುದಾಯದ ಜನರಿಗೆ ಬಹಿಷ್ಕಾರ ಹಾಕುವ ಅಥವಾ ಶಿಕ್ಷೆ ವಿಧಿಸುವ ಅಧಿಕಾರವೂ ಅವನಿಗಿತ್ತು. ಬಿಲ್ಲವ ಸಮಾಜ ಈ ಕಾಲದಲ್ಲಿ ನಿರಕ್ಷರಿಗಳಾಗಿದ್ದು ಯಾವುದೇ ಧಾರ್ಮಿಕ ಕಾರ್ಯಗಳಿಗೆ ಪುರೋಹಿತರನ್ನು ನಿಯೋಜಿಸುತ್ತಿರಲಿಲ್ಲ.[82]

ಸ್ಥಳೀಯ ಜೈನ ಅರಸರ ಕೆಳಗೆ ಈ ಕಾಲದಲ್ಲಿ ಬಿಲ್ಲವರು ಸೈನಿಕರಾಗಿ ಮಾತ್ರವಲ್ಲದೆ ಸೇನಾ ನಾಯಕರಾಗಿಯೂ ಸೇವೆ ಸಲ್ಲಿಸುತ್ತಿದ್ದರು. ಬಿಲ್ಲವರಿಗೆ ನಾಯ್ಗ ಎಂಬ ಗೌರವ ಬಿರುದು ಅಥವಾ ಪಟ್ಟ ನೀಡುವ ಸಂಪ್ರದಾಯವಿತ್ತು. ಉದಾಹರಣೆಗೆ, ಮೂಲ್ಕಿ ಸೀಮೆಯ ಅರಸರು ಸಾವಿರಾರು ಜನರ ಸಮ್ಮುಖದಲ್ಲಿ ಕೊಲ್ಲೂರು ಗುಡ್ಡೆ ಸಾನದ ಮನೆಯ ಮರ್ದ ಬಿರುವನಿಗೆ 'ನಾಯ್ಗ' ಎನ್ನುವ ಬಿರುದನಿತ್ತು ಗಡಿ ಪಟ್ಟ ಪ್ರಧಾನ ಮಾಡುತ್ತಾರೆ.[83] ಉತ್ತರ ಕನ್ನಡ ಜಿಲ್ಲೆಯಲ್ಲಿ ಹಾಗೂ ಕುಂದಾಪುರದ ಸುತ್ತಮುತ್ತ ಕೆಳದಿಗೆ ಸಂಬಂಧಿಸಿದಂತೆ ಹಳೆಪೈಕನಾದ ತಿಮ್ಮಣ್ಣ ನಾಯಕನ ಉಲ್ಲೇಖವಿದೆ. ಉತ್ತರ ಕನ್ನಡದ ಲಾವಣಿ ಹಾಡುಗಳಲ್ಲಿ ಈತ ಹಳೇಪೈಕ ಸಮುದಾಯದವನೆಂದು ಹೇಳಲಾಗಿದೆ.[84] ಕೆಳದಿ ನೃಪ ವಿಜಯ ತಿಳಿಸುವಂತೆ ಇವನು

ಚೆನ್ನಮ್ಮಾಜಿಗೆ ಸಹಾಯಕನಾಗಿ ರೋಚಕವಾಗಿ ಹೋರಾಡಿ ಹಲವು ಸಾಮಂತರನ್ನು ಸೋಲಿಸಿದ್ದ ಚಿತ್ರಣವಿದೆ.[85] ಇಲ್ಲಿ ಇಬ್ಬರು ತಿಮ್ಮಣ್ಣ ನಾಯಕರ ಉಲ್ಲೇಖಗಳು ಸಿಗುತ್ತವೆ. ಒಬ್ಬ ಗೇರುಸೊಪ್ಪೆಯ ಇತಿಹಾಸದಲ್ಲಿ ದಾಖಲಾದ ಗೋವಾವನ್ನು ವಶಪಡಿಸಿಕೊಳ್ಳಲು ಪೋರ್ಚುಗೀಸರಿಗೆ ಸಹಾಯ ಮಾಡಿದ್ದ ತಿಮ್ಮೋಜ, ಇನ್ನೊಬ್ಬ ಕೆಳದಿ ರಾಣಿ ಚೆನ್ನಮ್ಮಾಜಿಯ ಕಾಲದಲ್ಲಿದ್ದ ಹಳೇಪೈಕರ ನಾಯಕ ಕಾಸರಗೋಡು ತಿಮ್ಮ. ಎರಡನೆಯವನು ಈ ಸಮುದಾಯಕ್ಕೆ ಸೇರಿದವನಾಗಿರಬಹುದಾದರೂ, ತಿಮ್ಮೋಜ, ಗೇರುಸೊಪ್ಪೆಯ ಜೈನ ರಾಣಿಯನ್ನು ವಿವಾಹವಾಗಿದ್ದ ಹಿನ್ನೆಲೆಯಲ್ಲಿ ಬಿಲ್ಲವನಾಗಿರದೆ ಜೈನನಾಗಿರಬೇಕು ಎಂಬ ಅಭಿಪ್ರಾಯಗಳೂ ಇವೆ.[86] ಇನ್ನು ಕಾಸರಗೋಡು ತಿಮ್ಮಣ್ಣ ಗಡಿನಾಡು ಕಾಸರಗೋಡಿನವನಾಗಿರದೆ, ಉತ್ತರ ಕನ್ನಡ ಜಿಲ್ಲೆಯ ಕಾಸರಗೋಡಿನವನಾಗಿದ್ದು ಕ್ರಿ.ಶ.1674ರಲ್ಲಿ ಕೆಳದಿ ರಾಣಿ ಚೆನ್ನಮ್ಮಳಿಗೆ ಬೆಂಬಲ ನೀಡಿದ್ದ.[87] ಹಿರಿಯ ವೆಂಕಟಪ್ಪನ ಕಾಲದಲ್ಲಿ ಗೇರುಸೊಪ್ಪೆಯ ರಾಣಿಯ ವಿರುದ್ಧ ಕೆಳದಿಯರಸರಿಗೆ ಸಹಾಯ ಮಾಡಿದ್ದ ಹಳೇಪೈಕ ಸಮುದಾಯದವರು ಮುಂದೆಯೂ ಸ್ಥಳೀಯ ಪಾಳೇಗಾರರ ವಿರುದ್ಧ ಕೆಳದಿಗೆ ಸಹಾಯ ಮಾಡಿದ್ದರು. ಕೆಳದಿ ನೃಪ ವಿಜಯವು "ಹಳೆಪೈಕದ ಹೆಮ್ಮೆ ವೀರಭದ್ರಣ್ಣ" ಎಂಬುವವನು ಕೆಳದಿಯ ಸೈನ್ಯದಲ್ಲಿದ್ದು ಮಾಡಿದ ಪ್ರಮುಖ ಯುದ್ಧಗಳನ್ನು ವಿವರಿಸುತ್ತದೆ.[88] ಆ ಮೂಲಕ ತುಳುನಾಡಿನ ರಾಜಕೀಯ ವ್ಯವಸ್ಥೆಯಲ್ಲಿ ಇವರು ಪ್ರಮುಖ ಸ್ಥಾನಮಾನವನ್ನು ಹೊಂದಲು ಪ್ರಯತ್ನಿಸಿದ್ದರು. ಬುಕಾನನ್ ಅಭಿಪ್ರಾಯದಂತೆ ಇವರು  ಭೂ ಕಾರ್ಮಿಕರಾಗಿ, ಗೇಣಿದಾರರಾಗಿ, ಭೂಮಿಯ ಒಡೆಯರಾಗಿಯೂ ಈ ಕಾಲಘಟ್ಟದಲ್ಲಿ ಕಾಣಿಸಿಕೊಂಡರು.[89] ಅಳಿಯ ಸಂತಾನ ಪದ್ಧತಿಯನ್ನು ಇವರು ಅನುಸರಿಸುತ್ತಿದ್ದರೆಂದು ಬುಕಾನನ ವರದಿ ಮತ್ತು ಕೋಟಿ ಚೆನ್ನಯ ಪಾಡ್ದನದ ಆಧಾರದಲ್ಲಿ ಹೇಳಬಹುದು.[90] ಉಳಿದ ತಳವರ್ಗದ ಶೂದ್ರರಾದ ಮಡಿವಾಳರು, ದೇವಾಡಿಗರು ಮುಂತಾದವರಿಗೆ ಇದ್ದ ದೇವಳ ಪ್ರವೇಶದಂತಹ ಮಾನ್ಯತೆಗಳು ಬಿಲ್ಲವರಿಗೆ ಇರಲಿಲ್ಲ ಎನ್ನುವುದು ಗಮನಾರ್ಹ ಅಂಶವಾಗಿದೆ. ಇದಕ್ಕೆ ಕಾರಣವೇನೆಂದು ತಿಳಿಯದಿದ್ದರೂ, ದೈವ ಪೂಜಾರಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದ ಇವರು ದೈವಗಳಿಗೆ ಪ್ರಾಣಿ ಬಲಿ ನೀಡುತ್ತಿದ್ದ ಕಾರಣದಿಂದಾಗಿ ಉಳಿದ ಶಾಖಾಹಾರಿ ವರ್ಗದವರು ಇವರನ್ನು ಹತ್ತಿರ ಸೇರಿಸುತ್ತಿರಲಿಲ್ಲ ಎಂಬುದಾಗಿ ಊಹಿಸಲು ಅವಕಾಶಗಳಿವೆ.

**ಮೊಗೇರರು:** ತುಳುನಾಡಿನ ಮೊಗೇರರು ಅಥವಾ ಮೊಗವೀರರು ಸಾಂಪ್ರದಾಯಿಕವಾಗಿ ಮೀನುಗಾರಿಕೆಯ ಕಸುಬನ್ನು ಮಾಡುವವರು. 'ಮರಕಲ' ಎನ್ನುವ ಪದ ಕೂಡಾ ಸಾಮಾನ್ಯವಾಗಿ ಈಗ ಮೊಗವೀರ ಎಂಬ ಅರ್ಥದಲ್ಲಿ ಪ್ರಯೋಗವಾಗುತ್ತದೆ. ಶ್ರೀಮಂತರ ಮನೆಯ ಅಥವಾ ರಾಜಪರಿವಾರದ ಪಲ್ಲಕ್ಕಿ ಹೊರುವ ಕೆಲಸಗಳಲ್ಲಿಯೂ ಇವರನ್ನು ನಿಯೋಜಿಸಲಾಗುತ್ತಿತ್ತು.[91] ಅಬ್ಬಕ್ಕನ ಸೇನೆಯಲ್ಲಿ ಇವರು ಪ್ರಧಾನ ಪಾತ್ರ ವಹಿಸಿದ್ದರೆಂದು ತಿಳಿಯುತ್ತದೆ. ಮೊಗೇರರು ಅಥವಾ ಮೀನುಗಾರರು ಬಾರ್ಕೂರು ಸಮೀಪದ ಬೆಣ್ಣೆಕುದುರುವಿನಲ್ಲಿ ತಮ್ಮ ಪ್ರಮುಖ ಧಾರ್ಮಿಕ ಕೇಂದ್ರವನ್ನು ಹೊಂದಿದ್ದಾರೆ.[92] 'ಅಳಿಯಸಂತಾನ' ಕಾನೂನನ್ನು ಅನುಸರಿಸುವ

ಇವರು ತುಳು ಮಾತಾಡುವ ಜನರಾಗಿದ್ದಾರೆ. ಭೂತಗಳನ್ನು ಆರಾಧಿಸುವ ಈ ವರ್ಗದ ಜನರ ಪ್ರಮುಖ ದೈವ 'ಬೊಬ್ಬರ್ಯ'. ಪಾಡ್ದನಗಳು ಬೊಬ್ಬರ್ಯನನ್ನು ಮಾಪಿಳ್ಳೆಗಳ ಅಥವಾ ಮುಸ್ಲಿಂರ ವರ್ಗಕ್ಕೆ ಸೇರಿದ ವ್ಯಕ್ತಿ ಸತ್ತು ಶಕ್ತಿಶಾಲಿ ಭೂತವಾದ ಎಂದು ತಿಳಿಸುತ್ತವೆ.[93] ಬೊಬ್ಬರ್ಯನಿಗಿದ್ದ ಸಮುದ್ರದ ನಂಟು ಮೊಗೇರರು ಅವನ ಪೂಜಕರಾಗಿರುವಲ್ಲಿ ಮುಖ್ಯ ಹಿನ್ನೆಲೆಯಾಗಿದೆ. ಮುಗೇರ್ಲ ಪಾಡ್ದನದ ಮಾಹಿತಿಯಂತೆ, ಕೋಟಿ ಚೆನ್ನಯರ ತಾಯಿ ದೇಯಿ ಬೈದ್ಯೆತಿ, ಮುಗೇರ ವೀರರನ್ನು ಸಾಕಿ ಬೆಳೆಸಿ ಅವರನ್ನು ಮೂಲದವರನ್ನಾಗಿ ಇರಿಸಿಕೊಂಡಳು ಎಂಬುದಾಗಿ ಹೇಳಲಾಗಿದೆ.[94]

ಬಾರ್ಕೂರಿನ ಶಾಸನವೊಂದು ಆ ಸ್ಥಳದಲ್ಲಿ ಬೆಸ್ತರ ಬೆಟ್ಟು ಎಂಬ ಪ್ರತ್ಯೇಕ ಮೀನುಗಾರರ ಕೇರಿ ಇದ್ದುದನ್ನು ತಿಳಿಸುತ್ತದೆ.[95] ಸ್ಟರಕ್ ಹೇಳುವಂತೆ ಈ ಪಂಗಡದ ಜನ ಮೀನುಗಾರಿಕೆ ಅಥವಾ ಬೇಟೆಯಾಡುವವರು. ಹಿನ್ನೀರಿನಲ್ಲಿ ಅಥವಾ ಸಮುದ್ರ ದಂಡೆಯಲ್ಲಿ ಹಾಗೆಯೇ ನದಿ ಮುಖಗಳಲ್ಲಿ ಮೀನುಗಾರಿಕೆಯನ್ನು ನಡೆಸುತ್ತಾರೆ. ಬೇಟೆಗಾರರಾಗಿ ಕಾಡು ಮೇಡುಗಳಲ್ಲಿ ಅಲೆಯುತ್ತಾರೆ. ಮತ್ತು ಇವುಗಳಿಂದಲೇ ಜೀವನ ಸಾಗಿಸುತ್ತಾರೆ.'6 ಉಚ್ಚಿಲದ ಶಾಸನ 'ಮೊಗೇರ ಗದ್ದೆ' ಅಂದರೆ ಮೊಗೇರನಿಗೆ ಸೇರಿದ ಗದ್ದೆಯನ್ನು ಉಲ್ಲೇಖಿಸುತ್ತವೆ.[97] ಹಾಗಾಗಿ ಮೊಗೇರರೂ ಈ ಕಾಲದಲ್ಲಿ ಭೂ ಒಡೆಯರಾಗಿದ್ದರೆಂದು ತಿಳಿಯುತ್ತದೆ.

ಬಸ್ರೂರಿನ ಶಾಸನ,[98] ಮೊಗೆಯರ ವೀರನಾಯಕ (ಮೊಗೆಯರ ಸಮುದಾಯಕ್ಕೆ ಸೇರಿದ ವೀರನಾಯಕ). ಎಂದು ಉಲ್ಲೇಖಿಸುತ್ತದೆ. 'ಕೋಟಿ ಚೆನ್ನಯ' ಪಾಡ್ದನದಲ್ಲಿ ಒಂದು ಕಡೆ 'ಬಿಲ್ಲು ಹಿಡಿದ ಮೊಗೇರ ಅವನು ಬರಬೇಕಾಯಿತು' ಎಂಬ ಮಾತು ಸಿಗುತ್ತದೆ.[99] ಅಂದರೆ ಇವರು ಬಿಲ್ಲನ್ನು ಹಿಡಿದು ಯುದ್ಧ ಮಾಡುವ ವೀರರೂ ಆಗಿದ್ದರು ಎಂದು ಭಾವಿಸಬಹುದು. ಇಂತಹ ವೀರರಿಗೆ "ಮೊಗವೀರ" ಎನ್ನುವ ಹೆಸರು ಸರಿಯಾಗಿ ಒಪ್ಪುತ್ತದೆ. ಪಂಜುರ್ಲಿ ಪಾಡ್ದನದಲ್ಲಿ ಬಲ್ಲಾಳರು ಮರಗಳನ್ನು ಸಾಗಿಸಲು ಮರಕಲರನ್ನು ನೇಮಿಸುತ್ತಾರೆ. ಆಗ ಮರಕಲರು ಹೇಳುವ ಮಾತು ಈ ರೀತಿ ಬರುತ್ತದೆ.[100] 'ಅಯ್ಯ ನಾವು ಒಡೆಯನಲ್ಲಿ ಸುಳ್ಳು ಹೇಳಲಿಕ್ಕೆ ಇದೆಯೇ? ನಾವು ದೇವರಿಗೆ ಮತ್ತು ಭೂಮಿಗೆ ಸರಿಯಾಗುವಂತೆ ಬದುಕುವವರು. ನಾವು ಅಂತಹ ದ್ರೋಹಿಗಳಲ್ಲ. ಅಂತಹವರಾಗಿದ್ದರೆ, ಅಂತಹ ದೊಡ್ಡ ಸಮುದ್ರದ ಮೇಲೆ ದಿನಕ್ಕೆ ಎರಡು ಬಾರಿ ದೋಣಿಯಲ್ಲಿ ಹೋಗಿ, ಅಲ್ಲಿಂದ ಮೀನುಗಳನ್ನು ತಂದು ಮನೆ ಮನೆಗೆ ತೆಗೆದುಕೂಂಡು ಓಡಾಡುತ್ತಾ ಮಾರಾಟಮಾಡಿ ಕಾಲ ಕಳೆಯುವವರು. ನಿಮ್ಮಲ್ಲಿ ಸುಳ್ಳು ಹೇಳಲಾರೆವು'. ಮೇಲಿನ ಮಾತಿನಲ್ಲಿ ಮರಕಲರ ಸಾಂಪ್ರದಾಯಿಕ ಕಸುಬಾದ ಮೀನುಗಾರಿಕೆಯ ಚಿತ್ರಣ ದೊರೆಯುತ್ತದೆ. ಅಂತಹ ಮರಕಲರನ್ನೇ ಬಲ್ಲಾಳರು ಮರಗಳನ್ನು ಕಡಿಯಲು ಬಳಸಿರುವುದನ್ನು ನೋಡಿದರೆ 'ಮರಕಲ' ಎಂಬ ಶಬ್ದಕ್ಕೂ ಮರಗಳನ್ನು ಕಡಿಯುವ ಕೆಲಸಕ್ಕೂ ಸಂಬಂಧವಿದ್ದ ಹಾಗೆ ಕಾಣಿಸುತ್ತದೆ. 'ಮರಕಲ' ಎಂದರೆ 'ಮರಗಳನ್ನು ತೆಗೆ' ಅಥವಾ 'ಮರಗಳನ್ನು ಕಡಿ' ಎಂಬುದಾಗಿ ಅರ್ಥೈಸಬಹುದು. ಕದಳಿನಲ್ಲಿ

ಮೀನು ಹಿಡಿಯುವ ಕಸುಬನ್ನು ಮಾಡುವ ಮರಕಲರು ತಮ್ಮ ದೋಣಿಗಳಿಗಾಗಿ ವಿಶಿಷ್ಟ ರೀತಿಯ ಮರಗಳನ್ನು(ಕೂವೆ) ಕಡಿದು ಉಪಯೋಗಿಸುತ್ತಾರೆ. ಈ ರೀತಿ ಅವರ ಕಸುಬು ಮೀನುಗಾರಿಕೆಯಾಗಿದ್ದರೂ ಅದಕ್ಕೆ ಸಿದ್ದತೆಗಾಗಿ ದೋಣಿಗಳ ಮರವನ್ನು ಕಡಿಯುವುದರಿಂದ 'ಮರಕಲ' ಎಂದು ಹೆಸರು ಬಂದಿರಬಹುದು. 'ಕೇತುಪಾಂಡಿ ಪಾಡ್ದನದಲ್ಲಿ ಎದ್ದೋಡಿಕೇತು ಮರಕಲನು ಹಡಗು ಕಟ್ಟಿ ವ್ಯಾಪಾರ ಮಾಡುತ್ತಾನೆ.[101] 'ಕೇತು ಮರಕಲನು ಹುಟ್ಟಿದ್ದು ಎದ್ದೋಡಿಯಲ್ಲಿ, ಬೆಳೆದದ್ದು ಉದ್ಯಾವರದಲ್ಲಿ, ತಾಯಿಕಾಡ್‌ದಿ, ತಂದೆ ಬೂದ ಮರಕಲ' ಹೀಗೆ ಮರಕಲ ಎನ್ನುವುದು ಮೊಗೇರರಿಗೆ ಇರುವ ಇನ್ನೊಂದು ಹೆಸರು ಎಂಬುದು ಸ್ಪಷ್ಟವಾಗುತ್ತದೆ.

**ಇತರ ಸಮುದಾಯಗಳು:** ತುಳುನಾಡಿನಲ್ಲಿ 'ಆಚಾರಿ' ಎಂಬ ಹೆಸರು ಮೂಲತಃ ಕಸುಬಿಗೆ ಸಂಬಂಧಪಟ್ಟದ್ದು. ಇಲ್ಲಿ ಮರದ ಕೆಲಸ ಮಾಡುವವ, ಚಿನ್ನದ ಕೆಲಸ ಮಾಡುವವ ಕಬ್ಬಿಣದ ಕೆಲಸ ಮಾಡುವವ, ಇವರೆಲ್ಲರನ್ನೂ ಸಾಮಾನ್ಯವಾಗಿ ಆಚಾರಿಗಳು ಎಂದೇ ಕರೆಯುತ್ತಾರೆ. ವಿಶ್ವಕರ್ಮರು, ಕಲ್ಲುಕುಟಿಗರು, ಶಿಲ್ಪಿಗಳು ಈ ಕಾಲದಲ್ಲಿ ಬಹಳಷ್ಟು ಬೇಡಿಕೆಯವರಾಗಿದ್ದರು. ಮೂಡುಕೇರಿಯ ಶಾಸನವೊಂದು ಹೇಳುವಂತೆ ವಾರ್ಷಿಕವಾಗಿ ಭತ್ತವನ್ನು ದೇವಳದ ಕೆತ್ತನೆ ಕೆಲಸಗಳಿಗಾಗಿ ವಿಶ್ವ ಕರ್ಮರಿಗೆ ನೀಡಲಾಗಿತ್ತು.[102] ಶಾಸನವೊಂದು,[103] 'ಬಡಗಿಯ ಬಯಲು' ಎನ್ನುವ ಪದವನ್ನು ಉಲ್ಲೇಖಿಸುತ್ತದೆ. ಇದು ಬಡಗಿಗಳು ಅಥವಾ ಆಚಾರಿಗಳು ಭತ್ತದ ಗದ್ದೆಯನ್ನು ಹೊಂದಿದ್ದರೆಂಬುದನ್ನು ತಿಳಿಸುತ್ತದೆ. ಶಾಸನಗಳಲ್ಲಿ ಕಲ್ಲುಕುಟಿಗರ ಅಥವಾ ಶಿಲ್ಪಿಗಳ ಉಲ್ಲೇಖ ಅಷ್ಟಾಗಿ ದೊರೆಯದಿದ್ದರೂ ನಾಡಿನ ಸಾಮಾಜಿಕ ಧಾರ್ಮಿಕ ಜೀವನದಲ್ಲಿ ಅವರ ಪ್ರಾಮುಖ್ಯತೆ ಗಣನೀಯವಾಗಿದೆ. ತುಳುನಾಡಿನಾದ್ಯಂತ ಕಂಡುಬರುವ ಸುಂದರವಾದ ಶಿಲ್ಪಗಳು, ಕಲ್ಲಿನ ಶಾಸನಗಳು ಮತ್ತು ದೇವಾಲಯಗಳು ಸಮಾಜದಲ್ಲಿ ಅವರ ಕೊಡುಗೆಯಾಗಿದೆ. ಇನ್ನಿತರ ಕೆಲಸಗಳನ್ನು ಮಾಡುವುದರ ಜೊತೆಯಲ್ಲಿ ಶಾಸನಗಳನ್ನು ರಚಿಸುವ ಕೆಲಸವೂ ಇವರದ್ದಾಗಿರಬೇಕು. ಕಲ್ಲು ಕುಟಿಗ ಕಣ್ಣಪ್ಪನ ಹೆಸರು ಬಾರ್ಕೂರು ಪಂಚಲಿಂಗೇಶ್ವರ ದೇವಳದ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿದೆ.[104]

'ಕೋಟಿ ಚೆನ್ನಯ' ಪಾಡ್ದನದಲ್ಲಿ ನೇಗಿಲಿನ ಕೆಲಸ ಮಾಡುವ ಆಚಾರಿಯ ಬಗ್ಗೆ ವಿವರ ಇದೆ. 'ಪಂಜುರ್ಲಿ'ಯ ಒಂದು ಪಾಡ್ದನದಲ್ಲಿ ಆಚಾರಿ' ಎಂದರೆ ಮರ ಕಡಿಯುವವನು ಎಂದಿದೆ. ಬೊಬ್ಬರ್ಯ' ಪಾಡ್ದನದಲ್ಲಿ ಆಚಾರಿಯು, ಮರದಿಂದ ಹಡಗು ಮಾಡುತ್ತಾನೆ. ಅಲ್ಲಿ 'ಮಲೆನಾಡೇಚ್ಚವ' ಎನ್ನುವ ಪದ ದೊರೆಯುತ್ತದೆ. 'ಕಲ್ಲುರ್ಟಿ' ಪಾಡ್ದನದಲ್ಲಿ ಕೂಡ ಇದೇ ಶಬ್ದ ಉಲ್ಲೇಖವಾಗಿದೆ. ಅಲ್ಲಿ ಆಚಾರಿಗಳ ಬೇರೆ ಬೇರೆ ವೃತ್ತಿಗಳನ್ನು ಆಧರಿಸಿ ಅವರಿಗೆ ಬೇರೆ ಬೇರೆ ಹೆಸರುಗಳು ಇರುವುದನ್ನು ನೋಡಬಹುದು. 'ಮರದ ಕೆಲಸ ಮಾಡಿದವನು ಮಲೆನಾಡೇಚ್ಚವ, ಕಬ್ಬಿಣದ ಕೆಲಸ ಮಾಡುವವನು ನುಡ್ತಲಚ್ಚವ, ಚೆಂಬಿನ ಕೆಲಸ (ತಾಮ್ರ) ಮಾಡುವವನು ಚೆಮ್ಮಟಿಗಾರ, ಬಂಗಾರದ ಕೆಲಸ ಮಾಡುವವನು ಯಾರಣ್ಣ, ಕಲ್ಲಿನ ಕೆಲಸ ಮಾಡುವವನು ಕಲ್ಕುಡ.[99] 'ಮಲೆನಾಡ ಎಚ್ಚವ' ಎನ್ನುವ ಪದ ಮಲೆನಾಡ ಆಚಾರಿ ಎನ್ನುವುದರಿಂದ

ಬಂದಿರಬಹುದು. 'ಕಂಜಿರ್ಲು' ಪಾಡ್ದನದಲ್ಲಿ ಬೆರ್ಮೆ ಆಚಾರಿ, ಇಸಕರ್ಮಿ ಆಚಾರಿ ಎನ್ನುವ ಮಾತು ಸಿಗುತ್ತದೆ. ಇಲ್ಲಿ 'ಆಚಾರಿ ಪದಪ್ರಯೋಗ ಆಗಿದೆ. 'ಇಸಕರ್ಮಿ' ಎನ್ನುವ ಪದ 'ವಿಶ್ವಕರ್ಮ' ಎನ್ನುವ ಪದದ ರೂಪಾಂತರ. ಆಚಾರಿ ಕೆಲಸದವನಿಗೆ ವಿಶ್ವಕರ್ಮನು ಕುಲದೇವತೆ. ಮರದ, ಕಲ್ಲಿನ ಚಿನ್ನದ, ಕಬ್ಬಿಣದ–ಮುಂತಾದ ಎಲ್ಲ ವೃತ್ತಿಯವರು ಆಚಾರಿ ವರ್ಗದ ಬೇರೆ ಬೇರೆ ಶಾಖೆಗಳಾಗುತ್ತಾರೆ.[105] ಲಿನ್ಸ್ಕೋತನ್ ಮಂಗಳೂರಿನ ಚಿನ್ನ ಬೆಳ್ಳಿ ಕೆಲಸಗಾರರು ಹೆಸರಾದವರು, ಅಲ್ಲದೆ ಇತರ ಕುಶಲ ಕಲೆಗಳಲ್ಲಿಯೂ ನುರಿತವರು ಎಂದು ಹೇಳುತ್ತಾನೆ.[106] ಕಲ್ಲಿನ ಕೆಲಸ ಮಾಡುವ ಕಲ್ಕುಡನೇ ಪ್ರಧಾನಪಾತ್ರವಾಗಿರುವ ಕಲ್ಕುಡ–ಕಲ್ಲುರ್ಟಿ ಪಾಡ್ದನವು ಮಹತ್ವಪೂರ್ಣವಾಗಿದೆ. ಕಾರ್ಕಳದ ಗೊಮ್ಮಟನನ್ನು ಕೆತ್ತಿದ ಕಲ್ಕುಡ ಕತೆಯ ಚಾರಿತ್ರಿಕತೆಯ ಕುರಿತಾಗಿ ಭಿನ್ನಾಭಿಪ್ರಾಯಗಳಿವೆ. ಭೈರರಸ ಶಿಲ್ಪಿಯ ಕೈಗೆ ಕಡಗ ತೊಡಿಸಿದನೆಂದು ಕವಿ ಚದುರಚಂದ್ರಮ ವಿವರಿಸಿದರೆ,[107] ಶಿಲ್ಪಿಯ ಕೈ ಕಡಿಯಲಾಯಿತು ಎಂಬುದಾಗಿ ಪಾಡ್ದನಗಳು ನಿರೂಪಿಸುತ್ತವೆ. ಈ ಎರಡು ಅಭಿಪ್ರಾಯವನ್ನು ಗಣನೆಗೆ ತೆಗೆದುಕೊಂಡರೆ ತಿಳಿದು ಬರುವುದೇನೆಂದರೆ, ವಿಶೇಷ ನೈಪುಣ್ಯತೆಯನ್ನು ಹೊಂದಿದ್ದ ಜನರನ್ನು, ಅವರು ತಳವರ್ಗದವರಾಗಿದ್ದರೂ ಗೌರವಿಸುವ ಪರಿಪಾಠವಿತ್ತು. ಪಡುಮಲೆಯ ಬಲ್ಲಾಳನಿಗೆ ಔಷಧಿ ನೀಡಲು ಬಂದ ದೇಯಿ ಬೈದೆತಿ ತಳ ಸಮುದಾಯದವಳಾದರೂ ಅವಳನ್ನು ಮೇನೆಯಲ್ಲಿ  ಕರೆತರುವ ಔದಾರ್ಯವನ್ನು ಪ್ರದರ್ಶಿಸಿದುದೂ ಇದಕ್ಕೆ ಉತ್ತಮ ಉದಾಹರಣೆಯಾಗಿದೆ. ಆದರೆ ಪಾಡ್ದನದ ಉಲ್ಲೇಖಗಳು  ತಳ ಸಮುದಾಯದ ವಿರುದ್ಧ ಬಲಾಢ್ಯರು ನಡೆಸುತಿದ್ದ ದೌರ್ಜನ್ಯದ ವಿವರಣೆಗಳಾಗಿವೆ. ತುಳುನಾಡಿನ ಸಮಾಜದಲ್ಲಿ ಇದ್ದಿರಬಹುದಾದ ಈ ಎರಡೂ ವೈರುಧ್ಯಗಳನ್ನು ಚಂದ್ರಮನ ಕಾವ್ಯ ಮತ್ತು ಕಲ್ಲುರ್ಟಿ ಪಾಡ್ದನಗಳ ಮೂಲಕ ಹೇಳಲಾಗಿದೆ.

ತುಳುನಾಡಿನಲ್ಲಿ ಈ ಕಾಲದಲ್ಲಿ ನಿರ್ಮಾಣವಾದ ವೀರಶೈವ ಮಠಗಳು, ದೇವಾಲಯಗಳು, ಬಸದಿಗಳು, ಚರ್ಚುಗಳು, ಇವೆಲ್ಲವೂ ಈ ವರ್ಗದ ಸಾಧನೆಯಾಗಿದೆ. ಆದರೆ ಅವರ ಕುರಿತಾಗಿ ಲಿಖಿತ ದಾಖಲೆಗಳು ಹೆಚ್ಚಿನ ಮಾಹಿತಿ ನೀಡುವುದಿಲ್ಲ. ಈ ಕಾಲದ ಕಲೆ ವಾಸ್ತುಶಿಲ್ಪದ ಕೊಡುಗೆಗಳಲ್ಲಿ ಪ್ರಧಾನ ಪಾತ್ರ ವಹಿಸಿದ್ದ ಈ ಸಮುದಾಯದ ಕುರಿತು ಶಾಸನಗಳು ಮೌನವಹಿಸಿದರೂ, ಮೌಖಿಕ ಆಕರಗಳು ಪೂರಕ ದಾಖಲೆಗಳಾಗಿ ಸಹಾಯಕವಾಗಿವೆ. ಕಾರ್ಕಳದ ಚತುರ್ಮುಖ ಬಸದಿ, ವೇಣೂರಿನ ಗೊಮ್ಮಟ ಪ್ರತಿಮೆ, ಗುರುಪುರ ಮತ್ತು ಉಡುಪಿಯ ವೀರಶೈವ ಮಠದ ಮರದ ಕೆತ್ತನೆ ಕೆಲಸ ಮುಂತಾದವು ಈ ಸಮುದಾಯದ ಕಾರ್ಯಕ್ಷಮತೆಯ ಕುರುಹುಗಳಾಗಿವೆ.

ಈ ಪ್ರದೇಶದಲ್ಲಿ ನೆಲೆಗೊಂಡ ಸಮುದಾಯಗಳಲ್ಲಿ ನಾಯರ್ ಸಮುದಾಯವೂ ಒಂದು.  ತುಳುನಾಡಿನ ಹಲವು ಶಾಸನಗಳು 'ನಾಯರ್‌ಮೂಲ' ವನ್ನು ಹೆಸರಿಸುತ್ತವೆ.[108] ನಾಯರ್‌ಮೂಲ ನಾಯರ್ ಸಮುದಾಯದ ಮೂಲದಿಂದ ಬಂದಿದೆಯೋ ಅಥವಾ ನೇಗಿಲು(ತುಳುವಿನಲ್ಲಿ ನಾಯರ್) ಮೂಲದಿಂದ ಬಂದಿದೆಯೋ ಎನ್ನುವ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿವೆ. ಆದರೆ ನಾಯರ್ ಮೂಲ ಭೂಮಿಯನ್ನು ನಾಯರ್

ಸಮುದಾಯದ ಹಿನ್ನೆಲೆಯಲ್ಲಿ ಗುರುತಿಸದೆ ಉಳುಮೆ ಮಾಡುವ ನೇಗಿಲಿನ ಹಿನ್ನೆಲೆಯಲ್ಲಿ ಗುರುತಿಸುವುದೇ ಹೆಚ್ಚು ಸಮಂಜಸ ಎನ್ನಬಹುದು. ಬಾರ್ಕೂರಿನ ಹರೆಹಳ್ಳಿಯಲ್ಲಿ ಇಂದಿಗೂ ನಾಯರ್‌ಬೆಟ್ಟು ಎಂಬ ಸ್ಥಳವಿದೆ. ಸುಳ್ಯ ತಾಲೂಕಿನಾದ್ಯಂತ ಆರಾಧಿಸಲ್ಪಡುವ ಉಳ್ಳಾಕುಲು ದೈವಗಳ ಪ್ರಧಾನಿಯ ರೂಪದಲ್ಲಿ ಮಿತ್ತೂರು ನಾಯರ್ ಎನ್ನುವ ಮಲಯಾಳಿ ದೈವ ಆರಾಧಿಸಲ್ಪಡುತ್ತಿದ್ದು ಇದು ಮೂಲದಲ್ಲಿ ಸ್ಪಷ್ಟವಾಗಿ ಕೇರಳದ ನಾಯರ್ ಸಮುದಾಯಕ್ಕೆ ಸೇರಿದ ವ್ಯಕ್ತಿ ದೈವವಾದ ಸಂಕಥನವಾಗಿದೆ. ಆದರೆ ಉಡುಪಿ, ಬಾರ್ಕೂರು, ಬ್ರಹ್ಮಾವರ, ಉಪ್ಪುಂದ ಮತ್ತು ಭಟ್ಕಳ ಪ್ರದೇಶದ ನಾಯರಿ ಸಮುದಾಯಕ್ಕೂ ಕೇರಳ ಮೂಲದ ನಾಯರ್ ಸಮುದಾಯಕ್ಕೂ ವ್ಯತ್ಯಾಸವಿದೆ. ಭಾಷೆ ಅಥವಾ ಸಾಮಾಜಿಕ ಆಚರಣೆಗಳಲ್ಲಿಯೂ ಸಾಮ್ಯತೆ ಇಲ್ಲ.

ಮಡಿಕೆ ಮಾಡುವ ವೃತ್ತಿಯವರಾದ ಕುಂಬಾರರು ಪಾಡ್ದನದ ಕಾಲದಲ್ಲಿ ಕಾಣಸಿಗುತ್ತಾರೆ. 'ಕೋಟಿ ಚೆನ್ನಯ' ಪಾಡ್ದನದಲ್ಲಿ, ಯುದ್ಧದ ಪ್ರಸಂಗದಲ್ಲಿ 'ಓಡಾರಿ'(ಕುಂಬಾರ) ಒಬ್ಬನು ಕೋಟಿಯ ಕೈಯಿಂದ ಖಡ್ಗವನ್ನು ಕೊಂಡು ಹೋಗುತ್ತಾನೆ. ಶಾಸನದಲ್ಲಿ ಬರುವ ' ಕುಂಬಾರಡಿ' ಪದ ಮೂಡುಕೇರಿ ದೇವಾಲಯದ ಬಳಿ ಕುಂಬಾರರು ವಾಸಿಸುತ್ತಿದ್ದ ಸ್ಥಳದ ಉಲ್ಲೇಖವಾಗಿದೆ.[109] ಹಟ್ಟಿಯಂಗಡಿ ಶಾಸನ ಕುಂಬಾರ ಗದ್ದೆಯನ್ನು ಹೆಸರಿಸಿರುವುದು ಅವರೂ ಭೂ ಒಡೆಯರಾಗಿದ್ದರು ಎನ್ನುವುದನ್ನು ಸೂಚಿಸುತ್ತದೆ.[110]

ತುಳುನಾಡಿನ ಇನ್ನೊಂದು ಸಮುದಾಯವಾದ ಮಡಿವಾಳರು ಅಥವಾ ಅಗಸರು ಮಡಿವಾಳ ಬೆಟ್ಟು ಎನ್ನುವ ಪ್ರತ್ಯೇಕ ಕೇರಿಯನ್ನು ಹೊಂದಿದ್ದರು ಎಂಬ ಮಾಹಿತಿ ದೊರೆಯುತ್ತದೆ.[111] 'ಕೋಟಿ ಚೆನ್ನಯ' ಪಾಡ್ದನದಲ್ಲಿನ ಕೋಟಿ ಚೆನ್ನಯರು ಒಬ್ಬ ಮಡಿವಾಳನನ್ನು ಭೇಟಿಯಾಗುತ್ತಾರೆ. 'ಅಮಸರಂದ ಮೆನ್ನೋಡಿ' ಪಾಡ್ದನದಲ್ಲಿ, 'ಮುದುಕ ಮಡಿವಾಳನು ಮುದಿ ಎತ್ತಿನ ಮೇಲೆ ಮಡಿ ಮಾಡಿದ ಬಟ್ಟೆಯನ್ನು ಹೊರಿಸಿಕೊಂಡು ಹೋಗುವಾಗ ಸತ್ತ ಹುಲಿ ದಾರಿಯಲ್ಲಿ ಬಿದ್ದಿದೆ. ಮಡಿ ಬಟ್ಟೆಯನ್ನು ತೆಗೆದನು, ದಾರಿಗೆ ಎಸೆದನು' ಎನ್ನುವ ಮಾತು ಬರುತ್ತದೆ. ಇದರಲ್ಲಿ ತುಳುನಾಡಿನ ಮಡಿವಾಳರ ಮಡಿ ಮಾಡುವ ವೃತ್ತಿಯ ಸ್ವರೂಪವನ್ನು ಕಾಣಬಹುದು. 'ಅಣ್ಣೋಳ್ಳ ಕೋವರಿಲ-ಬೊಳ್ಯೊಲ್ಲ ಕಿನ್ಯಗೆಲ' ಪಾಡ್ದನದಲ್ಲಿ ಬರುವ ಮಡಿವಾಳಗಿತ್ತಿ ಅಬ್ಬಗ ಎಂಬುವವಳು ಬಟ್ಟೆಗಳನ್ನು ಮಡಿ ಮಾಡುತ್ತಾಳೆ. ಅವಳು ಹೆಂಗಸರ ಹೆರಿಗೆಗೆ ಸಂಬಂಧಿಸಿದ ಆಚರಣೆಗಳಲ್ಲಿ ಪ್ರಧಾನ ಪಾತ್ರವಹಿಸುತ್ತಾಳೆ. ಇವುಗಳಲ್ಲಿ ಮಡಿವಾಳರ ವೃತ್ತಿಯ ಕುರಿತಾದ ಮಾಹಿತಿಗಳು ದೊರೆಯುತ್ತವೆ.[112]

ಸಾರಾಲ ಜುಮಾದಿ ಪಾಡ್ದನದಲ್ಲಿ,"ಕಂಚಿಕಾರರ ಕೇರಿಯನ್ನು ದಾಟಿದನು, ಸಮಗಾರರ ಬೀದಿಯನ್ನು ದಾಟಿದನು" ಎಂಬ ಉಲ್ಲೇಖಗಳಿವೆ. ಇಲ್ಲಿ 'ಕಂಚಿಕಾರ ಮತ್ತು ಸಮಗಾರ' ಎನ್ನುವ ಇಬ್ಬರು ವೃತ್ತಿಕಾರರ ವಿಚಾರ ಬಂದಿದೆ.[113] ಕಂಚಿನ ಲೋಹದ ಕೆಲಸ ಮಾಡುವವರು 'ಕಂಚಿಗಾರರು' ಈ ವೃತ್ತಿಯವರಿಗೆ ಪ್ರತ್ಯೇಕವಾದ ಕೇರಿಗಳು ಇದ್ದವು. ಚರ್ಮದ ಕೆಲಸ ಮಾಡುವವರು 'ಸಮಗಾರರು' ಈ ವೃತ್ತಿಯವರಿಗೆ

ಪ್ರತ್ಯೇಕವಾದ ಬೀದಿಗಳು ಇದ್ದವು. 'ಮುಡದೆಲ್ ಕಾಳಭೈರವೆ' ಎಂಬ ಪಾಡ್ದನದಲ್ಲಿ ಕೂಡ "ಕಂಚಿಗಾರರ ಕೇರಿಯನ್ನು ದಾಟಿದರು. ಪಾದರಕ್ಷೆಗಳನ್ನು ಕಟ್ಟುವ ಸಮಗಾರರ ಕೇರಿಯನ್ನು ದಾಟಿದರು" ಎಂದು ಹೇಳಲಾಗಿದೆ.[114] ಇಲ್ಲಿ ಸಮಗಾರರು ಪಾದರಕ್ಷೆಗಳನ್ನು ತಯಾರಿಸುವವರಾಗಿದ್ದರು ಎಂದು ತಿಳಿಯಬಹುದು.

'ಬಾಲೆ ಕಿನ್ಯಾಮು' ಪಾಡ್ದನದಲ್ಲಿ ದಂಡಿಗೆ ಹೊರಡುವ 'ಬೋವಿ'ಗಳ ಹೆಸರು ದೊರೆಯುತ್ತದೆ. 'ತೋಡಕುಕ್ಕಿನಾರ್' ಪಾಡ್ದನದಲ್ಲಿ 'ಗಾಣದಾಕಳು' ಅಂದರೆ, ಗಾಣದವರು ಕಾಣಿಸಿಕೊಳ್ಳುತ್ತಾರೆ.[115] ಈ ಕಾಲದ ಗಾಣಿಗರ ಅಂದರೆ ಎಣ್ಣೆ ತೆಗೆಯುವ ವೃತ್ತಿಯವರು ಇಲ್ಲಿ ಸಿಗುತ್ತಾರೆ. ಗಾಣಿಗರೂ ಸಮಾಜದಲ್ಲಿ ತಮ್ಮದೇ ಆದ ಕರ್ತವ್ಯವನ್ನು ಹೊಂದಿದ್ದರು. ದೈನಂದಿನ ಚಟುವಟಿಕೆಗಳಲ್ಲಿ ಎಣ್ಣೆ ಪೂರೈಸುವ ಕೆಲಸವನ್ನು ಇವರು ನಿರ್ವಹಿಸುತ್ತಿದ್ದರು. ಗಾಣದ ಮೂಲಕ ತೆಂಗಿನ ಕಾಯಿಯ ಎಣ್ಣೆಯನ್ನು ತೆಗೆಯುತ್ತಿದ್ದುದರಿಂದ ಅವರಿಗೆ ಗಾಣಿಗ ಎನ್ನುವ ಹೆಸರು ಬಂದಿರಬೇಕು. ಮೂಡುಕೇರಿ ಸೋಮೇಶ್ವರ ದೇವಳದ ಶಾಸನವೊಂದು ಈ ಸಮುದಾಯವನ್ನು ಹೆಸರಿಸುತ್ತದೆ.[116] 'ಕೋಟಿ ಚೆನ್ನಯ' ಪಾಡ್ದನದಲ್ಲಿ 'ಗೋವಳ'ರ ಉಲ್ಲೇಖವಿದೆ– "ಗೋವುಗಳನ್ನು ಮೇಯಿಸುವ ಗೋವಳರು ಇದ್ದಾರೆ". ಆ ಗೋವಳರು ಕೋಟಿ ಚೆನ್ನಯರೊಂದಿಗೆ ಒಗಟಿಗೆ ಉತ್ತರ ಹೇಳುವ ಜಾಣರಾಗಿ ಕಾಣಿಸುತ್ತಾರೆ.[117] ಇನ್ನೂ ಅನೇಕ ಸಮುದಾಯಗಳು ಈ ಕಾಲದಲ್ಲಿದ್ದರೂ ಅವುಗಳ ಬಗ್ಗೆ ಲಿಖಿತ ದಾಖಲೆಗಳು ಲಭ್ಯವಿಲ್ಲ. ಆದರೆ ಸಮುದಾಯಗಳ ದೈನಂದಿನ ಚಟುವಟಿಕೆಗಳ ಆಧಾರದಲ್ಲಿ ಇವರ ಇರುವಿಕೆಯನ್ನು ಗುರುತಿಸಬಹುದು. ದೇವಾಲಯಗಳಲ್ಲಿ ಕೆಲಸ ಮಾಡಲು ಕೆಲವೊಂದು ನಿರ್ದಿಷ್ಟ ಸಮುದಾಯಗಳಿದ್ದುದು ತಿಳಿದು ಬರುತ್ತದೆ. ದೇವದಾಸಿಯರು ದೇವಳದಲ್ಲಿ ನೃತ್ಯಗಾರ್ತಿಯರಾಗಿ ನಿಯೋಜಿಸಲ್ಪಟ್ಟಿದ್ದರೆಂದು ಉಲ್ಲೇಖಗಳು ಸಿಗುತ್ತವೆ. ಮಹಿಳೆಯರು ದೇವರಿಗೆ ಚಾಮರ ಬೀಸುವವರಾಗಿಯೂ ಕೆಲಸ ಮಾಡುತ್ತಿದ್ದರೆಂದು ತಿಳಿದುಬರುತ್ತದೆ.[118] ವಾಲಗವನ್ನು ಊದುವವರು ಸಪಲಿಗರು ಅಥವಾ ಸೇರೆಗಾರರು ಅಥವಾ ದೇವಾಡಿಗರೆಂಬ ಸಮುದಾಯದವರು ಆಗಿದ್ದರು.

**ತಳ ಸಮುದಾಯಗಳು:** ಸಮಾಜದಲ್ಲಿ ತಳ ಸಮುದಾಯಗಳು ಕಡೆಗಣಿಸಲ್ಪಟ್ಟ ಕಾರಣಕ್ಕಾಗಿ, ಲಿಖಿತ ದಾಖಲೆಗಳು ಅವರ ಕುರಿತಾಗಿ ಹೆಚ್ಚಿನ ಮಾಹಿತಿ ನೀಡುವುದಿಲ್ಲ. ಆದರೆ ತಳ ಸಮುದಾಯದ ಬೇರೆ ಬೇರೆ ಪಂಗಡಗಳ ವಿವರಣೆಗಳು ಪಾಡ್ದನಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ಸಿಗುತ್ತವೆ. ಕೊರಗರು, ಪಂಬದರು, ಬಾಕುಡರು, ಮುಂತಾದ ಅನೇಕ ಸಮುದಾಯಗಳ ವಿಚಾರಗಳು ಪಾಡ್ದನಗಳಲ್ಲಿ ಇವೆ. 'ಕೊರಗ ತನಿಯ' ಪಾಡ್ದನದಲ್ಲಿ ಹೊಲೆಯರ ಒಂದು ವರ್ಗವಾದ ಕೊರಗ ಜಾತಿಯ ಹುಡುಗ 'ತನಿಯ' ಎನ್ನುವವನ ವೃತ್ತಾಂತ ಇದೆ. ಅದೇ ಪಾಡ್ದನದಲ್ಲಿ 'ಕೊಪ್ಪಂದ ಕೊರಗ" ಅಂದರೆ 'ಕೊಪ್ಪದ ಕೊರಗರು' ಎಂಬ ಮಾತು ಬರುತ್ತದೆ. ಕೊರಗರ ವಾಸಸ್ಥಾನವನ್ನು ಈಗಲೂ 'ಕೊಪ್ಪ' ಎಂದು ಕರೆಯುತ್ತಾರೆ. 'ಕೊರಗ ತನಿಯ' ಪಾಡ್ದನಲ್ಲಿ ಕೊರಗರ ಜಾತಿಯ ಕೆಲಸದ ಸ್ವರೂಪ ಗೊತ್ತಾಗುತ್ತದೆ.[119] "ಯಾರಮ್ಮ ತಾಯೇ, ನನಗೊಂದು 'ಪೀಂಪಿಲಿ' ಕತ್ತಿಕೊಡಿ, ನನ್ನ ಕುಲಜನ್ಮದ  ಕೆಲಸವನ್ನು ಮಾಡುತ್ತೇನೆ. ತಾಯಿ ಹೇಳಿದ

ಹರಕೆ ಕದ್ರಿಯ ದೇವಸ್ಥಾನಕ್ಕೆ ಸಾವಿರ 'ಕೈ ಕುಡ್ಪು' ಇದೆ. ಅದನ್ನು ನನಗೆ ತೀರಿಸಬೇಕು ಎಂದು ಹೇಳುತ್ತಾನೆ. ಒಂದು ಕತ್ತಿಯನ್ನು ಮಾಡಿಸಿ ಚೆನ್ನಯ ಬೈದ್ಯ ಕೊಡುತ್ತಾನೆ. ಬೀಳಲುಗಳ ರಾಶಿಯನ್ನು ಕಡಿಯುತ್ತಾನೆ. ಬೀಳಲುಗಳಿಂದ ಸಾವಿರ ಕೈ ಕುಡುಪು ಮಾಡುತ್ತಾನೆ." ಈ ಮಾತಿನಲ್ಲಿ ಕೊರಗರ ಕೈ ಕಸುಬಿನ ಒಂದು ವೃತ್ತಿಯ ಪರಿಚವಾಗುತ್ತದೆ. ಕೊರಗರು ಕಾಡಿನಲ್ಲಿರುವ ಬೀಳಲುಗಳನ್ನು ಕತ್ತರಿಸಿ ಅದರಿಂದ ಕೈ ಕುಡುಪಿನಂತಹ ಹೆಣಿಗೆಯ ವಸ್ತುಗಳನ್ನು, ಬುಟ್ಟಿಗಳನ್ನು ತಯಾರಿಸುತ್ತಾರೆ. ಇದಕ್ಕಾಗಿ ಅವರು ಬಳಸುವ ಕತ್ತಿಯು ತೆಳ್ಳಗಾಗಿ ಡೊಂಕಾಗಿ ಇರುತ್ತದೆ. ಇದನ್ನು 'ಪೀಂಪಿಲಿ ಕತ್ತಿ' ಎನ್ನುತ್ತಾರೆ.

ಮೂಲದ ಮಾನ್ಯರು ಎಂಬುದಾಗಿ ತಳ ಸಮುದಾಯದ ಒಂದು ವರ್ಗವನ್ನು ಈ ಕಾಲದಲ್ಲಿ ಕರೆಯಲಾಗುತ್ತಿತ್ತು. 'ಕೋಟಿ ಚೆನ್ನಯ' ಪಾಡ್ದನದಲ್ಲಿ ಬರುವ "ನಿಮ್ಮ ದಿಂಡು ಹಚ್ಚಡವನ್ನು ಕೊಂಡು ಹೋಗಿ ಮೂಲದ ಹೊಲೆಯರಿಗೆ ಹಾಕಿರಿ" ಎಂಬ ಮಾತು ಬರುತ್ತದೆ. ಪಂಜುರ್ಲಿಯ ಒಂದು ಪಾಡ್ದನದಲ್ಲಿಯೂ "ಕೆಲಸ ಮಾಡುವವರು ಮೂಲದ ಮಾನ್ಯರು. ನಿಶ್ಚಿತ ಕೂಲಿಯವರು, ದಿನ ಕೂಲಿಯವರು, ಅನ್ನದವರು, ಗಂಜಿಯವರು ಎಲ್ಲಾ ನೆಂಟರೂ ಬಂದರು". ಹಾಗೆಯೇ, "ಆ ಸಮಯದಲ್ಲಿ ಮೂಲದ ಹೊಲೆಯರು ಕೋಣಗಳಿಗೂ ಹೋರಿಗಳಿಗೂ ಹುಲ್ಲನ್ನು ಹಾಕಲು, ಹಟ್ಟಿಗೆ ಬಂದು ಕಲಗಚ್ಚಿನ ಪಾತ್ರೆಗಳನ್ನು ದೂರದಲ್ಲಿ ಕವುಚಿ ಹಾಕಿ ಹುಲ್ಲನ್ನು ಹಾಕಿ ತಿನ್ನಲು ಸಾಕಷ್ಟು ಸಿದ್ಧ ಮಾಡಿಹೋದರು" ಎನ್ನುವ ನುಡಿಗಟ್ಟುಗಳಲ್ಲಿ ಹೊಲೆಯರು ಯಜಮಾನರ ಮನೆಯಲ್ಲಿ ಮಾಡುತಿದ್ದ ವಿವಿಧ ಕೆಲಸಗಳ ಸ್ವರೂಪದ ಮಾಹಿತಿ ದೊರೆಯುತ್ತದೆ. ಹೊಲೆಯರಿಗೆ ಕೊರಾಯಿಯಲ್ಲಿ ಊಟ ಹಾಕುವುದು[120] ಎನ್ನುವ ಮಾತು ತಳ ವರ್ಗವಾದ ಮೂಲದ ಹೊಲೆಯರ ಪರಿಸ್ಥಿತಿಯನ್ನು ತುಳುನಾಡಿನ ಪರಿಸರದಲ್ಲಿ ಹೇಗಿತ್ತು ಎನ್ನುವುದನ್ನು ತಿಳಿಸುತ್ತವೆ. ಒಬ್ಬ ಯಜಮಾನನ ಕೈ ಕೆಳಗೆ ವಂಶಪಾರಂಪರ್ಯವಾಗಿ ಜೀತದಾಳುಗಳಂತೆ ದುಡಿಯುವ ಹೊಲೆಯರೇ ಮೂಲದ ಹೊಲೆಯರು. ಒಡೆಯನ ಮನೆಯಲ್ಲಿ ಜಾನುವಾರುಗಳಿಗೆ ಹುಲ್ಲು ಹಾಕುವುದು, ಕಲಗಚ್ಚು ಕುಡಿಸುವುದು ಮುಂತಾದ ಕೆಲಸಗಳನ್ನು ಅವರು ಮಾಡುತ್ತಾರೆ. ಅವರಿಗೆ ಅನ್ನವನ್ನು ಗಂಜಿಯನ್ನು ಹಾಕುವುದು ಕೊರಾಯಿಯಲ್ಲಿ. ಅಂದರೆ ಅಗಲ ಬಾಯಿಯ ಮಣ್ಣಿನ ಪಾತ್ರೆಯಲ್ಲಿ. ಮೇಲೆ ಉದ್ಧರಿಸಿದ 'ಕೋಟಿ ಚೆನ್ನಯ' ಪಾಡ್ದನದ ಮಾತು, ಮೂಲದ ಮಾನ್ಯರ(ಹೊಲೆಯರ) ಸ್ಥಿತಿ ಸಾಮಾಜಿಕ ದೃಷ್ಟಿಯಿಂದ ತೀರಾ ಕೀಳು ಆಗಿತ್ತು ಎನ್ನುವುದನ್ನು ತಿಳಿಸುತ್ತದೆ. ಹೊಲೆಯರು ಉನ್ನತ ಜಾತಿಯವರ ಕೆಳಗೆ ಗುಲಾಮತನದ ರೀತಿ ಕೆಲಸ ಮಾಡುತ್ತಿದ್ದರು.[121] ಕೆಲವು ಶಾಸನಗಳು ಅವರನ್ನು ಹೊಲೆಯಾಳು, ಮಣ್ಣಾಳು ಅಥವಾ ಆಳು ಎಂಬುದಾಗಿ ಸಂಬೋಧಿಸುತ್ತದೆ.[122] ಕ್ರಿ.ಶ.14 ಮತ್ತು 16ನೇ ಶತಮಾನದಲ್ಲಿ ಈ ಹೊಲೆಯಾಳುಗಳನ್ನು ಅವರಿರುವ ಭೂಮಿಯ ಸಹಿತ ಖರೀದಿಸಲಾಗುತ್ತಿತ್ತು.[123] ಶೃಂಗೇರಿ ಕಡತಗಳು ಹೇಳುವಂತೆ ಈ ಪ್ರಕ್ರಿಯೆ ಕ್ರಿ.ಶ. 18ನೇ ಶತಮಾನದವರೆಗೂ ಮುಂದುವರೆದಿತ್ತು.[124]

ತಳ ಸಮುದಾಯದ ಇನ್ನೊಂದು ವರ್ಗದವರಾದ 'ಬಾಕುಡರ' ವಿಚಾರವು ಪಾಡ್ದನದಲ್ಲಿದೆ.

'ಕೋಟಿ ಚೆನ್ನಯ' ಪಾಡ್ದನದಲ್ಲಿ ಬಾಕುಡರ ಬಗ್ಗೆ ಉಲ್ಲೇಖ-ದೊರೆಯುತ್ತದೆ. "ಕೊಪ್ಪದ ಕೊರಗರು, ಓಣಿಯ ಮುಗೇರರು, ಬೈಲಿನ ಬಾಕುಡರು" ಕೊರಗರ ವಾಸಸ್ಥಾನ ಕೊಪ್ಪ ಆಗಿರುವಂತೆಯೇ ಬಾಕುಡರ ವಾಸಸ್ಥಾನ ಬೈಲು ಎಂದು ಗೊತ್ತಾಗುತ್ತದೆ. ಇತರ ತಳ ವರ್ಗದ ಹೊಲೆಯರಂತೆ ಬಾಕುಡರು ಗುಲಾಮರ ರೀತಿಯಲ್ಲಿ ಯಜಮಾನರ ಮನೆಗಳಲ್ಲಿ ಕೆಲಸ ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಬಾಕುಡರು ತುಳುನಾಡಿನ ಕೃಷಿಯೊಂದಿಗೆ ನಿಕಟ ಸಂಬಂಧ ಹೊಂದಿದ್ದರು. ಭೂಮಿಯ ಒಡೆಯ ಬಾಕುಡ ಕುಟುಂಬಕ್ಕೆ ಒಂದೊಂದು ಗುಡಿಸಲನ್ನು ಕಟ್ಟಿಸಿಕೊಡುತ್ತಿದ್ದ. ಹಾಗೆಯೇ ಆ ಕುಟುಂಬಕ್ಕೆ ಸುಮಾರು $^1/_4$ ಎಕರೆಯಷ್ಟು ಅಥವಾ 10 ಹಾನೆಗಳಷ್ಟು ಬಿತ್ತನೆ ಸಾಮರ್ಥ್ಯದ ಭೂಮಿಯನ್ನೂ ನೀಡುತ್ತಿದ್ದ. ಒಡೆಯನ ಭೂಮಿಯಲ್ಲಿ ಕೆಲಸಮಾಡಿದ್ದಕ್ಕೆ ಪ್ರತಿಯಾಗಿ ಬಾಕುಡರು ವಾರ್ಷಿಕವಾಗಿ ಬಟ್ಟೆ, ಅಕ್ಕಿ ಮತ್ತು ಕತ್ತಿಯನ್ನು ಕೂಲಿಯ ರೂಪದಲ್ಲಿ ಪಡೆಯುತ್ತಿದ್ದರು. ಬಾಕುಡರ ಮದುವೆಯ ಸಂದರ್ಭದಲ್ಲಿ ಅವನು ಒಂದು ಮುಡಿಯಷ್ಟು ಅಕ್ಕಿಯನ್ನು ಪಡೆಯುತ್ತಿದ್ದ. ಕೆಲಸವಿಲ್ಲದಾಗ ಅವನಿಗೆ ಕೂಲಿಯೂ ಇರಲಿಲ್ಲ.[125] ನಲ್ಕೆಯವರು ನಿಜ ಅರ್ಥದಲ್ಲಿ ಭೂತ ನೃತ್ಯದ ಮುಖ್ಯ ಸಮುದಾಯವಾಗಿದೆ. ನಲಿಕೆ ಎನ್ನುವ ಪದವೇ ಅವರ ವೃತ್ತಿಯನ್ನು ಸೂಚಿಸುತ್ತದೆ. ತುಳು ಮೂಲದವರಾದ ಇವರು ಹಲವು ಬಳಿಗಳಾಗಿ ವಿಂಗಡಣೆ ಹೊಂದಿದ್ದಾರೆ. ಕನ್ನಡ ಮಾತನಾಡುವ ಸ್ಥಳಗಳಲ್ಲಿ ಅವರನ್ನು ಪಾಣಾರರೆಂದು ಕರೆಯಲಾಗಿದೆ. ದೈವಾರಾಧನೆಯಲ್ಲಿ ಅವರು ವಹಿಸಿದ ಪಾತ್ರ ಪ್ರಮುಖವಾದದ್ದು. ಹಾಗೆಯೇ ಛತ್ರಿ ನಿರ್ಮಾಣದ ಕೆಲಸದಲ್ಲಿಯೂ ಇವರು ತೊಡಗಿಸಿಕೊಳ್ಳುತ್ತಾರೆ. ನಲ್ಕೆಯವರ ಹಾಗೆ ಪರವರೂ ಛತ್ರಿ ತಯಾರಿಸುತ್ತಾರೆ ಮತ್ತು ದೈವ ನರ್ತಕರೂ ಆಗಿದ್ದಾರೆ. ಆದರೆ ನಲಿಕೆಯವರಿಗಿಂತ ತಾವು ಮೇಲಿನವರು ಎಂದು ಪರಿಭಾವಿಸುತ್ತಾರೆ. ಅದಕ್ಕೆ ಇನ್ನೊಂದು ಕಾರಣ ಪರವರು ರಾಜನ್ ದೈವಗಳೆಂದು ಕರೆಯುವ ಪ್ರಮುಖ ದೈವಗಳಿಗೆ ಮಾತ್ರ ಪಾತ್ರಿಗಳಾಗುತ್ತಾರೆ. ಉದಾಹರಣೆಗೆ ಉಳ್ಳಾಕುಲು, ನಾಯರ್ ದೈವ, ಕೊಡಮಣಿತ್ತಾಯ, ರಕ್ತೇಶ್ವರಿ, ಜುಮಾದಿ, ಕೋಟಿ ಚೆನ್ನಯ ಇತ್ಯಾದಿ.

ಭೂತಾರಾಧನೆಯ ಅವಿಭಾಜ್ಯ ಅಂಗವಾಗಿದ್ದ ನಲ್ಕೆ ಅಥವಾ ಅಜಿಲರು(ಪಾಣಾರರು), ಪರವರು ಮುಂತಾದ ಪಂಗಡದವರು ದೈವ ಪಾತ್ರಿಗಳಾಗಿ ಮುಂಚೂಣಿಯಲ್ಲಿದ್ದರೂ, ಸಮಾಜದಲ್ಲಿ ಅಸ್ಪೃಶ್ಯರೆಂದೇ ಪರಿಗಣಿಸಲ್ಪಟ್ಟಿದ್ದರು. ನಲ್ಕೆ ಜನಾಂಗದಲ್ಲಿಯೂ ಮಾತೃ ಮೂಲದಿಂದ ಬಂದ ಗೋತ್ರವನ್ನು ಅನುಸರಿಸಲಾಗುತ್ತಿತ್ತಾದರೂ, ದೈವ ಪಾತ್ರಿಯಾಗುವ ಅಧಿಕಾರ ಪಿತೃ ಪ್ರಧಾನವಾಗಿ ಲಭಿಸುತ್ತಿತ್ತು. ಹಾಗಾಗಿ ಮಾತೃ ಮತ್ತು ಪಿತೃ ಪ್ರಧಾನ ಕೌಟುಂಬಿಕ ವ್ಯವಸ್ಥೆಯ ಸಮ್ಮಿಲನವನ್ನು ಇಲ್ಲಿ ಗಮನಿಸಬಹುದು. ದೈವ ಪಾತ್ರಿಗಳಾದ ಇವರು ಕಾಲಿಗೆ ಚಪ್ಪಲಿ ಹಾಕುವಂತಿರಲಿಲ್ಲ. ಅಕಸ್ಮಾತ್ ಚರ್ಮದ ಚಪ್ಪಲಿ ತಾಗಿದರೂ ಶೃಂಗೇರಿಗೆ ಹೋಗಿ ತಪ್ಪು ಕಾಣಿಕೆ ಹಾಕಬೇಕೆಂಬ ಕಡ್ಡಾಯ ನಿಯಮವಿತ್ತು. ದನದ ಹಾಲು, ಮಾಂಸ, ಹಂದಿಯ ಮಾಂಸದ ಸೇವನೆ ನಿಷಿದ್ಧವಾಗಿತ್ತು.[126] ಆದರೆ ಉಳಿದ ಸಮಾಜಕ್ಕೆ ಹೋಲಿಸಿದರೆ ಸ್ತ್ರೀಯರಿಗೆ ಪ್ರಾಧಾನ್ಯತೆ ಕೊಡುವ ಕ್ರಮ ಇವರಲ್ಲಿ ವಿಶೇಷವಾಗಿತ್ತೆಂದು ತಿಳಿಯಬಹುದು. ಸ್ತ್ರೀಯರು ಪ್ರಮುಖ

ಕಾರ್ಯಕ್ರಮಗಳಿಗೆ ನಿಷೇಧಿಸಲ್ಪಟ್ಟ ಸಮಾಜದಲ್ಲಿ, ಅಜಿಲ ಅಥವಾ ಪರವ ಜನಾಂಗದ ಜನ ಅಕ್ಷರಾಭ್ಯಾಸ ಇಲ್ಲದಿದ್ದರೂ ಸ್ತ್ರೀಯರನ್ನು ದೈವಾರಾಧನೆಯ ಸಂದರ್ಭದಲ್ಲಿ ಸಂಧಿ ಹಾಡಲು ನಿಯೋಜಿಸುತ್ತಿದ್ದುದು ಈ ಜನಾಂಗದ ಹೆಚ್ಚುಗಾರಿಕೆಯಾಗಿದೆ. ಪಂಬದರು ಸಾಂಪ್ರದಾಯಿಕ ದೈವ ಪಾತ್ರಿಗಳಾಗಿದ್ದು, ಬಲ್ಲಾಳರ ಗೇಣಿದಾರರಾಗಿದ್ದರು. ಕೃಷಿ ಚಟುವಟಿಕೆಗಳಲ್ಲಿ ಬಲ್ಲಾಳರು ಇವರನ್ನು ತೊಡಗಿಸಿಕೊಳ್ಳುತ್ತಿದ್ದರು.[127] ಹಾಗೆಯೇ ಭೂತಸ್ಥಾನದ ನಿರ್ಮಾಣದಲ್ಲಿಯೂ ಅವರನ್ನು ಬಳಸಿಕೊಳ್ಳಲಾಗುತ್ತಿತ್ತು.

ಬುಕಾನನ್ ಅವಲೋಕಿಸಿದಂತೆ, ಕೊರವ ಜನಾಂಗ ಅತ್ಯಂತ ಹಿಂದುಳಿದ ಸ್ಥಿತಿಯಲ್ಲಿದ್ದು ಜೀತವನ್ನು ಮಾಡುತ್ತಿದ್ದರು.[128] ಒಡೆಯರ ಮನೆಯಲ್ಲಿ ಜೀತದಾಳುಗಳಾಗಿ ಕೃಷಿ ಮೊದಲಾದ ಕೆಲಸ ಮಾಡುತ್ತಿದ್ದರು. ಅವರಿಗೆ ಒಂದು ಹೊತ್ತಿನ ಊಟ ಒಂದು ಆಣೆ ಕೂಲಿ, ಹೆಣ್ಣಿಗಾದರೆ ಮುಕ್ಕಾಲು ಆಣೆಯನ್ನು ಕೊಡಲಾಗುತ್ತಿತ್ತು. ಇವರು ತೆಂಗಿನ ನಾರಿನ ಹಗ್ಗ, ಕಾಲೊರಸು, ಬಿದಿರಿನ ಬುಟ್ಟಿ, ಮರ ಹತ್ತುವುದು, ಕಟ್ಟಡದ ಕೆಲಸ ಮುಂತಾದವುಗಳನ್ನು ಮಾಡುತ್ತಿದ್ದರು. ಹಾಗೆಯೇ ಇತರೆ ಜನರ ಊಟದ ಎಂಜಲನ್ನು ಎತ್ತುವುದನ್ನು, ತಿನ್ನುವುದನ್ನು ಮಾಡುತ್ತಿದ್ದರು. ಕೆಲವರಿಗೆ ಒಂದಿಷ್ಟು ಹೆಚ್ಚಿನ ಆದಾಯವಿದ್ದರೂ ಜೀವನ ಮಟ್ಟವನ್ನು ಸುಧಾರಿಸಿಕೊಂಡಿರಲಿಲ್ಲ. ಅತ್ಯಂತ ಕಡಿಮೆ ಬಟ್ಟೆಯನ್ನು ಧರಿಸುತ್ತಿದ್ದರು. ಇವರಲ್ಲಿ ಬಹುಪತ್ನಿತ್ವ, ವಿಧವಾ ವಿವಾಹ ಪದ್ಧತಿ ಇತ್ತು. ಜಾತಿಯನ್ನು ಬಿಟ್ಟು ವಿವಾಹವಾಗುವಂತಿಲ್ಲ, ಒಂದು ವೇಳೆ ಆದರೆ ಜಾತಿಯಿಂದ ಬಹಿಷ್ಕಾರ ಹಾಕಲಾಗುತ್ತಿತ್ತು. ವ್ಯಭಿಚಾರ ಮಾಡಿದ ಮಹಿಳೆಯನ್ನು ಊರಿನಿಂದ ಹೊರಗಟ್ಟುವ ಕ್ರಮಗಳಿತ್ತು. ಕೊರವ ವ್ಯಕ್ತಿಯ ಮದುವೆ ಖರ್ಚನ್ನು ಅವನ ಒಡೆಯನೇ ಕೊಡುತ್ತಿದ್ದ. ಗಂಡ ಸತ್ತರೆ, ಹೆಂಡತಿಯಾದವಳು, ಮಕ್ಕಳ ಸಮೇತ ತವರು ಮನೆಯನ್ನು ಸೇರಬೇಕಾಗಿತ್ತು. ಒಡೆಯನ ಬಳಿ ಸಾಲವಿದ್ದರೆ ಜೀತ ಮಾಡಬೇಕಾಗಿತ್ತು. ನಾಯಿ ಮತ್ತು ಹಾವಿನ ಮಾಂಸ ಬಿಟ್ಟು ಮತ್ತೆಲ್ಲವನ್ನು ತಿನ್ನುತ್ತಿದ್ದ ಇವರು, ಮಾದಕ ದ್ರವ್ಯವನ್ನು ಸೇವಿಸುತ್ತಿದ್ದರು. ಪಿಶಾಚಿಗಳು, ದೆವ್ವ, ಭೂತಗಳನ್ನು ನಂಬುವ ಇವರು, ನಾಲ್ಕು ಗೋಡೆಗಳ ಮಧ್ಯದ ಒಂದು ಕಲ್ಲನ್ನು ಭೂತವೆಂದು ನಂಬಿಕೊಂಡು ಅದನ್ನೇ ಆರಾಧಿಸುತ್ತಿದ್ದರು. ಅದಕ್ಕೆ ಅನೇಕ ಪ್ರಾಣಿಬಲಿಗಳನ್ನು ನೀಡಿ ಆರೋಗ್ಯಕ್ಕಾಗಿ ಪ್ರಾರ್ಥಿಸುತ್ತಿದ್ದರು. ಹಬ್ಬ ಹರಿದಿನಗಳಲ್ಲಿ ಹಸು, ಎತ್ತುಗಳನ್ನು ಓಡಿಸುವ ಕೆಲಸ ಮಾಡುತ್ತಿದ್ದರು. ಊರ ಹತ್ತಿರ ತಮ್ಮ ಗುಡಿಸಲುಗಳನ್ನು ಕಟ್ಟಿಕೊಂಡು ವಾಸವಾಗಿದ್ದರು.[129]

ತಳ ಸಮುದಾಯಗಳಾದ, ಮೂಲದ ಮಾನ್ಯರು, ಪಂಬದರು, ಪರವರು, ನಲಿಕೆಯವರು, ಮಲೆಕುಡಿಯರು ಉನ್ನತ ಜಾತಿಯ ಜನರ ಸೇವಕರಾಗಿ ದುಡಿಯಬೇಕಾಗಿತ್ತು. ಕೃಷಿ ಕಾರ್ಮಿಕರಾಗಿ, ಧಾರ್ಮಿಕ ಸಂಸ್ಥೆಗಳ ಭೂಮಿಯಲ್ಲಿ ಅಥವಾ ಇತರ ಉನ್ನತ ವರ್ಗದವರ ಭೂಮಿಗಳಲ್ಲಿ ಅವರು ಕೆಲಸಮಾಡಬೇಕಾಗಿತ್ತು. ಇದು ಸಾಮಾಜಿಕ ವ್ಯತ್ಯಾಸಗಳಿಗೆ ಮತ್ತು ಅಸಮತೋಲನಕ್ಕೆ ಕಾರಣವಾಗಿತ್ತು. ಸಂಪತ್ತಿನ ವಿತರಣೆ, ಆಡಳಿತಗಾರರಾಗಿ ಸರಕಾರದಲ್ಲಿ ಹುದ್ದೆ ಗಿಟ್ಟಿಸುವಲ್ಲಿ ಭೂ ಒಡೆತನದ ವಿಚಾರದಲ್ಲಿ, ಧಾರ್ಮಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸುವಿಕೆಯ ವಿಚಾರದಲ್ಲಿ ಅವರು

ಓಂದುಳಿಯುವಂತಾಯಿತು. ಸಮಾಜದ ಕೆಳ ಸಮುದಾಯದ ಬದುಕು ದುಸ್ತರವಾಗಿತ್ತು ಎಂಬುದಾಗಿ ಈ ಮೂಲಕ ತಿಳಿದು ಬರುತ್ತದೆ.

ಒಟ್ಟಿನಲ್ಲಿ ವಿವಿಧ ಜಾತಿ ಮತ್ತು ಸಮುದಾಯಗಳನ್ನು ಈ ಕಾಲದಲ್ಲಿ ತುಳುನಾಡಿನಲ್ಲಿ ಗಮನಿಸಬಹುದು. ಈ ಅಧ್ಯಯನದಿಂದ ತಿಳಿದುಬರುವ ಅಂಶವೆಂದರೆ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆ ಈ ಕಾಲದಲ್ಲಿಯೂ ಮುಂದುವರೆಯಿತು. ಇಲ್ಲಿ ವಿವಿಧ ಸಮುದಾಯಗಳು ಕೆಳಸ್ತರದಿಂದ ಮೇಲುಸ್ತರದವರೆಗೆ ಸೇರಿಕೊಂಡಿದ್ದವು. ಬ್ರಾಹ್ಮಣರ ಸಾಂಸ್ಕೃತಿಕ ಮೇಲ್ಮೆ, ಧಾರ್ಮಿಕ ಸಂಸ್ಥೆಗಳ ನಂಟು ಮುಂತಾದ ವಿಚಾರಗಳಿಂದ ಸಮಾಜದಲ್ಲಿ ಮೇಲುಸ್ತರದಲ್ಲಿ ಗುರುತಿಸಿಕೊಂಡಿದ್ದರು. ಜಾತಿಪದ್ಧತಿ ತುಳುನಾಡಿನ ಬೇರೆ ಬೇರೆ ಜಾತಿಗಳೊಂದಿಗೆ ಸಂಬಂಧಗಳನ್ನು ನಿಯಂತ್ರಿಸುವ ಅವಕಾಶ ಮತ್ತು ಮಿತಿಗಳನ್ನು ಕೂಡ ನಿರೂಪಿಸಿತು. ಕೋಟಿ ಚೆನ್ನಯ್ಯ ಪಾಡ್ದನ ಹೀಗೆ ಹೇಳುತ್ತದೆ.[130] "ನೀವು ನೂಲು ಹಾಕಿದ ಬ್ರಾಹ್ಮಣರಾದರೆ ಗೆಂದಾಳಿ ತೆಂಗಿನ ಮರದ ಕೆಳಗೆ ಪದ್ಮಕಟ್ಟೆಯಿದೆ. ನೀವು ಬಂಟರಾದರೆ ಹಾಕಿದ ಹನಿಚಪ್ಪರ ಇದೆ, ನೀವು ಜಾತಿ ಸಹೋದರರಾದರೆ (ಬಿಲ್ಲವರಾದರೆ) ಚಾವಡಿಯಲ್ಲಿರುವ ತೂಗುಯ್ಯಾಲೆಯಿದೆ." ಮೇಲ್‌ವರ್ಗಕ್ಕೆ ಸೇರಿದವರಾದರೂ ಬ್ರಾಹ್ಮಣ ಮತ್ತು ಬಂಟರನ್ನು ಇಲ್ಲಿ ಮನೆಯೊಳಗೆ ಸೇರಿಸಿಕೊಳ್ಳದೆ ಗೌರವ ಪೂರ್ವಕವಾಗಿ ಹೊರಗಿಡಲಾಗಿದೆ. ಸಮಾಜದಲ್ಲಿ ಅವರ ಸ್ತರಕ್ಕೆ ಅನುಗುಣವಾಗಿ ಕೆಳ ಜಾತಿಯವರು ಹೊರ ವಲಯದಲ್ಲಿ ಜಾಗ ಪಡೆದರೆ ಮೇಲು ಜಾತಿಯವರಾದ ಬ್ರಾಹ್ಮಣರು ಮತ್ತು ಬಂಟರು ಹೊರಗಡೆ ಇರುವ ಕಟ್ಟೆಯ ಮೇಲೆ ಕುಳಿತುಕೊಳ್ಳುವುದರ ಮೂಲಕ ಜಾತಿ ವ್ಯವಸ್ಥೆಯಲ್ಲಿನ ಸಾಮಾಜಿಕ ಅಂತಸ್ತಿಗೆ ಸಾಕ್ಷಿಯಾಗಿದ್ದರು.

### 6.2 ಕೆಳದಿ ಕಾಲದ ತುಳುನಾಡಿನ ವಲಸಿಗರು

ವಲಸೆ ಪ್ರಕ್ರಿಯೆಗೆ ಐತಿಹಾಸಿಕ, ರಾಜಕೀಯ, ಆರ್ಥಿಕ, ಧಾರ್ಮಿಕ, ಮತ್ತು ಸಾಂಸ್ಕೃತಿಕವಾದ ಹಿನ್ನೆಲೆಗಳಿವೆ. ಆರ್ಥಿಕ ಮತ್ತು ಸಾಮಾಜಿಕ ಅಭದ್ರತೆಗಳು ವಲಸೆಯ ಪ್ರಕ್ರಿಯೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಕೆಳದಿ ಆಳ್ವಿಕೆಯ ತುಳುನಾಡಿಗೆ ವಲಸೆ ಬಂದವರಲ್ಲಿ ವೀರಶೈವರು, ಸಾರಸ್ವತರು, ಕೊಂಕಣಿ ಕ್ರೈಸ್ತರು, ಕೋಟೆಕ್ಷತ್ರಿಯರು, ಗೌಡರು ಅಥವಾ ಒಕ್ಕಲಿಗರು ಪ್ರಮುಖರಾಗಿದ್ದಾರೆ. ಈ ಎಲ್ಲಾ ಸಮುದಾಯಗಳು ಭಿನ್ನ ಭಿನ್ನ ಕಾರಣಗಳಿಗೆ ತುಳುನಾಡಿಗೆ ಆಗಮಿಸಿದರು. ಹಾಗೆಯೇ ಮಹಾರಾಷ್ಟ್ರ ಮೂಲದ ಚಿತ್ಪಾವನ ಬ್ರಾಹ್ಮಣರು ಮತ್ತು ಕರಾಡರು, ಕುಡುಬಿಗಳು, ನವಾಯತರು, ಮರಾಠಿ ಸಮುದಾಯದವರು ವಲಸೆ ಬಂದವರಾಗಿದ್ದಾರೆ.[131] ತುಳುನಾಡಿನ ಜನಜೀವನದ ಮೇಲೆ ಈ ಸಮುದಾಯಗಳ ಪ್ರಭಾವ ಬಹಳಷ್ಟಾಗಿದೆ. ಇವುಗಳನ್ನು ಇಲ್ಲಿ ಚರ್ಚಿಸಲಾಗಿದೆ.

**ಗೌಡ ಸಾರಸ್ವತರು** : ಕ್ರಿ.ಶ.1560ರಲ್ಲಿ ಗೋವಾ ವೈಸ್‌ರಾಯಿ ಡೋಮ್ ಆಟೋ ಡಿ ನರೋನ್ಹಾನ 'ಇಂಕ್ವಿಜಿಷನ್' ಮೇರೆಗೆ ಹಿಂದೂ ಧರ್ಮ ಹಾಗೂ ದೇವಮಂದಿರಗಳ ವಿನಾಶದ ಪರಿಣಾಮವಾಗಿ

ಗೌಡಸಾರಸ್ವತರು ಮನೆ ಆಸ್ತಿಗಳನ್ನು ಕಳೆದುಕೊಂಡು ಜನ್ಮ ಸ್ಥಾನವನ್ನೇ ತ್ಯಜಿಸುವಂತಾಯಿತು.[132] ಹೀಗೆ ಕೆಳದಿ ರಾಜ್ಯಕ್ಕೆ ವಲಸೆ ಬಂದವರಿಗೆ ಉದ್ಯೋಗವನ್ನು ಕಲ್ಪಿಸಿಕೊಟ್ಟು ಆಶ್ರಯ ನೀಡಿದವರು ಕೆಳದಿ ಅರಸರು ಹಾಗೂ ತುಳುನಾಡಿನ ಅರಸರು. ತುಳುನಾಡಿನಲ್ಲಿ ಅವರ ಆಗಮನಕ್ಕೆ ಸಂಬಂಧಿಸಿದಂತೆ ಕೊಂಕಣಿ ಜನಪದ ಈ ಕೆಳಗಿನ ಮಾಹಿತಿ ನೀಡುತ್ತದೆ.[133]

ದೆವ್ಲಿ ಸೊಮ್ದ್ರಿರಾಕ್ ಮಾಯಿ– ಆಯ್ಲಿ ಮಂಗ್ಳೂರಾಕ್

ಆಯ್ಲಿ ಮಂಗ್ಳೂರಾಕ್ ಮಾಯಿ–ಗೆಲಿಬೊಳಾರಾಕ್

(ಇಳಿದಳು ಸಮುದ್ರಕ್ಕೆ ತಾಯಿ – ಬಂದಳು ಮಂಗಳೂರಿಗೆ ತಾಯಿ, ಬಂದಳು ಮಂಗಳೂರಿಗೆ ತಾಯಿ – ಹೋದಳು ಬೋಳಾರಿಗೆ) ಎನ್ನುವುದು ಅವರ ವಲಸೆಯನ್ನು ದೃಢೀಕರಿಸುತ್ತದೆ. ಗೋವಾ ಪ್ರಾಂತ್ಯದಲ್ಲಿ ಹಿಂದೂಗಳು ಒಂದೋ ಕ್ರೈಸ್ತರಾಗಬೇಕು ಇಲ್ಲವೇ ಗೋವೆಯನ್ನು ಬಿಟ್ಟು ಹೋಗಬೇಕು ಎಂಬ ಪರಿಸ್ಥಿತಿಯು ವೈಸ್‌ರಾಯಿಯ ಆಜ್ಞೆಯಿಂದ ನಿರ್ಮಾಣವಾಯಿತು. ಪೋರ್ಚುಗೀಸರ ಧಾರ್ಮಿಕ ಕಿರುಕುಳ ಮತ್ತಿತರ ಅನೇಕ ಕಾರಣಗಳಿಂದ ಗೋಮಾಂತಕವನ್ನು ಬಿಟ್ಟು ನೆಲ ಜಲ ಮಾರ್ಗಗಳಾಗಿ ದಕ್ಷಿಣಕ್ಕೆ ಪ್ರಯಾಣಿಸಿ ಹೈಗ, ತೌಳವ ಮತ್ತು ಕೇರಳ ದೇಶಗಳಲ್ಲಿ ಈ ಸಾರಸ್ವತರು ತಂಗತೊಡಗಿದರು. ಹೀಗೆ ಬಂದವರು ತಿರುವಾಂಕೂರು, ಕೊಚ್ಚಿ, ಕಲ್ಲಿಕೋಟೆ, ಮಂಗಳೂರು, ಮಂಜೇಶ್ವರ ಮೊದಲಾದ ಕರಾವಳಿಯ ಊರುಗಳಲ್ಲಿಯೂ ಕಾರ್ಕಳ, ಬಂಟ್ವಾಳ, ಮೂಡಬಿದ್ರೆ, ಪುತ್ತೂರು, ಬೆಳ್ತಂಗಡಿ, ಉಪ್ಪಿನಂಗಡಿ ಮೊದಲಾದ ಒಳನಾಡಿನಲ್ಲಿಯೂ ನೆಲಸಿದರು.[134]

ಆದರೆ ಸಾರಸ್ವತರು ಕೆಳದಿಯ ಕಾಲಕ್ಕಿಂತ ಮೊದಲೇ ತುಳುನಾಡಿಗೆ ಬಂದಿದ್ದರು ಎನ್ನಲಾಗಿದೆ. ಕಾರ್ಕಳದ ಇಮ್ಮಡಿ ಭೈರರಸ ಒಡೆಯ ಭಟ್ಕಳಕ್ಕೆ ಪ್ರವಾಸ ಹೋಗಿದ್ದಾಗ ಸಾರಸ್ವತರ ಹಲವು ಕುಟುಂಬಗಳನ್ನು ಬರಮಾಡಿಕೊಂಡು ತಾನು ನೀಡಿದ ನಿವೇಶನದಲ್ಲಿ ವೆಂಕಟರಮಣ ದೇಗುಲ ನಿರ್ಮಾಣಕ್ಕೆ ಆಶ್ರಯ ನೀಡಿದ ಎನ್ನಲಾಗಿದೆ. ಕಾರ್ಕಳದಲ್ಲಿ ಭೈರರಸರು ಕ್ರಿ.ಶ. 1537ರಲ್ಲಿ ಶ್ರೀ ವೆಂಕಟ್ರಮಣ ದೇವಳದ ಪುನಃ ಪ್ರತಿಷ್ಠೆಗೆ ನೆರವಾದದ್ದು ಈ ಭಾಗದಲ್ಲಿ ಗೌಡಸಾರಸ್ವತರು ಮೊದಲೇ ಬಂದಿರುವುದಕ್ಕೆ ಸಾಕ್ಷಿ.[135] ಗೋವೆಯಲ್ಲಿ ಪೋರ್ಚುಗೀಸರ ದಬ್ಬಾಳಿಕೆಯ 2 ದಶಕಗಳ ಮೊದಲೇ ಗೌಡ ಸಾರಸ್ವತರು ತುಳುನಾಡಿನಲ್ಲಿ ನೆಲೆಸಿದ್ದರು. ಕೆಳದಿ ಆಳ್ವಿಕೆಯ ಪೂರ್ವದಲ್ಲಿ ಸಣ್ಣ ಪ್ರಮಾಣದಲ್ಲಿ ಸಾರಸ್ವತರ ವಲಸೆ ಈ ಭಾಗಕ್ಕೆ ಆಗಿತ್ತು. ಆದರೆ ದೊಡ್ಡ ಮಟ್ಟದಲ್ಲಿ ಈ ಪ್ರಕ್ರಿಯೆ ನಡೆದದ್ದು ಮತ್ತು ಆ ಮೂಲಕ ಸಾಮಾಜಿಕ ಆರ್ಥಿಕ ಬದಲಾವಣೆಯಾದದ್ದು ಕೆಳದಿ ಅರಸರ ಕಾಲದಲ್ಲಿಯೇ.

ಈಗಿನಂತೆ ಗೌಡಸಾರಸ್ವತರು ಮೂಲತಃ ವೈಷ್ಣವರಾಗಿರಲಿಲ್ಲ ಎಂಬ ಅಭಿಪ್ರಾಯಗಳಿವೆ. ಅವರು ಶೈವರೋ ಶಾಕ್ತರೋ ಆಗಿದ್ದರು ಎನ್ನುವುದಕ್ಕೆ ಗೋವೆಯಲ್ಲಿರುವ ಸಾರಸ್ವತರು ಆರಾಧಿಸಿಕೊಂಡು ಬರುತ್ತಿರುವ ಕುಲದೇವತೆಗಳಾದ ಶಿವಲಿಂಗಗಳು ಅಥವಾ ಭಗವತಿಯ ವಿಗ್ರಹಗಳು ಸಾಕ್ಷಿಗಳಾಗಿವೆ. ದ್ವೈತ ಸಿದ್ಧಾಂತ

ಪ್ರಸಾರಕ್ಕಾಗಿ ಮಧ್ವಾಚಾರ್ರು ಗೋಮಾಂತಕಕ್ಕೆ ಆಗಮಿಸಿದಾಗ ಅವರ ಬೋಧನೆಗೆ ಮನಸೋತು ಸಾರಸ್ವತರು ವೈಷ್ಣವ ಮತಾವಲಂಬಿಗಳಾದರು ಎಂದು ಹೇಳಲಾಗಿದೆ.[136] ಇದೀಗ ಹಲವು ರಾಜ್ಯಗಳಲ್ಲಿ ನೆಲೆಯೂರಿರುವ ಗೌಡ ಸಾರಸ್ವತ ಬ್ರಾಹ್ಮಣರನ್ನು ಒಂದುಗೂಡಿಸಿದ ಹೆಗ್ಗಳಿಕೆ ಸಾರಸ್ವತ ಮಠಗಳಿಗೆ ಮತ್ತು ಕೊಂಕಣಿ ಭಾಷೆಗೆ ಸಲ್ಲುತ್ತದೆ.

ತುಳುನಾಡಿನಲ್ಲಿ ವೈಷ್ಣವ ಮತವನ್ನು ಹರಡುವಲ್ಲಿ ಗೌಡ ಸಾರಸ್ವತ ಮಠಗಳ ಪಾತ್ರ ಪ್ರಮುಖವಾದುದು. ಕಾಶಿ ಮತ್ತು ಗೋಕರ್ಣ ಮಠಗಳು ಈ ನಿಟ್ಟಿನಲ್ಲಿ ಗಮನಾರ್ಹವಾಗಿವೆ. ಸಾರಸ್ವತ ಮಠ ಪರಂಪರೆಯಲ್ಲಿ ತುಳುನಾಡಿನ ಸಾರಸ್ವತರು ಶ್ರೀ ಸಂಸ್ಥಾನ ಗೋಕರ್ಣ ಪರ್ತಗಾಳಿಮಠ, ಶ್ರೀ ಸಂಸ್ಥಾನ ಕೈವಲ್ಯ ಮಠ, ಶ್ರೀ ಸಂಸ್ಥಾನ ಕಾಶೀ ಮಠ, ವಾರಣಾಸಿ ಮತ್ತು ಶ್ರೀ ಚಿತ್ರಾಪುರ ಮಠಗಳ ಅಥವಾ ಇವುಗಳ ಶಾಖಾಮಠಗಳಿಗೆ ನಡೆದುಕೊಳ್ಳುತ್ತಾರೆ. ಕರಾವಳಿ ಕರ್ನಾಟಕದ ವೈಷ್ಣವ ಗೌಡ ಸಾರಸ್ವತರ ಧಾರ್ಮಿಕ ವಿಧಿಗಳ ಉಸ್ತುವಾರಿಯನ್ನು ಯಾದವೇಂದ್ರರು ನೋಡಿಕೊಂಡಿದ್ದರು.[138] ಕ್ರಿ.ಶ. 17ನೇ ಶತಮಾನದಲ್ಲಿ ತುಳುನಾಡಿನಲ್ಲಿ ವೈಷ್ಣವ ಪಂಥವನ್ನು ಬಲಪಡಿಸಿದವರು ರಾಘವೇಂದ್ರ ಸ್ವಾಮಿ ಎಂದು ಪ್ರಸಿದ್ಧರಾದ ವೆಂಕಟನಾಥರು. (1623–71) ಕುಂಭಕೋಣಂ ಮಠದ ಪೀಠಾಧಿಪತಿಗಳಾಗಿದ್ದ ಅವರು ಮಧ್ವಾಚಾರ್ಯರ ಸಿದ್ಧಾಂತಗಳನ್ನು ಜನರಿಗೆ ತಿಳಿಯಪಡಿಸಿದರು.[139]

ಗೋವಾ ರಾಜ್ಯದ ಕಾಣಕೋಣ ತಾಲೋಕಿನಲ್ಲಿ ಮಡಗಾಂನಿಂದ ಸುಮಾರು 30ಕಿ.ಮೀ ದೂರದಲ್ಲಿರುವ ಗೌಡಸಾರಸ್ವತರ ಗೋವಾ ಪರ್ತಗಾಳಿ ಜೀವೋತ್ತಮ ಮಠವು ಪೋರ್ಚುಗೀಸ್ ಹಾವಳಿಯಿಂದ ಪಾರಾಗಿ ಕೆಳದಿ ಅರಸರ ರಕ್ಷಣೆಯಲ್ಲಿ ಜೀರ್ಣೋದ್ಧಾರಗೊಂಡಿತು. ಗೋಕರ್ಣ ಪರ್ತಗಾಳಿ ಜೀವೋತ್ತಮ ಮಠದ ಗುರುಗಳಾದ ಲಕ್ಷ್ಮೀನಾರಾಯಣ ತೀರ್ಥರು ಬಿದನೂರಿಗೆ ತೆರಳಿದ್ದಾಗ ಕೆಳದಿ ಚೆನ್ನಮ್ಮಾಜಿಯು ಅವರಿಗೆ ಬಿಳಿ ಛತ್ರಿ, ಬಿಳಿ ಚಾಮರ ಮತ್ತು ದೀವಟಿಕೆಗಳನ್ನು ನೀಡಿ ಸನ್ಮಾನಿಸಿದ್ದು ಗಮನಾರ್ಹವಾಗಿದೆ.[140] ಗೌಡ ಸಾರಸ್ವತರ ಇನ್ನೊಂದು ಪೀಠ ಕಾಶೀಮಠಕ್ಕೂ ಕೆಳದಿ ಅರಸರು ಉಂಬಳಿ ನೀಡಿದರು. ಸ್ಮಾರ್ತ ಪಂಗಡದ ಗೌಡ ಸಾರಸ್ವತ ಚಿತ್ರಾಪುರ ಮಠವು ಶಿರಾಲಿಯಲ್ಲಿದೆ. ಇದಕ್ಕೆ ಬಸಪ್ಪ ನಾಯಕನು ಉಳುವರೆ ಗ್ರಾಮವನ್ನು ಇತ್ತು ಪೋಷಿಸಿದನು.[141]

ಕೆಳದಿ ರಾಜರು ಮತ್ತು ಸ್ಥಳೀಯ ಅರಸರು ತುಳುನಾಡಿನಾದ್ಯಂತ ಸಾರಸ್ವತರ ದೇವಳ ನಿರ್ಮಾಣಕ್ಕೆ ಅಥವಾ ಅದರ ಅಭಿವೃದ್ಧಿಗೆ ಒತ್ತಾಸೆಯಾಗಿ ನಿಂತರು. ಮಂಜೇಶ್ವರ ಭದ್ರನರಸಿಂಹದೇವರಿಗೆ ಕೆಳದಿ ಅರಸರಿಂದ ಬಹಳಷ್ಟು ಉತ್ತಾರವೂ ನೀಡಲ್ಪಟ್ಟಿದೆ.[142] ಕಾಶೀ ಮಠದ ಗುರುಗಳಾದ ವಿಜಯೇಂದ್ರ ತೀರ್ಥ ಹಾಗೂ ರಾಘವೇಂದ್ರ ತೀರ್ಥರು ತುಳುನಾಡಿನ ಗೌಡ ಸಾರಸ್ವತರಲ್ಲಿ ನರಸಿಂಹನ ಆರಾಧನೆಯನ್ನು ಜನಪ್ರಿಯಗೊಳಿಸಿದರು. ಭದ್ರ ನರಸಿಂಹನನ್ನು ಮಂಜೇಶ್ವರದ ಶ್ರೀಮದನಂತೇಶ್ವರ ದೇವಳದಲ್ಲಿ ಪೂಜಿಸಲಾಗುತ್ತಿತ್ತು ಕೆಳದಿಯರಸ ಸೋಮಶೇಖರ ನಾಯಕ, ರಾಣಿ ಚೆನ್ನಮ್ಮಾಜಿ, ಸ್ಥಳೀಯರಾದ ಬಂಗರಸರು, ವಿಟ್ಲದ ಅರಸರು ಈ ದೇವಳಕ್ಕೆ ದಾನ ದತ್ತಿಗಳನ್ನು ನೀಡಿದ್ದರು.[143] ಮೂಲ್ಕಿ ಸೀಮೆಯ ಸಾವಂತರ ಆಶ್ರಯದಲ್ಲಿ

ಮೂಲ್ಕಿಯಲ್ಲಿ ಕ್ರಿ.ಶ.1569ರಲ್ಲಿ ಸಾರಸ್ವತರ ಉಗ್ರ ನರಸಿಂಹ ದೇವಾಲಯ ನಿರ್ಮಾಣವಾಯಿತೆಂದು ಹೇಳಲಾಗಿದೆ.[144] ಕ್ರಿ.ಶ.1701ರಲ್ಲಿ, ಮಂಗಳೂರಿನ ಕರಂಗಲ್ಪಾಡಿ ಎಂಬಲ್ಲಿ ನಿರ್ಮಾಣವಾದ ದೇವಳಕ್ಕೆ ಚೆನ್ನಬಸಪ್ಪ ನಾಯಕ ತಾಮ್ರದ ಹೊದಿಕೆ ಹಾಕಿಸಿದ್ದ. ಇಲ್ಲಿಯ ವೆಂಕಟ್ರಮಣ ದೇಗುಲವು ಕ್ರಿ.ಶ.1736 ರಲ್ಲಿ ನಿರ್ಮಾಣವಾಯ್ತು.[145] ಸೊಂನ ಹೆಗ್ಗಡೆ ವೆಂಕಟೇಶ ಎಂಬವನು ಕೊಡೆಯಾಲದ ಪೇಟೆಯಲ್ಲಿ ದಾಮೋದರ ದೇವಸ್ಥಾನವನ್ನು ಕಟ್ಟಿಸಿದ್ದ.[146] ಒಂದು ಮೂಲದ ಪ್ರಕಾರ ಗಂಗೊಳ್ಳಿಯ ವೆಂಕಟರಮಣ ದೇವಾಲಯವನ್ನು ಕೆಳದಿ ಭದ್ರಪ್ಪ ನಾಯಕ, ನಾರಾಯಣ ಮಲ್ಯರಿಗೆ ನೀಡಿದ ಭೂಮಿಯಲ್ಲಿ ನಿರ್ಮಿಸಲಾಗಿತ್ತು.[147] ಕ್ರಿ.ಶ. 1680ರಲ್ಲಿ ಕೆಳದಿ ಚೆನ್ನಮ್ಮಾಜಿ ಮೇಲ್ ಗಂಗೊಳ್ಳಿಯ ವೆಂಕಟರಮಣ ದೇವಾಲಯಕ್ಕೆ ದೇವ ಉತ್ತಾರವನ್ನು ನೀಡುತ್ತಾಳೆ. ಈ ಸ್ವಸ್ತಿಯನ್ನು ದೇವಳ ನಿರ್ಮಿಸಿದ ರಾಮಪೈಯವರ ವಿನಂತಿಯ ಮೇರೆಗೆ ನೀಡಲಾಗುತ್ತದೆ.[148]

ಕೆಳದಿ ನೃಪವಿಜಯದಲ್ಲಿ ಕವಿ ಲಿಂಗಣ್ಣನು ನುಡಿದಂತೆ "ನಾಲ್ದೆಸೆಯೊಳಿರ್ಪ ವರ್ತಕ ಪೈರುದಾರ ಗಂದಿಗ ಕೊಂಕಣಿಗರ್ ಮುಂತಾದ ಮಹಾನಾಡವರಂಬರಿಸಿ ವೇಣುಪುರವರದೊಳ್ ಸ್ಥಳ ನಿವೇಶನ ಪೇಟೆ ಸಾಲ ಕ್ಲುಪ್ತಿಗಳಂ ಮಾಡಿಸಿ ಸ್ಥಿರ ಲೇಖನಗಳಂ ಬರೆಸಿತ್ತು." ಇದು ಕೊಂಕಣಿ ಜನರು ಕೆಳದಿ ರಾಜ್ಯಕ್ಕೆ ಬಂದ ಪರಿಯನ್ನು ವಿವರಿಸುತ್ತದೆ.[149] ಕೆಳದಿ ರಾಜ್ಯದಲ್ಲಿ ರಾಜವರ್ತಕರಾಗಿ ವಾಣಿಜ್ಯೋದ್ದಿಮೆಯಲ್ಲಿ ಅರಸರ ನಿಕಟವರ್ತಿಗಳಾಗಿದ್ದು, ರಾಜಭಂಡಾರವನ್ನು ಸಂಪದ್ಭರಿತವನ್ನಾಗಿಸುವಲ್ಲಿ ಗೌಡಸಾರಸ್ವತರು ನಿಷ್ಠೆಯಿಂದ ಸೇವೆ ಸಲ್ಲಿಸಿದ್ದಾರೆ. ಕೆಳದಿ ಕಾಲದಲ್ಲಿ ವೈಷ್ಣವ ಸಾರಸ್ವತರು ಹೊನ್ನಾವರ, ಭಟ್ಕಳ, ಮಂಗಳೂರು ಮೊದಲಾದ ಕಡೆಗಳಲ್ಲಿ ವ್ಯಾಪಾರ ವ್ಯವಹಾರಗಳಲ್ಲಿ ಹೆಸರು ಮಾಡಿದವರಾಗಿದ್ದರು. ದುಭಾಷಿ ವಿಠ್ಠಲ ಶೆಣೈ. ವೀರಭದ್ರ ನಾಯಕನ ರಾಯಭಾರಿ ದೇವರಸ ಶೆಣೈ ಹಾಗೂ ರಾಮಪೈ, ಅಕ್ಕಿ ಮೆಣಸು ವಾಣಿಜ್ಯೋದ್ದಿಮೆಯಲ್ಲಿ ವಹಿಸಿದ ಪಾತ್ರ ಪ್ರಮುಖವಾದುದು. ಕ್ರಿ.ಶ. 1660ರಲ್ಲಿ ಹಿಂದೂಗಳ ಮತಾಂತರ ಪ್ರಕರಣವೊಂದರಲ್ಲಿ ಸೆರೆಯಲ್ಲಿದ್ದ ಕ್ರೈಸ್ತ ಪಾದ್ರಿಯನ್ನು ಬಿಡಿಸಿಕೊಂಡು ಬರಲು ರಾಮೂಜಿ ಶೆಣೈ ಮೂಲಕ ಕೆಳದಿ ಅರಸನಿಗೆ ಪಾರಿತೋಷಕ ಸಲ್ಲಿಸಿದ ಸಂಗತಿಯು ಗಮನಾರ್ಹವಾದುದು. ನಾರಾಯಣ ಮಲ್ಯ, ರಾಜಧಾನಿಯಲ್ಲಿದ್ದ ಬಾಬು ಪೈ, ಈಶ್ವರ ಕಾಮತ್ ಸೇರಿ ಮಂಗಳೂರನ್ನು ಡಚ್ಚರಿಗೆ ನೀಡುವಂತೆ ಸೋಮಶೇಖರನಿಗೆ ಒತ್ತಾಯಿಸಿದ ಸಂಗತಿಗಳೂ ಸಾರಸ್ವತರ ಪ್ರಾಮುಖ್ಯತೆಯನ್ನು ತಿಳಿಸುತ್ತದೆ.[150] ಬಾರಕೂರು ನಾರಣಮಲ್ಯನ ಅರಮನೆ ವಾಣಿಜ್ಯೋದ್ದಿಮೆ, ಹೊನ್ನಾವರದ ವೆಂಕಟಮಲ್ಯ, ಹರಕಾಮತಿ, ಸುಬ್ಬಶೆಣೈ(ಕಸ್ಟಂ ಅಧಿಕಾರಿ) ಭದ್ರಪ್ಪನ ರಾಯಭಾರಿ ಮಲ್ಲಪ್ಪ ಮಲ್ಯ, ಮುಂತಾದವರು ಕರಾವಳಿ ತೀರದ ಕೆಳದಿ ವಾಣಿಜ್ಯೋದ್ಯಮೆಯ ಇತಿಹಾಸದಲ್ಲಿ ದಾಖಲಾಗಿದ್ದಾರೆ.[151]

ತುಳುನಾಡಿನಲ್ಲಿ ಸಾರಸ್ವತರು ಇಲ್ಲಿಯ ಸಾಂಸ್ಕೃತಿಕ ಶ್ರೀಮಂತಿಕೆಗೆ ಕಾರಣರಾದರು. ಶ್ರೀಮಂತ ಸಾರಸ್ವತರಲ್ಲಿ ಸಾಗರದ ದಾಮರ್ಸ ಪೈ ಸಹ ಒಬ್ಬ. ಇವನು ಬಂಟ್ವಾಳ ಸಮೀಪದ ನರಿಕೊಂಬು

ಗ್ರಾಮದಲ್ಲಿ ಶ್ರೀ ಲಕ್ಷ್ಮೀನರಸಿಂಹ ದೇವಾಲಯ ನಿರ್ಮಿಸಿದ್ದ.[152] ಕೆಳದಿ ಶಿವಪ್ಪನಾಯಕನ ಕಾಲದಲ್ಲಿ ಬಂಗರ ನಾಲ್ಕನೆ ಹಾವಳಿ ಬಂಗರಾಜನು ಇಕ್ಕೇರಿಗೆ ಕೊಡಬೇಕಾಗಿದ್ದ 3500 ವರಹಗಳನ್ನು ಕೊಡದೆ ಇದ್ದುದಕ್ಕಾಗಿ ಅವನನ್ನು ಕೆಳದಿ ರಾಜಧಾನಿಗೆ ಕರೆಸಿ ಪಹರೆಯಲ್ಲಿಡಲಾಗಿತ್ತು. ಆಗ ಪಾಣೆ ಮಂಗಳೂರಿನ ಹತ್ತಿರದ ಮೊಗರನಾಡಿನಲ್ಲಿದ್ದ ದಾಮರ್ಸ ಪೈ, ಜಾಮೀನಾಗಿ ನಿಂತು ಅರಸನನ್ನು ಬಿಡುಗಡೆ ಮಾಡಿದ್ದ. ದಾಮರ್ಸ ಪೈ ಮಾಡಿದ ಸಹಾಯಕ್ಕಾಗಿ ವೀರನರಸಿಂಹ ಹಾವಳಿ ಬಂಗರಾಜನು ಮೊಗರನಾಡು ಸಾವಿರ ಸೀಮೆಯಿಂದ ಮೊಗರನಾಡು ದಾಮರ್ಸ ಪೈ ಸ್ಥಾಪಿಸಿದ ಶ್ರೀಲಕ್ಷ್ಮೀ ನರಸಿಂಹ ದೇವಸ್ಥಾನಕ್ಕೆ ಉಂಬಳಿ ಬಿಟ್ಟನು.[153] ಈ ದೇವಾಲಯವು ಇಂದೂ ಸಹ ಈ ಮೊಗರನಾಡು ಸೀಮೆಯಲ್ಲಿ ಅಸ್ತಿತ್ವದಲ್ಲಿದೆ.

ವಲಸೆ ಬಂದ ಸಾರಸ್ವತರು ತಮ್ಮದೇ ಆದ ಮಠಗಳನ್ನು ಸ್ಥಾಪಿಸಿಕೊಂಡರೂ, ಬೇರೆ ಸಮುದಾಯಗಳೊಂದಿಗೆ ಭಿನ್ನಾಭಿಪ್ರಾಯಗಳು ಬಂದಾಗ ಶೃಂಗೇರಿ ಮಠದ ನಿರ್ದೇಶನದಂತೆ ನಡೆದುಕೊಳ್ಳಬೇಕಾಗಿತ್ತು. ಈ ವ್ಯವಸ್ಥೆಯನ್ನು ಕೆಳದಿಯರಸರೂ ಊರ್ಜಿತಗೊಳಿಸಿದ್ದರು. ಬ್ರಾಹ್ಮಣರಂತೆ ವೇದಾಧ್ಯಯನ, ಪೂಜೆ ಪುನಸ್ಕಾರಗಳಲ್ಲಿ ಮುಂಚೂಣಿಯಲ್ಲಿದ್ದ ಸಾರಸ್ವತರಿಗೂ ಬ್ರಾಹ್ಮಣರಿಗೂ ಹಲವು ಸಂದರ್ಭಗಳಲ್ಲಿ ಬಿಕ್ಕಟ್ಟು ಸಂಭವಿಸಿತ್ತು. ಸಾರಸ್ವತರ ದೇವಾಲಯಗಳ ಎಲ್ಲಾ ವಿಧಿ ವಿಧಾನಗಳನ್ನು ಪೂಜೆ ಪುನಸ್ಕಾರಗಳನ್ನು  ಅವರೇ ನಿರ್ವಹಿಸುತ್ತಾರೆ ಹೊರತು ಬೇರೆ ಬ್ರಾಹ್ಮಣರಿಗೆ ಅವಕಾಶವಿಲ್ಲ. ಕ್ರಿಶ 1604ರ ಕಡತವೊಂದರಲ್ಲಿ ಕೆಳದಿ ವೆಂಕಟಪ್ಪ ನಾಯಕನು ಕೊಂಕಣ ಬ್ರಾಹ್ಮಣರು ವೇದ ಪಠಿಸದಂತೆ ಮತ್ತು ಪೌರೋಹಿತ್ಯ ವಹಿಸಿದಂತೆ ತಡೆಯುವ ಅಧಿಕಾರವನ್ನು ಹೊಂಬಂಣ ಸೆಟ್ಟಿಗೆ ನೀಡಿದ್ದ. ಅಲ್ಲದೆ ಕೊಂಕಣಿಗರು ಜನಿವಾರ ಹಾಕುವ ವಿಚಾರದ ಗೊಂದಲವೂ ಇಲ್ಲಿ ಪರಿಹರಿಸಲ್ಪಟ್ಟಿತು. ಈ ದಾಖಲೆ ಕೊಂಕಣ ಬ್ರಾಹ್ಮಣರು ಪೌರೋಹಿತ್ಯ ನಡೆಸಲೂ ಪ್ರಯತ್ನಿಸುತ್ತಿದ್ದರೆಂದೂ ಆದರೆ ಅದನ್ನು ಶೃಂಗೇರಿ ಮಠ ತಡೆಹಿಡಿಯಿತೆಂದೂ ತಿಳಿದು ಬರುತ್ತದೆ.[154]

**ಕೊಂಕಣಿ ಕ್ರೈಸ್ತರು:** ಕ್ರಿ.ಶ. 1500ರ ಮೊದಲು ಕರ್ನಾಟಕದ ಕರಾವಳಿ ಪ್ರದೇಶದಲ್ಲಿ ದೇಶೀಯ ಕ್ರೈಸ್ತರು ಇರಲಿಲ್ಲ. ತುಳುನಾಡು ಕೆಳದಿಯ ಅಧೀನಕ್ಕೆ ಬರುವ ಮೊದಲು ಇಲ್ಲಿ  ಪೋರ್ಚುಗೀಸ್ ಕ್ರೈಸ್ತರು ಇದ್ದರಲ್ಲದೆ ಕೊಂಕಣಿ ಕ್ರೈಸ್ತರು ಹೆಚ್ಚಿನ ಸಂಖ್ಯೆಯಲ್ಲಿರುವ ಸಾಧ್ಯತೆಗಳು ಕಡಿಮೆ. ಇಂದು ಈ ಪ್ರದೇಶದ ಹೆಚ್ಚಿನ ಕ್ರೈಸ್ತರ ಮಾತೃ ಭಾಷೆ ಕೊಂಕಣಿ. ಅಂದರೆ ಅವರು ತದ ನಂತರ ಹೊರಗಡೆಯಿಂದ ಬಂದು ಈ ಭಾಗದಲ್ಲಿ ನೆಲೆಸಿದರು ಎನ್ನುವುದು ಸ್ಪಷ್ಟವಾಗುತ್ತದೆ. ಪೋರ್ಚುಗೀಸ್ ಕ್ರೈಸ್ತರ ಪ್ರಭುತ್ವದ ಅಡಿಯಲ್ಲಿಯೇ ಬದುಕುತ್ತಿದ್ದ ಕೊಂಕಣಿ ಕ್ರೈಸ್ತರು ಆ ಪ್ರಭುತ್ವದ ಇಂಕ್ವಿಜಿಶನ್ ಮುಂತಾದ ಧಾರ್ಮಿಕ ಕಿರುಕುಳದಿಂದಾಗಿ ಗೋವೆಯನ್ನು ಬಿಟ್ಟು ಕೆಳದಿ ನಾಯಕರ ರಾಜ್ಯಕ್ಕೆ ಬರಬೇಕಾಯಿತು.[155] ಅಂದರೆ ಕೊಂಕಣಿ ಕ್ರೈಸ್ತರ ವಲಸೆಗೆ ಒಂದು ರೀತಿಯಲ್ಲಿ ಪೋರ್ಚುಗೀಸ್ ಕ್ರೈಸ್ತರೇ ಕಾರಣರಾಗಿದ್ದರು.

ಕೊಂಕಣಿ ಕ್ರೈಸ್ತರು. ಪೋರ್ಚುಗೀಸರಿಂದ ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡ ಸ್ಥಳೀಯ ಕೊಂಕಣಿ

ಮಾತನಾಡುವ ವರ್ಗ, ತಮ್ಮ ಮತಾಚರಣೆಯಲ್ಲಿ ಈ ಹಿಂದೆ ತಾವು ಅನುಸರಿಸಿಕೊಂಡು ಬರುತ್ತಿದ್ದ ಹಲವಾರು ಆಚರಣೆಗಳನ್ನು ಯಥಾವತ್ತಾಗಿ ಮುಂದುವರಿಸಿದ್ದರು. ಕ್ರೈಸ್ತ ತತ್ವಗಳಿಗೆ ವಿರುದ್ಧವಾದ ಈ ಆಚರಣೆಗಳನ್ನು ಪೋರ್ಚುಗೀಸರು ನಿಷೇಧಿಸಿದ್ದರು. ಆವರಿಗೆ ಧಾರ್ಮಿಕ ಕಿರುಕುಳವನ್ನು ನೀಡಿದರು. ಇದರಿಂದ ತತ್ತರಿಸಿದ ಈ ಸಮುದಾಯ ಅನಿವಾರ್ಯವಾಗಿ ಗೋವಾವನ್ನು ತ್ಯಜಿಸಬೇಕಾಯಿತು.[156] ಕೆಳದಿ ರಾಣಿ ಚೆನ್ನಮ್ಮಾಜಿ ದೇಶೀಯ ಕ್ರೈಸ್ತರ ಬಗ್ಗೆ ಸ್ನೇಹ ಮತ್ತು ಸಹಕಾರ ಮನೋಭಾವ ಹೊಂದಿದ್ದು. ಅವರ ಬೇಡಿಕೆಗಳನ್ನು ಬೆಂಬಲಿಸಿದಳು. ಆದರೆ ಪೋರ್ಚುಗೀಸ್ ಕ್ರೈಸ್ತರಿಗೆ ಹೆಚ್ಚು ಮನ್ನಣೆ ನೀಡುತ್ತಿರಲಿಲ್ಲ.[157] ಮಂಗಳೂರಿನಲ್ಲಿ ಅಂದಿನ ಮಿಲಾಗ್ರಿಸ್ ಇಗರ್ಜಿಯನ್ನು ಕಟ್ಟಲು ಕ್ರೈಸ್ತ ಅಧಿಕಾರಿಗಳಾಗಿದ್ದ ಬಿಷಪ್ ತೋಮಸ್ ಡಿ'ಕ್ರಾಸ್ಟೊ ಅವರಿಗೆ ಸೂಕ್ತವಾದ ಸ್ಥಳವನ್ನೂ ನೆರವನ್ನೂ ನೀಡಿದಳು.[158] ಇದಲ್ಲದೆ ಉಡುಪಿಯ ಬಳಿ ಕಲ್ಯಾಣಪುರದಲ್ಲಿರುವ ದೇಶೀಯ ಕ್ರೈಸ್ತರು ಇಗರ್ಜಿಯನ್ನು ಕಟ್ಟಿಕೊಳ್ಳಬೇಕಾದಾಗ ಅವರಿಗೆ ನಿವೇಶನವನ್ನು ದಾನ ಮಾಡಿ ಬೇಕಾದ ಸಹಾಯವನ್ನು ನೀಡಿದ್ದಳು ಎಂದು ಕಲ್ಯಾಣಪುರದಲ್ಲಿರುವ ಇಗರ್ಜಿಯ ದಾಖಲೆ ತಿಳಿಸುತ್ತದೆ.[159]

ಫ್ರಾನ್ಸಿಸ್ ಬುಕಾನನ್, ಕೆಳದಿ ಅರಸರು ಕ್ರೈಸ್ತಧರ್ಮಕ್ಕೆ ನೀಡಿದ ಪ್ರೋತ್ಸಾಹಕ್ಕಾಗಿ ಹಲವು ಪ್ರಶಂಸೆಯ ಮಾತುಗಳನ್ನು ತನ್ನ ಗ್ರಂಥದಲ್ಲಿ ದಾಖಲಿಸಿದ್ದಾನೆ.[160] ಬುಕಾನನ್‌ನ ಪ್ರಕಾರ ರಾಣಿ ಚೆನ್ನಮ್ಮಾಜಿಯು ಸೇರಿದಂತೆ ಇತರ ಕೆಳದಿ ನಾಯಕರ ಕಾಲದಲ್ಲಿ, ಒಟ್ಟು ಸುಮಾರು ಎಂಭತ್ತು ಸಾವಿರ ಕ್ರೈಸ್ತರು ಗೋವಾದಿಂದ ಬಂದು ಕರ್ನಾಟಕದ ಕರಾವಳಿ ಪ್ರದೇಶದಲ್ಲಿ ನೆಲೆವೂರುವಂತೆ ಮಾಡಿದರು. ಅವರೆಲ್ಲರೂ ಕೊಂಕಣಿ ಕ್ರೈಸ್ತರಾಗಿದ್ದರು. ಅವರು ತಮ್ಮ ಭಾಷೆ, ಉಡುಪು, ನಡವಳಿಕೆಯನ್ನು ಮುಂದುವರಿಸುವುದಕ್ಕೆ ಕೆಳದಿ ನಾಯಕರು ಯಾವ ಅಡ್ಡಿ ಆತಂಕಗಳನ್ನು ಒಡ್ಡಿರಲಿಲ್ಲ. ಈ ಪ್ರದೇಶದ ಕೊಂಕಣಿ ಕ್ರೈಸ್ತರು ಉಡುಪು, ಭಾಷೆ ಮತ್ತು ನಡವಳಿಕೆಯಲ್ಲಿ ಅಚ್ಚ ದೇಶೀಯರೇ ಆಗಿದ್ದರೆಂದು ಬುಕಾನನ್ ಬರೆದಿದ್ದಾನೆ. ಕೇವಲ ಇಗರ್ಜಿಯ ಅಧಿಕಾರಿಗಳು ಮಾತ್ರ ತಮ್ಮ ಅಧಿಕಾರಕ್ಕೆ ತಕ್ಕಂತೆ ಉಡುಪನ್ನು ಧರಿಸುತ್ತಿದ್ದರು. ಅವರು ಸಹ ಕೊಂಕಣಿ ಕುಟುಂಬಗಳಿಂದ ಬಂದವರಾಗಿದ್ದರು. ಉದ್ದೇಶ ಪೂರ್ವಕವಾಗಿಯೇ ಚರ್ಚಿನ ದೇಶೀಯ ಅಧಿಕಾರಿಗಳಿಗೆ ಗೋವಾದ ಸೆಮಿನರಿ(ಗುರುಕುಲ) ಯಲ್ಲಿ ಪೋರ್ಚುಗೀಸ್ ಮತ್ತು ಲ್ಯಾಟಿನ್ ಭಾಷೆಗಳ ಮೂಲಕ ಧಾರ್ಮಿಕ ವಿದ್ಯಾಭ್ಯಾಸವನ್ನು ನೀಡಲಾಗುತ್ತಿತ್ತು. ಕೆಳದಿ ರಾಜ್ಯದಲ್ಲಿ ಚೆನ್ನಮ್ಮಾಜಿಯ ಕಾಲಕ್ಕೆ ಇಪ್ಪತ್ತೇಳು ಇಗರ್ಜಿಗಳಿದ್ದವು. ಪ್ರತಿಯೊಂದು ಇಗರ್ಜಿಗೂ ಒಬ್ಬ ವಿಕಾರ್ ಇದ್ದನು. ಒಟ್ಟು ಇಪ್ಪತ್ತೈದು ಜನ ವಿಕಾರ್‌ಗಳ ಮೇಲ್ವಿಚಾರಣೆಗೆ ವಿಕಾರ್ ಜನರಲ್ ಎಂಬ ಅಧಿಕಾರಿಯಿದ್ದರು. ಇವರೆಲ್ಲರೂ ಗೋವಾದಲ್ಲಿದ್ದ ಆರ್ಚ್‌ಬಿಷಪ್‌ರವರ ಅಧಿಕಾರ ಕ್ಷೇತ್ರಕ್ಕೆ ಒಳಪಟ್ಟಿದ್ದರೆಂದು ಬುಕಾನನ್ ತಿಳಿಸುತ್ತಾನೆ. ಅವರಲ್ಲಿ ಅನೇಕರು ಬಡವರಾಗಿದ್ದರೂ ಅವರಿಗೆ ಪೋರ್ಚುಗೀಸರಿಗೆ ಇದ್ದಂತೆ ಯಾವುದೇ ದುರಾಭ್ಯಾಸಗಳು ಇರಲಿಲ್ಲ. ಆವರಲ್ಲಿ ಕ್ರಿಯಾಶೀಲವಾದ ಕೈಗಾರಿಕಾ ಕೌಶಲ್ಯವಿದ್ದಿತು.[161]

ಕೆಳದಿಯ ಕರಾವಳಿಯ ಬಂದರುಗಳಾದ ಮಂಗಳೂರು, ಬಾರಕೂರು, ಬಸ್ರೂರು, ಮತ್ತು ಹೊನ್ನಾವರದ ಮೂಲಕ ನಡೆಸುತ್ತಿದ್ದ ಹೊರ ದೇಶದ ವ್ಯಾಪಾರದಲ್ಲಿ ಕ್ರೈಸ್ತರ ಪಾತ್ರ ಪ್ರಧಾನವಾಗಿತ್ತೆಂದು ಹೇಳಬಹುದು. ಇದರ ಜೊತೆಗೆ ಗೋವೆಯೊಡನೆ ನಡೆಯುತ್ತಿದ್ದ ವ್ಯಾಪಾರದಲ್ಲಿ ಇವರದ್ದೇ ಪ್ರಾಯಶಃ ಹೆಚ್ಚು ಪಾಲು ಇದ್ದಿತು. ಕೃಷಿಕರಾಗಿ ಅವರು ಭತ್ತ, ತೆಂಗು, ಅಡಿಕೆ ಮೊದಲಾದವುಗಳನ್ನು ಬೆಳೆಯುತ್ತಿದ್ದರು. ಒಟ್ಟಿನಲ್ಲಿ ಆರ್ಥಿಕ ಕ್ಷೇತ್ರದಲ್ಲೂ ಅವರ ಪಾತ್ರ ಸಾಕಷ್ಟು ಪ್ರಧಾನವಾಗಿತ್ತೆಂದು ಹೇಳಬಹುದು. ಇವರು ಕೆಳದಿಯ ಸೈನ್ಯದಲ್ಲಿಯೂ ಸೇವೆ ಸಲ್ಲಿಸಿದ್ದರು. ವಲಸೆ ಬಂದ ಕ್ರೈಸ್ತರ ಪೈಕಿ ಒಂದು ವರ್ಗವಾದ 'ಚಾರ್ಡೋಗಳು' ಹಿಂದೂ ಕ್ಷತ್ರಿಯರಂತೆ ಗೋವಾದಲ್ಲಿ ಯೋಧರಾಗಿದ್ದರು. ಆ ಹಿನ್ನೆಲೆಯಲ್ಲಿ ತುಳುನಾಡಿಗೆ ವಲಸೆ ಬಂದ ಮೇಲೆ ಕೆಳದಿಯ ಸೇನೆಯಲ್ಲಿ ಮುಂದುವರೆದರು. ಉದಾಹರಣೆಗೆ ಕಲ್ಯಾಣಪುರದ ಲೂಯಿಸ್ ಕುಟುಂಬಕ್ಕೆ ಸೇರಿದ್ದ ಅನೇಕರು ಕೆಳದಿ ಸೇನೆಯಲ್ಲಿದ್ದ ಕಾರಣಕ್ಕೆ ಕೆಳದಿಯರಸರಿಂದ ಭೂಮಿಯನ್ನು ಇನಾಂ ಆಗಿ ಪಡೆದಿದ್ದರು.[162]

ಕ್ರಿ.ಶ.1630ರಲ್ಲಿ ಭಾರತದಲ್ಲಿದ್ದ ಇಂಗ್ಲೀಷ್ ಪ್ರವಾಸಿ ಥಾಮಸ್ ಹೆರ್ಬರ್ಟ್ ಮಂಗಳೂರಿನಲ್ಲಿ 20,000 ಕ್ರೈಸ್ತರಿದ್ದಾರೆಂದು ಜೆಸೂಯಿಟರು ಹೇಳಿದ ಸಂಗತಿಯನ್ನು ತಿಳಿಸುತ್ತಾನೆ.[163] ಪಿಯತ್ರೋ ಡೆಲ್ಲಾ ವಲ್ಲೆ ಕೇವಲ 3 ಚರ್ಚುಗಳನ್ನು ಉಲ್ಲೇಖಿಸಿರುವುದು ಮತ್ತು ಸುಮಾರು 10 ವರ್ಷಗಳ ಅಂತರದಲ್ಲಿ 20,000 ಕ್ರೈಸ್ತರಿದ್ದಾರೆಂದು ಇಂಗ್ಲೀಷ್ ಪ್ರವಾಸಿ ಹೇಳಿರುವುದು ಅನುಮಾನಕ್ಕೆಡೆ ಮಾಡಿಕೊಡುತ್ತದೆ. ಕ್ರಿ.ಶ.17ನೇ ಶತಮಾನದ ಕೊನೆಯಲ್ಲಿ ಇಟಲಿ ದೇಶದಿಂದ ಬಂದ ಜೆಮಲ್ಲಿ ಕರೇರಿ ಗೋವಾದ ಅವನತಿಯನ್ನು ವಿವರಿಸುತ್ತಾನೆ. ಅವನ ಪ್ರಕಾರ ಗೋವೆಯಲ್ಲಿ ಒಟ್ಟು 20,000 ಜನಸಂಖ್ಯೆ ಇತ್ತು,[164] ಎಂದು ಹೇಳುವುದನ್ನು ಗಮನಿಸಿದರೆ ಮಂಗಳೂರಿನಲ್ಲಿ 20,000 ಕ್ರೈಸ್ತರು ಇದ್ದಿರಲಾರರು ಎಂದು ತಿಳಿಯಬಹುದು. ಬುಕಾನನ್ ಕೊಂಕಣಿ ಕ್ರೈಸ್ತರ ಬಗ್ಗೆ ಕೆಲವು ಅಂಕಿ ಅಂಶಗಳನ್ನು ನೀಡಿದ್ದಾನೆ. ಅವನ ಪ್ರಕಾರ ಕೆಳದಿ ಆಡಳಿತದ ಅಂತ್ಯದಲ್ಲಿ ಇಂದಿನ ದಕ್ಷಿಣಕನ್ನಡ ಜಿಲ್ಲೆಯ ಮಂಗಳೂರು ಮತ್ತು ಸುತ್ತಮುತ್ತಲ ಭಾಗದಲ್ಲಿ ಒಟ್ಟು 2,545 ಕ್ರೈಸ್ತರ ಮನೆಗಳಿದ್ದವು. ಅವರ ಪೈಕಿ 3,701 ಪುರುಷರು, 3,603 ಸ್ತ್ರೀಯರು, 1,968 ಬಾಲಕರು, 1,605 ಬಾಲಕಿಯರು ಒಟ್ಟು 10,877 ಕ್ರೈಸ್ತರಿದ್ದರು. ಇವರು ಪ್ರಧಾನವಾಗಿ ಕೃಷಿಕರು, ಮತ್ತು ವ್ಯಾಪಾರಿಗಳು ಆಗಿದ್ದರು.[165]

**ಕೋಟೆ ಕ್ಷತ್ರಿಯರು:** ಇಕ್ಕೇರಿ ನಾಯಕರ ಕಾಲದಲ್ಲಿ ಕಾಸರಗೋಡು ಸೇರಿದಂತೆ ತುಳುನಾಡಿನ ಕರಾವಳಿ ಪ್ರದೇಶದಲ್ಲಿ ಬಂದು ನೆಲೆಸಿದ ಜನರಲ್ಲಿ ರಾಮರಾಜ ಕ್ಷತ್ರಿಯರು, ಆರ್ಯ ಮರಾಠ ಕ್ಷತ್ರಿಯರು, ಕುಮಾರ ಕ್ಷತ್ರಿಯರು, ಒಕ್ಕಲಿಗರು ಪ್ರಮುಖರಾಗಿದ್ದಾರೆ. ಇವರ ಜೊತೆಗೆ ಕನ್ನಡ ಅಗಸರು, ಕ್ಷೌರಿಕರು ಮೊದಲಾದ ವೃತ್ತಿಯಾಧಾರಿತ ಜನವರ್ಗದವರು ಬಂದರು ಎಂದೂ ಹೇಳಲಾಗುತ್ತಿದೆ. ಇವರೆಲ್ಲ ಒಂದಲ್ಲ ಒಂದು ರೀತಿಯಲ್ಲಿ ಇಕ್ಕೇರಿ ಸಂಸ್ಥಾನದ ಜೊತೆ ಸಂಬಂಧ ಇರಿಸಿಕೊಂಡವರಾಗಿದ್ದಾರೆ. ಇವರಲ್ಲಿ ಕೆಲವರು

ಕಾಸರಗೋಡು ಪ್ರದೇಶದಲ್ಲಿ ನೆಲೆಸಿರುವರಾದರೂ ಇವರ ಮನೆ ಮಾತು ಕನ್ನಡ.

ಕೋಟೆಯವರು ಅಥವಾ ರಾಮರಾಜ ಕ್ಷತ್ರಿಯರು, ಮೂಲತ: ರತ್ನಗಿರಿ ಜಿಲ್ಲೆಯ ವಿಜಯದುರ್ಗ ಎಂಬ ರೇವು ಪಟ್ಟಣದವರು ಎಂದು ಇತಿಹಾಸಕಾರರ ಅಭಿಪ್ರಾಯ. ಕೆಳದಿಯ ಅರಸರ ಆಮಂತ್ರಣದ ಮೇರೆಗೆ ಆಗಮಿಸಿದ ಇವರನ್ನು ಕೋಟೆಪಾಲಕರನ್ನಾಗಿ ನೇಮಿಸಲಾಯ್ತು.[166] ಅದೇ ರೀತಿ ರಾಮಕ್ಷತ್ರಿಯ ಜನಾಂಗದವರು ಸುಮಾರು ಕ್ರಿ.ಶ.16ನೇ ಶತಮಾನದಲ್ಲಿ ಗೋವಾದಿಂದ ಕರ್ನಾಟಕದ ಕರಾವಳೀ ತೀರಕ್ಕೆ ವಲಸೆ ಬಂದರೆಂಬ ಅಭಿಪ್ರಾಯವಿದೆ. ಗೋವಾ ಗಜೆಟಿಯರ್‌ನಲ್ಲಿ ಉಲ್ಲೇಖವಾದಂತೆ ಇವರು ಗೋವಾದ ಮೂಲನಿವಾಸಿಗಳೂ ಹೌದು.[167] ಥರ್ಸ್ಟನ್‌ನ ಅಭಿಪ್ರಾಯದಲ್ಲಿ ಈ ಸಮುದಾಯ ವಲಸೆ ಬರಲು ಪ್ರಮುಖ ಕಾರಣವೆಂದರೆ, ಪೋರ್ಚುಗೀಸರು ಪ್ರಾರಂಭಿಸಿದ ದಬ್ಬಾಳಿಕೆಯ ಮತಾಂತರ.[168] ಗೋವಾ ಪ್ರದೇಶದಲ್ಲಿ ಇವರು ವಾಸಿಸುತ್ತಿದ್ದರು ಎಂಬುದಕ್ಕೆ ಉತ್ತರ ಕನ್ನಡದಲ್ಲಿ ಇವರು ಕೊಂಕಣಿ ಮಾತಾಡುವುದು ಸಾಕ್ಷಿಯಾಗಿದೆ. ಕೋಟೆಯ ಭದ್ರತೆಗಾಗಿಯೇ ಕರೆತಂದು ನೇಮಿಸಿದ್ದ ಜನ ಆದ ಕಾರಣಕ್ಕೆ ಇವರನ್ನು ಕೋಟೆಯವರೆಂದು ಕೋಟೆ ಕ್ಷತಿಯರೆಂದು ಕರೆದರು. ಇವರು ಇಕ್ಕೇರಿ ನಾಯಕರು ಕಟ್ಟಿಸಿದ ಚಂದ್ರಗಿರಿ, ಕಾಸರಗೋಡು, ಕುಂಬಳೆ, ಪೊಳಲಿ, ಬೇಕಲ, ಬಂದಡ್ಕ ಮೂಡಬಿದ್ರಿ ಕೋಟೆಗಳ ಪ್ರದೇಶಗಳಲ್ಲಿ ನೆಲೆಸಿದ್ದಾರೆ. ಇದು ಇವರಿಗೂ ಕೋಟೆಗೂ ಇರುವ ಸಂಬಂಧವನ್ನು ಸೂಚಿಸುತ್ತದೆ.

ಕೆಲವು ಮೂಲಗಳ ಪ್ರಕಾರ ಈ ಸಮುದಾಯದ ಜನರು ಶ್ರೀ ರಾಮನ ಭಕ್ತರಾದ ಕಾರಣ ರಾಮಕ್ಷತ್ರಿಯರೆಂದೂ ಕರೆಸಿಕೊಂಡಿದ್ದಾರೆ.[169] ಆದರೆ ಈ ಹೆಸರಿನಿಂದ ಸಮುದಾಯ ಗುರುತಿಸಿಕೊಳ್ಳಲು ಬೇರೆ ಕಾರಣವೂ ಇದೆ. ಶೃಂಗೇರಿ ಮಠದ ಭಿನ್ನವತ್ತಳೆಗಳಲ್ಲಿ ಈ ಕ್ಷತ್ರಿಯ ಸಮುದಾಯದವರು ಹಲವು ಬಾರಿ ಕಾಣಿಸಿಕೊಳ್ಳುತ್ತಾರೆ. ಈ ಪ್ರದೇಶಕ್ಕೆ ರಾಮರಾಜ ಕ್ಷತ್ರಿಯರು ಬರಲು ಬೇರೆ ಕಾರಣವನ್ನು ತಿಳಿಯಬಹುದಾಗಿದೆ. 'ಚಂದಾವರದಲ್ಲಿ ನಮಗೆ ಸಮಸ್ತರಿಗೆ ಆದಿ ಸ್ಥಳವು' ಎಂಬ ಹೇಳಿಕೆಯನ್ನು ಈ ಸಮುದಾಯದ ಜನರು ಕ್ರಿ.ಶ.1633ರಲ್ಲಿ ಶೃಂಗೇರಿ ಮಠಕ್ಕೆ ಬರೆದುಕೊಟ್ಟ ಬಿನ್ನವತ್ತಳೆಯಲ್ಲಿ ದಾಖಲಿಸಿದ್ದಾರೆ.[170] ಚಂದಾವರದ ಕದಂಬ ವಂಶೀಯರಲ್ಲಿ ಕೆಲವರಿಗೆ ಇಕ್ಕೇರಿ ಅರಸರಾದ ರಾಮರಾಜ ನಾಯಕನು (1572–1583) ರಾಜಕೀಯ ಸ್ಥಾನಮಾನಗಳನ್ನು ನೀಡಿದ್ದಿರಬೇಕು. ಕೃತಜ್ಞತೆಯ ರೂಪದಲ್ಲಿ ಅವನ ಹೆಸರಲ್ಲಿ ಇವರು ತಮ್ಮನ್ನು ಗುರುತಿಸಿಕೊಂಡಿರಬೇಕು.[171] ಶಿವಪ್ಪ ನಾಯಕನ ವಿಶ್ವಾಸಕ್ಕೆ ಅರ್ಹರಾದ ರಾಮರಾಜ ಕ್ಷತ್ರಿಯರನ್ನು ಇವನು ಚಂದಾವರದಿಂದ ಜೊತೆಗೆ ಕರೆತಂದನು. ತುಳುನಾಡಿಗೆ ಇವರೊಂದಿಗೆ ಆರ್ಯ ಮರಾಠ ಕ್ಷತ್ರಿಯರು, (ಶಿವಾಜಿ ಕ್ಷತ್ರಿಯರು) ಕುಮಾರ ಕ್ಷತ್ರಿಯರು, ಹೆಗ್ಗಡೆಯವರು, ಹಾಲುಮತಸ್ಥ ಕುರುಬರು, ಮಾದಿಗರು, ಚಕ್ಲಿಯಾರರು, ದೇವಾಂಗರು, ದೇವಾಡಿಗರು, ಬೋಯಿಗಳು, ಕ್ಷೌರಿಕರು, ಅಗಸರು, ವೀರಶೈವರು ಮೊದಲಾದ ಸಮುದಾಯದವರು ಆಗಮಿಸಿದರು ಎಂಬುದಾಗಿ ತಿಳಿದು ಬರುತ್ತದೆ.[172] ಕಾಂತಮಂಗಲ ಕೋಟೆಯ ಸಮೀಪವಿರುವ ಆರ್ಯ ಮರಾಠ ಕ್ಷತ್ರಿಯರು ಮಹಾರಾಷ್ಟ್ರ ಮೂಲದವರಾಗಿದ್ದು

ಇಂದಿಗೂ ಅವರ ಮನೆ ಮಾತು ಕನ್ನಡ.

ಕೋಟೆ ಕ್ಷತ್ರಿಯರು ಕೋಟೆಗಳ ರಕ್ಷಣೆಯ ಹಿನ್ನೆಲೆಯಲ್ಲಿ ಬಂದರು ಎಂಬುದು ಸ್ಪಷ್ಟ. ಕೆಳದಿಯರಸರ ಕಾಲದ ಕೋಟೆಗಳ ಅಧ್ಯಯನವು ಕೆಳದಿಯ ರಾಜರುಗಳು, ಕೋಟೆಗಳಿಗೆ ಕೊಟ್ಟ ಪ್ರಾಮುಖ್ಯತೆಯನ್ನು ಅನಾವರಣಗೊಳಿಸುತ್ತದೆ. ಕೋಟೆಗಳ ರಕ್ಷಣೆಗೆ ಕೋಟೆ ಕ್ಷತ್ರಿಯರನ್ನು ತುಳುನಾಡಿಗೆ ಕರೆತಂದು ನಿಯೋಜಿಸಿದ ವಿಚಾರದ ಹಿನ್ನೆಲೆಯನ್ನು ನೋಡಿದಾಗ ಇದು ವೇದ್ಯವಾಗುತ್ತದೆ. ತುಳುನಾಡಿನಲ್ಲಿ ಈ ಕಾರ್ಯಕ್ಕೆ ಬೇಕಾದಷ್ಟು ಯೋಗ್ಯ ಜನ ಲಭ್ಯರಿದ್ದರೂ ತಮ್ಮ ನಂಬುಗೆಯ ಮತ್ತು ಕೋಟೆಯ ನಿರ್ವಹಣೆಯಲ್ಲಿ ನುರಿತವರಾದ ಈ ಕ್ಷತ್ರಿಯರನ್ನು ಕರೆತಂದಿರುವುದು ಆ ಅರಸರು ಸೈನಿಕ ವ್ಯವಸ್ಥೆಗೆ ನೀಡಿದ್ದ ಮಹತ್ವ ಮತ್ತು ಸ್ಥಳೀಯರ ಕುರಿತಾಗಿ ಅವರಿಗಿದ್ದ ಅಪನಂಬಿಕೆಯ ಕಾರಣಕ್ಕಾಗಿ. ಈ ಕೋಟೆ ಕ್ಷತ್ರಿಯರು ಯುದ್ಧಭೂಮಿಯಲ್ಲಿ ನುರಿತವರಾಗಿದ್ದರು. ಇವರಲ್ಲಿ ಪ್ರಸಿದ್ಧರಾದ ಕೆಲವು ವೀರರ ಜನಜನಿತ ಕಥೆಗಳು ಈ ಭಾಗದಲ್ಲಿ ಪ್ರಚಲಿತದಲ್ಲಿದೆ. ಕೋಟೆಯವರ ಕುಟುಂಬದಲ್ಲಿ ಜನಿಸಿದ ಕೆಂಗಣ್ಣ ನಾಯಕ ಶೂರ ಧೀರನಾಗಿ ಪ್ರಸಿದ್ಧನಾಗಿದ್ದ. ಕ್ರಿ.ಶ.17ನೇ ಶತಮಾನದಲ್ಲಿ ಇವನು ಬದುಕಿದ್ದು, ಏಕಾಂಗಿಯಾಗಿ ಅನೇಕ ಶತ್ರುಗಳನ್ನು ಹೊಡೆದುರುಳಿಸಿದ ಎನ್ನುವ ಜನಜನಿತ ಕಥೆಗಳಿವೆ.[173] ಹಾಗೆಯೇ ತಿಮ್ಮ ನಾಯಕ ಮತ್ತು ಕೆಂಗಣ್ಣ ನಾಯಕರು ಪ್ರಸಿದ್ಧರಾಗಿದ್ದಾರೆ. ಬೇಕಲದಲ್ಲಿ ಕೋಟೆಯವರ ವರ್ಗದಲ್ಲಿ ಜನಿಸಿದ ತಿಮ್ಮ ನಾಯಕ ವಂಶ ವೃತ್ತಿಗೆ ಅನುಸಾರವಾಗಿ ಶೂರನೂ ಧೀರನೂ ಆಗಿದ್ದಾನೆ. ಈತ ಜಮಲಾಬಾದಿನ ಕೋಟೆಗೆ ಮುತ್ತಿಗೆ ಹಾಕಿದ್ದ ಮತ್ತು ಅನೇಕ ಬ್ರಿಟೀಷರನ್ನು ವೀರಾವೇಷದಿಂದ ಹೋರಾಡಿ ಕೊಂದನೆಂದು ಹೇಳಲಾಗಿದೆ.[174]

ಕ್ರಿ.ಶ. 1633ರಲ್ಲಿ ವೀರಭದ್ರನಾಯಕನ ಕಾಲದಲ್ಲಿ ಕೋಟೆ ಕ್ಷತ್ರಿಯರಲ್ಲಿ ಒಂದು ಪಂಗಡದವರಾದ ಸೇರ್ವೆಕಾರರು ಬರೆದು ಕೊಟ್ಟ ಭಿನ್ನವತ್ತಳೆಯ ಪ್ರಕಾರ ಇವರು ಜನಿವಾರಧಾರಣೆಯ ಹಕ್ಕನ್ನು ಶೃಂಗೇರಿ ಮಠದ ಮೂಲಕ ಪಡೆಯುತ್ತಾರೆ. ಈ ದಾಖಲೆಯಂತೆ ಇವರು ಘಟ್ಟದ ಕೆಳಗಣ ಪರಶುರಾಮ ಕ್ಷೇತ್ರದ ಕೋಟೆಯ ಉಸ್ತುವಾರಿಯನ್ನು ನೋಡಿಕೊಳ್ಳುವವರಾಗಿದ್ದು ಸೇರ್ವೆಗಾರ, ಹವಾಲದಾರ, ನಾಯಕ, ಮುಂತಾದ ಉಪನಾಮಗಳನ್ನು ಹೊಂದಿದ್ದರು.[175] ಒಟ್ಟಿನಲ್ಲಿ ತುಳುನಾಡಿನ ನಾಯಕತ್ವದಲ್ಲಿ ಮುಂಚೂಣಿಯಲ್ಲಿದ್ದ ಬಂಟರು ಸೈನಿಕ ವ್ಯವಸ್ಥೆಯಲ್ಲಿ ಮುಂಚೂಣಿಯಲ್ಲಿದ್ದರೂ ಇವರನ್ನು ನಂಬದ ಕೆಳದಿಯರಸರು ತಮ್ಮ ನಂಬುಗೆಯ ಕೋಟೆ ಕ್ಷತ್ರಿಯರನ್ನು ಮುಂಚೂಣಿಗೆ ತಂದಿರಬೇಕೆಂದುಹೇಳಲಾಗಿದೆ.[176] ತುಳುನಾಡಿನ ಬೈಂದೂರು, ಪೆರ್ಡಾಲ, ಮದ್ದೋಡಿ, ಕೋಟೇಶ್ವರ, ಬಸ್ರೂರು, ಕುಂದಾಪುರ ಗಂಗೊಳ್ಳಿ, ಗುಂಡ್ಮಿ, ಉಪ್ಪೂರು, ಉಡುಪಿ, ಬೈಲಂಗಡಿ, ಸುಳ್ಯ, ಪುತ್ತೂರು, ಬೆಳ್ಳಾರೆ, ಕೆಮ್ಮಿಂಜೆ, ಕೋಟೆಗಾರು, ಅಂಡಾರು, ಕಾರ್ಕಳ, ಮೂಡಬಿದ್ರಿ, ಬೋಳಾರ.ಮೂಲ್ಕಿ, ಪನಿಯಾಲ, ಬೇಕಲ, ನೀಲೇಶ್ವರ, ಬಂದಡ್ಕ ಕೊಡಗು ಚಿತ್ತಾರಿ ಹೊಸದುರ್ಗಗಳಲ್ಲಿ ಈ ವರ್ಗದವರು ನೆಲೆಸಿರುವುದು ಕಂಡುಬರುತ್ತದೆ. ಈ ಎಲ್ಲಾ ಪ್ರದೇಶ ಕೆಳದಿಯ ಕೋಟೆಗಳ ಹಿನ್ನೆಲೆಯಲ್ಲಿ ಗುರುತಿಸಲ್ಪಟ್ಟಿವೆ ಎನ್ನುವುದು ಗಮನಾರ್ಹವಾಗಿದೆ. ಈ

ಎಲ್ಲಾ ವಲಸಿತ ಸಮುದಾಯಗಳಿಗೆ ಸ್ಥಳೀಯ ರಾಜರು ಮತ್ತು ಕೆಳದಿಯರಸರು ಆಶ್ರಯದಾತರಾಗಿದ್ದುದು ತಿಳಿದುಬರುತ್ತದೆ. ತುಳುನಾಡಿನ ಇಂದಿನ ಆರ್ಥಿಕ ಹಿರಿಮೆಗೆ ಕ್ರಿಶ್ಚಿಯನ್ನರು ಮತ್ತು ಸಾರಸ್ವತರ ಕೊಡುಗೆಯನ್ನು ಅಲ್ಲಗಳೆಯುವಂತಿಲ್ಲ. ಅಂತೆಯೇ ಈ ಸಾಂಸ್ಕೃತಿಕ ಶ್ರೀಮಂತಿಕೆಗೆ ಈ ಕೋಟೆ ಕ್ಷತ್ರಿಯರ ಕೊಡುಗೆಗಳು ಗಮನಾರ್ಹವಾಗಿದೆ.

**ಚಿತ್ಪಾವನ ಬ್ರಾಹ್ಮಣರು:** ಶೈವ ಆರಾಧನಾ ಮೂಲದ ಚಿತ್ಪಾವನ ಬ್ರಾಹ್ಮಣರು ಕೆಳದಿ ಆಡಳಿತ ಕಾಲದಲ್ಲಿ ಮಹಾರಾಷ್ಟ್ರದಿಂದ ತುಳುನಾಡಿನ ವಿವಿಧ ಸ್ಥಳಗಳಿಗೆ ವಲಸೆ ಬಂದವರು. ಕಾರ್ಕಳದ ಮಾಳ, ದುರ್ಗಾ ಬೆಳ್ತಂಗಡಿ ತಾಲೂಕಿನ ಮುಂಡಾಜೆ, ಜಮಲಾಬಾದ್, ಶಿಶಿಲ, ವೇಣೂರು, ಸುಬ್ರಹ್ಮಣ್ಯ ಸಮೀಪದ ಹೊಸ್ಮಠಗಳು ಇವರ ಪ್ರಮುಖ ನೆಲೆಗಳಾದವು. ಚಿತ್ಪಾವನರು ಈ ಕಾಲದಲ್ಲಿ ತುಳುನಾಡಿಗೆ ಆಗಮಿಸಲು ಕೊಡಬಹುದಾದ ಪ್ರಮುಖ ಕಾರಣವೆಂದರೆ,ವಿದೇಶೀ ಮೂಲದ ಸಿದ್ದಿಗಳು ಮತ್ತು ಹಬ್ಸಿ ಸಮುದಾಯಗಳ ಕಿರುಕುಳ ಮತ್ತು ಗೋವಾದಲ್ಲಿ ಪೋರ್ಚುಗೀಸರ ಕಿರುಕುಳ.[177] ಹೀಗೆ ವಲಸೆ ಬಂದ ಇವರಿಗೆ ಕೆಳದಿಯರಸರು ಹಾಗೂ ಭೈರರಸರು ಮತ್ತು ಬೈಲಂಗಡಿಯ ಮೂಲರಂತಹ ಸಾಮಂತರಸರು ಆಶ್ರಯದಾತರಾದರು. ಚಿತ್ಪಾವನ ಬ್ರಾಹ್ಮಣರ ಆಗಮನದ ಕುರಿತಾಗಿ ಬುಕಾನನ್ ಈ ರೀತಿಯ ಅಭಿಪ್ರಾಯ ವ್ಯಕ್ತಪಡಿಸುತ್ತಾನೆ.[178] 'ಮರಾಠಿ ಬ್ರಾಹ್ಮಣನೊಬ್ಬ ಕ್ರಿ.ಶ.15, 16ನೇ ಶತಮಾನದಲ್ಲಿ ಈ ಭಾಗಕ್ಕೆ ಬಂದು ಅಲ್ಲಿಯ ಎತ್ತರದ ಗುಡ್ಡ ಭಾಗದ ಭೂಪ್ರದೇಶ ಯಾವ ಕೃಷಿಯೂ ಇಲ್ಲದೆ ವ್ಯರ್ಥವಾಗಿರುವುದನ್ನು ಕಂಡು ಅಲ್ಲಿ ಅಡಕೆ ಕೃಷಿಯನ್ನು ಮಾಡಲಾರಂಭಿಸಿದ. ಸಣ್ಣ ಕೆರೆ ಕಟ್ಟಗಳನ್ನು ಮಾಡಿಸಿ ಮಳೆ ನೀರು ವ್ಯರ್ಥವಾಗದಂತೆ ಅದನ್ನು ಅಡಕೆ ತೋಟ ಮಾಡಲು ಉಪಯೋಗಿಸಿದ. ಇದಕ್ಕೆ ಭೈರರಸ ಒಡೆಯರ ಪ್ರೋತ್ಸಾಹ ದೊರೆತು ಭೈರರಸ ಒಡೆಯರಿಂದ ಭೂಮಿ ಪಡೆದು ಅಡಿಕೆ ತೋಟವನ್ನು ಮಾಡಿದನು. ತುಳುನಾಡಿಗೆ ಆಗಮಿಸಿದ ಚಿತ್ಪಾವನರು ತುಳು ಸಂಸ್ಕೃತಿಯ ಭಾಗವಾದರೂ ತಮ್ಮ ಮೂಲ ಶೈವಾರಾಧನೆಯನ್ನು ಬಿಡಲಿಲ್ಲ. ಮಠವಿಲ್ಲದ ಈ ಸಮುದಾಯ ಶೃಂಗೇರಿ ಗುರುಗಳ ಆಜ್ಞಾನುಸಾರ ಪಂಚಾಯತನ ಆರಾಧನೆಯನ್ನೂ, ಸ್ಥಳೀಯ ಜೈನರ ಪ್ರಭಾವದಿಂದ ಭೂತಾರಾಧನೆಯನ್ನೂ ಮೈಗೂಡಿಸಿಕೊಂಡರು.[179] ಚಿತ್ಪಾವನರ 'ಮರಿಗೆ ಪೂಜೆ' ಎಂಬ ವಿಶಿಷ್ಟ ಶಕ್ತಿಪೂಜೆ ಇಲ್ಲಿಯೂ ಅವರ ಜೀವನದ ಅವಿಭಾಜ್ಯ ಅಂಗವಾಗಿ ಸೇರಿಹೋಯಿತು.[180]

**ಗೌಡರು ಅಥವಾ ಒಕ್ಕಲಿಗರು:** ತುಳುನಾಡಿನಲ್ಲಿ ಇಂದು ಪ್ರಧಾನ ಸಮುದಾಯಗಳಲ್ಲಿ ಒಂದಾಗಿರುವ ಗೌಡರು ಕ್ರಿ.ಶ 15 ಮತ್ತು 16ನೇ ಶತಮಾನದಲ್ಲಿ ತುಳುನಾಡಿಗೆ ಆಗಮಿಸಿದರು ಎಂಬುದಾಗಿ ವಿದ್ವಾಂಸರು ತರ್ಕಿಸಿದ್ದಾರೆ.[181] ತುಳುನಾಡಿನ ಸುಬ್ರಹ್ಮಣ್ಯ, ಸುಳ್ಯ, ಬೆಳ್ತಂಗಡಿ, ಪುತ್ತೂರು, ವಿಟ್ಲ, ಬಂಟವಾಳದಲ್ಲಿ ಅಂದರೆ ತುಳುನಾಡಿನ ಪೂರ್ವದಿಕ್ಕಿನಲ್ಲಿ ಗೌಡ ಜಾತಿಯವರು ಇಂದು ಬಹುಸಂಖ್ಯೆಯಲ್ಲಿ ನೆಲೆಸಿದ್ದಾರೆ. ಕೊಡಗಿನ ಭಾಗಮಂಡಲ, ಕಾಸರಗೋಡಿನ ಬದಿಯಡ್ಕದಲ್ಲಿಯೂ ಗೌಡರ ಮನೆಗಳಿವೆ. ಶಿರಾಡಿ ಸುಬ್ರಹ್ಮಣ್ಯ(ಬಿಸಿಲೆ) ಬಂಗಾಡಿಯ ಕಡ್ತಿಕಲ್ಲು ಹಿಂದಿನ ಕಾಲದಲ್ಲಿ ತುಳುನಾಡಿಗೆ ಸಂಪರ್ಕ ಕಲ್ಪಿಸುವ ಘಟ್ಟ ಮೂಲದ ರಹದಾರಿಗಳು.

ಈ ದಾರಿಗಳ ಮೂಲಕ ಗೌಡರು ತುಳುನಾಡಿಗೆ ಹಾಸನದ ಐಗೂರು ಸೀಮೆಯ ಮೂಲಕ ಬಂದವರು ಎನ್ನುವುದನ್ನು ಈ ಸಮುದಾಯ ಆರಾಧಿಸುವ ದೈವಗಳ ಪ್ರಸರಣದ ದಾರಿಯೂ ದೃಢಪಡಿಸುತ್ತದೆ. ಉಚ್ಚ ನಾಯಕ ದೈವ ಬಿಸಿಲೆ ಘಟ್ಟದ ಮೂಲಕ, ಶಿರಾಡಿ ಭೂತ ಚಾರ್ಮಾಡಿ ಪರಿಸರದ ಮೂಲಕ ತುಳುನಾಡಿಗೆ ಇಳಿದು ಬರುತ್ತದೆ. ಇದು ತುಳುನಾಡಿಗೆ ಗೌಡರು ಆಗಮಿಸಿದ ಕಥೆಯೇ ಆಗಿದೆ.[182] ಮಲೆನಾಡಿನಲ್ಲಿ ಚದುರಿಕೊಂಡಿದ್ದ ಒಕ್ಕಲಿಗರು ತುಳುನಾಡಿಗೆ ಪಸರಿಸುವಲ್ಲಿನ ಭಿನ್ನ ಕಾರಣಗಳನ್ನು ಹಲವು ವಿದ್ವಾಂಸರು ಚರ್ಚಿಸಿದ್ದಾರೆ. ಆ ಪ್ರಕಾರ ಐಗೂರು ಸೀಮೆಯಲ್ಲಿ ಕೆಂಡದ ಮಳೆ ಬಂದು(ಬರಗಾಲ) ಹೇಮಾವತಿ ನದಿ ಮೂಲ ಬತ್ತಿ ಹೋದದ್ದು ಒಂದು ಕಾರಣವಾದರೆ, ರಂಗಪ್ಪನಾಯಕನೆಂಬವನು ಐಗೂರು ಸೀಮೆಯಲ್ಲಿ ಕ್ರೂರವಾಗಿ ಆಡಳಿತ ನಡೆಸಿದ್ದು, ಕಾಗನೂರು ಮತ್ತು ಸುಬ್ರಹ್ಮಣ್ಯಕ್ಕೆ ಇದ್ದ ವ್ಯಾವಹಾರಿಕ ಸಂಬಂಧ, ಘಟ್ಟದಾರಿಯಲ್ಲಿ ಈ ಪ್ರದೇಶಗಳಿಗಿದ್ದ ಪ್ರಾಕೃತಿಕ ಸಂಪರ್ಕ ಸೌಲಭ್ಯಗಳು ಕಾರಣವಾಗಿದೆ ಎಂದು ಪುರುಷೋತ್ತಮ ಬಿಳಿಮಲೆ ಅಭಿಪ್ರಾಯ ಪಡುತ್ತಾರೆ.[183] ಈ ಕಾರಣಗಳಲ್ಲದೆ ಸುಳ್ಯ ಪರಿಸರದಲ್ಲಿ ಮೌಖಿಕವಾದ ಇತರ ಕಾರಣಗಳೂ ಲಭಿಸುತ್ತವೆ. ಸುಳ್ಯದಲ್ಲಿ ಅಲ್ಲಿನ ಬಲ್ಲಾಳರ ತರುವಾಯ ಅಧಿಕಾರ ನಡೆಸಿದ ಕೇರಳ ಮೂಲದ ಚಾತುನಾಯರ್, ಒಕ್ಕಲಿಗರನ್ನು ಶೃಂಗೇರಿಯ ಮಠಾಧಿಪತಿಗಳ ಅನುಮತಿ ಮೇರೆಗೆ ಶಿರಾಡಿ, ಬಿಸಿಲೆ, ಸುಬ್ರಹ್ಮಣ್ಯ ದಾರಿಯಲ್ಲಿ ತಂಡ ತಂಡವಾಗಿ ಕರೆದು ತಂದನೆಂದೂ, ಹಾಗೆ ಕರೆತಂದವರನ್ನು ಮುನ್ನೂರೊಕ್ಕಲು, ಅರ್ವತ್ತೊಕ್ಕಲು, ಮೂವತ್ತೊಕ್ಕಲುಗಳೆಂದು ಊರು ಗ್ರಾಮ ವ್ಯಾಪ್ತಿಯಲ್ಲಿ ನೆಲೆಗೊಳಿಸಿದನೆಂದು ಪ್ರತೀತಿ. ಈ ಪ್ರದೇಶದಲ್ಲಿ ದೈವಗಳ ನುಡಿಯಾದಾಗ ಒಕ್ಕಲುಗಳನ್ನ ಕರೆಯುವುದು ಈಗಲೂ ರೂಢಿಯಲ್ಲಿದೆ.[184] ಹೀಗೆ ಬಂದ ಗೌಡರು ಮುಖ್ಯವಾಗಿ ನೇತ್ರಾವತಿ, ಕುಮಾರಧಾರ ಮತ್ತು ಪಯಸ್ವಿನಿ ನದಿ ಮೂಲಗಳನ್ನು ಆಶ್ರಯಿಸಿ ವಾಸಮಾಡತೊಡಗಿದರು.

ತುಳುನಾಡಿಗೆ ಬಂದ ಗೌಡರು ಸುಳ್ಯ, ಪುತ್ತೂರು ಪರಿಸರದಲ್ಲಿ ಮಾತ್ರ ಯಜಮಾನಿಕೆಯನ್ನು ಸ್ಥಾಪಿಸಿಕೊಂಡಿದ್ದರು. ಈ ಯಜಮಾನಿಕೆ ದೈವ-ದೇವಾಲಯಗಳ ಮುಖ್ಯಸ್ಥರ ನೆಲೆಯಲ್ಲಿ ಮತ್ತು ಭೂ ಒಡೆತನದ ಹಿನ್ನೆಲೆಯಲ್ಲಿ ಇವರಿಗೆ ಲಭಿಸಿತ್ತು. ಬಂಗಾಡಿ ಶಿರಾಡಿಯ ಮೂಲಕ ತುಳುನಾಡಿಗೆ ಇಳಿದ ಗೌಡರಿಗೆ ಈ ರೀತಿಯ ಯಜಮಾನ್ಯತೆಯನ್ನು ಹೊಂದಲು ಸಾಧ್ಯವಾಗಲಿಲ್ಲ. ಅವರು ಯಜಮಾನಿಕೆಯ ನೆಲೆಯಲ್ಲಿ ಈ ಭಾಗದಲ್ಲಿ ಕಾಣಿಸಿಕೊಳ್ಳುವುದು ಕ್ರಿ.ಶ. 1970ರ ದಶಕದ ಭೂ ಸುಧಾರಣೆಯ ನಂತರ. ಅದಕ್ಕೆ ಈ ಕೆಳಗಿನ ವಿಚಾರಗಳು ಕಾರಣವಾಗಿರಬೇಕು. ಬಂಗರೇ ಮೊದಲಾದ ತುಳುನಾಡಿನ ಮಾಂಡಲಿಕ ಅರಸರಿಗೆ ಸಹಾಯಕರಾಗಿ ಅನೇಕ ಸ್ಥಳೀಯ ಬಲ್ಲಾಳರಿದ್ದರು. ಒಕ್ಕಲಿಗ ಮೂಲ ಶೈವ ಮತೀಯ ಕೆಳದಿಯರಸರ ಸಂದರ್ಭದ ತುಳುನಾಡಿನಲ್ಲಿ ಈ ಬಲ್ಲಾಳರು ನಾಶವಾದರು.[185] ಈ ಬಲ್ಲಾಳರಲ್ಲಿ ಕೊಲ್ಲಮೊಗರು ಬೀಡಿನ ಶಂಕರ ದೇವಿ ಬಲ್ಲಾಳ್ತಿ ಮಾತ್ರ ಶಾಸನೋಕ್ತವಾಗಿದ್ದಾಳೆ. ಉಳಿದಂತೆ ಅಮರ ಸುಳ್ಯ ಬಲ್ಲಾಳ, ಬೆಳ್ಳಾರೆ ಬಲ್ಲಾಳ, ಐಂಜಾಡಿ ಬಲ್ಲಾಳ, ಪಂಜ ಬಲ್ಲಾಳ, ಎಣ್ಮೂರು ಬಲ್ಲಾಳ ಮೊದಲಾದವರು ಮೌಖಿಕವಾಗಿ

ದಾಖಲಾಗುತ್ತಾರೆ. ಹಾಗೆಯೇ ಈ ಪರಂಪರೆಯಲ್ಲಿ ಕೊನೆಯದಾಗಿ ಅಪ್ಪ ಬಲ್ಲಾಳ್ತಿಯರು ಆಳಿದರೆಂದು ಪ್ರತೀತಿ.[186] ಈ ಸಂದರ್ಭದಲ್ಲಿ ತುಳುನಾಡಿಗೆ ಆಗಮಿಸಿದ್ದ ಗೌಡರು ಬಲ್ಲಾಳರ ಅವನತಿಯ ನಂತರ ಸುಳ್ಯ, ಪುತ್ತೂರು ಪರಿಸರದಲ್ಲಿ ತಮ್ಮ ಯಜಮಾನಿಕೆಯನ್ನು ಸ್ಥಾಪಿಸಿದರು. ಪರಂಪರೆಯಿಂದ ಗುರುತಿಸಿಕೊಳ್ಳುವ ಅನೇಕ ಗೌಡ ಮನೆತನಗಳು ಹೆಚ್ಚಿನ ಭೂ ಆಸ್ತಿಯನ್ನು ಹೊಂದಿದ್ದು ಇದು ತಮಗೆ ಬಲ್ಲಾಳರ ಕಾಲದಿಂದ ಬಂದದ್ದೆಂದು ಹೇಳುತ್ತಾ ಈ ಕುರಿತು ಇರುವ ಮೌಖಿಕ ಮಾಹಿತಿಗಳನ್ನು ಸಾಕ್ಷಿಯಾಗಿ ನಿರೂಪಿಸುತ್ತಾರೆ. ಪುರುಷ ಮತ್ತು ಬಚ್ಚನಾಯಕ ದೈವಗಳ ಪಾಡ್ದನಗಳಲ್ಲಿ ವ್ಯಕ್ತವಾಗುವ ಸಂಘರ್ಷಗಳು ಕೂಡ ಇದೇ ಸಂದೇಶವನ್ನು ಹೊಂದಿವೆ. ಬೇರೆ ಕಡೆಗಳಲ್ಲಿ ಗ್ರಾಮಾಧಿಕಾರದ ನೆಲೆಯಲ್ಲಿ 'ಗಾವುಂಡ'ರೆಂದು ಗುರುತಿಸಿಕೊಳ್ಳುವ ಗೌಡರು ತುಳುನಾಡಿನಲ್ಲಿ ಆ ಸ್ಥಾನದಲ್ಲಿ ಗುರುತಿಸಿಕೊಳ್ಳಲು ಕಾಯಬೇಕಾಯಿತು. ಅಥವಾ ಸಂಘರ್ಷದ ನೆಲೆಯಲ್ಲಿ ಅದನ್ನು ಸ್ಥಾಪಿಸಬೇಕಾಯಿತು. ಗೌಡರು ವರ್ತಮಾನದಲ್ಲಿ ದೈವಾರಾಧನೆಯಲ್ಲಿ ಹೊಂದುವ ಸ್ಥಾನಗಳು ಅವರ ವಲಸೆಯ ಕಾಲದಲ್ಲಿ ಇದ್ದಿರಲು ಸಾಧ್ಯವಿಲ್ಲ. ಆದರೆ ಯಾವಾಗ ಬೀಡು ಬಲ್ಲಾಳರು ತಮ್ಮ ಅಸ್ತಿತ್ವವನ್ನು ಕಳೆದುಕೊಂಡರೋ ಆಗ ಗೌಡರು ಮುಂಚೂಣಿಗೆ ಬಂದರು ಮತ್ತು ತಮ್ಮ ಯಜಮಾನಿಕೆಯನ್ನು ಸ್ಥಾಪಿಸಿದರು.

ಇದಕ್ಕೆ ಪ್ರತಿಯಾಗಿ ಬಂಗಾಡಿ, ಶಿರಾಡಿಯ ಮೂಲಕ ತುಳುನಾಡಿಗೆ ಬಂದ ಗೌಡರಿಗೆ ಈ ರೀತಿಯ ಯಜಮಾನಿಕೆ ಅಷ್ಟು ಬೇಗನೆ ದೊರಕಲಿಲ್ಲ. ಬಂಗರು ಕೆಳದಿಯರಸರ ಕಾಲದಲ್ಲಿ ತೊಂದರೆ ಅನುಭವಿಸಿದರೂ ಸ್ಥಳೀಯ ಅರಸರಾಗಿ ವಸಾಹತು ಕಾಲಘಟ್ಟದವರೆಗೂ ಅಸ್ತಿತ್ವವನ್ನು ಉಳಿಸಿಕೊಂಡರು. ಆ ನಂತರವೂ ಅವರು ಅರಸರ ನೆಲೆಯಲ್ಲಿ ಮುಂದುವರೆದು ಸ್ಥಳೀಯರಿಂದ ಗೌರವಾದರಗಳನ್ನು ಪಡೆಯುತಿದ್ದರು. ಬಂಗರ ಅಧಿಕಾರದ ಹಿನ್ನೆಲೆಯಲ್ಲಿ ಸ್ಥಳೀಯ ಜೈನ ಬೀಡು ಬಲ್ಲಾಳರಿಗೂ ಸ್ಥಳೀಯರಿಂದ ಅರ್ಹ ಗೌರವಾದರಗಳು ಸಲ್ಲುತ್ತಿದ್ದವು. ಬಹುಶಃ ಬಂಗ ಅರಸರು ಜೈನ ಧರ್ಮಕ್ಕೆ ನೀಡಿದ ಆಶ್ರಯದಿಂದಾಗಿ ಸುಳ್ಯ ಪರಿಸರದಲ್ಲಿ ಜೈನರ ಅವನತಿಯಾದ ವೇಗದಲ್ಲಿ ಬಂಗರ ನೇರ ಆಳ್ವಿಕೆಯ ಪ್ರದೇಶದಲ್ಲಿ ಜೈನಧರ್ಮಕ್ಕೆ ಹಿನ್ನಡೆ ಆಗಲಿಲ್ಲ. ಬೀಡು ಗುತ್ತುಗಳು ಪ್ರಭಾವಶಾಲಿಗಳಾಗಿದ್ದ ಕಾರಣದಿಂದ ಈ ಭಾಗದಲ್ಲಿದ್ದ ಗೌಡರು, ಸುಳ್ಯ ಪರಿಸರದ ಗೌಡರಂತೆ ವಸಾಹತುಪೂರ್ವ ಕಾಲಘಟ್ಟದಲ್ಲಿಯೇ ಯಜಮಾನಿಕೆ ಸ್ಥಾಪಿಸಲು ಸಾಧ್ಯವಾಗಲಿಲ್ಲ. ಈ ಹಿನ್ನೆಲೆಯಲ್ಲಿ ಬೆಳ್ತಂಗಡಿ, ಬಂಟ್ವಾಳ ವ್ಯಾಪ್ತಿಯಲ್ಲಿ ಗೌಡ ಸಮುದಾಯ ಬಹು ಸಂಖ್ಯೆಯಲ್ಲಿ ಮೊಕ್ತೇಸರಿಕೆಯೆಂಬ ಅಧಿಕಾರ ಸ್ಥಾನದಲ್ಲಿ ಗುರುತಿಸಿಕೊಳ್ಳುವ ಬದಲು ಸೇವಾ ರೂಪದ ಪೂಜಾರ್ಕೆಯಲ್ಲಿ ಮಾತ್ರ ಗುರುತಿಸಿಕೊಳ್ಳುತ್ತಾರೆ. ಮನೆತನದ ದೈವಗಳನ್ನು ಆರಾಧಿಸುತ್ತಾರೆಯೇ ಹೊರತು ಊರು, ಗ್ರಾಮ, ಸೀಮೆ ನೆಲೆಯಲ್ಲಿ ಗುರುತಿಸಿಕೊಳ್ಳುವ ಅರಸು, ದೈಯಾಂಕುಳು, ರಾಜನ್ ದೈವಗಳನ್ನು ನಡೆಸಿ ಕೊಡುವ ಮುಖ್ಯ ಗುತ್ತು ಮನೆಯವರಾಗಿ ಬಲ್ಲಾಳ ಕಟ್ಟಳೆಯವರಾಗಿ ಬಹುಸಂಖ್ಯೆಯಲ್ಲಿ ಕಂಡುಬರುವುದಿಲ್ಲ.

ಹೀಗೆ ವಲಸೆ ಪ್ರಕ್ರಿಯೆ ಎನ್ನುವುದು ಈ ಕಾಲದ ಸಮಾಜದ ಪ್ರಮುಖ ಲಕ್ಷಣವಾಗಿ ಗೋಚರಿಸುತ್ತದೆ. ವಲಸಿಗ ಸಂಸ್ಕೃತಿಯಲ್ಲಿ ಪ್ರಧಾನವಾಗಿ ಗುರುತಿಸುವ ಒಂದು ವಿಶೇಷತೆ ಎಂದರೆ ಅವರ ಆರಾಧನಾ ಪದ್ಧತಿ. ಯಾವುದೇ ಪ್ರದೇಶದ ವಲಸಿಗ ಸಂಸ್ಕೃತಿಯನ್ನು ಗಮನಿಸಿದಾಗ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಜನರು ವಲಸೆ ಹೋಗಿ ನೆಲೆನಿಂತಾಗ ಸ್ಥಳೀಯವಾದ ಹಲವು ಸಂಪ್ರದಾಯ ಆಚರಣೆಗಳನ್ನು ಅಳವಡಿಸಿಕೊಳ್ಳುವುದು ಸಹಜವಾಗಿದೆ. ಆದರೆ ತಾವು ಆರಾಧಿಸಿಕೊಂಡು ಬಂದ ದೈವ ದೇವರುಗಳನ್ನು ಮಾತ್ರ ಬಿಟ್ಟು ಬಿಡಲು ಅವರು ಸಿದ್ದರಿರುವುದಿಲ್ಲ. ತುಳುನಾಡಿಗೆ ಈ ಕಾಲಘಟ್ಟದಲ್ಲಿ ವಲಸೆ ಬಂದ ಪಂಗಡಗಳೂ ಕೂಡ ತಮ್ಮ ಮೂಲ ದೇವರುಗಳ ಆರಾಧನೆಯನ್ನು ಬಿಟ್ಟುಕೊಡಲಿಲ್ಲ. ಉದಾಹರಣೆಗೆ ತುಳುನಾಡಿನ ಸ್ಥಳೀಯ ದೈವಾರಾಧನೆಯನ್ನು ಒಪ್ಪಿಕೊಂಡ ವೀರಶೈವರು ಲಿಂಗಾರಾಧನೆಯನ್ನು ಬಿಡಲಿಲ್ಲ ಹಾಗೆಯೇ ಗೌಡ ಸಾರಸ್ವತರು ವೈಷ್ಣವ ಆರಾಧನೆಯನ್ನು ಇಲ್ಲಿಯೂ ಮುಂದುವರೆಸಿದರು. ಚಿತ್ಪಾವನ ಬ್ರಾಹ್ಮಣರು ಪರಶುರಾಮನನ್ನು ಗುರುವಾಗಿಯೂ, ಜೊತೆಯಲ್ಲಿ ಶಿವಾರಾಧನೆ, ಮರಿಗೆ ಪೂಜೆಯ ತಮ್ಮ ಮೂಲ ಸಂಸ್ಕೃತಿಯನ್ನು ಇಲ್ಲಿಯೂ ಮುಂದುವರೆಸಿದರು. ಗೌಡರು ಕೆಂಚಮ್ಮನ ಮತ್ತು ಒಣಗೂರು ಸುಬ್ಬಮ್ಮನ ಭಕ್ತರಾಗಿ ಇಲ್ಲಿಯೂ ಮುಂದುವರೆದರು. ಮರಾಠಿ ನಾಯ್ಕರು ಗೋಂದೋಳು ಪೂಜೆಯನ್ನು ಇಂದಿಗೂ ಮುಂದುವರೆಸಿದ್ದಾರೆ. ಈ ಪ್ರಕ್ರಿಯೆ ಈ ಸಮುದಾಯಗಳ ಮೂಲ ನೆಲೆಯನ್ನು ತಿಳಿಯಲು ಮಾತ್ರವಲ್ಲದೆ ಸಂಸ್ಕೃತಿಯ ಪ್ರಸರಣವನ್ನು ತಿಳಿಯಲು ಸಹಾಯಕವಾಗಿದೆ.

ವಲಸಿಗರ ಇನ್ನೊಂದು ಪ್ರಮುಖ ಲಕ್ಷಣವೆಂದರೆ ತಮ್ಮ ಮೂಲ ಭಾಷೆಯನ್ನು ಬಿಡದಿರುವುದು. ವೀರಶೈವರು, ಕೋಟೆ ಕ್ಷತ್ರಿಯರು ಕನ್ನಡವನ್ನು, ಗೌಡ ಸಾರಸ್ವತರು ಮತ್ತು ಕೊಂಕಣಿ ಕ್ರೈಸ್ತರು ಕೊಂಕಣಿಯನ್ನು, ಮರಾಠಿಗಳು, ಮರಾಠಾ ಕ್ಷತ್ರಿಯರು ಮತ್ತು ಚಿತ್ಪಾವನರು ಮರಾಠಿ ಭಾಷೆಯನ್ನು, ಗೌಡರು ಕನ್ನಡವನ್ನೂ, ವಲಸೆ ಬಂದು ನೂರಾರು ವರ್ಷಗಳ ನಂತರವೂ ಮುಂದುವರೆಸಿರುವುದನ್ನು ಗಮನಿಸಬಹುದು. ಅಂದರೆ ಈ ಸಮುದಾಯಗಳ ಆರಾಧನೆ, ಭಾಷೆ, ಮತ್ತು ಸಂಪ್ರದಾಯಗಳು ತುಳುನಾಡಿನಲ್ಲಿ ಸಮ್ಮಿಶ್ರಗೊಂಡಿದ್ದು ಕೆಳದಿ ಕಾಲದ ಪ್ರಮುಖ ಸಾಮಾಜಿಕ ಬದಲಾವಣೆಯಾಗಿ ಗುರುತಿಸಬಹುದು.

ವಲಸೆ ಬಂದ ಹಲವು ಸಮುದಾಯಗಳು ಜೊತೆಯಾಗಿದ್ದ ತುಳುನಾಡಿನಲ್ಲಿ ಕೆಲವು ಬಾರಿ ಆಚಾರ ವಿಚಾರಗಳಿಗೆ ಸಂಬಂಧಿಸಿ ಸಾಮಾಜಿಕ ಸಂಘರ್ಷಗಳೂ ಆಗುತ್ತಿದ್ದವು. ಈ ಸಮಸ್ಯೆಗಳನ್ನು ಶೃಂಗೇರಿ ಮಠದ ಮುಂದಾಳತ್ವದಲ್ಲಿ ಪರಿಹರಿಸಲಾಗುತ್ತಿತ್ತು. ಕೆಳದಿ ವೀರಭದ್ರನಾಯಕನ ಕಾಲದಲ್ಲಿ, ಬಾರ್ಕೂರು, ಮಂಗಳೂರು, ಬಗ್ಗುವಾಸಿ ಮೊದಲಾದ ಸ್ಥಳಗಳಲ್ಲಿದ್ದ ಸೇರ್ವೆಗಾರರು ಮತ್ತು ಕೊಂಕಣಿಗರಿಗೂ ಜನಿವಾರ ಧಾರಣೆ ವಿಚಾರದಲ್ಲಿ ಚರ್ಚೆ ಬಂದಾಗ ಸೇರ್ವೆಗಾರರು ಜನಿವಾರಧಾರಣೆ ಮಾಡಬಹುದೆಂದು ಒಪ್ಪಿಗೆ ಸೂಚಿಸಿ ಸಮಸ್ಯೆಯನ್ನು ಬಗೆಹರಿಸಲಾಗಿತ್ತು.[187] ಸಾರಸ್ವತರಿಗೆ ಅವರ ಸಮುದಾಯದ ಮಠಗಳಿದ್ದರೂ ಕೆಳದಿ ಸಾಮ್ರಾಜ್ಯದಲ್ಲಿ ಮಾನಿತವಾದ ಶೃಂಗೇರಿ ಮಠ ಅವರ ಆಚಾರ ವಿಚಾರ ವೇದಾಧ್ಯಯನ,

ಪೂಜಾಕರ್ಮಗಳ ವಿಚಾರದಲ್ಲಿ ಹಸ್ತಕ್ಷೇಪ ಮಾಡಿ ನಿರ್ದೇಶನ ಮಾಡಿರುವುದನ್ನು ಗಮನಿಸಬಹುದು.[188] ಕ್ರಿ.ಶ. 1618ರಲ್ಲಿ ಜೋಯಿಸ ಬ್ರಾಹ್ಮಣರಿಗೂ(ವೈದಿಕರು) ಮತ್ತು ಕೊಂಕಣಿ ಬ್ರಾಹ್ಮಣರಿಗೂ ವಿವಾದ ಬಂದಾಗ ಕೊಂಕಣಿ ಬ್ರಾಹ್ಮಣರು ವೇದಾಧ್ಯಯನ ಮಾಡಿ ಆಚಾರ್ಯ ಪಟ್ಟ ಪೌರೋಹಿತ್ಯ ಇತ್ಯಾದಿಗಳನ್ನು ಮಾಡಬಾರದು ಮಾತ್ರವಲ್ಲದೇ ಕೊಂಕಣಿಗರ ಮನೆ ಪುರೋಹಿತಿಕೆಯನ್ನು ವೈದಿಕ ಬ್ರಾಹ್ಮಣರೇ ನಡೆಸಬೇಕೆಂದು ಕೆಳದಿ ವೆಂಕಟಪ್ಪನಾಯಕ ಸೂಚಿಸಿದ್ದ.[189] ಅಂತೆಯೇ ವಲಸಿತ ಸಮುದಾಯಗಳ ಆರಾಧನಾ ಪದ್ಧತಿಗಳು ತುಳುನಾಡಿನ ಭೂತಾರಾಧನೆಯಂತಹ ಧಾರ್ಮಿಕ ಆಚರಣೆಗಳ ಪ್ರಭಾವಕ್ಕೊಳಪಟ್ಟದ್ದನ್ನೂ ಗಮನಿಸಬಹುದು.

ಕೆಳದಿ ಕಾಲದಲ್ಲಿ ವಲಸೆಗಾರರಾಗಿ ಬಂದ ಗೌಡಸಾರಸ್ವತರು ಕೆಳದಿ ಆಡಳಿತದಲ್ಲಿ ವರ್ತಕ ಶ್ರೇಣಿಯಲ್ಲಿ ಉನ್ನತ ಹುದ್ದೆ ಪಡೆದು ಪ್ರಾಮಾಣಿಕ ಸೇವೆ ಸಲ್ಲಿಸಿ ಕೆಳದಿ ರಾಜ್ಯದ ಪ್ರಮುಖ ಭಾಗವಾದರು. ತುಳುನಾಡಿನಲ್ಲಿ ವೈಷ್ಣವ ದೇಗುಲಗಳ ವಿಸ್ತರಣೆ, ವ್ಯಾಪಾರದ ಹಿರಿಮೆಯಿಂದ ಇವರು ಗುರುತಿಸಿಕೊಂಡರು. ಕೆಳದಿಯ ರಾಜಾಶ್ರಯದ ಕಾರಣದಿಂದಲೋ ಅಥವಾ ಜೈನರ ಅವನತಿಯ ಕಾರಣದಿಂದಲೋ ಗೌಡರು ಈ ಭಾಗದಲ್ಲಿ ಭೂ ಹಿಡುವಳಿದಾರರಾದರು. ವೀರಶೈವರು ದೊಡ್ಡ ಮಟ್ಟದಲ್ಲಿ ಭೂ ಹಿಡುವಳಿದಾರರಾದರೂ ಕೆಳದಿಯ ಅವನತಿಯೊಂದಿಗೆ ಈ ಪಂಥವೂ ಇಳಿಮುಖವಾಯಿತು. ಕೊಂಕಣಿ ಕ್ರೈಸ್ತರು ತುಳುನಾಡಿನಲ್ಲಿ ಕೃಷಿಕರಾಗಿ ಸ್ಥಾನಪಲ್ಲಟಗೊಂಡರು. ಹೊರನಾಡಿನ ಚಿತ್ಪಾವನರು ಘಟ್ಟದ ಮೇಲಿನ ಕೋಟೆ ಕ್ಷತ್ರಿಯರು ತುಳುನಾಡಿನ ಭಾಗವಾದರು. ಹೀಗೆ ತುಳುನಾಡಿನ ಸಾಮಾಜಿಕ ಧಾರ್ಮಿಕ ಆರ್ಥಿಕ ಪಲ್ಲಟಗಳಿಗೆ ಈ ಸಮುದಾಯಗಳ ವಲಸೆಯೂ ಕಾರಣವಾದದ್ದು ಗಮನಾರ್ಹವಾಗಿದೆ.

### 6.3 ಅಳಿಯಸಂತಾನ ಪದ್ಧತಿ

ಕೆಳದಿಯ ಕಾಲದ ತುಳುನಾಡಿನ ಸಮಾಜದಲ್ಲಿ ಅಳಿಯಸಂತಾನ ಮತ್ತು ಬಳಿ ಪದ್ಧತಿಗಳು ಅಸ್ತಿತ್ವದಲ್ಲಿದ್ದವು. ತುಳುನಾಡಿನ ಸಾಮಾಜಿಕ ವ್ಯವಸ್ಥೆಯ ಭಾಗವಾಗಿ ಅಳಿಯಸಂತಾನ ಪದ್ಧತಿ ಬೆಳೆದು ಬಂದಿದೆ. ಭೂಮಿಯ ಒಡೆತನಕ್ಕೆ ಸಂಬಂಧಿಸಿದಂತೆ ಸ್ತ್ರೀ ಸಂತಾನಕ್ಕೆ ಆಸ್ತಿಯ ಹಕ್ಕು ಲಭಿಸುವುದು ಇದರ ವಿಶೇಷತೆ. ಮಾತೃಪ್ರಧಾನ ಕುಟುಂಬ ಪದ್ಧತಿಯ ಇನ್ನೊಂದು ಮುಖವೇ ಅಳಿಯ ಸಂತಾನ ಪದ್ಧತಿಯಾಗಿದೆ. ಕುಟುಂಬದ ಆಸ್ತಿಯ ಒಡೆತನ, ಅಧಿಕಾರವೆಲ್ಲವೂ ಈ ಪದ್ಧತಿಯ ಪ್ರಕಾರ ಹೆಣ್ಣಿಗೆ ಸೇರುತ್ತದೆ. ಗಂಡು ಸಂತತಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಯಾವುದೇ ರೀತಿಯ ಹಕ್ಕು ಬಾಧ್ಯತೆಗಳಿರುವುದಿಲ್ಲ. ಈ ವ್ಯವಸ್ಥೆ ಬಾರ್ಕೂರು ರಾಜ್ಯದ ಭೂತಾಳಪಾಂಡ್ಯನಿಂದ ಪ್ರಾರಂಭವಾಯಿತೆಂದು ಪ್ರತೀತಿ. ಆದರೆ ಶಾಸನಗಳು ಈ ಪದ್ಧತಿಯ ಉಗಮದ ಕುರಿತು ಹೆಚ್ಚಿನ ಮಾಹಿತಿ ನೀಡುವುದಿಲ್ಲ.ಈ ಪದ್ಧತಿಯಂತೆ ಆಸ್ತಿಯನ್ನು ಹೊಂದುವ ಹಕ್ಕು ಸ್ತ್ರೀಯರಿಗೆ ಸಲ್ಲುವುದಲ್ಲದೆ ಗಂಡು ಸಂತಾನಕ್ಕಿಲ್ಲ. ಆ ಕುಟುಂಬದಲ್ಲಿ ಹೆಣ್ಣು ಸಂತಾನವಿಲ್ಲದಿದ್ದರೆ ಅದೇ ಬಳಿಗೆ ಸೇರಿದ ಒಂದು ಹೆಣ್ಣನ್ನು ದತ್ತು ತೆಗೆದುಕೊಳ್ಳಲಾಗುತ್ತಿತ್ತು.[190] ದೇವಪಾಂಡ್ಯನೆಂಬುವವನು

ತನ್ನ ಹೊಸ ಹಡಗನ್ನು ನೀರಿಗಿಳಿಸಲು ಮುಂದಾದಾಗ "ಕುಂಡೋದರ" ಎನ್ನುವ ಭೂತವು ಮಾನವ ಬಲಿಯನ್ನು ಕೇಳುತ್ತದೆ.[191] ದೇವಪಾಂಡ್ಯ ತನ್ನ ಮಗನನ್ನು ಬಲಿಕೊಡುವುದಕ್ಕೋಸ್ಕರ ಹೆಂಡತಿಯನ್ನು ಕೇಳಿದಾಗ ಅವಳು ತಿರಸ್ಕರಿಸುತ್ತಾಳೆ. ಆದರೆ ಅವನ ಸಹೋದರಿ ಸತ್ಯವತಿ ತನ್ನ ಮಗ ಜಯಪಾಂಡ್ಯನನ್ನು ಕೊಡಲು ಒಪ್ಪುತ್ತಾಳೆ. ಆಗ ಕುಂಡೋದರ ಭೂತವು ಜಯಪಾಂಡ್ಯನ ಉಜ್ವಲ ಭವಿಷ್ಯವನ್ನು ಗ್ರಹಿಸಿ ಬಲಿತೆಗೆದುಕೊಳ್ಳದೆ ಬಿಟ್ಟು ಬಿಡುತ್ತದೆ. ಮತ್ತು ಹಡಗುಗಳನ್ನು ಮುಂದುವರಿಯಲು ಅವಕಾಶ ಮಾಡಿಕೊಡುತ್ತದೆ. ಮುಂದೆ ಹಡಗು ಅಗಾಧವಾದ ಸಂಪತ್ತಿನೊಂದಿಗೆ ಹಿಂತಿರುಗಿಬಂದಾಗ ಮತ್ತೆ ದೇವಪಾಂಡ್ಯನ ಹೆಂಡತಿ ತನ್ನ ಮಗನನ್ನು ಭೂತಕ್ಕೆ ನೀಡಲು ಹಿಂಜರಿಯುತ್ತಾಳೆ. ಆಗ ಕುಂಡೋದರ ಭೂತದ ನಿರ್ದೇಶನದಂತೆ ಆ ಸಂಪತ್ತು ಮತ್ತು ಸಾಮ್ರಾಜ್ಯವನ್ನು ತಂಗಿಯ ಮಗನಾದ ಜಯಪಾಂಡ್ಯ ಅಥವಾ ಭೂತಾಳ ಪಾಂಡ್ಯನಿಗೆ ನೀಡಲಾಗುತ್ತದೆ. ಮುಂದೆ ಭೂತಾಳ ಪಾಂಡ್ಯನು ಆಸ್ತಿಯು ಸ್ತ್ರೀ ಸಂಬಂಧೀ ಮೂಲದಿಂದ ಮುಂದುವರಿಯುವಂತಹ ಅಳಿಯ ಸಂತಾನ ಪದ್ಧತಿಯನ್ನು ರೂಪಿಸುತ್ತಾನೆ. ಈ ಕಥೆಯ ಚಾರಿತ್ರಿಕತೆಯೇನೇ ಇರಲಿ, ಸಮಾಜದಲ್ಲಿ ಪ್ರಚಲಿತವಿದ್ದ ಅಳಿಯಸಂತಾನ ಪದ್ಧತಿಯನ್ನು ತಾವು ನಂಬಿಕೊಂಡು ಬಂದ, ಭೂತಾರಾಧನೆಯ ಮೂಲಕ ಸಮರ್ಥಿಸಿಕೊಳ್ಳುವ ವಿಚಾರವನ್ನು ಇಲ್ಲಿ ಗುರುತಿಸಬಹುದು.

ಈ ಪದ್ಧತಿ ತುಳುನಾಡಿನ ಬ್ರಾಹ್ಮಣೇತರ ವರ್ಗಗಳಲ್ಲಿ ಮುಂದುವರಿಯುತ್ತದೆ. ಅಳುಪರ ಶಾಸನಗಳು ಅಳಿಯ ಸಂತಾನ ಪದ್ಧತಿಯ ಪ್ರಾಮುಖ್ಯತೆ ಇದ್ದುದನ್ನು ದೃಢಪಡಿಸುತ್ತವೆ.[192] ಅಳುಪರು ಈ ಪದ್ಧತಿಯನ್ನು ಸ್ವೀಕರಿಸದಿದ್ದರೂ ಸಮಾಜದಲ್ಲಿ ಅಳಿಯ ಸಂತಾನ ಪದ್ಧತಿಗೆ ಇದ್ದ ಪ್ರಾಮುಖ್ಯತೆ ಅಳುಪ ಅರಸರು ಅಳಿಯಂದಿರಿಗೆ ಆಡಳಿತದಲ್ಲಿ ಪ್ರಾಮುಖ್ಯತೆ ಕೊಡುವಲ್ಲಿ ಪ್ರಭಾವಿಸಿರಬೇಕು. ವಿಜಯನಗರದರಸರ ಕಾಲದಲ್ಲಿ ಈ ಪದ್ಧತಿ ಈ ಭಾಗದಲ್ಲಿ ಜನಪ್ರಿಯವಾಗಿತ್ತು. ಕ್ರಿ.ಶ.13ನೇ ಶತಮಾನದವರೆಗೆ ಬರಿಯ ಪದ್ಧತಿಯಾಗಿದ್ದ ಅಳಿಯ ಸಂತಾನ ಕಟ್ಟು, ರಾಜರುಗಳ ಮನ್ನಣೆಗೆ ಪಾತ್ರವಾಗಿ, ಆಲೂಪ ರಾಜರುಗಳಿಂದ ಸ್ವೀಕರಿಸಲ್ಪಟ್ಟು ಕೆಳದಿಯ ರಾಜರ ಸಮ್ಮತಿ ಪಡೆದು ರಾಜ್ಯ ಶಾಸನವಾಗಿ ಮುಂದುವರೆಯಿತು. ಕ್ರಿ.ಶ. 12ನೇ ಶತಮಾನದ ತರುವಾಯ ತುಳುನಾಡಿನಲ್ಲಿ ಆಳ್ವಿಕೆ ನಡೆಸಿದ ಜೈನಮತೀಯರಾದ ತುಂಡರಸರು ಅಳಿಯ ಸಂತಾನ ಪದ್ಧತಿಯ ಕ್ರಮವನ್ನು ಪಾಲಿಸಿಕೊಂಡು ಬಂದಿರುವುದು, ಅವರಿಗೆ ಸಂಬಂಧಿಸಿದ ಶಾಸನದಿಂದಲೂ, ಕಾವ್ಯದಿಂದಲೂ ಸ್ಪಷ್ಟವಾಗುತ್ತದೆ. ಪುತ್ತಿಗೆಯ ಚೌಟರು, ಅಳದಂಗಡಿಯ ಅಜಿಲರು, ಸುರಾಲಿನ ತೋಳಹರ ಅರಸರು, ಮುಲ್ಕಿಯ ಸಾವಂತರು, ಬಂಗವಾಡಿಯ ಬಂಗರು ಹೀಗೆ ಸ್ಥಳೀಯ ಅರಸುಮನೆತನದವರೆಲ್ಲರೂ ಈ ಪದ್ಧತಿಯನ್ನು ಆಚರಣೆಗೆ ತಂದಿದ್ದರು. ಮೂಡಬಿದಿರೆಯ ಕ್ರಿ.ಶ. 1429ರ ತ್ರಿಭುವನ ತಿಲಕ ಚೂಡಾಮಣಿ ಬಸದಿಗೆ ದಾನವನ್ನು ನೀಡಿದ ನಗಿರೆಯ ಭೈರರಸನ ವಂಶಾವಳಿಯನ್ನು ವಿವರಿಸುವ ಶಾಸನದಲ್ಲಿ ಅಳಿಯಸಂತಾನದ ಉಲ್ಲೇಖಗಳು ಸ್ಪಷ್ಟವಾಗಿ ಕಂಡುಬರುತ್ತವೆ.[193]

ವಿದೇಶೀ ಯಾತ್ರಿಕರೂ ಈ ವ್ಯವಸ್ಥೆಯನ್ನು ಗಮನಿಸಿದ್ದರು. ಕ್ರಿ.ಶ.14ನೇ ಶತಮಾನದಲ್ಲಿ ಇಬನ್

ಬತೂತ ತನ್ನ ಪ್ರವಾಸದ ಅವಧಿಯಲ್ಲಿ ಕರಾವಳಿಯನ್ನು ಸಂದರ್ಶಿಸಿ, ಅಳಿಯ ಸಂತಾನ ಪದ್ಧತಿಯ ಬಗ್ಗೆ ಬರೆಯುತ್ತಾನೆ. ಮಲಬಾರ್‌ನಲ್ಲಿ 12 ಮಂದಿ ಹಿಂದೂ ರಾಜರಿದ್ದಾರೆ. ಈ ದೇಶದ ಜನರು ತಮ್ಮ ರಾಜ್ಯವನ್ನು ತಮ್ಮ ಮಕ್ಕಳಿಗೆ ಕೊಡದೆ ತಂಗಿಯ ಮಕ್ಕಳಿಗೆ ಕೊಡುತ್ತಾರೆ. ಈ ಪದ್ಧತಿಯನ್ನು ನಾನು ಎಲ್ಲಿಯೂ ನೋಡಿಲ್ಲ ಎನ್ನುತ್ತಾನೆ.[194] ಅಳಿಯಸಂತಾನ ಪದ್ಧತಿ ಅಂದಿನ ಜೈನ ಅರಸರಲ್ಲಿ ಮಾತ್ರವಲ್ಲದೆ ಇತರ ಹಿಂದೂಗಳಲ್ಲಿಯೂ ಇತ್ತು. ಎಂದು ತಿಳಿಯಲು ಪಿಯತ್ರೋ ಡೆಲ್ಲಾ ವಲ್ಲೆಯ ಮಾಹಿತಿ ಸಹಕಾರಿಯಾಗಿದೆ.[195] ಪಾಡ್ದನಗಳಲ್ಲಿಯೂ ಇದರ ಉಲ್ಲೇಖವಿದೆ. ಕೋಟಿ ಚೆನ್ನಯ ಪಾಡ್ದನಗಳಲ್ಲಿ ಬಿಲ್ಲವರು ಅಳಿಯ ಸಂತಾನ ಕಟ್ಟು ಆಚರಿಸುತ್ತಿದ್ದರೆಂದು ತಿಳಿದುಬರುತ್ತದೆ.

ಆದರೆ ತುಳುನಾಡಿನ ಬ್ರಾಹ್ಮಣರ ಉಲ್ಲೇಖಗಳಲ್ಲಿ ಅವರನ್ನು ಅವರ ತಂದೆಯ ಮೂಲಕವೇ ಪರಿಚಯಿಸಲಾಗಿದೆ. ಇದು ಮಕ್ಕಳ ಕಟ್ಟು ಪದ್ಧತಿಯ ಸೂಚನೆಯಾಗಿದೆ. ಉದಾಹರಣೆಗೆ, ಶಾಸನವೊಂದರಲ್ಲಿ, ಕೇಶವ ಕಾರಂತನ ಮಗ ಗೋವಿಂದ ಕಾರಂತ, ವಿಷ್ಣುಕಾರಂತನ ಮಗ ನಾರಣ ಕಾರಂತ ಮತ್ತು ಕೃಷ್ಣ ಅಲಸೆಯ ಮಗ ವಾಸುದೇವ ಅಲಸೆ ಎಂಬುದಾಗಿ ಉಲ್ಲೇಖಿಸಲಾಗಿದೆ.[196] ಹಾಗೆಂದು ಕೆಲವು ಶಾಸನಗಳು ಬ್ರಾಹ್ಮಣೇತರರ ಮಕ್ಕಳ ಸಂತಾನ ಪದ್ಧತಿಯನ್ನು ಪ್ರಕಟಿಸಿದ್ದೂ ಇದೆ. ಉದಾಹರಣೆಗೆ ಮಣಿಗಾರ ಕೇರಿಯ ಶಾಸನ,[197] ಧರಣಿ ಸೆಟ್ಟಿಯನ್ನು ಕೋಟಿಯಪ್ಪ ಸೆಟ್ಟಿಯ ಮಗನೆಂದೂ ಮತ್ತು ಉತ್ತಮ ಸೆಟ್ಟಿಯನ್ನು ನಾಗ ಸೆಟ್ಟಿಯ ಮಗನೆಂದೂ ಉಲ್ಲೇಖಿಸಿದೆ. ಆದರೆ ಈ ಕಾಲದ ಹೆಚ್ಚಿನ ದಾಖಲೆಗಳು ತುಳುನಾಡಿನ ಹೆಚ್ಚಿನ ಸಮುದಾಯಗಳು ಇದನ್ನು ಅನುಸರಿಸುತಿದ್ದವೆಂದು ತಿಳಿಸುತ್ತವೆ.

ಈ ಪದ್ಧತಿಗೆ ಕಾನೂನಿನ ಮುದ್ರೆಯೊತ್ತಿದವರು ಕೆಳದಿ ರಾಜವಂಶದವರು ಎಂದು ಹೇಳಲಾಗಿದೆ. ಕ್ರಿ.ಶ.1506ರಲ್ಲಿ ಕೆಳದಿ ರಾಜನಾಗಿದ್ದ ಚೌಡಪ್ಪ ನಾಯಕನು ಅಳಿಯ ಸಂತಾನ ಕಟ್ಟಿಗೆ ಶಿಲಾಶಾಸನದ ಮುಖಾಂತರ ಕಾನೂನಿನ ಮುದ್ರೆಯನ್ನು ಒತ್ತಿದನು ಎಂಬ ಅಭಿಪ್ರಾಯವಿದೆ.[198] ಈ ಶಾಸನದಲ್ಲಿ ತನ್ನ ಆಡಳಿತಕ್ಕೊಳಪಟ್ಟ ಕಳಸವೆಂಬ ಗ್ರಾಮದ ಉತ್ತಾರವು ವೀರಪ್ಪಯ್ಯನೆಂಬ ತನ್ನ ಸ್ವಾಮಿ ನಿಷ್ಠ ಪ್ರಜೆಯ ಸಂತಾನದ ಸ್ತ್ರೀಯ ಗಂಡು ಸಂತತಿಗೆ, ಪರಂಪರೆಯಿಂದ ಕೈವರ್ತಿಸಬೇಕೆಂದು ಆಜ್ಞಾಪಿಸಿದನು. ಅಂದರೆ ಸರಕಾರವೇ ಅಳಿಯ ಸಂತಾನ ಕಟ್ಟಿನ ವಾರೀಸು ಹಕ್ಕನ್ನು ಅನುಮೋದಿಸಿದಂತಾಯಿತು. ಈ ದಾಖಲೆ, ಅಳಿಯಸಂತಾನ ಪದ್ಧತಿಯನ್ನು ಕಾನೂನುಬದ್ಧಗೊಳಿಸಿತು ಎಂದು ಹೇಳಲಾಗದಿದ್ದರೂ, ಸಮಾಜದಲ್ಲಿದ್ದ ವ್ಯವಸ್ಥೆಯನ್ನು ಕೆಳದಿಯರಸರೂ ಒಪ್ಪಿಕೊಂಡಿದ್ದರೆಂದು ತಿಳಿಸುತ್ತದೆ.

ತುಳುನಾದಿನ ಕವಿ ಪದ್ಮನಾಭನು, ಮೂಲ್ಕಿಯಲ್ಲಾಳಿದ ಸಾಮಂತರ ಚರಿತ್ರೆಯನ್ನು ಅಳಿಯಸಂತಾನದ ಓಸ್ನೆಲೆಯಲ್ಲಿ ವಿವರಿಸಿದ್ದಾನೆ. ಚಂದ್ರಮ ಸೆಟ್ಟಿ ಮತ್ತು ದೇವಮ್ಮ ಇವರ ಮಗನಾದ ಕಿನ್ನಿಗ ಸಾಮಂತನನ್ನು ಈ ಕೆಳಗಿನಂತೆ ಪರಿಚಯಿಸುತ್ತಾನೆ.[199]

ತುಳುದೇಶದೊಳಗೆ ಕಥಾಂತರದಿಂದಿಲ್ಲಿ । ಅಳಿಯ ಸಂತಾನವಾದುದರಿಂ ।

ಅಳಿಯಗೆ ಯುವರಾಜಪದವಿತ್ತು ರಾಜೇಂದ್ರ । ಒಲುಭಾಗ್ಯದೊಳಗೊಪ್ಪಿಹನೂ ॥

**ಬಳಿ ಪದ್ಧತಿ:** ಬ್ರಾಹ್ಮಣರಲ್ಲಿ ಗೋತ್ರಗಳಿದ್ದಂತೆ ಬ್ರಾಹ್ಮಣೇತರರಲ್ಲಿ ಬಳಿಗಳು ಸಾಮಾಜಿಕವಾಗಿ ಪ್ರತ್ಯೇಕ ಗುಂಪುಗಳ ವಿಕಾಸಕ್ಕೆ ಕಾರಣವಾಗಿದ್ದವು. ತುಳುನಾಡಿನ ಬಳಿ ಪದ್ಧತಿಯನ್ನು ಅಧ್ಯಯನ ಮಾಡಿರುವ ಪಿ. ಗುರುರಾಜ ಭಟ್ಟರು ಅವುಗಳನ್ನು ಈ ಕೆಳಗಿನಂತೆ ವಿಂಗಡಿಸಿದ್ದಾರೆ.[200] 1. ಸಮುದಾಯಗಳಿಂದ ಉಗಮವಾದ ಬಳಿ, 2. ವ್ಯಕ್ತಿತ್ವಗಳಿಂದ ಉಗಮವಾದ ಬಳಿ, 3. ವಿಂಗಡಣೆಗಳ ಮೂಲಕ ಬಂದ ಬಳಿ 4. ಸ್ಥಳ ಮೂಲದಿಂದ ಬಂದ ಬಳಿ 5. ದೈವತ್ವದಿಂದ ಬಂದ ಬಳಿ. ತುಳುನಾಡಿನಲ್ಲದ್ದ 16 ಬಳಿಗಳನ್ನು ಬಲ್ಲಾಳರು ನಿಯಂತ್ರಿಸುತ್ತಿದ್ದರು ಎಂಬುದಾಗಿ ಸ್ಟರಕ್ ತಿಳಿಸುತ್ತಾನೆ[201] ಕೆಲವು ಸಂದರ್ಭಗಳಲ್ಲಿ ವ್ಯಕ್ತಿಗೆ ಪ್ರಾಮುಖ್ಯತೆ ಹೆಚ್ಚಿದಾಗ ಅವನ ಕುಟುಂಬ ಅವನ ಹೆಸರಿನಿಂದ ಗುರುತಿಸಲ್ಪಡುತ್ತಿತ್ತು. ಆ ನಂತರ ಅವರೆಲ್ಲರೂ ಅವನ ಬಳಿಯ ಸದಸ್ಯರಾಗಿ ಗುರುತಿಸಲ್ಪಡುತ್ತಿದ್ದರು. ಈ ರೀತಿಯಲ್ಲಿ ಅನೇಕ ಬಳಿಗಳು ಬೆಳೆದವು. ಬಳಿಯ ಹೆಸರುಗಳು ಕೆಲವು ಸಂದರ್ಭಗಳಲ್ಲಿ ವ್ಯಕ್ತಿಯ ಹೆಸರಿನೊಂದಿಗೆ ಗುರುತಿಸಲ್ಪಡುತ್ತಿತ್ತು ಎನ್ನುವುದು ಬಳಿಗಿದ್ದ ಪ್ರಾಮುಖ್ಯತೆಯನ್ನು ವಿವರಿಸುತ್ತವೆ. ಉದಾಹರಣೆಗೆ ಹೂವಬ್ಬೆಯ ಬಳಿಯ ದುಗ್ಗು ಬಿನ್ನಾಣಿತ್ತಿ ಎನ್ನುವ ಉಲ್ಲೇಖ.[202] ಮಾತೃ ಮೂಲಿಯ ಕುಟುಂಬ ಪದ್ಧತಿಯ ಎಲ್ಲಾ ತುಳು ಮೂಲ ನಿವಾಸಿಗಳಲ್ಲಿ 16 ಬಳಿಗಳ ಬಳಕೆಯಿದೆ. ಒಂದೇ ಬಳಿಯ ಹುಡುಗಿಯನ್ನು ಹುಡುಗ ಮದುವೆಯಾಗುವಂತಿರಲಿಲ್ಲ. ಅದಕ್ಕೆ ಕಾರಣ ಹಿಂದೆ ಒಂದು ಕಾಲದಲ್ಲಿ ಅವರೀರ್ವರೂ ಒಂದೇ ಕುಟುಂಬ ಮೂಲದವರೆಂಬ ಭಾವನೆ. ಒಟ್ಟಿನಲ್ಲಿ ತುಳುನಾಡಿನಲ್ಲಿ ಬಳಿಗಳು ಕುಟುಂಬ ಸಂಘಟನೆಯಲ್ಲಿ ಗೋತ್ರಗಳಂತೆ ಕೆಲಸ ಮಾಡುತ್ತಿದ್ದವು.

ಅಳಿಯಸಂತಾನ ಪದ್ಧತಿಯು, ಅಧ್ಯಯನ ಕಾಲದ ತುಳುನಾಡಿನ ಸಂಸ್ಕೃತಿಯ ವೈಶಿಷ್ಟ್ಯವಾಗಿ ಗೋಚರಿಸುತ್ತದೆ ಎನ್ನಬಹುದು. ಕ್ರಿ.ಶ.13ನೇ ಶತಮಾನದವರೆಗೆ ಬರಿಯ ಪದ್ಧತಿಯಾಗಿ ಉಳಿದಿದ್ದ ಈ ವ್ಯವಸ್ಥೆ, ಕ್ರಮೇಣ ರಾಜರುಗಳ ಮನ್ನಣೆಗೆ ಪಾತ್ರವಾಗಿ 16ನೇ ಶತಮಾನದ ಆದಿಯಿಂದ ಕಾನೂನಾಗಿ ಮಾರ್ಪಟ್ಟಿತು.[203] ಸಮಾಜದ ಮೇಲ್ವರ್ಗ ಮತ್ತು ಕೆಳವರ್ಗ ಎಂಬ ಭೇದವಿಲ್ಲದೆ ಬ್ರಾಹ್ಮಣರನ್ನು ಹೊರತುಪಡಿಸಿ ಉಳಿದ ಹೆಚ್ಚಿನ ವರ್ಗಗಳು ತುಳುನಾಡಿನಲ್ಲಿ ಅಳಿಯಸಂತಾನ ಪದ್ಧತಿಯನ್ನು ಅನುಸರಿಸುವುದು ವಿಶೇಷವಾಗಿದೆ. ಹಾಗೆಂದು ಜೈನರು, ಬಂಟರು ಮೊದಲಾದ ಸಮುದಾಯಗಳಲ್ಲಿ ಮಕ್ಕಳ ಕಟ್ಟನ್ನು ಅನುಸರಿಸುವವರೂ ಇದ್ದಾರೆ ಅಳಿಯ ಸಂತಾನ ಪದ್ಧತಿಯ ಕಟ್ಟು ಕಟ್ಟಳೆಗಳಲ್ಲಿ ಮುಖ್ಯವಾಗಿ ಕುಟುಂಬದ ಸ್ವತ್ತುಗಳ ರಕ್ಷಣೆ, ಪಾಲನೆ, ಜನನ, ಮತ್ತು ಮರಣ ಕಾಲಗಳಲ್ಲಿ ನಡೆಸತಕ್ಕ ವಿಧಿಗಳು ಹಾಗೂ ಬರಿ(ಬಳಿ) ಅಥವಾ ಗೋತ್ರಗಳ ಬಗ್ಗೆ ಪಾಲಿಸತಕ್ಕ ನಿಯಮಗಳ ವಿವರವಿದೆ. ಈ ನಿಯಮಗಳು ಕ್ರಿ.ಶ. 16ನೇ ಶತಮಾನದಲ್ಲಿ ರಚಿಸಲ್ಪಟ್ಟಿರುವ ಸಾಧ್ಯತೆಯಿದೆ. ಅಳಿಯಸಂತಾನ ಕಟ್ಟಿನ ಪಾಲನೆಯ ಹಿಂದೆ ನಿಖರವಾದ ಕಾರಣಗಳಿದ್ದವೆಂದು ಕೆಲವು ಬ್ರಿಟೀಷ್ ವರದಿಗಳ ಅಧ್ಯಯನದಿಂದ ತಿಳಿಯುತ್ತದೆ.[204] ಬುಕಾನನ್ ಹೇಳುವಂತೆ, ತುಳುನಾಡಿನ

ಜಿಲ್ಲವರು ಮತ್ತು ಘಟ್ಟದ ಮೇಲಿನ ಈ ಸಮುದಾಯದ ಜನರ ನಡುವೆ ವೈವಾಹಿಕ ಸಂಬಂಧಗಳಿದ್ದವಾದರೂ ತುಳುನಾಡಿನ ಹೆಣ್ಣನ್ನು ಘಟ್ಟದ ಮೇಲೆ ವಿವಾಹ ಮಾಡಿ ಕೊಡುತ್ತಿದ್ದರು. ಆದರೆ ಘಟ್ಟದ ಮೇಲಿನ ಹೆಣ್ಣನ್ನು ತುಳುನಾಡಿನ ಜಿಲ್ಲವರು ಮದುವೆಯಾಗುತ್ತಿರಲಿಲ್ಲ. ಯಾಕೆಂದರೆ ಸಂಪ್ರದಾಯದಂತೆ ಇಲ್ಲಿಯ ಆಸ್ತಿ ಅವರ ಪಾಲಾಗಬಾರದೆಂಬ ದೃಷ್ಟಿಯಿಂದ. ಈ ಅವಲೋಕನ ಅಳಿಯ ಸಂತಾನ ಪದ್ಧತಿ ಭೂ ನಿಯಂತ್ರಣ ವ್ಯವಸ್ಥೆಯಲ್ಲಿ ಎಷ್ಟು ಪ್ರಮುಖ ಪಾತ್ರವಹಿಸುತ್ತಿತ್ತು ಎಂಬುದನ್ನು ತಿಳಿಸುತ್ತದೆ. ಅಳಿಯ ಸಂತಾನ ಪದ್ಧತಿ ಈ ಭಾಗದಲ್ಲಿ ಸ್ತ್ರೀ ಸಬಲೀಕರಣದ ಪ್ರಮುಖ ಹೆಜ್ಜೆ ಎನ್ನಬಹುದು. ಉದಾಹರಣೆಗೆ, ತುಳುನಾಡಿನಾದ್ಯಂತ ಈ ಕಾಲದಲ್ಲಿ ಆಡಳಿತ ನಡೆಸಿದ್ದ ಸ್ಥಳೀಯರಸರಲ್ಲಿ ಅನೇಕ ರಾಣಿಯರೂ ಇದ್ದರು. ಚೌಟ ರಾಣಿಯರಾದ, ಹಿರಿಯ ಮತ್ತು ಕಿರಿಯ ಅಬ್ಬಕ್ಕ, ಹಾಡುವಳ್ಳಿ ಮತ್ತು ಗೇರುಸೊಪ್ಪೆಯಿಂದ ಆಳಿದ ಚೆನ್ನಾದೇವಿ ಚೆನ್ನಾಭೈರಾದೇವಿಯರು ಬಂಗರಾಣಿಯರಾದ ವಿಠಲದೇವಿ, ಪದುಮಲದೇವಿ, ಶಂಕರದೇವಿಯರು ಅದೇ ರೀತಿ ಅಜಿಲ, ಮೂಲ, ಸಾಮಂತ ವಂಶದ ರಾಣಿಯರು ಪಟ್ಟವೇರಿ ಆಡಳಿತ ನಡೆಸಿದ್ದರು. ಬಹುಶ: ತುಳುನಾಡಿನಲ್ಲಿ ಇಷ್ಟು ದೊಡ್ಡ ಸಂಖ್ಯೆಯ ರಾಣಿಯರ ಆಳ್ವಿಕೆಗೆ ಅಳಿಯ ಸಂತಾನದಂತಹ ಮಾತೃಮೂಲೀಯ ಕುಟುಂಬ ಪದ್ಧತಿಯೇ ಕಾರಣವಾಗಿತ್ತೆಂದು ತಿಳಿಯಬಹುದು.

**ಅಡಿಟಿಪ್ಪಣಿಗಳು**

1. ವೆಂಕಟರತ್ನಂ ಎ.ವಿ., ಎಂ.ಬಿ. ಪದ್ಮ, 1985, ಇತಿಹಾಸ ಸಂಶೋಧನಾ ಮಾರ್ಗ, ಬ್ಯಾಪ್ಕೋ ಪಬ್ಲಿಕೇಷನ್ಸ್, ಬೆಂ.ಪು.41
2. ವೆಂಕಟರತ್ನಂ ಎ.ವಿ. ಎಂ.ಬಿ. ಪದ್ಮ, ಅದೇ. ಪು.41
3. ಈ ಪಾಡ್ದನದಲ್ಲಿ, "ಅಷ್ಟರಲ್ಲಿ ಬಿಲ್ಲು ಸುಲ್ತಾನ ಈರಪ್ಪ ನಾಯ್ಕನವರ ಸೈನ್ಯ ಕಂಡಿತು. ಆ ಸೇನೆಯಲ್ಲಿಗೆ ಹೋಗಿ ಆ ವೀರಪ್ಪನಾಯ್ಕನವರ ಸೇನೆಯನ್ನು ಸಂಹಾರ ಮಾಡಿದರು. ನಾವು ತುಳುರಾಜ್ಯಕ್ಕೆ ಘಟ್ಟ ಇಳಿದು ಬಂದೆವು ನಮಗೆ ಬಿಲ್ಲು ಸುಲ್ತಾನ ಈರಪ್ಪ ನಾಯ್ಕನ ಸೇನೆ ಕಂಡಿತು. ದಂಡನ್ನು ಸಂಹಾರ ಮಾಡಿದೆವು." ಎಂಬ ಉಲ್ಲೇಖವಿದೆ. ಈರಪ್ಪ ನಾಯ್ಕ ಅಥವಾ ವೀರಪ್ಪನಾಯ್ಕನ ದಂಡಿನ ಮಾಹಿತಿಗನುಗುಣವಾಗಿ ತುಳುನಾಡಿನಲ್ಲಿ ಆಳಿದ ಇಕ್ಕೇರಿಯ ಅರಸ ವೀರಭದ್ರನಾಯ್ಕನನ್ನು ಈ ಪಾಡ್ದನ ಉಲ್ಲೇಖಿಸುತ್ತದೆ. ಇವನ ಆಳ್ವಿಕೆಯ ಕಾಲ 1629–1645. ಹಾಗಾಗಿ ಈ ಪಾಡ್ದನದ ರಚನೆಯ ಕಾಲ ಕ್ರಿ.ಶ.17ನೆಯ ಶತಮಾನದ ಮಧ್ಯಭಾಗ ಎಂದು ಊಹಿಸಬಹುದು.
4. ವಿವೇಕ ರೈ ಬಿ.ಎ, 1985, ತುಳು ಜನಪದ ಸಾಹಿತ್ಯ, ಕ.ಸಾ.ಪ., ಬೆಂಗಳೂರು, ಪು.227–231
5. ಗಣಪತಿ ರಾವ್ ಐಗಳ್ ಎಂ, (ದ್ವಿತೀಯ ಮುದ್ರಣ, 2004) ದ.ಕ. ಜಿಲ್ಲೆಯ ಪ್ರಾಚೀನ ಇತಿಹಾಸ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ಪು.135, 136
6. Buchanan Francis, 1873, A journey from Madras through the countries of Mysore, Canara and Malabar Vol.II, Madras , p. 246.
7. SII. VOL.IX,pt.II,NOs,446,641,659,675; KII,Vol.III, No.7.
8. A.K.Shastry, 2001,The Records of The Sringeri Matha relating to keladi ,Keladi museum, p.24
9. ಅಡ್ವನಡ್ಕ ಕೃಷ್ಣ ಭಟ್(ಸಂ), 1997, ಸುದರ್ಶನ, ಡಾ. ಕೋನ್ಸೆ ಮಾಧವ ಪೈ ಅಭಿನಂದನಾ ಗ್ರಂಥ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ಹೆಚ್.ಎಲ್.ನಾಗೇಗೌಡ(ಲೇ) ಪ್ರವಾಸಿ ಕಂಡ ದಕ್ಷಿಣ ಕನ್ನಡ. ಪು.243.
10. ನಾಗೇಗೌಡ ಎಚ್.ಎಲ್. ಪ್ರವಾಸಿಕಂಡ ಇಂಡಿಯಾ ಸಂಪುಟ–4, 1972, ಪ್ರಸರಾಂಗ ಮೈಸೂರು ವಿ.ವಿ. ಮೈಸೂರು, ಪು.267
11. SII.IX Pt.II, No.675 ; Ibid VII No, 390.
12. MAR, 1943, No.47
13 SII, VII, No.269.

14. ವಿವೇಕ ರೈ ಬಿ.ಎ, 1985, ತುಳು ಜನಪದ ಸಾಹಿತ್ಯ, ಕ.ಸಾ.ಪ., ಬೆಂಗಳೂರು, ಪು.173
15. SII,IX,Pt,II, No. 449
16. SII,IX,Pt.II, No.673.
17. Buchanan,II, Ibid, p. 268
18. Buchanan,II, Ibid, p. 268
19. ವಿವೇಕ ರೈ ಬಿ.ಎ, ತುಳು ಜನಪದ ಸಾಹಿತ್ಯ, ಪೂರ್ವೋಕ್ತ, ಪು.173
20. ವಿವೇಕ ರೈ ಬಿ.ಎ, ತುಳು ಜನಪದ ಸಾಹಿತ್ಯ, ಪೂರ್ವೋಕ್ತ, ಪು.173
21. SII.VOL.VII,Nos.199,200,207,209,246,248,255,262,264
22. B.A.Saletore, Op. Cit, 539-78
23. ಕ್ಷೇತ್ರ ಕಾರ್ಯ
24. ಪುಟ್ಟುಸ್ವಾಮಿ, (ಸಂ)1950, ಪದ್ಮನಾಭ, ಜಿನದತ್ತರಾಯ ಚರಿತ್ರೆ, ಮಂಗಳೂರು, ಗದ್ಯ 45. ಪು.4
25. "ಹಲರು" ಪದದ ಕುರಿತ ವಿದ್ವಾಂಸರಲ್ಲಿ ಭಿನ್ನ ಅಭಿಪ್ರಾಯಗಳಿವೆ. ಕೆ.ವಿ. ರಮೇಶರ ಅಭಿಪ್ರಾಯದಲ್ಲಿ ಯಾವುದೇ ಸಂಘದಲ್ಲಿ ಹಲವರು ಸೇರಿ ಸೇವೆ ಸಲ್ಲಿಸುವುದು. ಗುರುರಾಜ ಭಟ್ಟರ ಪ್ರಕಾರ ಇವರು ಜೈನರಾಗಿದ್ದು ನಗರಾಡಳಿತ ಅಥವಾ ಪುರಸಭೆಯ ಸದಸ್ಯರು. ದಾನ ದತ್ತಿಗಳನ್ನು ನೀಡುವಾಗ ಇವರನ್ನು ಸಂಪರ್ಕಿಸಲಾಗುತಿತ್ತು.
26. ಶೆಟ್ಟಿ ಎಸ್.ಡಿ,(ಸಂ) ಕಾರ್ಕಳದ ಕವಿ ಚದುರ ಚಂದ್ರಮ ವಿರಚಿತ ಗೊಮ್ಮಟೇಶ್ವರ ಚರಿತ್ರೆ, 2007, ಶ್ರೀ.ಮಂಜುನಾಥೇಶ್ವರ ಪಬ್ಲಿಕೇಷನ್ ಟ್ರಸ್ಟ್(ರಿ.)ಉಜಿರೆ. ಪು.194
27. SII, VII, 243, 244
28. SII, VII, Nos. 212, 255, 256. ARSIE 1940-41, App. A, No.4
29. ARSIE 1940-41 , App. A, No.4.
30. Henry heras , The Expansion of wars of Venkatappa Nayaka of Ikkeri, PIHRC, XI, pp.111-12
31. ಸುರೇಂದ್ರ ರಾವ್.ಬಿ.,(ಅನುವಾದ, ವಿ.ಬಿ.ಅರ್ತಿಕಜೆ)2010,ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಗೋವಿಂದ ಪೈ ಸ್ಮಾರಕ ಸಂಶೋಧನ ಕೇಂದ್ರ, ಉಡುಪಿ, ಪು.49
32 Jagadeesh Shetty.B.1992,The Agro Economic Relations and social structure in Dakshina kannada-100-1600 A.D, Unpublished P.hd. Thesis, Manglore University.
33. SII XXVII,No,319; K. V. Ramesh, The History Of Bunts p.13,14.
34. SII.Vol.VII,No.350; .SII VII No.285; A.R.No.530, 1929-30 Gururaj Bhat,studieis,p.231; K.I.Vol.I,No.41,1939-40
35. John Sturrock,1864, Madras District Manuals, South Canara, volume1, Madras,I,pp 156-57,
36. Edgar Thirstun,1909, Castes and Tribes of Southern India, Volume-V, Government Press Madras, p.134
37. S.I.I.Vol.VII,No.279; S.I.I.Vol.XI,part I,No.279; A.R.No.590,1929-30
38. Thurston, Op. Cit, I.p.168
39. Thurston, Op. Cit, V, p.134
40. Buchanan, Op. Cit ,II, Ibid, p.214
41. ಅಜಲು ಅಂದರೆ ದೇವಸ್ಥಾನಗಳ ನಿರ್ವಹಣೆ ಅಥವಾ ಸ್ಥಳೀಯ ಆಡಳಿತಕ್ಕೆ ಸಂಬಂಧಿಸಿದ ಜವಾಬ್ದಾರಿಗಳ ಸಾಂಪ್ರದಾಯಿಕ ಅಧಿಕಾರ ನೀಡಿಕೆ. ಕ್ರಮಾಗತ ವ್ಯವಸ್ಥೆಯಲ್ಲಿಯ ಸ್ಥಾನಮಾನಗಳಿಗೆ ಅನುಗುಣವಾಗಿ ಎಲ್ಲಾ ಜಾತಿಯವರಿಗೂ ಅವರವರ ಕರ್ತವ್ಯ ಹೊಣೆಗಾರಿಕೆ ಹಂಚಲಾಗಿತ್ತು. ಆದರೆ ವಲಸೆ ಸಿದ್ಧಾಂತವು ಆ ಗುಂಪು ಕೋಟೆಯವರಂತೆ ಕನ್ನಡ ಮಾತಾಡದೆ ಹೇಗೆ ತುಳು ಭಾಷೆಯದಾಯಿತು ಎನ್ನುವ ವಿವರಣೆ ನೀಡುವುದಿಲ್ಲ. ವಲಸೆ ಸಿದ್ಧಾಂತವನ್ನು ಕಡೆಗಣಿಸಿದರೂ ಅವರ ಆಚಾರ ವಿಚಾರಗಳು ಪರಿವಾರ ಬಂಟರನ್ನು ಪ್ರತ್ಯೇಕ ಗುಂಪುಗಳಾಗಿ ತೋರಿಸುತ್ತದೆ.
42. ಸುರೇಂದ್ರ ರಾವ್.ಬಿ., (ಅನುವಾದ, ವಿ.ಬಿ.ಅರ್ತಿಕಜೆ)2010, ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು, ಗೋವಿಂದ ಪೈ ಸ್ಮಾರಕ ಸಂಶೋಧನ ಕೇಂದ್ರ, ಉಡುಪಿ, ಪು.163.
43. Sturrock, South Canara Manual, Vol.I, pp.156-57)
44. ವಿವೇಕ ರೈ ಬಿ.ಎ, ತುಳು ಜನಪದ ಸಾಹಿತ್ಯ, ಪೂರ್ವೋಕ್ತ, ಪು.174
45. ಕುಂದಾಪುರ ಕೆರ್ಗಾಲಿನ ಜೆ. ಅಚ್ಚುತ ಹೆಬ್ಬಾರರಿಂದ ಪಡೆದ ತಾಮ್ರ ಪತ್ರ ಶಾಸನಗಳು. ಸುರೇಂದ್ರ ರಾವ್.ಬಿ.,(ಅನುವಾದ, ವಿ.ಬಿ.ಅರ್ತಿಕಜೆ), ಪೂರ್ವೋಕ್ತ, ಪು.61
46. A.K.Shastry, Op. Cit , p.3
47. A.K.Shastry, Op. Cit , p.70-71
48. A.K.Shastry- Op. Cit, 2001, pp. 70-71
49. Buchanan, Op. Cit ,II, p.225
50. ಮೋಹನ ಕೃಷ್ಣ ರೈ, 2012, ತುಳುನಾಡು ಕನ್ನಡ ನುಡಿ, ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. ಪು.157
51. ಶೆಟ್ಟಿ ಎಸ್.ಡಿ, 1999, ತುಳುನಾಡಿನ ಜೈನ ಧರ್ಮ ಒಂದು ಸಾಂಸ್ಕೃತಿಕ ಅಧ್ಯಯನ, ರಾಷ್ಟಕವಿ ಗೋವಿಂದ

ಪೈ ಸಂಶೋಧನಾ ಕೇಂದ್ರ, ಉಡುಪಿ, ಪು.128

52. ಅದೇ, ಪು.128
53. ಚಿನ್ನಸ್ವಾಮಿ ಸೋಸಲೆ. ಎನ್, (ಸಂ) 2014, ಕರಾವಳಿ ಕರ್ನಾಟಕದ ಜೈನ ಅರಸು ಮನೆತನಗಳು–ಸಾಂಸ್ಕೃತಿಕ ಅಧ್ಯಯನ,. ಪ್ರಸಾರಾಂಗ ಕವಿವಿ.ಹಂಪಿ.ಲೇ, ಪುಂಡಿಕಾಯಿ ಗಣಪಯ್ಯ ಭಟ್. ಪು.27
54. ಗುರುರಾಜ ಭಟ್ ಪಿ, ತುಳುನಾಡು, ಭವ್ಯವಾಣಿ ಉಡುಪಿ. 186–9
55. ಸುರೇಂದ್ರ ರಾವ್ ಬಿ.,(ಅನುವಾದ, ವಿ.ಬಿ.ಅರ್ತಿಕಜೆ), ಪೂರ್ವೋಕ್ತ, ಪು. 60–63
56. Henry heras, 1927, Araveedu Dynasty, p.59,296,297;
57. Shastry B.S, Goa- Kanara-Portuguese Relations, p.78-79.
58. Shastry, B. S, Op. Cit, p.78-79.
59. ಸುರೇಂದ್ರ ರಾವ್.ಬಿ., (ಅನುವಾದ, ವಿ.ಬಿ. ಅರ್ತಿಕಜೆ), ಪೂರ್ವೋಕ್ತ, ಪು.68
60. Shastry, B. S, Op. Cit,95-97
61. Buchanan, Op.Cit ,II, Ibid, p. 243
62. ಸ್ವತಃ ಪರಿಶೀಲನೆ ಮತ್ತು ಶೆಟ್ಟಿ ಎಸ್.ಡಿ, ಪೂರ್ವೋಕ್ತ, ಪು. 127
63. ನರಸಿಂಹ ಮೂರ್ತಿ ಪಿ.ಎನ್, 1986, ಹಟ್ಟಿಯಂಗಡಿ–ಒಂದು ಐತಿಹಾಸಿಕ ಸಮೀಕ್ಷೆ, ಲೋಕನಾಥೇಶ್ವರ ಜೀರ್ಣೋದ್ಧಾರ ಸಮಿತಿ ಹಟ್ಟಿಯಂಗಡಿ, ಕುಂದಾಪುರ, ದ.ಕ, ಪು.5
64. SII, Vol, VII, No,196
65. ತುಳುನಾಡಿನ ಹೆಚ್ಚಿನ ಬಸದಿ ದೇವಾಲಯಗಳ ಮೇಲ್ವಿಚಾರಿಕೆಯ ಕೆಲಸವನ್ನು ಆಯಾ ಊರಿನ ವ್ಯಾಪಾರೀ ಸಂಘಗಳೇ ನಿರ್ವಹಿಸುತ್ತಿದ್ದವು. ಉದಾಹರಣೆಗೆ ಮೂಡಬಿದಿರೆ ನಗರದಲ್ಲಿರುವ ಯಾವುದೇ ಬಸದಿಗಳಿಗೆ ದಾನ ನೀಡುವಾಗಲೂ ಬಿದಿರೆ ನಗರದ ಸಮಸ್ತ ಪ್ರಜೆ 8 ಮಂದಿ ಸೆಟ್ಟಕಾರರು ನಾಲ್ವರು ಎಳಮೆಗಳು ಮತ್ತು ಸಮಸ್ತ ಹಲರು ಆ ದಾನವನ್ನು ನೋಡಿ ಕೊಳ್ಳುವುದೆಂದು ಅದರಲ್ಲಿ ಸೂಚಿಸಲಾಗಿದೆ. ವೇಣೂರಿನಲ್ಲಿ 16 ಮಂದಿ ಸೆಟ್ಟಿಕಾರರು 360 ಮಂದಿ ಎಳಮೆಗಳು ಮೊದಲಾದ ಸಮಸ್ತ ಹಲರು ನೋಡಿಕೊಳ್ಳುವುದೆಂದು ವಿವರಿಸಲಾಗಿದೆ. ಇದೇ ರೀತಿ ಕಾರ್ಕಳ ನಗರ, ಬಾರ್ಕೂರು ರಾಜ್ಯ, ಬಸ್ರೂರು, ಬೆಳ್ತಂಗಡಿ ನಗರಗಳಲ್ಲಿ ಇದ್ದ ವರ್ತಕ ಸಂಘಗಳೂ ಶಾಸನೋಕ್ತವಾಗಿವೆ. ವ್ಯಾಪಾರದಲ್ಲಿ ಬಹಳಷ್ಟು ಲಾಭ ಪಡೆದ ಈ ಜೈನ ಶ್ರೇಷ್ಠಿಗಳೇ ಇಲ್ಲಿರುವ ಹೆಚ್ಚಿನ ಬಸದಿಗಳನ್ನು ನಿರ್ಮಿಸಿದ್ದರೆಂಬುದಕ್ಕೆ ಆ ಬಸದಿಗಳ ಹೆಸರುಗಳೇ ಸಾಕ್ಷಿಯಾಗಿದೆ. ಮೂಡಬಿದಿರೆಯ ಕೋಟಿ ಶೆಟ್ಟಿ, ವಿಕ್ರಮ ಶೆಟ್ಟಿ, ಚೋಳ ಶೆಟ್ಟಿ, ದೇರಮ್ಮ ಶೆಟ್ಟಿ, ಮಹಾದೇವ ಶೆಟ್ಟಿ ಬಸದಿಗಳಲ್ಲದೆ, ಶೆಟ್ರ ಬಸದಿಯೂ ಕೂಡ ಅದನ್ನು ನಿರ್ಮಿಸಿದ ಸೆಟ್ಟಿಗಳ ಹೆಸರನ್ನು ಶಾಶ್ವತಗೊಳಿಸಿದೆ.
66. ಗುರುರಾಜ ಭಟ್, ತುಳುನಾಡು, ಪೂರ್ವೋಕ್ತ, ಪು.188
67. ಕ್ಷೇತ್ರಕಾರ್ಯ
68. ಕ್ರಿ.ಶ.1710ರ ಶಾಸನವೊಂದು ವೇಣೂರಿನ ಪಟ್ಟಣ ಶೆಟ್ಟಿ, ಮೋನಪ್ಪ ಶೆಟ್ಟರು ಕೇಳಿಕೊಂಡ ಪ್ರಕಾರ ಅಜಿಲರಸರು ಲಿಂಗವಂತ ಮಠಕ್ಕೆ ಭೂ ಸ್ವಾಸ್ತಿ ನೀಡಿದ್ದರು ಎಂಬ ವಿಚಾರವನ್ನು ತಿಳಿಸುತ್ತದೆ. Vasantha Madhava K.G. 1985, Religions in costal Karnataka 150-1763, Delhi, p.165
69. ಕ್ರಿ.ಶ.1564ರ ಶಾಸನವೊಂದು ಶಂಕರ ಶೆಟ್ಟಿ ಮತ್ತು ಇತರರು ಮೂಡಬಿದಿರೆಯ ಚಂಡೋಗ್ರ ಪಾರ್ಶ್ವನಾಥ ಬಸದಿಗೆ ಹಣಕಾಸಿನ ದಾನ ನೀಡಿದ ಮಾಹಿತಿ ನೀಡುತ್ತದೆ. ಅದೇ ರೀತಿ ಕ್ರಿ.ಶ.1538 ಮತ್ತು 1545ರಲ್ಲಿ ಮೂಡಬಿದಿರೆಯ ಚಂದ್ರನಾಥ ಬಸದಿಗೆ ಜೈನ ವ್ಯಾಪಾರಿಗಳಾದ ಭೈರ ಹೆಗ್ಗಡೆ ಹಾಗೂ ನಾರಾಯಣ ನಾಯಕ (ಭಟ್ಕಳದ) ಇವರುಗಳು ಹಣಕಾಸಿನ ನೆರವು ನೀಡಿದರು. ಗುರುಗಳ ಬಸದಿಯ ಕ್ಷೀರಾಭಿಷೇಕಕ್ಕೆ ಕ್ರಿ.ಶ. 1542ರಲ್ಲಿ ಪಡು ಪಣಂಬೂರಿನ ನಾರಾಯಣ ಶೆಟ್ಟಿ ಎಂಬವನು ದಾನ ನೀಡಿದ್ದ. ಇವರೆಲ್ಲರೂ ಜೈನರಾಗಿರಬೇಕು.
70. ವಿವೇಕ ರೈ ಬಿ.ಎ, ತುಳು ಜನಪದ ಸಾಹಿತ್ಯ, ಪೂರ್ವೋಕ್ತ, ಪು.175
71. Shridhar Naik.b, 2004, The society and politics in South canara1500-1800 A.D. Unpublished P.hd. Thesis, Manglore Universitys, P. 236
72. ಶೆಟ್ಟಿ ಎಸ್.ಡಿ,(ಸಂ) ಕಾರ್ಕಳದ ಕವಿ ಚದುರ ಚಂದ್ರಮ ವಿರಚಿತ ಗೊಮ್ಮಟೇಶ್ವರ ಚರಿತ್ರೆ, ಪೂರ್ವೋಕ್ತ–ಪು.194
73. EC, VIII,Ti.52
74. A.R. No.482,1928-29
75. "ಬಲ್ಲಾಳರ ಕಾಲದಲ್ಲಿನ ಕಟ್ಟುಪಾಡು" ಎಂಬ ನುಡಿ, ಹೇಗೆ ಬಲ್ಲಾಳರು ದೈವ ದೇವರುಗಳ ಪ್ರಧಾನ ಪೋಷಕರಾಗಿದ್ದರು ಎಂಬುದನ್ನು ತೋರಿಸುತ್ತದೆ. ಕ್ಷೇತ್ರಕಾರ್ಯದ ಮಾಹಿತಿ
76. ಶೆಟ್ಟಿ, ಎಸ್. ಡಿ, ಪೂರ್ವೋಕ್ತ, ಪು.128.
77. Buchanan, Op. Cit ,II, p. 239
78. ARSIE 1929-30,Nos 588,579
79. ARSIE 1929-30, Nos 588,579
80. ವಿವೇಕ ರೈ ಬಿ.ಎ, ತುಳು ಜನಪದ ಸಾಹಿತ್ಯ, ಪೂರ್ವೋಕ್ತ, ಪು.176
81. Buchanan, Op. Cit, II, p.239
82. Buchanan, Op. Cit, II, p.239

83. ರಮಾನಾಥ ಕೋಟೆಕಾರ್, 2012, ತುಳುನಾಡಿನ ಜಿಲ್ಲವರು ಒಂದು ಅಧ್ಯಯನ,ಕೋಟೆಕರ್ ಸಾಯಿ ಸುಂದರಿ ಸೇವಾ ಟ್ರಸ್ಟ್, ಪು.146
84. ರಮಾನಾಥ ಕೋಟೆಕಾರ್, ತುಳುನಾಡಿನ ಜಿಲ್ಲವರು. ಪೂರ್ವೋಕ್ತ, ಪು.146
85. ಗುಂಡಾ ಜೋಯಿಸ ಕೆಳದಿ, ಕೆಳದಿ ನೃಪ ವಿಜಯ, ಪೂರ್ವೋಕ್ತ, ಪು.158–162
86. Shastry, B. S, Op. Cit, p.33
87. ಗುಂಡಾ ಜೋಯಿಸ ಕೆಳದಿ, ಕೆಳದಿ ನೃಪ ವಿಜಯ, ಪೂರ್ವೋಕ್ತ, ಪು.158–162
88. ಅದೇ. ಪು.158
89. Buchanan, Op. Cit, II, p. 239
90. Buchanan, Op. Cit, II, p. 239
91. Buchanan, Op. Cit, II p. 217
92. Gururaj Bhat P.1975, Studies in Tuluva History and Culture, Manipal, p.229
93. ವಿವೇಕ ರೈ ಬಿ.ಎ, ತುಳು ಜನಪದ ಸಾಹಿತ್ಯ, ಪೂರ್ವೋಕ್ತ, ಪು.176
94. ವಿವೇಕ ರೈ ಬಿ.ಎ, ತುಳು ಜನಪದ ಸಾಹಿತ್ಯ, ಪೂರ್ವೋಕ್ತ, ಪು.176
95. ARSIE,1931-32, No.282
96. Jhon Sturrock, Op. Cit, Vol.I. p.231
97. SII VII No. 264
98. SII.VOL .IX,Pt.II. No.457
99. ವಿವೇಕ ರೈ ಬಿ.ಎ, ತುಳು ಜನಪದ ಸಾಹಿತ್ಯ, ಪೂರ್ವೋಕ್ತ, ಪು.176
100. ವಿವೇಕ ರೈ ಬಿ.ಎ, ತುಳು ಜನಪದ ಸಾಹಿತ್ಯ, ಪೂರ್ವೋಕ್ತ, ಪು.177
101. ವಿವೇಕ ರೈ ಬಿ.ಎ, ತುಳು ಜನಪದ ಸಾಹಿತ್ಯ, ಪೂರ್ವೋಕ್ತ, ಪು.177
102. SII.VOL .VII, No.330
103. SII.VOL .VII, No.324
104 SII.VOL .VII, No.382
105. ವಿವೇಕ ರೈ ಬಿ.ಎ, ತುಳು ಜನಪದ ಸಾಹಿತ್ಯ, ಪೂರ್ವೋಕ್ತ, ಪು.177
106. ಹೆಚ್.ಎಲ್. ನಾಗೇಗೌಡ, ಸುದರ್ಶನ, (ಲೇ) ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ,ಉಡುಪಿ, ಪ್ರವಾಸಿ ಕಂಡ ದಕ್ಷಿಣ ಕನ್ನಡ. ಪು. 81
107. ಶೆಟ್ಟಿ ಎಸ್.ಡಿ(ಸಂ) ಕಾರ್ಕಳದ ಕವಿ ಚದುರ ಚಂದ್ರಮ ವಿರಚಿತ ಗೊಮ್ಮಟೇಶ್ವರ ಚರಿತ್ರೆ, 2007, ಶ್ರೀ ಮಂಜುನಾಥೇಶ್ವರ ಪಬ್ಲಿಕೇಷನ್ ಟ್ರಸ್ಟ್(ರಿ.) ಉಜಿರೆ, ಪು.37
108. SII.VOL .VII, No.344
109. SII.VOL .VII, No.324
110. SII.VOL .IX, II, No.620
111. SII.VOL .IX,Pt.II. No.457
112. ವಿವೇಕ ರೈ ಬಿ.ಎ, ತುಳು ಜನಪದ ಸಾಹಿತ್ಯ, ಪೂರ್ವೋಕ್ತ, ಪು.178
113. ವಿವೇಕ ರೈ ಬಿ.ಎ, ತುಳು ಜನಪದ ಸಾಹಿತ್ಯ, ಪೂರ್ವೋಕ್ತ, ಪು.180
114. ವಿವೇಕ ರೈ ಬಿ.ಎ, ತುಳು ಜನಪದ ಸಾಹಿತ್ಯ, ಪೂರ್ವೋಕ್ತ, ಪು.179,180
115. ವಿವೇಕ ರೈ ಬಿ.ಎ, ತುಳು ಜನಪದ ಸಾಹಿತ್ಯ, ಪೂರ್ವೋಕ್ತ, ಪು. 180
116. SII.VOL .VII, No.334
117. ವಿವೇಕ ರೈ ಬಿ.ಎ, ತುಳು ಜನಪದ ಸಾಹಿತ್ಯ, ಪೂರ್ವೋಕ್ತ, ಪು. 178
118. SII.VOL .IX, Pt.II. No.417
119. ವಿವೇಕ ರೈ ಬಿ.ಎ, ತುಳು ಜನಪದ ಸಾಹಿತ್ಯ, ಪೂರ್ವೋಕ್ತ, ಪು.179
120. ವಿವೇಕ ರೈ ಬಿ.ಎ, ತುಳು ಜನಪದ ಸಾಹಿತ್ಯ, ಪೂರ್ವೋಕ್ತ, ಪು.179
121. I.A.XXIII, pp 34, 38; Saletore. B.A,1936, Ancient Karnataka,Vol.I, History of Tuluva, Poona,p. 461,63; Buchanan Op. Cit, II p 271
122. SII VII Nos,365,198,262; Ibid,IX Pt II No.417
123. Shivanna, K.S 1983,The agrarian system of Karnataka,1336 A.D-1761 A.D, Mysore, pp 187.
124. Shastry A.K.Sringeri Dharma samsthana, p.187.
125. Buchanan, Op. Cit, II,p.271-2, 275.
126. ಲೋಕಯ್ಯ ಶಿಶಿಲ.ಬಿ.ಎ, 2016, ತುಳುನಾಡ ಸಂಸ್ಕೃತಿಯಲ್ಲಿ ನಲ್ಕೆ ಯಾನೇ ಅಜಿಲ(ಪಾಣಾರ)ಜನಾಂಗದ ಪಾತ್ರ, ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಮಂಗಳೂರು, ಪು.19–21
127. I.A.XXIV p.67; KI.III No.14
128. Buchanan, Op. Cit, II p.270
129. Buchanan, Op. Cit, II p.270

130. ವಿವೇಕ ರೈ ಬಿ.ಎ, ತುಳು ಜನಪದ ಸಾಹಿತ್ಯ, ಪೂರ್ವೋಕ್ತ, ಪು.173
131. ಗೋಪಾಲ್.ಆರ್. (ಸಂ) 2008, ಉಡುಪಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು. ಲೇ, ವಸಂತಕುಮಾರ ಪೆರ್ಲ, ಪು.178
132. ವೆಂಕಟ್ರಾಯ ನಾರಾಯಣ ಕುಡ್ವ, 2012, ದಾಕ್ಷಿಣಾತ್ಯ ಸಾರಸ್ವತರ ಇತಿಹಾಸ, ಸಂಯುಕ್ತ ಗೌಡ ಸಾರಸ್ವತರ ಸಭಾ ಚೆನ್ನೈ. ಪು.55
133. ಪಿಯುಸ್ ಫಿಡೆಲಿಸ್ ಪಿಂಟೋ, 1999, ಕರಾವಳಿ ಕರ್ನಾಟಕದ ಕ್ರೈಸ್ತರ ಇತಿಹಾಸ, ಪು.232
134. ಗಣೇಶ್ ಕಾಮತ್, 2013, ಮೂಡುವೇಣುಪುರದೊಡೆಯ, ಮಾರುತಿ ಮೀಡಿಯಾ, ಮೂಡಬಿದಿರೆ, ಪು.24
135. ವೆಂಕಟ್ರಾಯನಾರಾಯಣ ಕುಡ್ವ, ಪೂರ್ವೋಕ್ತ, ಪು.223
136. ವೆಂಕಟ್ರಾಯನಾರಾಯಣ ಕುಡ್ವ, ಪೂರ್ವೋಕ್ತ, ಪು.223
137. Vasantha madhava K.G.1985, Religions in coastal Karnataka 150-1763, Delhi, p.45
138. ವಸಂತ ಮಾಧವ ಕೆ.ಜಿ. ಅವರು ನೀಡಿದ ಕೊಚ್ಚಿನ್ ಪತ್ರಾಗಾರದ ದಾಖಲೆಯ ಮಾಹಿತಿ, Vasantha Madhava K.G, Ibid, p.45
139. Panchamukhi, R.S,1977, Sri Raghavendra Gurukathamritasara Dharwar, pp 136-140.
140. Vasantha madhava K.G, Op.Cit, p.45,46
141. KI, VI, No.70
142. ಗಣಪತಿ ರಾವ್ ಐಗಳ್, ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, ಪೂರ್ವೋಕ್ತ, ಪು.327,329
143. ವೆಂಕಟ್ರಾಯ ನಾರಾಯಣ ಕುಡ್ವ, ಪೂರ್ವೋಕ್ತ, ಪು.221
144. ವೆಂಕಟ್ರಾಯ ನಾರಾಯಣ ಕುಡ್ವ, ಪೂರ್ವೋಕ್ತ, ಪು.224
145. ವೆಂಕಟ್ರಾಯ ನಾರಾಯಣ ಕುಡ್ವ, ಪೂರ್ವೋಕ್ತ, ಪು.222
146. A.K.Shastry, 2001, The Records of The Sringeri Matha relating to keladi, Keladi Museum, p.8
147. ವೆಂಕಟ್ರಾಯ ನಾರಾಯಣ ಕುಡ್ವ, ಪೂರ್ವೋಕ್ತ, ಪು.225
148. ವೆಂಕಟ್ರಾಯ ನಾರಾಯಣ ಕುಡ್ವ, ಪೂರ್ವೋಕ್ತ, ಪು.222
149. ಗುಂಡಾ ಜೋಯಿಸ್, 2002, ಇತಿಹಾಸ ದರ್ಶನ, ಸಂ.17, ಕೆಳದಿ ರಾಜ್ಯಾಡಳಿತದಲ್ಲಿ ಗೌಡ ಸಾರಸ್ವತರು, ಪು.266
150. ವೆಂಕಟ್ರಾಯ ನಾರಾಯಣ ಕುಡ್ವ, ಪೂರ್ವೋಕ್ತ, ಪು.100–103: ಗುಂಡಾ ಜೋಯಿಸ್, ಇತಿಹಾಸ ದರ್ಶನ, ಪೂರ್ವೋಕ್ತ, ಪು.267
151. ವೆಂಕಟ್ರಾಯ ನಾರಾಯಣ ಕುಡ್ವ, ದಾಕ್ಷಿಣಾತ್ಯ ಸಾರಸ್ವತರ ಇತಿಹಾಸ, ಪೂರ್ವೋಕ್ತ ಪು.100–103; ಗುಂಡಾ ಜೋಯಿಸ್, ಇತಿಹಾಸ ದರ್ಶನ, ಪೂರ್ವೋಕ್ತ, ಪು.267
152. ಕೆಳದಿ ವೆಂಕಟೇಶ್ ಜೋಯಿಸ್, 2015, ಇತಿಹಾಸ ದರ್ಶನ ಸಂ,30 ಮೊಗರನಾಡು ನರಿಕೊಂಬು ಶ್ರೀ ಲಕ್ಷ್ಮೀನರಸಿಂಹ ದೇವಾಲಯದ ಅಪ್ರಕಟಿತ ಮೂರು ನಿರೂಪಗಳು ಪು,171. ಬಂಟವಾಳ, ತೀರ್ಥಹಳ್ಳಿ, ಗಂಗೊಳ್ಳಿ, ಹೊನ್ನಾವರ, ಈ ಮೊದಲಾದ ಕಡೆಗಳಲ್ಲಿ ದಾಮರಸ ಪೈ ದೇವಾಲಯ ಕಟ್ಟಿಸಿದ್ದನು. ಕೆಳದಿ ವೆಂಕಟೇಶ ಜೋಯಿಸ್, 2014 ಇತಿಹಾಸ ದರ್ಶನ ಸಂ,29 ಮೊಗರ್ನಾಡ ಸಾಗರದ ದಾಮರಸಪೈ ದೇವಸ್ಥಾನದ ಮೋಡಿಲಿಪಿ ಚಾರಿತ್ರಿಕ ದಾಖಲೆಗಳು, ಪು.292
153. ಗಣಪತಿ ರಾವ್ ಐಗಳ್,ಎಂ, ಪೂರ್ವೋಕ್ತ, ಪು. 281–283
154. A.K.Shastry, Op.Cit, P-24
155. ಪಿಯುಸ್ ಫಿಡೆಲಿಸ್ ಪಿಂಟೋ, 1999 ಇತಿಹಾಸ ದರ್ಶನ ಸಂ, 14(ಲೇ) ಕೆಳದಿ ರಾಣಿ ಚೆನ್ನಮ್ಮಾಜಿ ಮತ್ತು ಕೊಂಕಣಿ ಕ್ರೈಸ್ತರು, ಪು.268; A.K.Priolker. 1961,The Goa Inquisition, Bombay, p.114.
156. ವೆಂಕಟ್ರಾಯ ನಾರಾಯಣ ಕುಡ್ವ, ದಾಕ್ಷಿಣಾತ್ಯ ಸಾರಸ್ವತರ ಇತಿಹಾಸ, ಪೂರ್ವೋಕ್ತ, ಪು.57
157. Severine silva: History of Christianity in Canara, Karwar,1958, Vol.I.p.63; ಪಿಯುಸ್ ಫಿಡೆಲಿಸ್ ಪಿಂಟೋ, ಪೂರ್ವೋಕ್ತ, ಪು.269
158. Severine silva; Op.Cit, p.63; ಪಿಯುಸ್ ಫಿಡೆಲಿಸ್ ಪಿಂಟೋ, ಪೂರ್ವೋಕ್ತ, ಪು.269
159. Moore S.J.,History of the Diocese of manglore,1905,p.33; ಪಿಯುಸ್ ಫಿಡೆಲಿಸ್ ಪಿಂಟೋ, ಪೂರ್ವೋಕ್ತ, ಪು.269
160. ಪಿಯುಸ್ ಫಿಡೆಲಿಸ್ ಪಿಂಟೋ, ಪೂರ್ವೋಕ್ತ, ಪು.268
161. ಪಿಯುಸ್ ಫಿಡೆಲಿಸ್ ಪಿಂಟೋ, ಪೂರ್ವೋಕ್ತ, ಪು.268
162. ಪಿಯುಸ್ ಫಿಡೆಲಿಸ್ ಪಿಂಟೋ,2004 ಕೆಳದಿ ವೀರಶೈವ ನಾಯಕರು ಮತ್ತು ಕ್ರೈಸ್ತರು, ಸಮನ್ವಯ ಮೈಸೂರು, ಪು.144
163. ಅಡ್ಯನಡ್ಕ ಕೃಷ್ಣ ಭಟ್,(ಸಂ) 1997, ಸುದರ್ಶನ, ಡಾ.ತೋನ್ಸೆ ಮಾಧವ ಪೈ ಅಭಿನಂದನಾ ಗ್ರಂಥ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ಪು.95
164. ಅಡ್ಯನಡ್ಕ ಕೃಷ್ಣ ಭಟ್, (ಸಂ) ಸುದರ್ಶನ, ಪೂರ್ವೋಕ್ತ, ಪು.96
165. Buchanan,Op.Cit, Vol.II. p.205
166. A.K.Shastry,2001, Op. Cit, p.50; ಮೋಹನ ಕುಂಟಾರ್.ಎ., 2012. ಸಮುದಾಯಗಳ ಕನ್ನಡ ಪರಂಪರೆ,

ಪ್ರಸಾರಾಂಗ ಕವಿವಿ, ಹಂಪಿ.ಪು. 19–21

167. ಸುರೇಶ್ ನಾರಾಯಣ ನಾಯ್ಕ, ರಾಮಕ್ಷತ್ರಿಯ ಸಮುದಾಯದ ಸಂಸ್ಕೃತಿ, ಪು.18
168. Edgar Thirstun, 1909, Castes and Tribes of Southern India, Volume-I, Government Press Madras, P.18
169. ಕ್ಷೇತ್ರ ಕಾರ್ಯ; ಸುರೇಶ್ ನಾರಾಯಣ ನಾಯ್ಕ, ಪೂರ್ವೋಕ್ತ, ಪು.18
170. A.K.Shastry, Op. Cit, P-16
171. ಮೋಹನ ಕುಂಟಾರ್.ಎ, ಪೂರ್ವೋಕ್ತ, ಪು.21–22
172. ಮೋಹನ ಕುಂಟಾರ್.ಎ, ಪೂರ್ವೋಕ್ತ, ಪು.21–22
173. ಉಪ್ಪಂಗಳ ರಾಮ ಭಟ್, 1994. ಗಡಿನಾಡು ಕಾಸರಗೋಡು, ಅಕಲಂಕ ಪ್ರಕಾಶನ, ಉಡುಪಿ, ಪು.30
174. ಉಪ್ಪಂಗಳ ರಾಮ ಭಟ್, 1994. ಗಡಿನಾಡು ಕಾಸರಗೋಡು, ಅಕಲಂಕ ಪ್ರಕಾಶನ, ಉಡುಪಿ, ಪು.28
175. A.K.Shastry, Op. Cit, P-16
176. ಗಣಪತಿ ರಾವ್ ಐಗಳ್,ಎಂ ಪೂರ್ವೋಕ್ತ, ಪು.36
177. ಸಂದರ್ಶನ: ಯೋಗೀಶ್ ಬೆಡೇಕರ್
178. Buchanan, Op. Cit, II, p. 262
179. ಸಂದರ್ಶನ: ಯೋಗೀಶ್ ಬೆಡೇಕರ್
180. ಗೋಪಾಲ್.ಆರ್.(ಸಂ) ಉಡುಪಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಲೇ.ವಸಂತಕುಮಾರ ಪೆರ್ಲ, ಪು.178
181. ಪುರುಷೋತ್ತಮ ಬಿಳಿಮಲೆ, 2019, ವಲಸೆ ಸಂಘರ್ಷ ಮತ್ತು ಸಮನ್ವಯ, ಆಕೃತಿ ಆಶಯ ಮಂಗಳೂರು, ಪು.50
182. ಚಿನ್ನಪ್ಪ ಗೌಡ.ಕೆ. ಗೌಡ ಜನಾಂಗ–2003, ಇತಿಹಾಸ ಮತ್ತು ಸಂಸ್ಕೃತಿ, ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘ ಮಂಗಳೂರು, ಪು.85
183. ಪುರುಷೋತ್ತಮ ಬಿಳಿಮಲೆ, ಗೌಡ ಜನಾಂಗ, ಇತಿಹಾಸ ಮತ್ತು ಸಂಸ್ಕೃತಿ, ಪು.84
184. ಪೂವಪ್ಪ ಕಣಿಯೂರು, ಮೌಖಿಕ ಸಂಕಥನ, ಪೂರ್ವೋಕ್ತ, ಪು.,21 ಮತ್ತು ಕ್ಷೇತ್ರಕಾರ್ಯದ ಮೂಲಕ ಸ್ವತಃ ಪರಿಶೀಲನೆ.
185. ಗುಂಡಾ ಜೋಯಿಸ ಕೆಳದಿ, ಪೂರ್ವೋಕ್ತ, ಪು.105
186. ಸಂದರ್ಶನ: ರವಿರಾಮ ರೈ ಮಿತ್ತೂರು; ಪೂವಪ್ಪ ಕಣಿಯೂರು, ಮೌಖಿಕ ಸಂಕಥನ, ಪೂರ್ವೋಕ್ತ, ಪು,135. ಅಷ್ಟಬಲ್ಲಾಳ್ತಿಯರು–1. ಅಕ್ಕು ಬಲ್ಲಾಳ್ತಿ–ಸುಳ್ಯ ಪನ್ನೆಬೀಡು–ಕಾನತ್ತಿಲ ಉಲ್ಲಾಕುಳು–2. ಚೋಮು ಬಲ್ಲಾಳ್ತಿ–ಇಡ್ಯಡ್ಕ ಬೀಡು(ಊರ್ಜಿತದಲ್ಲಿಲ್ಲ) 3.ಚೆನ್ನು ಬಲ್ಲಾಳ್ತಿ– ಮಿತ್ತೂರು ಉಲ್ಲಾಕುಳು–4. ಮಾಣಿಕ್ಯ ಬಲ್ಲಾಳ್ತಿ–ಬಲ್ನಾಡು, ಮರ್ಕಂಜ, ಬಲ್ನಾಡು ಉಲ್ಲಾಕುಳು–5. ದೈಯಕ್ಕು–ಅಳಿಕೆ ಬೀಡು– ಅಳಿಕೆಮಜಲ್ ಉಲ್ಲಾಕುಳು–6. ಸೋಮು ಬಲ್ಲಾಳ್ತಿ–ಸೋಮ ಕೊಟ್ಟಾರ–ಪೆರಾಜೆ ಉಲ್ಲಾಕುಳು–7. ಪಾಚಿ ಬಲ್ಲಾಳ್ತಿ– ಕುಕ್ಕಂದೂರುಬೀಡು, ಕುಕ್ಕಂದೂರು ಉಲ್ಲಾಕುಳು–8. ಚಿರ್ದೆಯಿ ಬಲ್ಲಾಳ್ತಿ– ಅರಸು ಮಜಲ್ ಬೀಡು– ಬಜಪಿಲ ಉಲ್ಲಾಕುಳು–
187. A.K.Shastry, OP.Cit, PP, 15,16
188. A.K.Shastry, OP.Cit, PP, 2,3
189. A.K.Shastry, OP.Cit, P. 3
190. Gururaj bhat,Op.Cit, p. 266
191. ಕೃಷ್ಣ ಭಟ್, ಎಸ್.(ಸಂ) 1947, ತೆಂಕನಾಡು, ಸ್ವಾಗತ ಸಮಿತಿ,ಕ.ಸಾ.ಸ. ಕಾಸರಗೋಡು, ಲೇ. ಬಿ.ಎ.ಸಾಲೆತ್ತೂರು, ಅಳಿಯ ಸಂತಾನ ಕಟ್ಟು, ಪು.51
192. SII,VII, No.223
193. SII,Vol.VII,No.202
194. ಹೆಚ್.ಎಲ್. ನಾಗೇಗೌಡ, ಸುದರ್ಶನ,(ಲೇ) ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ಪ್ರವಾಸಿ ಕಂಡ ದಕ್ಷಿಣ ಕನ್ನಡ, ಪು.81
195. ಅಮೃತ ಸೋಮೇಶ್ವರ,(ಸಂ) 2011, ಅಬ್ಬಕ್ಕ ಸಂಕಥನ, ವೀರರಾಣಿ ಅಬ್ಬಕ್ಕ ಉತ್ಸವ ಸಮಿತಿ, ಪು.327
196. SII,Vol.VII, No.356
197. SII,Vol.VII, No.322
198. ಕೃಷ್ಣ ಭಟ್ ಎಸ್.(ಸಂ) 1947, ತೆಂಕನಾಡು, ಪೂರ್ವೋಕ್ತ, ಪು.51
199. ಪಾಟೀಲ ಭರಮಪ್ಪ ಪದಮಪ್ಪ (ಸಂ.): 1914, ಪದ್ಮನಾಭ ಕವಿಯ ಶ್ರೀಪದ್ಮಾವತಿಯ ಮಹಾತ್ಮ್ಯ ಅಥವಾ ಜಿನದತ್ತರಾಯನ ಚರಿತ್ರವು, ಪು.6,1–67, ಬೆಳಗಾಂ.
200. Gururaj Bhat p.1975,Studies in Tuluva History and Culture. Manipal, p.256
201. Sturrock, south canara, Op.Cit, Vol.II., P.68
202. SII,Vol.VII, No.319
203. ಅಡ್ಯನಡ್ಕ ಕೃಷ್ಣ ಭಟ್,(ಸಂ) ಪೂರ್ವೋಕ್ತ, ಅಳಿಯಕಟ್ಟು, ಲೇಖಕರು, ಎಸ್.ಡಿ.ಶೆಟ್ಟಿ ಮೂಳೂರು, ಪು.88
204. Buchanan, Op. Cit, II, p. 239

ಅಧ್ಯಾಯ – 7

# ಕೆಳದಿ ಕಾಲದ ತುಳುನಾಡಿನ ಧಾರ್ಮಿಕ ಪರಂಪರೆ

ಸಮಾಜವೊಂದರ ಸಾಮಾಜಿಕ ಮತ್ತು ಆರ್ಥಿಕ ವಿಚಾರಗಳು ಧಾರ್ಮಿಕ ಹಿನ್ನೆಲೆಯನ್ನೂ ಹೊಂದಿರುತ್ತವೆ. ಧರ್ಮವನ್ನು ಸಮಾಜದ ಅಥವಾ ಆರ್ಥಿಕ ಹಿನ್ನೆಲೆಯಿಂದ ನೋಡಿದಾಗ ಕೆಳದಿ ಕಾಲದಲ್ಲಿ ಪ್ರಚಲಿತದಲ್ಲಿದ್ದ ಜೈನ, ಶೈವ, ವೈಷ್ಣವ, ವೀರಶೈವ, ಇಸ್ಲಾಂ ಹಾಗೂ ಕ್ರೈಸ್ತ ಮುಂತಾದ ಮತಗಳು ಹುಟ್ಟುಹಾಕಿದ ಧಾರ್ಮಿಕ ಪರಿಸರ ಹಾಗೂ ಅವುಗಳು ರಾಜಕಾರಣದ ಮೇಲೆ ಬೀರಿದ ಪರಿಣಾಮಗಳು, ಇವುಗಳಿಂದ ತುಳುನಾಡಿನ ಚರಿತ್ರೆಯ ವಿವಿಧ ಆಯಾಮಗಳನ್ನು ತಿಳಿಯಲು ಸಾಧ್ಯವಿದೆ. ವಿಜಯನಗರದ ಕಾಲದ ತುಳುನಾಡಿನ ಧಾರ್ಮಿಕ ಪರಂಪರೆ ಕೆಳದಿ ಕಾಲದಲ್ಲಿಯೂ ಮುಂದುವರೆದಿತ್ತು. ವಿಜಯನಗರದ ಸಂಗಮ ಮತ್ತು ಸಾಳ್ವ ವಂಶಗಳ ಆಡಳಿತ ಕಾಲದಲ್ಲಿ ಶೈವಾರಾಧನೆಗೆ ದೊರೆತ ರಾಜಾಶ್ರಯ, ತುಳುವ ವಂಶದ ಆಡಳಿತದಲ್ಲಿ ರಾಜಾಶ್ರಯ ಪಡೆದ ವೈಷ್ಣವ ಪಂಥಗಳು ಕೆಳದಿ ಕಾಲದ ತುಳುನಾಡಿನಲ್ಲಿ ಪ್ರಬಲವಾಗಿಯೇ ಬೆಳೆದವು. ವಿವಿಧ ಸಮುದಾಯಗಳು ಈ ಕಾಲಘಟ್ಟದಲ್ಲಿ ದೇವಾಲಯಗಳ ನಿರ್ಮಾಣ, ಮಠಗಳ ನಿರ್ಮಾಣದಂತಹ ಕಾರ್ಯಗಳ ಮೂಲಕ ತಮ್ಮ ತಮ್ಮ ಪಂಗಡಗಳ ಜನಪ್ರಿಯತೆಗೆ ಕಾರಣರಾದರು. ಈ ಧಾರ್ಮಿಕ ಸಂಸ್ಥೆಗಳು ಈ ಭಾಗದ ಸಂಸ್ಕೃತಿಯ ಮೇಲೆ ಗಣನೀಯ ಪ್ರಭಾವವನ್ನು ಬೀರಿದವು. ಈ ಭಾಗದಲ್ಲಿ ವಿವಿಧ ಪಂಥಗಳ ಸಮ್ಮಿಶ್ರಣದ ಪ್ರತೀಕವಾಗಿ, ಶೈವಾರಾಧನೆ, ವಿಷ್ಣುವಿನ ಆರಾಧನೆ. ಶಕ್ತಿ, ಗಣಪತಿ, ಸ್ಕಂದ, ನಾಗಾರಾಧನೆ, ಶಿವ ಮತ್ತು ವಿಷ್ಣುವಿನ ಸಮ್ಮಿಲನದ ಶಂಕರನಾರಾಯಣ, ವೀರಶೈವ, ನಾಥ ಪಂಥ, ಭೂತಾರಾಧನೆ, ಹೀಗೆ ವಿವಿಧ ಧಾರ್ಮಿಕ ಪರಂಪರೆಯನ್ನು ಕಾಣಬಹುದು.

## 7.1 ವೈದಿಕ ಪಂಥಗಳು

**ಶೈವಾರಾಧನೆ:** ಪ್ರಾಚೀನ ಕಾಲದಿಂದಲೂ, ತುಳುನಾಡಿನಲ್ಲಿ ಶೈವಾರಾಧನೆಯೇ ಪ್ರಮುಖವಾಗಿತ್ತು. ಅಳುಪರು ವಿಜಯನಗರದ ದೊರೆಗಳು ಮತ್ತು ಅವರ ಅಧಿಕಾರಿಗಳೂ ಶೈವ ಪಂಥವನ್ನು ಪ್ರೋತ್ಸಾಹಿಸಿದರು. ಕರಾವಳಿ ಕರ್ನಾಟಕದಲ್ಲಿ ವ್ಯಾಪಕವಾಗಿರುವ ಹೆಚ್ಚಿನ ಭೂತಗಳ ಒಡೆಯ ಶಿವನಾದ ಕಾರಣ ಅವನ ಆರಾಧನೆಗೆ ಇಲ್ಲಿ ಮಹತ್ವ ದೊರೆಯಿತು. ಶಿವನನ್ನು ಈ ಭಾಗದಲ್ಲಿ ವಿಶ್ವನಾಥ, ಅನಂತೇಶ್ವರ, ಗುಹೇಶ್ವರ, ಸೋಮೇಶ್ವರ, ಕೋಟೇಶ್ವರ, ಮಹಾಬಲೇಶ್ವರ, ಮಹಾಲಿಂಗೇಶ್ವರ, ಪಂಚಲಿಂಗೇಶ್ವರ, ಮಂಜುನಾಥ, ಸದಾಶಿವ ಮೊದಲಾದ ಹೆಸರುಗಳಿಂದ ಕರೆದರೂ ಅವನನ್ನು ಲಿಂಗರೂಪದಲ್ಲಿ ಆರಾಧಿಸುವ ಶ್ರದ್ಧಾ ಕೇಂದ್ರಗಳು

ಪೆಟ್ಟಿವೆ. ಉತ್ತರ ಕನ್ನಡ ಜಿಲ್ಲೆಯ ಗೋಕರ್ಣ ಈ ಕಾಲದಲ್ಲಿಯೂ ಪ್ರಮುಖ ಶಿವಾರಾಧನೆಯ ಕೇಂದ್ರವಾಗಿದ್ದು, ಕೆಳದಿಯರಸರು ಈ ಶಿವಾಲಯಕ್ಕೆ ವಿವಿಧ ದಾನ ದತ್ತಿಗಳನ್ನು ನೀಡಿದ್ದರು.[1] ತುಳುನಾಡಿನಲ್ಲಿ ದೊರೆತ ಶಾಸನಗಳಲ್ಲಿರುವ ಶಾಪಾಶಯಗಳಲ್ಲಿ, "ದಾನ ದತ್ತಿಗಳನ್ನು ಉಲ್ಲಂಘಿಸುವವರಿಗೆ ಗೋಕರ್ಣದ ಲಿಂಗಗಳನ್ನು ಒಡೆದ ಪಾಪ ಬರಲಿ" ಎನ್ನಲಾಗಿದೆ,[2] ಇದು ತುಳುನಾಡಿನ ಜನರಿಗೆ ಗೋಕರ್ಣದ ಶಿವನ ಕುರಿತಾದ ನಂಬಿಕೆಯನ್ನು ಸೂಚಿಸುತ್ತದೆ.

ಕುಂದಾಪುರ ತಾಲೂಕಿನ ಗುಜ್ಜಾಡಿಯ ಗುಹೇಶ್ವರವೂ ಶೈವ ಕೇಂದ್ರವಾಗಿ ಪ್ರಾಮುಖ್ಯತೆ ಪಡೆದಿದೆ.[3] ಕೆಳದಿಯ ನಾಯಕರು ಈ ದೇವಳದ ಬಗ್ಗೆ ಪೂಜ್ಯತಾ ಭಾವವನ್ನು ಹೊಂದಿದ್ದರು. ಕೆಳದಿ ವೀರಪ್ಪ ಮತ್ತು ಪೋರ್ಚುಗೀಸರ ಮಧ್ಯೆ ಕ್ರಿ.ಶ.1631ರಲ್ಲಿ ಒಪ್ಪಂದವೊಂದು ನಡೆದಾಗ ಅವನು ಪೋರ್ಚುಗೀಸರಿಗೆ ಗುಹೇಶ್ವರ ದೇವಳದ ಆದಾಯವನ್ನು ಮುಟ್ಟಬಾರದು ಎಂಬುದಾಗಿ ಮತ್ತು ದೇವಾಲಯಕ್ಕೆ ಸಂಬಂಧಿಸಿದ ಕಂದಾಯ ಆ ದೇವಳಕ್ಕೇ ಸೇರಬೇಕು ಎಂಬುದಾಗಿ ನಿರ್ಬಂಧಿಸುತ್ತಾನೆ.[4] ಕ್ರಿ.ಶ.1647ರಲ್ಲಿ ಪೋರ್ಚುಗೀಸರು ಗುಹೇಶ್ವರ ದೇವಳದ ಪ್ರಾಮುಖ್ಯತೆಯನ್ನು ಹಾಳುಗೆಡಬಹುದೆಂಬ ಆಲೋಚನೆಯಿಂದ ಕೆಳದಿಯ ಶಿವಪ್ಪನಾಯಕ ಕಾಂಬೋಲಿಮ್ ದ್ವೀಪವನ್ನು (ಗಂಗೊಳ್ಳಿ) ಪೋರ್ಚುಗೀಸರಿಗೆ ಹಸ್ತಾಂತರಿಸುವುದಿಲ್ಲ.[5]

ಕರಾವಳಿ ಕರ್ನಾಟಕದ ಕೋಟೇಶ್ವರ ಇನ್ನೊಂದು ಪ್ರಮುಖ ಶೈವ ಕೇಂದ್ರ. ಕೋಟೇಶ್ವರ ದೇವಳಕ್ಕೆ ವಿಜಯನಗರದ ರಾಜ್ಯಪಾಲರು ಮತ್ತು ಕೆಳದಿಯ ನಾಯಕರು ಸಾಕಷ್ಟು ದಾನದತ್ತಿಗಳನ್ನು ನೀಡಿದ್ದರು.[6] ಈ ದೇವರ ಪ್ರಾಮುಖ್ಯತೆಯನ್ನು ತುಳುನಾಡಿನ ಹಲವು ಶಾಸನಗಳು ಉಲ್ಲೇಖಿಸುತ್ತವೆ.[7] ಕ್ರಿ.ಶ. 1665ರಲ್ಲಿ ಕೆಳದಿ ಸೋಮಶೇಖರ ನಾಯಕ ಲಿಂಗಾಯತ ಮಠವೊಂದಕ್ಕೆ ದಾನ ನೀಡುವಾಗ ಅವನು ಕೋಟೇಶ್ವರ ದೇವಳಕ್ಕೆ ನೀಡಿದ ಸೇವೆಗಳನ್ನು ಹೆಸರಿಸಲಾಗಿದೆ. ಬಸ್ರೂರಿನ ಮಹಾಲಿಂಗೇಶ್ವರ ದೇವಾಲಯಕ್ಕೆ ಕೆಳದಿ ರಾಜ ವೆಂಕಟಪ್ಪ ನಾಯಕ, ಇಮ್ಮಡಿ ಸೋಮಶೇಖರ ನಾಯಕ ಮತ್ತು ಬಸವಪ್ಪ ನಾಯಕರು ದೇವಳದ ಧಾರ್ಮಿಕ ಚಟುವಟಿಕೆಗಳಿಗೆ ದಾನ ದತ್ತಿಗಳನ್ನು ನೀಡಿದ್ದರು.[8] ವಿಜಯನಗರ ಮತ್ತು ಕೆಳದಿಯರಸರ ಪ್ರಾಂತೀಯ ರಾಜಧಾನಿಯುದ ಬಾರ್ಕೂರಿನಲ್ಲಿ ಸೋಮೇಶ್ವರ, ಪಂಚಲಿಂಗೇಶ್ವರ ಮತ್ತು ಮಾರ್ಕಾಂಡೇಶ್ವರ ಪ್ರಮುಖ ಶಿವ ದೇವಾಲಯಗಳಾಗಿದ್ದು, ಕ್ರಿ.ಶ.1624ರಲ್ಲಿ ಕೆಳದಿ ವೆಂಕಟಪ್ಪ ನಾಯಕ ಮತ್ತು ಕ್ರಿ.ಶ. 1655ರಲ್ಲಿ ಸೋಮಶೇಖರ ನಾಯಕ ಬಾರ್ಕೂರಿನ ಶಿವ ದೇವಾಲಯಕ್ಕೂ ಉದಾರ ದಾನ ನೀಡಿದ್ದರು.[9]

ಸೂರಾಲಿನ ತೋಳಹರು ಇಲ್ಲಿಯ ಮಹಾಲಿಂಗೇಶ್ವರ ದೇವಳಕ್ಕೆ ಸಲ್ಲಿಸುತ್ತಿದ್ದ ಸೇವೆಯ ಬಗ್ಗೆ ಕೆಲವು ಶಾಸನಗಳು ಮಾಹಿತಿ ನೀಡುತ್ತವೆ.[10] ಕ್ರಿ.ಶ.1563ರಲ್ಲಿ ತೋಳಹರ ಮುಖ್ಯಸ್ಥ ಚೆನ್ನಯರಸ (1562–70) ಈ ದೇವಾಲಯಕ್ಕೆ ಭೂದಾನ ನೀಡಿದ. ಎಲ್ಲೂರಿನ ವಿಶ್ವನಾಥ ದೇವಾಲಯ ಕ್ರಿ.ಶ.15 ಮತ್ತು 16 ನೇ ಶತಮಾನದಲ್ಲಿ ಪ್ರಸಿದ್ಧ ಶಿವ ದೇವಾಲಯವಾಗಿ ಪ್ರಸಿದ್ಧಿ ಪಡೆದು, ಪ್ರಾಂತೀಯ ಮುಖ್ಯಸ್ಥರಾದ ಕುಂದ ಹೆಗ್ಗಡೆ ಇಲ್ಲಿಯ ದೀಪೋತ್ಸವಕ್ಕೆ ದಾನ ನೀಡಿದ್ದರು.[11] ಈ ದೇವಾಲಯ ನೆರೆಕರೆಯ ಮುಖ್ಯಸ್ಥರೊಂದಿಗಿನ

ವ್ಯಾಜ್ಯವನ್ನು ಪರಿಹರಿಸುವ ನ್ಯಾಯಾಲಯವಾಗಿಯೂ ಕೆಲಸ ಮಾಡುತ್ತಿತ್ತು. ಈ ದೇವರ ಸಮ್ಮುಖದಲ್ಲಿ ಅನೇಕ ರಾಜಕೀಯ ಒಪ್ಪಂದಗಳು ನಡೆಯುತ್ತಿತ್ತು.[12] ವಿಟ್ಲದ ಪಂಚಲಿಂಗೇಶ್ವರ ದೇವಾಲಯ ಶಿವಾರಾಧನೆಯ ಇನ್ನೊಂದು ಪ್ರಮುಖ ಸ್ಥಳ. ದೇವಳದ ಧಾರ್ಮಿಕ ವಿಧಿಗಳಿಗೆ ವಿಟ್ಲದ ಡೊಂಬ ಹೆಗ್ಗಡೆ ಭೂಮಿ ಮತ್ತು ಧನಸಹಾಯವನ್ನು ಮಾಡಿದ ಉಲ್ಲೇಖಗಳಿವೆ.[13] ಅಜಿಲರು, ಬಂಗರು, ಚೌಟರಂತಹ ಜೈನರಾಜರು ಶಿವನನ್ನು ಕುಲದೇವರನ್ನಾಗಿ ಹೊಂದಿದ್ದರು.

**ಶಕ್ತಿ ಆರಾಧನೆ:** ತುಳುನಾಡಿನಲ್ಲಿ ಶೈವಾರಾಧನೆಯ ಜೊತೆಯಲ್ಲೇ ಶಕ್ತಿ ಆರಾಧನೆ ಬೆಳೆಯಿತು. ಉಮಾಮಹೇಶ್ವರ ಭವಾನಿಶಂಕರ ಮುಂತಾದ ಆರಾಧನೆಗಳು ಶೈವ ಮತ್ತು ಶಕ್ತಿ ಜೊತೆಯಾಗಿ ಆರಾಧಿಸಲ್ಪಟ್ಟ ಉದಾಹರಣೆಗಳಾಗಿವೆ. ತುಳುನಾಡಿನ ಕೆಲವು ಭಾಗಗಳಲ್ಲಿ ದುರ್ಗೆಯನ್ನು ಲಿಂಗ ರೂಪದಲ್ಲಿಯೂ ಆರಾಧಿಸಲಾಗುತ್ತಿದೆ.[14] ಹಾಗೆಯೇ ವೈಷ್ಣವ ದುರ್ಗೆ ಹಾಗೂ ಶೈವ ದುರ್ಗೆಯರನ್ನೂ ಗಮನಿಸಬಹುದು.

ಕುಂದಾಪುರದ ಕೇರಡಿ ದುರ್ಗಾಪರಮೇಶ್ವರಿ ದೇವಳ ಕ್ರಿ.ಶ. 1633ರಲ್ಲಿ ಕೆಳದಿ ವೀರಭದ್ರ ನಾಯಕನಿಂದ ದೊಡ್ಡ ಮೊತ್ತದ ದೇಣಿಗೆಯನ್ನು ಪಡೆಯುತ್ತದೆ.[15] ಮಂಗಳೂರು ಸಮೀಪದ ಪೊಳಲಿ ದುರ್ಗೆಯ ಆರಾಧನೆಯ ಪ್ರಮುಖ ಕೇಂದ್ರವಾಗಿ ಕೆಳದಿ ಕಾಲದಲ್ಲಿಯೂ ಕಂಡು ಬರುತ್ತದೆ. ಇಲ್ಲಿಯ ಅಧಿದೇವತೆ ರಾಜರಾಜೇಶ್ವರಿ. ಕೆಳದಿ ರಾಣಿ ಚೆನ್ನಮ್ಮ ಕ್ರಿ.ಶ.1676ರಲ್ಲಿ ಪೊಳಲಿಗೆ ಆಗಮಿಸಿ ಇಲ್ಲಿನ ರಥವನ್ನು ಕಟ್ಟಿಸಿ ಇಲ್ಲಿನ ವಿಶಿಷ್ಟ ಸಂಪ್ರದಾಯವಾದ 'ಚೆಂಡು' ವಿನ ಉತ್ಸವವು ಎರಡು ದಿನ ಹೆಚ್ಚಿಗೆ ಆಗುವಂತೆ ವ್ಯವಸ್ಥೆ ಮಾಡಿದ್ದಳು.[16] ಕ್ರಿ.ಶ.17ನೇ ಶತಮಾನದ ಕೆಲವು ಅಪ್ರಕಟಿತ ಕಡತಗಳು ಬಾರ್ಕೂರು, ನೂಜಾಡಿ ಮತ್ತು ಕುಂದಾಪುರದ ಗುಡಮ್ಮಾಡಿಯಲ್ಲಿ ದುರ್ಗಾಪರಮೇಶ್ವರಿ ದೇವಳವಿದ್ದ ಮಾಹಿತಿ ನೀಡುತ್ತವೆ.[17] ಬೈಂದೂರು ತಾಲೂಕಿನ ಕೊಲ್ಲೂರು ಬಹು ಪ್ರಸಿದ್ಧವಾದ ಶಕ್ತಿ ಆರಾಧನಾ ಕೇಂದ್ರವಾಗಿದೆ. ಈ ದೇವಳಕ್ಕೆ ಕೆಳದಿ ವೆಂಕಟಪ್ಪ ನಾಯಕನ ಕೊಡುಗೆಗಳು,[18] ಅವನ ಉತ್ತರಾಧಿಕಾರಿ ವೀರಭದ್ರ ನಾಯಕನ ಕೊಡುಗೆ,[19] ವೀರಭದ್ರ ನಾಯಕನ ಉತ್ತಾರಾಧಿಕಾರಿಗಳ ಕೊಡುಗೆಯ ಬಗ್ಗೆಯೂ ಶಾಸನದಲ್ಲಿ ಮಾಹಿತಿ ದೊರೆಯುತ್ತದೆ.[20] ಕೊಲ್ಲೂರು ಈ ಕಾಲದಲ್ಲಿ ಸುಪ್ರಸಿದ್ಧ ಯಾತ್ರಾ ಸ್ಥಳವಾಗಿತ್ತು ಎನ್ನುವುದು ಪಿಯತ್ರೋ ಡೆಲ್ಲಾ ವಲ್ಲೆಯ ಬರಹಗಳಿಂದಲೂ ಸ್ಪಷ್ಟವಾಗುತ್ತದೆ.[21] ಕೊಚ್ಚಿನ್ ಪತ್ರಾಗಾರಾದ ಅಪ್ರಕಟಿತ ದಾಖಲೆಗಳು ಕೋಲತ್ತಿರಿ, ಚೆರ್ಕಳ, ನೀಲೇಶ್ವರದ ಮುಖ್ಯಸ್ಥರು ಕ್ರಿ.ಶ.18ನೇ ಶತಮಾನದ ಉದ್ದಕ್ಕೂ ಕೊಲ್ಲೂರಿಗೆ ದಾನ ನೀಡಿದ ಮಾಹಿತಿ ನೀಡುತ್ತವೆ.[22] ಶೃಂಗೇರಿಯ ಶಾರದೆಯ ಕ್ಷೇತ್ರವು ತುಳುನಾಡಿನಿಂದ ಹೊರಗಿದ್ದರೂ ತುಳುನಾಡಿನ ಜನರಿಗೆ ಪ್ರಮುಖ ಶಕ್ತಿ ಆರಾಧನಾ ಕೇಂದ್ರವಾಗಿತ್ತು. ಶಾಸನಾಧಾರದಂತೆ ಕರಾವಳಿಯ ಹಲವು ಪ್ರದೇಶಗಳಿಂದ ಶೃಂಗೇರಿ ದೇವಾಲಯಕ್ಕೆ ಜಹಗೀರುಗಳನ್ನು ನೀಡಲಾಗಿದೆ.[23] ಶೃಂಗೇರಿಯ ಧರ್ಮ ಪೀಠ ತುಳುನಾಡಿನ ವಿವಿಧ ಸಮುದಾಯಗಳ ಆರಾಧನಾ ಕೇಂದ್ರ ಮಾತ್ರವಲ್ಲದೆ, ತುಳುನಾಡಿನ ಹಲವು ಸಮುದಾಯಗಳ ಆಚಾರ ವಿಚಾರಗಳನ್ನೂ ನಿಯಂತ್ರಿಸುತ್ತಿತ್ತು ಎಂಬುದಾಗಿ ಶೃಂಗೇರಿಯ ಕಡತಗಳ ಅಧ್ಯಯನದಿಂದ ತಿಳಿದು ಬರುತ್ತದೆ.[24]

**ಭೂತಾರಾಧನೆ:** ತುಳುನಾಡಿನ ಸಂಸ್ಕೃತಿಯು ಭೂತಾರಾಧನೆಯ ಪಾಡ್ದನಗಳಲ್ಲಿ ವ್ಯಕ್ತವಾದಷ್ಟು ವಿವರವಾಗಿ ಮತ್ತು ಸಮರ್ಪಕವಾಗಿ ತುಳು ಜನಪದ ಸಾಹಿತ್ಯದ ಬೇರೆ ಯಾವ ಪ್ರಕಾರಗಳಲ್ಲಿಯೂ ಕಾಣಿಸುವುದಿಲ್ಲ. ಭೂತಾರಾಧನೆಯ ಹೆಚ್ಚಿನ ಪಾಡ್ದನಗಳ ರಚನೆಯ ಕಾಲವನ್ನು ಕ್ರಿ.ಶ. 15, 16 ಮತ್ತು 17ನೇ ಶತಮಾನ ಎಂಬುದಾಗಿ ವಿದ್ವಾಂಸರು ಗುರುತಿಸಿದ್ದಾರೆ.[25] ಅದರಲ್ಲಿಯೂ ಧೂಮಾವತಿ, ಕೋಟಿ ಚೆನ್ನಯ, ಮುಡದೇರ್, ಕಲ್ಕುಡ ಕಲ್ಲುರ್ಟಿ ಮೊದಲಾದ ದೈವಗಳ ಪಾಡ್ದನದ ಆಧಾರದಲ್ಲಿ ಇವೆಲ್ಲವೂ ಕೆಳದಿ ಆಡಳಿತ ಕಾಲದಲ್ಲಿ ಊರ್ಜಿತಗೊಂಡವು ಎಂಬುದಾಗಿ ತಿಳಿಯಬಹುದು. ಈ ಕಾಲಘಟ್ಟದಲ್ಲಿ ಭೂತ ಅಥವಾ ದೈವಗಳ ಆರಾಧನಾ ವಿಧಾನ ಜನಪ್ರಿಯವಾಗಿರುವಂತೆ ಕಂಡು ಬರುತ್ತದ. ಈ ಆರಾಧನೆ ಎಷ್ಟು ಪ್ರಾಚೀನ ಎನ್ನುವ ವಿಚಾರದಲ್ಲಿ ಚರ್ಚೆಗಳವೆ. ಆದರೆ ಇದೊಂದು ದ್ರಾವಿಡ ಮೂಲದ ಆರಾಧನಾ ಪದ್ಧತಿ ಎನ್ನಬಹುದಾಗಿದೆ. ಕಾಲಕ್ರಮೇಣ ಜನಪದ ಮೂಲದ ದೈವಗಳು ವೈದಿಕ ದೇವ ದೇವತೆಗಳೊಂದಿಗೆ ಸಮೀಕರಣಗೊಂಡದ್ದನ್ನು ಕಾಣಬಹುದಾಗಿದೆ.

ಕ್ರಿ.ಶ.16 ಮತ್ತು 17ನೇ ಶತಮಾನದಲ್ಲಿ ತುಳುನಾಡಿನಲ್ಲಿ ಭೂತಾರಾಧನೆ ಜನಪ್ರಿಯವಾಗಿತ್ತು. ಕ್ರಿ.ಶ.1512ರ ಶಾಸನ, ನಾಗಣ್ಣ ಎನ್ನುವವರು ವಿಜಯನಗರದ ಅಧಿಕಾರಿ ವೀರಭದ್ರನ ಆದೇಶದಂತೆ ನಂದಳಿಕೆ ದೈವದ ಬಲಿಪೂಜೆ ಮತ್ತು ನಂದಾದೀಪಕ್ಕೆ 20 ಮುಡಿ ಭತ್ತದ ಗದ್ದೆಯನ್ನು ದಾನ ನೀಡಿದ್ದನ್ನು ಹೇಳುತ್ತದೆ.[26] ಕ್ರಿ.ಶ. 1554ರ ಶಾಸನ ಕುಂದಾಪುರ ತಾಲೂಕಿನ ಆವರ್ಸೆಯಲ್ಲಿರುವ ಬ್ರಹ್ಮಸ್ಥಾನದ ಮಾಹಿತಿ ನೀಡುತ್ತದೆ.[27] ಕ್ರಿ.ಶ. 1546 ಮತ್ತು 1566ರ ಶಾಸನಗಳ ಮಾಹಿತಿಯಂತೆ ಬೊಬ್ಬರ್ಯ ದೈವದ ಆರಾಧನೆ ಬಾರ್ಕೂರು ಮತ್ತು ಬಸ್ರೂರಿನಲ್ಲಿ ಇತ್ತು ಮತ್ತು ಈ ಉದ್ದೇಶಕ್ಕೆ ಭೂಮಿಯನ್ನು ನೀಡಲಾಗಿತ್ತು ಎಂಬುದನ್ನು ತಿಳಿಸುತ್ತವೆ.[28] ನಂದಳಿಕೆ ದೈವದ ಪ್ರಭಾವ ಹೇಗಿತ್ತು ಎಂದು ವಿವರಿಸುವ 2 ಶಾಸನಗಳು ಸುಜೇರು ಮತ್ತು ಕಾರ್ಕಳದಲ್ಲಿವೆ. "ಸದ್ರಿ ಒಪ್ಪಂದದ ಯಾವುದೇ ರೀತಿಯ ಉಲ್ಲಂಘನೆ ನಂದಳಿಕೆ ದೈವಗಳಿಗೆ ತಪ್ಪಿ ನಡೆದಂತೆ" ಎಂದು ಈ ಶಾಸನದಲ್ಲಿ ವಿವರಿಸಲಾಗಿದೆ.[29] ಕ್ರಿ.ಶ.1638ರ ವಿಟ್ಲದ ಡೊಂಬ ಹೆಗ್ಗಡೆಗೆ ಸಂಬಂಧಿಸಿದ ಮಾರಾಟ ಪತ್ರದಲ್ಲಿ ಕರೋಪಾಡಿ ಗ್ರಾಮದ ಗ್ರಾಮದೇವತೆಯಾಗಿ ಮಲೆರಾಯ ದೈವವನ್ನು ಹೆಸರಿಸಲಾಗಿದೆ. ವಿಟ್ಲದ ಡೊಂಬ ಹೆಗ್ಗಡೆ. ಮಲೆರಾಯ ದೈವಕ್ಕೆ ಕರೋಪಾಡಿ ಗ್ರಾಮದಲ್ಲಿ 9 ಮುಡಿ ಅಕ್ಕಿ ಮತ್ತು 2 ಗದ್ಯಾಣಗಳನ್ನು ಉತ್ತಾರವಾಗಿ ನೀಡಿದ ಮಾಹಿತಿ ಇದರಲ್ಲಿದೆ.[30] ಇವೆಲ್ಲವೂ ಈ ಕಾಲಘಟ್ಟದಲ್ಲಿ ಭೂತಾರಾಧನೆ ಊರ್ಜಿತದಲ್ಲಿತ್ತು ಎಂಬುದನ್ನು ತಿಳಿಸುವ ಮಹತ್ವದ ದಾಖಲೆಗಳಾಗಿವೆ.

ತುಳುನಾಡಿನ ಸಾಮಾಜಿಕ ಮತ್ತು ಧಾರ್ಮಿಕ ಜೀವನದಲ್ಲಿ ದೈವಗಳು ಪ್ರಮುಖ ಪಾತ್ರವಹಿಸಿವೆ. ಭೂತಗಳ ಆರಾಧಕರು ನಂಬುವ ಹಾಗೆ ಪ್ರತಿಯೊಂದು ಗ್ರಾಮವೂ ದುಷ್ಟ ಶಕ್ತಿಗಳ ತೊಂದರೆಗೆ ಒಳಗಾಗಿ. ರೋಗ ರುಜಿನಗಳಿಗೆ ಮತ್ತು ಹಲವಾರು ದುರಾದೃಷ್ಟಕರ ಘಟನೆಗಳಿಗೆ ಒಳಗಾಗಿರುತ್ತದೆ ಎಂಬುದಾಗಿ ಪಾಡ್ದನಗಳಲ್ಲಿ ನಿರೂಪಿತವಾಗಿದೆ. ಉದಾಹರಣೆಗೆ, ಸಾಲಾರ್ ಜುಮಾದಿ ದೈವವು ಜನರಿಗೆ ರೋಗ

ರುಜಿನವುಂಟು ಮಾಡಲು ಶಕ್ತವಾಗಿದೆ.[31] ಹಾಗೆಯೇ ಕಾಲಭೈರವ ಆನೆಗಳ ರೋಗಕ್ಕೆ ಕಾರಣವಾಗಿದ್ದ ವಿಚಾರವನ್ನು ಮುಡಾದೆರ್ ಪಾಡ್ದನದಿಂದ ತಿಳಿಯಬಹುದು. ಸಾಲಾರ್ ಜುಮಾದಿ ದೈವವನ್ನು ತೃಪ್ತಿ ಪಡಿಸಲು ಅತ್ತಾವರದಲ್ಲಿ ಸ್ಥಾನ ನಿರ್ಮಿಸಲಾಯ್ತು.[32] ಜುಮಾದಿ ದೈವದ ಪಾಡ್ದನ ಆ ದೈವದ ಆರಾಧನೆಗೆ ಗ್ರಾಮಸ್ಥರು ಸಮಿತಿಯನ್ನು ರಚಿಸಿದ ಮಾಹಿತಿ ನೀಡುತ್ತದೆ. ಅದೇ ರೀತಿ ಗ್ರಾಮಸ್ಥರು ದೈವಸ್ಥಾನವನ್ನು ನಿರ್ಮಿಸಿ, ಧ್ವಜಾರೋಹಣ ಮಾಡಿ, ರಥವನ್ನು ನಿರ್ಮಿಸಿ ಉತ್ಸವ ನಡೆಸಲಾಗುತ್ತಿತ್ತು.[33] ಈ ರೀತಿಯ ಉದಾಹರಣೆಗಳು ಪ್ರತೀ ಗ್ರಾಮದಲ್ಲಿ ದೈವಗಳ ಬಗ್ಗೆ ಭಯ ಭಕ್ತಿ ಇತ್ತು ಎಂಬುದನ್ನು ತೋರಿಸುತ್ತವೆ. ಭೂತಾರಾಧನೆ ಕಾಲಾಂತರದಲ್ಲಿ ಪುರಾಣದ ಕಥೆಗಳು ಮತ್ತು ವೈದಿಕ ಧರ್ಮದ ಪ್ರಭಾವಕ್ಕೆ ಒಳಗಾಯಿತು. ಅದರ ಪರಿಣಾಮವಾಗಿ ಭೂತಾರಾಧನೆಯಲ್ಲಿ ಎರಡು ಸಂಸ್ಕೃತಿಗಳ ಸಮ್ಮಿಲನವನ್ನು ಗುರುತಿಸಲು ಸಹಕರಿಸುತ್ತವೆ. 1. ಪ್ರಾದೇಶಿಕ ಸಂಸ್ಕೃತಿ 2. ಬ್ರಾಹ್ಮಣ ಸಂಸ್ಕೃತಿ. ಈ ಸಮ್ಮಿಲನ ಮತ್ತು ಸಂಸ್ಕೃತಿಯ ಅಸ್ತಿತ್ವ ರಾಜಕೀಯ ಧಾರ್ಮಿಕ ಸಾಮಾಜಿಕ ಆರ್ಥಿಕ ಆಯಾಮಗಳನ್ನೊಳಗೊಂಡಿದೆ. ಪ್ರಾದೇಶಿಕ ಸಂಸ್ಕೃತಿಯಂತೆ, ಆಡು, ಹಂದಿ, ಕೋಣ, ಕೋಳಿಯಂತಹ ಪ್ರಾಣಿ ಪಕ್ಷಿಗಳನ್ನು ದೈವಗಳಿಗೆ ಬಲಿ ನೀಡುತ್ತಿದ್ದ ವಿಚಾರ ವಾದಿರಾಜರ ಕಾವ್ಯಗಳಿಂದ ತಿಳಿದುಬರುತ್ತದೆ.[34] ಪಂಜುರ್ಲಿ ಭೂತದ ಪ್ರಸನ್ನತೆಗೆ ಜನರು ಕೋಳಿ ಮತ್ತು ಸೀಯಾಳವನ್ನು ಸಮರ್ಪಿಸುತ್ತಿದ್ದರು.[35] ಆದರೆ ಬೀಡು ಗುತ್ತು, ಅರಮನೆಗಳಿಂದ ಆಳ್ವಿಕೆ ಮಾಡಿದ ಜೈನ ಆಡಳಿತಗಾರರಿಂದ ಅನೇಕ ದೈವಗಳು ಅಸುರ ಕ್ರಿಯೆಯಿಂದ ದೇವಕ್ರಿಯೆಗೆ (ಪ್ರಾಣಿಬಲಿ ರಹಿತ ಕ್ರಿಯಾ ವಿಧಿಗೆ) ಬದಲಾದವು. ತಮ್ಮದಲ್ಲದ ದೈವಾರಾಧನೆಯನ್ನು ಜೈನರು ಸ್ವೀಕರಿಸುವಲ್ಲಿ ವಿವಿಧ ಕಾರಣಗಳೊಂದಿಗೆ ದೈವದ ಕುರಿತಾದ ಭಯವೂ ಕಾರಣವಾಗಿತ್ತು.[36]

ಪಾಡ್ದನಗಳಲ್ಲಿ ಭೂತಗಳು ಬ್ರಹ್ಮ, ವಿಷ್ಣು, ಮಹೇಶ್ವರರೊಂದಿಗಿನ ಸಂಬಂಧವನ್ನು ಅಥವಾ ಐಕ್ಯತೆಯನ್ನು ನಿರೂಪಿಸುತ್ತವೆ.[37] ಬ್ರಾಹ್ಮಣರ ಬಗೆಗಿರುವ ಪೂಜ್ಯ ಭಾವನೆ ದೈವಗಳ ರೂಪಾಂತರದಲ್ಲಿಯೂ ಕಾಣಬಹುದು. ಉದಾಹರಣೆಗೆ ಭಗವಾನ್ ವಿಷ್ಣು ಇಲ್ಲಿ ವಿಷ್ಣುಮೂರ್ತಿ ದೈವವಾಗಿ ಆರಾಧನೆಯನ್ನು ಪಡೆಯುವುದು ಈ ಓನ್ನೆಲೆಯಲ್ಲಿಯೇ. ಹಾಗೆಯೇ ಬ್ರಾಹ್ಮಣರ ದೇವತೆ ಬ್ರಹ್ಮ ಇಲ್ಲಿ ಬೆರ್ಮೆರ್ ದೈವವಾಗಿ ಆರಾಧಿಸಲ್ಪಡುತ್ತದೆ. ಜುಮಾದಿ ದೈವ ಇತರ ಸೇವೆಗಳೊಂದಿಗೆ ಹೂ, ದೀಪ ಇವುಗಳಿಂದಲೂ ಸಂತೃಪ್ತವಾಗುವ ಕುರಿತು ಪಾಡ್ದನಗಳು ವಿವರಿಸುತ್ತವೆ. ಹಾಗೆಯೇ ಭೂತಾರಾಧಕರು ಭೂತ ಸ್ಥಾನದ ನಿರ್ಮಾಣದ ಸಂದರ್ಭದಲ್ಲಿ ಬ್ರಾಹ್ಮಣ ಜ್ಯೋತಿಷಿಗಳನ್ನು ಭೇಟಿ ಮಾಡಿ ಮಾರ್ಗದರ್ಶನ ಕೇಳುವುದೂ ಇದಕ್ಕೆ ಉದಾಹರಣೆಯಾಗಿದೆ.[38] ಉಳ್ಳಾಕುಲುಗಳಂತಹ ಅರಸು ದೈವಗಳು ವೈದಿಕ ಬ್ರಾಹ್ಮಣರಿಂದ ಪೂಜೆಯ ವಿಧಿ ವಿಧಾನಗಳಿಗೆ ಒಳಗಾಗಿರುವುದನ್ನೂ ಈ ಓನ್ನೆಲೆಯಲ್ಲಿ ಗಮನಿಸಬಹುದು. ಬ್ರಾಹ್ಮಣ ಸಂಸ್ಕೃತಿಯನ್ನು ಭೂತಾರಾಧನೆಗೆ ಆರೋಪಿಸುವ ಮೂಲಕ ಭೂತಾರಾಧನೆಯ ಸಾಮಾಜಿಕ ಆರ್ಥಿಕ ರಾಜಕೀಯ ಲಾಭವನ್ನು ಉನ್ನತವರ್ಗದವರು ಪಡೆಯಲು ಪ್ರಯತ್ನಿಸಿರುವುದು ಗಮನಾರ್ಹವಾಗಿದೆ. ಹಾಗೆಯೇ ಬ್ರಾಹ್ಮಣರ ಮತ್ತು

ಇತರ ಉನ್ನತ ವರ್ಗದವರ ಭಾಗವಹಿಸುವಿಕೆ ಭೂತಾರಾಧನೆಗೆ ಒಂದು ರೀತಿಯ ಸಮರ್ಥನೆ ನೀಡಲೂ ಸಹಕಾರಿಯಾಗಿದೆ.

ಕೆಲವು ಕಡೆಗಳಲ್ಲಿ ದೈವಗಳು ಈ ಮಣ್ಣಿನ ಮೂಲದೇವತೆಗಳಾದರೂ ಅವುಗಳು ದೇವಾಲಯದ ಸೇವಕರಾಗಿ ಗುರುತಿಸಲ್ಪಡುತ್ತವೆ. ಇದಕ್ಕೆ ಪಂಜುರ್ಲಿ ಮತ್ತು ಧೂಮಾವತಿ ದೈವಗಳ ಪಾಡ್ದನವನ್ನು ಗಮನಿಸಬಹುದು. ಪಂಜುರ್ಲಿ ದೈವ, ಧರ್ಮಸ್ಥಳದ ಮಂಜುನಾಥ, ಕಾಂತೇಶ್ವರ ಮತ್ತು ಕಾಪು ಜನಾರ್ಧನ ದೇವಳದ ರಕ್ಷಕನಾಗಿ ಸಹಾಯಕನಾಗಿ ಕಾಣಿಸಿಕೊಂಡಿದೆ. ಅಣ್ಣಪ್ಪ, ಧರ್ಮಸ್ಥಳದ ಮಂಜುನಾಥನ ಸಹಾಯಕನಾಗಿದ್ದಾನೆ. ಇನ್ನು ಗಮನಿಸಬೇಕಾದ ಒಂದು ಅಂಶವೆಂದರೆ, ಸುಳ್ಯದ ಚೆನ್ನಕೇಶವ ದೇವಳದಲ್ಲಿ, ಗೌಡ ಜನಾಂಗದ ಮುಕ್ತೇಸರಿಕೆ ಹಾಗೂ ಬಂಟ ಜನಾಂಗದವರು ಮುಖ್ಯ ಪೂಜಾರಿಯಾಗಿರುವ ಕುಕ್ಕನ್ನೂರು ಉಳ್ಳಾಕುಳು ದೈವ, ಮಿತ್ತೂರು ನಾಯರ್ ದೈವ ಹಾಗೂ ಬಜಪ್ಪಿಲದ ಉಳ್ಳಾಕುಳು ದೈವದ ಭಂಡಾರಗಳು ದೇವಸ್ಥಾನದಿಂದಲೇ ಸ್ವಾಗತಿಸಲ್ಪಟ್ಟು ದೇವಸ್ಥಾನದ ಒಳಗೆ ಕೂಡ ಬಂದು ಮರ್ಯಾದೆ ಪಡೆಯುತ್ತವೆ. ಆದರೆ ಪರವರು ತರುವ ಕಾನತ್ತಿಲ ರುದ್ರಾಂಡಿ ದೈವ ಹಾಗೂ ಅಜಿಲರು ವೇಷ ಕಟ್ಟುವ ಕಲ್ಕುಡ ದೈವದ ಭಂಡಾರಗಳು ತಮ್ಮಷ್ಟಕ್ಕೆ ಬಂದು ದೇವಸ್ಥಾನದ ಹೊರಾಂಗಣದ ಹೊರಗಿರುವ ಕಟ್ಟೆಯ ಬಳಿ ಸ್ಥಾಪನೆಯಾಗುತ್ತವೆ. ಅಲ್ಲೇ ವೇಷ ಹಾಕಿ ಕುಣಿದು ದೇವರು ಹೊರಗೆ ಬಂದಾಗ ಇದಿರ್ಗೊಂಡು ತಮ್ಮ ಸೇವೆ ಸಲ್ಲಿಸಿ ಹಿಂತಿರುಗುತ್ತವೆ. ಈ ವ್ಯತ್ಯಾಸವು ಮೇಲ್ಜಾತಿಯವರು, ಮಧ್ಯಮ ಜಾತಿಗಳವರು ಹಾಗೂ ಅಸ್ಪಶ್ಯರು ಹೇಗೆ ಧಾರ್ಮಿಕ ಆಚರಣೆಯಲ್ಲಿ ಅಸಮಾನವಾಗಿ ಪಾಲ್ಗೊಳ್ಳುತ್ತಾರೆಂಬುದನ್ನು ಸೂಚಿಸುತ್ತದೆ. ಅಲ್ಲದೆ ಭೂತಾರಾಧನೆಯ ಆಚರಣೆಯು ಜಾತಿ ಭೇದದ ಸ್ಥಿರೀಕರಣಕ್ಕೆ ಹೇಗೆ ಸಹಾಯಕವಾಗಿತ್ತೆಂಬುದು ತಿಳಿಯುತ್ತದೆ.

ತುಳುನಾಡಿನಲ್ಲಿ ಆರಾಧಿಸಲ್ಪಡುವ ಕೆಲವು ದೈವಗಳು ಘಟ್ಟ ಪ್ರದೇಶದಿಂದ ಇಳಿದು ಬಂದ ಸಂಕಥನವನ್ನು ಹೊಂದಿದೆ.[39] ಈ ದೈವಗಳು ಇಳಿದು ಬಂದ ದಾರಿ ಮತ್ತು ಘಟ್ಟದ ಮೇಲಿಂದ ತುಳುನಾಡಿಗೆ ವಲಸೆ ಬಂದ ಕೆಲವು ಸಮುದಾಯಗಳು ಆಗಮಿಸಿದ ದಾರಿ ಒಂದೇ ಆಗಿರುವುದು ಗಮನಾರ್ಹವಾಗಿದೆ. ಉದಾಹರಣೆಗೆ ಗೌಡರ ವಲಸೆಯ ಮಾಹಿತಿಗಳನ್ನು ತಿಳಿಯಲು ಶಿರಾಡಿ ಮತ್ತು ಬಚ್ಚ ನಾಯಕ ದೈವಗಳ ಪ್ರಸರಣದ ಮಾಹಿತಿ ಸಹಕಾರಿಯಾಗಿದೆ. ಮೌಖಿಕ ಮಾಹಿತಿಗಳ ಆಧಾರದಲ್ಲಿ ಇಕ್ಕೇರಿಯ ಅರಸರು ತುಳುನಾಡಿನಲ್ಲಿ ದೈವಾರಾಧನೆ ನೆಲೆಗೊಳ್ಳಲು ಕಾರಣರಾದರು ಎಂಬ ಅಭಿಪ್ರಾಯವಿದೆ.[40] ದೊಡ್ಡ ಸಂಕಣ್ಣನ ಕಾಲದಲ್ಲಿ ನಡೆದಿದೆ ಎಂದು ನಂಬಲಾದ ಒಂದು ಐತಿಹ್ಯದ ಪ್ರಕಾರ, ತುಳುನಾಡಿನಲ್ಲಿ ಇಂದು ಪ್ರಮುಖವಾಗಿ ಆರಾಧನೆಗೊಳ್ಳುವ ಅರಸು ದೈವವಾದ ಉಳ್ಳಾಕುಲು ಇಲ್ಲಿ ಖ್ಯಾತಿ ಪಡೆಯಿತು.[41] ಉಳ್ಳಾಕುಲು ಪ್ರಸರಣಗೊಂಡ ಸ್ಥಳಗಳು ಮತ್ತು ತುಳುನಾಡಿನಲ್ಲಿ ಈ ದೈವದ ಆರಾಧಕರಾದ ಗೌಡರು ಘಟ್ಟದಿಂದ ಆಗಮಿಸಿದ ದಾರಿ ಮತ್ತು ನೆಲೆಗೊಂಡ ಸ್ಥಳಗಳು ಒಂದೇ ಆಗಿರುವುದು ಗಮನಾರ್ಹ.

ತುಳುನಾಡಿನ ಭೂತಾರಾಧನೆಯ ಬಗ್ಗೆ ಸಮಕಾಲೀನ ಪ್ರವಾಸಿಗಳ ಬರಹಗಳು ಸಾಕಷ್ಟು ಮಾಹಿತಿ ನೀಡುತ್ತವೆ. ಪಿಯತ್ರೋ ಡೆಲ್ಲಾ ವಲ್ಲೆ ಮಣೇಲ್‌ನಲ್ಲಿದ್ದ ಭೂತಸ್ಥಾನದ ಕುರಿತು ಹೇಳುತ್ತಾನೆ. ಆ ಸ್ಥಾನದ ಒಳಗೆ ಬಿಳಿ ದೊರಗು ಕಲ್ಲಿನಲ್ಲಿ ಕೆತ್ತಿದ ಮಾನವನನ್ನು ಹೋಲುವ ಶಿಲ್ಪವಿರುವುದನ್ನು ತಿಳಿಸುತ್ತಾನೆ. ಅದು ಬ್ರೆಮ್ಮೆರ್ ದೈವವಾಗಿದ್ದು, ಆ ಶಿಲ್ಪಕ್ಕೆ ನಾಲ್ಕು ಕೈಗಳಿದ್ದು, ಎರಡು ಕೈಗಳಲ್ಲಿ ಆಯುಧಗಳಿದ್ದು ಉಳಿದ ಎರಡು ಕೈಗಳಲ್ಲಿ ಏನಿದೆ ಎಂದು ಗುರುತಿಸಲು ಸಾಧ್ಯವಾಗಿಲ್ಲ ಎನ್ನುತ್ತಾನೆ. ಈ ಶಿಲ್ಪದ ಕಾಲುಗಳ ಮಧ್ಯದಲ್ಲಿ ಒಬ್ಬ ಗಡ್ಡದಾರಿ ನಗ್ನ ಮಾನವನ ಶಿಲ್ಪದ ಇರುವಿಕೆಯನ್ನು ಗುರುತಿಸುತ್ತಾನೆ. ಆ ಮನುಷ್ಯನ ಕೈ ನೆಲಕ್ಕೆ ತಾಗಿದ್ದು ಬ್ರೆಮ್ಮೆರ್ ಇವನ ಮೇಲೆ ಸವಾರಿ ಮಾಡುವಂತಿದೆ ಎನ್ನುತ್ತಾನೆ.[42] ಅದೇ ರೀತಿ ಗುಡಿಯೊಳಗೆ ಬರಲು ಅಂಜುತ್ತಿದ್ದ ಬ್ರಾಹ್ಮಣ ದುಭಾಷಿ ನರಸುವಿನಲ್ಲಿ ವ್ಯಂಗ್ಯದ ಮಾತುಗಳನ್ನಾಡಿದ್ದು, ವಿಗ್ರಾಹಾರಾಧನೆಗೆ ವಿರೋಧಿ ಮನೋಸ್ಥಿತಿಯಲ್ಲಿ ಆ ವಿಗ್ರಹಕ್ಕೆ ಉಗುಳಿದ್ದು, ಸ್ಥಳೀಯರಿಗೆ ದೈವದ ಕುರಿತಾಗಿದ್ದ ಭಯ ಭಕ್ತಿ, ಯುರೋಪಿಯನ್ನರಿಗೆ ವಿಗ್ರಹಾರಾಧನೆಯ ಕುರಿತಾಗಿದ್ದ ತಾತ್ಸಾರ ಭಾವನೆಯ ಉದಾಹರಣೆಯಾಗಿದೆ.

ತುಳುನಾಡಿನ ಆಡಳಿತ ವ್ಯವಸ್ಥೆಯ ಜೊತೆಗೆ ಭೂತಾರಾಧನೆಯು ಚಾರಿತ್ರಿಕವಾದ ಸಂಬಂಧವನ್ನು ಪಡೆದುಕೊಂಡಿದೆ. ವಿಜಯನಗರ ಅರಸರ ಕಾಲದ ತುಳುನಾಡಿನ ರಾಜಕೀಯ ಮತ್ತು ಆಡಳಿತ ವ್ಯವಸ್ಥೆಗೆ ಸಮಾನಾಂತರವಾದ ಒಂದು ವ್ಯವಸ್ಥೆಯಾಗಿ ಭೂತಾರಾಧನೆಯು ಉಗಮವಾಗಿದೆ ಎನ್ನಲಾಗಿದೆ.[43] ರಾಜಕೀಯ, ಆಡಳಿತಾತ್ಮಕ ಹಾಗೂ ಸಾಮಾಜಿಕ ವ್ಯವಸ್ಥೆಯಾಗಿ ಭೂತಾರಾಧನೆಯು ವಿಜಯನಗರ ಅರಸರ ಕಾಲದಲ್ಲಿ ಬೆಳೆದುಬಂದು. ಕೆಳದಿಯರಸರ, ಸ್ಥಳೀಯ ಅರಸು ಮನೆತನಗಳ ನಿರಂತರವಾದ ಬೆಂಬಲದಿಂದ ಆಡಳಿತ ವ್ಯವಸ್ಥೆಯ ನ್ಯಾಯಾಂಗವಾಗಿ ಉಳಿದುಕೊಂಡು ಬಂದಿದೆ. ಮಧ್ಯಯುಗೀನ ಕಾಲದ ಸಾಮಾಜಿಕ ಪ್ರೇರಣೆಯಿಂದ ಭೂತಾರಾಧನೆಯು ಒಂದು ವ್ಯವಸ್ಥೆಯಾಗಿ ರೂಪುಗೊಂಡಿರುವುದು ಸ್ಪಷ್ಟವಾಗಿ ತಿಳಿಯುತ್ತದೆ.

ಭೂತಾರಾಧನೆ ಅಂದಿನ ಸಮಾಜದ ಒಳನೋಟವನ್ನು ತಿಳಿಯಲು ಸಹಕಾರಿಯಾಗಿದೆ. ಬೀರ ಕಲ್ಕುಡನು ಕಾರ್ಕಳದ ಭೈರವರಸನ ಅಪ್ಪಣೆಯ ಮೇರೆಗೆ ಕಾರ್ಕಳದಲ್ಲಿ ಗೊಮ್ಮಟ ಪ್ರತಿಮೆಯನ್ನು ನಿರ್ಮಾಣ ಮಾಡುತ್ತಾನೆ. ಪಾಡ್ದನದ ಪ್ರಕಾರ, ವೇಣೂರಿನ ಅಜಿಲರೂ ಬಾಹುಬಲಿ ವಿಗ್ರಹವನ್ನು ಇವನ ಮೂಲಕ ಕೆತ್ತಿಸುತ್ತಾರೆ. ತುಳುನಾಡಿನ ಇಬ್ಬರು ಐತಿಹಾಸಿಕ ರಾಜರು ಬೀರ ಕಲ್ಕುಡನಿಂದ ಗೊಮ್ಮಟ ಮೂರ್ತಿಯನ್ನು ನಿರ್ಮಿಸುವ ಪ್ರಕ್ರಿಯೆಯನ್ನು ವಿಮರ್ಶೆಗೊಳಪಡಿಸಿದಾಗ ಕೆಲವೊಂದು ಗೊಂದಲಗಳು ಹುಟ್ಟಿಕೊಳ್ಳುತ್ತವೆ. ಬೆಳಗೊಳ, ಕಾರ್ಕಳ, ವೇಣೂರಿನ ಬಾಹುಬಲಿಯ ಮೂರ್ತಿ ಕೆತ್ತನೆಗೆ ಶತಮಾನಗಳಷ್ಟು ವರ್ಷಗಳ ವ್ಯತ್ಯಾಸವಿರುವುದರಿಂದ ಈ ಮೂರರ ಶಿಲ್ಪಿಗಳು ಒಂದೇ ಕಾಲದವರೆಂದು ನಂಬಲು ಸಾಧ್ಯವಾಗದು. ಹಾಗಾಗಿ ಕಲ್ಕುಡನ ಕೈಗಳನ್ನು ಭೈರವರಸ ಕಡಿದ ಎನ್ನುವ ಪಾಡ್ದನದ ಉಲ್ಲೇಖಗಳ ಕುರಿತು ವಿದ್ವಾಂಸರಲ್ಲಿ ಒಮ್ಮತವಿಲ್ಲ. ಚದುರ ಚಂದ್ರಮ ಎಂಬ ಕವಿಯು ತನ್ನ ಕೃತಿಯಾದ ಕಾರ್ಕಳದ ಗೊಮ್ಮಟೇಶ್ವರ ಚರಿತದಲ್ಲಿ ಶಿಲ್ಪಿಯ ಕೈಗೆ ಭೈರವರಸ ಕಡಗ ತೊಡಿಸಿದ ಎಂದು ಹೇಳಿದರೆ ಕಲ್ಲುರ್ಟಿ ಪಾಡ್ದನಗಳು ರಾಜ. ಶಿಲ್ಪಿಯ

ಕೈ ಕಡಿದನೆಂದು ಹೇಳುತ್ತವೆ.[44] ತುಳುನಾಡಿನ ಸಮಾಜದಲ್ಲಿ ಇದ್ದಿರಬಹುದಾದ ಗೌರವಿಸಿ ಸನ್ಮಾನಿಸುವ ಮತ್ತು ದೌರ್ಜನ್ಯ ನಡೆಸುವ ಈ ಎರಡೂ ವೈರುಧ್ಯಗಳನ್ನು ಚಂದ್ರಮನ ಕಾವ್ಯ ಮತ್ತು ಕಲ್ಲುರ್ಟಿ ಪಾಡ್ದನಗಳ ಮೂಲಕ ಹೇಳಲಾಗಿದೆ.

ರಾಜಕೀಯ ಅಧಿಕಾರವನ್ನು ಮತ್ತು ಭೂಮಿಯ ಮೇಲಿನ ಒಡೆತನವನ್ನು ವಂಶ ಪಾರಂಪರ್ಯವಾಗಿ ಉಳಿಸಿಕೊಂಡು ಬರಲು ಸಹಾಯಕವಾಗುವಂತೆ ಭೂತಾರಾಧನೆಯಂತಹ ಒಂದು ವ್ಯವಸ್ಥೆಯನ್ನು ಪೋಷಿಸುತ್ತಾ ಬರಲಾಗಿದೆ. ಶ್ರೇಣೀಕೃತ ಸಮಾಜ, ಭೂಮಿಯ ಮೇಲಿನ ಒಡೆತನ, ರಾಜಕೀಯ, ಆಡಳಿತಾತ್ಮಕ ಅಧಿಕಾರ ಇಂತಹ ಸಮಾಜಶಾಹಿ ಶಕ್ತಿಗಳು ಭೂತಾರಾಧನೆಯನ್ನು ಒಂದು ಸಾಮಾಜಿಕ ಪದ್ಧತಿಯಾಗಿ ರೂಪಿಸಿರುವುದು ಕಂಡುಬರುತ್ತದೆ.[45] ಮೇಲುವರ್ಗದ ಜಾತಿ ಮತ್ತು ಆರ್ಥಿಕ ಬಂಡವಾಳಶಾಹಿ ಶಕ್ತಿಗಳ ಮೂಲಕ ವಿಕಾಸವನ್ನು ಹೊಂದಿರುವ ಭೂತಾರಾಧನೆಯು ಈ ಶಕ್ತಿಗಳ ಉದ್ದೇಶವನ್ನು ಈಡೇರಿಸುವ ಕೆಲಸವನ್ನು ಮಾಡುತ್ತಾ ಬಂದಿದೆ. ಜಾತಿನಿಷ್ಠ, ಶ್ರೇಣೀಕೃತ ಸಮಾಜದ ಸ್ವರೂಪವನ್ನು, ಸಾಂಪ್ರದಾಯಿಕ ರೂಪದಲ್ಲಿಯೇ ಕಾಪಾಡಿಕೊಂಡು ಬರಲು ಭೂತಾರಾಧನೆಯು ಪ್ರಯತ್ನಿಸುತ್ತದೆ. ಈ ದೃಷ್ಟಿಕೋನದಿಂದ ನೋಡಿದರೆ ಭೂತಾರಾಧನೆಯು ಒಂದು ರಾಜಕೀಯ ವ್ಯವಸ್ಥೆಯಾಗಿ ಬೆಳೆದು ಬಂದಿರುವುದು ಸ್ಪಷ್ಟವಾಗುತ್ತದೆ. ಈ ರೀತಿ ಭೂತಾರಾಧನೆಯು ರಾಜಕೀಯ ವ್ಯವಸ್ಥೆಯಾಗಿದ್ದುಕೊಂಡು ನ್ಯಾಯಾಂಗದ ಕೆಲಸವನ್ನೂ ನಿರ್ವಹಿಸುತ್ತದೆ.

ಈ ವ್ಯವಸ್ಥೆಯ ಅಡಿಯಲ್ಲಿ ಆಡಳಿತಗಾರನಾದ ಸೀಮೆಯ ಅರಸ ಅಥವಾ ಗ್ರಾಮ, ಗುತ್ತಿನ ಮುಖ್ಯಸ್ಥರು ತುತ್ತತುದಿಯಲ್ಲಿರುತ್ತಾನೆ. ಜಾತಿ ಮತ್ತು ಧಾರ್ಮಿಕ ಆಚರಣೆಗಳಿಂದ ಪ್ರತಿಷ್ಠಿತನಾದ ಬ್ರಾಹ್ಮಣನು ಆಡಳಿತಗಾರರ ಜೊತೆಗೆ ಇರುತ್ತಾನೆ. ಆಡಳಿತ ಘಟಕಗಳ ಮುಖ್ಯಸ್ಥರು ಮತ್ತು ಬ್ರಾಹ್ಮಣರು ಸೇರಿ ನಡೆಸುವ ಆಡಳಿತಕ್ಕೆ ಉಳಿದ ಎಲ್ಲಾ ಜಾತಿಯವರು ಒಳಗಾಗುತ್ತಾರೆ. ಭೂತಾರಾಧನೆಯಲ್ಲಿರುವ 'ಜನಪದ ನ್ಯಾಯಾಂಗ' ದಿಂದಾಗಿ ಆಡಳಿತಕ್ಕೆ ಧಾರ್ಮಿಕತೆಯ ಸ್ಪರ್ಶವು ಬರುತ್ತದೆ. ಈ ಧಾರ್ಮಿಕ ನ್ಯಾಯಾಂಗದಲ್ಲಿ ನ್ಯಾಯಗಳ ತೀರ್ಮಾನವಾಗಿ ತೀರ್ಪು ನೀಡುವ ಸಂದರ್ಭದಲ್ಲಿ ಸಮಾಜದ ಎಲ್ಲ ಜಾತಿಯ ಜನರು ಸೇರುವಂತೆ ನೋಡಿಕೊಳ್ಳಲಾಗಿದೆ.[46] ಈ ಎಲ್ಲಾ ಹಿನ್ನೆಲೆಗಳಲ್ಲಿ ಈ ಕಾಲದ ತುಳುನಾಡಿನಲ್ಲಿ ವಿಕಾಸ ಹೊಂದಿದ ಭೂತಾರಾಧನೆಯನ್ನು ಮೇಲ್ವರ್ಗದ ಜನ ಆಡಳಿತ, ಧಾರ್ಮಿಕ, ಸಾಮಾಜಿಕ ಕಾರಣಗಳಿಗಾಗಿ ಬೆಂಬಲಿಸಿದರು ಮತ್ತು ಅದರ ಮೂಲಕ ಈ ವ್ಯವಸ್ಥೆ ಊರ್ಜಿತಗೊಂಡಿತು ಎನ್ನಬಹುದು.

**ವೈಷ್ಣವ ಪಂಥ** : ಮಧ್ವಾಚಾರ್ಯರು (ಕ್ರಿ.ಶ.1200–1278) ಈ ಪ್ರದೇಶದಲ್ಲಿ ವೈಷ್ಣವ ಆರಾಧನೆಯನ್ನು ಜನಪ್ರಿಯಗೊಳಿಸಿದರು. ತುಳುನಾಡಿನಲ್ಲಿ ವೈಷ್ಣವ ತತ್ವಗಳನ್ನು ಹರಡಿದವರಲ್ಲಿ ವ್ಯಾಸರಾಯರು, ವಾದಿರಾಜರು ಕನಕದಾಸರು ಪುರಂದರ ಮತ್ತು ರಾಘವೇಂದ್ರರು ಪ್ರಮುಖರು. ಪುರಂದರ ಮತ್ತು ಕನಕದಾಸರ ಕೀರ್ತನೆಗಳು ಇಲ್ಲಿ ವೈಷ್ಣವ ಪಂಥದ ಜನಪ್ರಿಯತೆಗೆ ಕಾರಣವಾದವು. ವಿಜಯನಗರದರಸರು, ಹಾಗೆಯೇ ಕರಾವಳಿ

ಭಾಗದ ಸ್ಥಳೀಯ ರಾಜರಾದ ಕಾಪುವಿನ ಮದ್ದ ಹೆಗ್ಗಡೆ, ಎರ್ಮಾಳಿನ ಮಾರಮ್ಮ ಹೆಗ್ಗಡೆ, ಸಿಮಂತೂರಿನ ಸಾಮಂತರು ಮತ್ತು ಕುಂಬಳೆಯರಸರು ವೈಷ್ಣವ ಪಂಥವನ್ನು ಪ್ರೋತ್ಸಾಹಿಸಿದರು. ಕೆಳದಿ ಆಳ್ವಿಕೆಯ ಕಾಲದಲ್ಲಿ ತುಳುನಾಡಿನಲ್ಲಿ ಉಡುಪಿ, ಬಾರ್ಕೂರು, ಕೋಟ ಮತ್ತು ಅತ್ತಾವರಗಳು ವೈಷ್ಣವ ಪಂಥದ ಕೇಂದ್ರಗಳಾಗಿತ್ತು.

ಕೆಳದಿಯರಸರು ವೀರಶೈವರಾದರೂ ಅವರ ಆಳ್ವಿಕೆಯ ಕಾಲದ ತುಳುನಾಡಿನಲ್ಲಿ ವೈಷ್ಣವ ಪಂಥವೂ ಪ್ರಧಾನವಾಗಿ ಬೆಳವಣಿಗೆಯನ್ನು ಕಂಡಿತು. ಕ್ರಿ.ಶ.16 ಮತ್ತು 17ನೇ ಶತಮಾನದ ಪೂರ್ವಾರ್ಧದಲ್ಲಿ ವೈಷ್ಣವ ಪಂಥ ತುಳುನಾಡಿನಲ್ಲಿ ವ್ಯಾಪಕವಾಗಿ ಹರಡಲು ಸೋದೆ ಮಠದ 8ನೇ ಪೀಠಾಧಿಪತಿ ವಾದಿರಾಜರು ಕಾರಣರಾಗಿದ್ದರು (1480–1600) ಕ್ರಿ.ಶ. 1532ರಲ್ಲಿ ಅಷ್ಟಮಠಾಧೀಶರ ಎರಡು ತಿಂಗಳ ಪರ್ಯಾಯ ಕ್ರಮವನ್ನು ಎರಡು ವರ್ಷಗಳಿಗೆ ಇವರು ವಿಸ್ತರಿಸಿದರು.[47] ಸ್ವತಃ ವಾದಿರಾಜರು ಕ್ರಿ.ಶ. 1548, 1564, 1580, 1596 ಹೀಗೆ ನಾಲ್ಕು ಬಾರಿ ಪರ್ಯಾಯ ಪೀಠಾರೋಹಣ ಮಾಡಿದ್ದರು.[48] ಇವರು ಮಹಿಳೆಯರಿಗೆ ಮತ್ತು ಶೂದ್ರರಿಗೂ ಸಿದ್ಧಾಂತ ಬೋಧನೆಯನ್ನು ವಿಸ್ತರಿಸಿ ಅವರ ಕಲ್ಯಾಣಕ್ಕೂ ಕಾರಣವಾದರು.[49]

ತುಳುನಾಡಿನಲ್ಲಿ ವೈಷ್ಣವ ತತ್ವವನ್ನು ಹರಡುವಲ್ಲಿ ಗೌಡ ಸಾರಸ್ವತ ಮಠಗಳ ಪಾತ್ರ ಪ್ರಮುಖವಾದುದು. ಕಾಶಿ ಮತ್ತು ಗೋಕರ್ಣ ಮಠಗಳು ಈ ನಿಟ್ಟಿನಲ್ಲಿ ಗಮನಾರ್ಹವಾಗಿವೆ. ಹದಿನೇಳನೆ ಶತಮಾನದಲ್ಲಿ ತುಳುನಾಡಿನಲ್ಲಿ ವೈಷ್ಣವ ಪಂಥವನ್ನು ಬಲಪಡಿಸಿದವರು ರಾಘವೇಂದ್ರ ಸ್ವಾಮಿ ಎಂದು ಪ್ರಸಿದ್ಧರಾದ ವೆಂಕಟನಾಥರು.(1623–71) ಕುಂಭಕೋಣಂ ಮಠದ ಪೀಠಾಧಿಪತಿಗಳಾಗಿದ್ದ ಅವರು ಸುಬ್ರಹ್ಮಣ್ಯ, ಉಡುಪಿ ಮುಂತಾದ ತುಳುನಾಡಿನ ಹಲವು ಪ್ರದೇಶಗಳಲ್ಲಿ ಯಾತ್ರೆ ಮಾಡಿ, ಹಲವಾರು ಕೃತಿಗಳನ್ನು ರಚಿಸಿದ್ದಲ್ಲದೆ. ಮಧ್ವಾಚಾರ್ಯರ ಸಿದ್ಧಾಂತಗಳನ್ನು ಜನರಿಗೆ ತಿಳಿಯಪಡಿಸಿದರು.[50] ಇಂದಿಗೂ ಅವರ ಸಮಾಧಿ ಸ್ಥಳವಾದ ಮಂತ್ರಾಲಯ ಪ್ರಮುಖ ಪುಣ್ಯಕ್ಷೇತ್ರವಾಗಿದೆ. ಇವರು ಭಟ್ಕಳದಲ್ಲಿ ಅಧೀನ ಮಠವನ್ನು ಮತ್ತು ಬಸ್ರೂರು ಹೆಮ್ಮಾಡಿ(ಹೆಜಮಾಡಿ) ಗಳಲ್ಲಿ ವೈಷ್ಣವ ದೇವಾಲಯಗಳನ್ನು ನಿರ್ಮಿಸಿದರು. ಕಾಲಕ್ರಮೇಣ ತುಳುನಾಡಿನ ಕೆಲವು ಭಾಗಗಳಾದ ಬಸ್ರೂರು, ಹೆಮ್ಮಾಡಿ, ಬಂಟ್ವಾಳ, ಉತ್ತರ ಕನ್ನಡದ ಭಟ್ಕಳ ಹೊನ್ನಾವರ ಮುಂತಾದ ಕಡೆಗಳಲ್ಲಿ ಸ್ವಾಮಿಗಳ ಸಮಾಧಿಗಳು ಮತ್ತು ದೇವಾಲಯಗಳು ನಿರ್ಮಾಣವಾದವು.[51] ಗೌಡ ಸಾರಸ್ವತರ ಮೂಲಕ, ಮಂಜೇಶ್ವರ, ಸಾಲಿಗ್ರಾಮ, ಶಂಕರನಾರಾಯಣ, ಕಾರ್ಕಳ, ಸುಬ್ರಹ್ಮಣ್ಯ, ಮೊಗರ್ನಾಡು ಮೊದಲಾದ ಹತ್ತಾರು ಕಡೆ ವೈಷ್ಣವ ಆರಾಧನೆ ಪ್ರಬಲವಾಗಿತ್ತು. ಸುಳ್ಯ ತಾಲೂಕಿನ ಸುಬ್ರಹ್ಮಣ್ಯ ಗ್ರಾಮದಲ್ಲಿ ಸಂಪುಟ ನರಸಿಂಹ ಎಂಬ ನರಸಿಂಹ ದೇವಾಲಯವಿದೆ. ವಿಜಯನಗರದ ಕೊನೆಯ ದೊರೆ ಶ್ರೀರಂಗರಾಯನು ಈ ದೇವರ ಪೂಜೆಗೆ ದಾನ ನೀಡಿದ್ದ.[52]

ಎರ್ಮಾಳಿನ ಮಾರಮ್ಮ ಹೆಗ್ಗಡೆಯವರ ಕುಲದೇವರಾಗಿದ್ದ ಜನಾರ್ಧನ, ವೈಷ್ಣವರ ಪ್ರಮುಖ ಕೇಂದ್ರವಾಗಿತ್ತು. ಕಾಪು ಜನಾರ್ಧನ, ಕಾಪು ಮರ್ದ(ಮದ್ದ) ಹೆಗ್ಗಡೆಯವರ ಕುಲದೇವರು. ಕೆಳದಿ

ಶಿವಪ್ಪನಾಯಕನ ಕಾಲದಲ್ಲಿ ಈ ದೇವಾಲಯಕ್ಕೆ 93 ವರಹಗಳ ಆದಾಯವಿತ್ತು.[53] ಜನಾರ್ಧನ ದೇವರನ್ನು ಬಾರ್ಕೂರು, ಬ್ರಹ್ಮಾವರ, ಪಾಂಗಳ, ಉಜಿರೆ ಮುಂತಾದ ಸ್ಥಳಗಳಲ್ಲಿ ಪೂಜಿಸಲಾಗುತ್ತಿತ್ತು. ದಕ್ಷಿಣ ತುಳುನಾಡಿನ ಹಲವಾರು ಬ್ರಾಹ್ಮಣ ಕುಟುಂಬಗಳಿಗೆ ಸಿಮಂತೂರು ಜನಾರ್ಧನ ಕುಲದೇವರಾಗಿದ್ದ.[54] ಉಡುಪಿ ಸಮೀಪದ ಪೆರ್ಡೂರಿನ ಅನಂತ ದೇವಾಲಯ, ಬಸ್ರೂರಿನ ಲಕ್ಷ್ಮೀನಾರಾಯಣ ದೇವಳ, ಕುಂಭಾಶಿಯ ದೇವಳ, ಹೆಮ್ಮಾಡಿಯ ರಘುನಾಥ ದೇವಾಲಯ ಈ ಕಾಲದ ಪ್ರಮುಖ ವೈಷ್ಣವ ದೇವಾಲಯಗಳಾಗಿವೆ. ಕ್ರಿ.ಶ. 1623ರಲ್ಲಿ ಕೆಳದಿ ವೆಂಕಟಪ್ಪ ನಾಯಕ, ಬಾರ್ಕೂರಿನ ನಾಯರಾಯಣ ದೇವರಿಗೆ ದಾನ ನೀಡಿದ್ದ.[55] ಈ ಕಾಲಘಟ್ಟದಲ್ಲಿ ವೈಷ್ಣವ ದೇವರುಗಳಾದ ವಿಠಲ, ತಿರುಮಲ, ಮತ್ತು ವೆಂಕಟ್ರಮಣನ ಆರಾಧನೆ ಜನಪ್ರಿಯವಾಗಿತ್ತು. ಬಸ್ರೂರಿನ ವೆಂಕಟರಮಣನಿಗೆ ಬೇರೆ ಬೇರೆ ಸಂದರ್ಭಗಳಲ್ಲಿ ದಾನ ದತ್ತಿಗಳನ್ನು ನೀಡಲಾಯಿತು.[56] ಮಂಜೇಶ್ವರದ ಶ್ರೀ ಮದನಂತೇಶನಿಗೆ ಕೆಳದಿ ಅರಸರು, ಸ್ಥಳೀಯ ಅರಸರು, ಮತ್ತು ಹಲವು ನಾಗರೀಕರೂ ಬಹಳಷ್ಟು ದಾನ ದತ್ತಿಗಳನ್ನು ನೀಡಿರುವುದನ್ನು ಇಲ್ಲಿಯ ಕಡತಗಳು ತಿಳಿಸುತ್ತವೆ.[57] ಉಡುಪಿಯ ಶ್ರೀಕೃಷ್ಣ ದೇವಾಲಯ ವೈಷ್ಣವರ ಪ್ರಮುಖ ಕೇಂದ್ರವಾಗಿದೆ. ಇಲ್ಲಿ ಕೃಷ್ಣ ದೇವಾಲಯಕ್ಕೆ ಸಂಬಂಧಿಸಿದಂತೆ ಅಷ್ಟ ಮಠಗಳಿವೆ. ಕೊಚ್ಚಿನ್‌ನ ದೊರೆಗಳು ಮತ್ತು ಮರಾಠರು ಈ ದೇವಳಕ್ಕೆ ದಾನ ದತ್ತಿಗಳನ್ನು ನೀಡಿದ್ದರು. ಇಲ್ಲಿಯ ಪೂಜಾದಿಗಳಿಗೆ ಹಿರಿಯ ವೆಂಕಟಪ್ಪನಾಯಕ ಮತ್ತಿತರ ಕೆಳದಿಯ ನಾಯಕರು ಭೂದಾನ ಹಾಗೂ ಇತರ ದಾನ ದತ್ತಿಗಳನ್ನು ನೀಡಿದ್ದರು.[58] ಸದಾಶಿವ ನಾಯಕ, ರಾಮರಾಜನಾಯಕ, ವೀರಭದ್ರನಾಯಕರು ಇಲ್ಲಿಯ ದ್ವೈತ ಮಠ ಮತ್ತು ಕೃಷ್ಣ ದೇವಾಲಯಕ್ಕೆ ದಾನ ದತ್ತಿಗಳನ್ನು ಕೊಡುವ ಮೂಲಕ ವೈಷ್ಣವ ಪಂಥವನ್ನೂ ಪ್ರೋತ್ಸಾಹಿಸಿದರು.[59] ಕ್ರಿ.ಶ.1763ರ ವೇಳೆಗೆ ವೈಷ್ಣವ ಪಂಥ ಅತ್ಯಂತ ಪ್ರಬಲ ಮತ್ತು ಜನಪ್ರಿಯ ಪಂಥವಾಗಿ ಬೆಳೆದಿತ್ತು. ಕೆಳದಿಯ ಅರಸರು ವೀರಶೈವರಾದರೂ ಶೈವ ಮತ್ತು ವೈಷ್ಣವ ಪಂಥಗಳ ಬೆಳವಣಿಗೆಗೆ ಪ್ರೋತ್ಸಾಹಿಸಿದ್ದರು ಎನ್ನುವುದು ಗಮನಾರ್ಹವಾಗಿದೆ.

**ಇತರ ಆರಾಧನಾ ದೇವತೆಗಳು:** ಗಣೇಶ, ಸುಬ್ರಹ್ಮಣ್ಯ ಅಥವಾ ಸ್ಕಂದ, ನಾಗ, ಶಂಕರನಾರಾಯಣ ಮುಂತಾದ ದೇವರ ಆರಾಧನೆಗಳು ಈ ಕಾಲದ ತುಳುನಾಡಿನಲ್ಲಿತ್ತು. ಗಣೇಶನನ್ನು ಪಂಥಗಳ ಬೇಧವಿಲ್ಲದೆ ಎಲ್ಲರೂ ಪೂಜಿಸುವುದು ಕಂಡುಬರುತ್ತದೆ. ತುಳುನಾಡಿನ ಎಲ್ಲಾ ದೇವಾಲಯಗಳಲ್ಲಿ ಗಣೇಶನ ಸಾನಿಧ್ಯ ಇದ್ದೇ ಇದೆ. ಕ್ರಿ.ಶ. 1623 ಮತ್ತು 1665ರ ಶಾಸನಗಳ ಮಾಹಿತಿಯಂತೆ, ಕೆಳದಿ ನಾಯಕರಾದ ಮೊದಲನೆಯ ವೆಂಕಟಪ್ಪ ನಾಯಕ ಮತ್ತು ಸೋಮಶೇಖರ ನಾಯಕರು ಕ್ರಮವಾಗಿ ಬಾರ್ಕೂರು ಮತ್ತು ಕೋಟೇಶ್ವರದ ಮಹತ್ತಿನ ಮಠಗಳಿಗೆ ದಾನ ನೀಡುವಾಗ ಚೌಳೀಕೇರಿ ದೇವಳಕ್ಕೂ ದಾನ ನೀಡಿದ್ದರು.[60]

ತುಳುನಾಡಿನಲ್ಲಿ ನಾಗನನ್ನು ಶಿವ, ವಿಷ್ಣು, ಗಣಪತಿ ಮತ್ತು ಜೈನ ತೀರ್ಥಂಕರರ ಜೊತೆಯಲ್ಲಿ ಕಾಣಲು ಸಾಧ್ಯವಿದೆ. ತುಳುನಾಡಿನ ಪ್ರಮುಖ ನಾಗಾರಾಧನೆಯ ಕೇಂದ್ರವಾಗಿ ಸುಳ್ಯ ತಾಲೂಕಿನ ಕುಕ್ಕೆ

ಸುಬ್ರಹ್ಮಣ್ಯವನ್ನು ಗುರುತಿಸಬಹುದು. ಕೆಳದಿ ಅರಸ ಸದಾಶಿವ ನಾಯಕ ಕ್ರಿ.ಶ.1562ರಲ್ಲಿ ಕುಕ್ಕೇ ಸುಬ್ರಹ್ಮಣ್ಯ ದೇವಳಕ್ಕೆ ಬಳ್ಪ ಗ್ರಾಮವನ್ನು ದಾನ ನೀಡಿದ್ದ.[61] ಕುಕ್ಕೆಯಲ್ಲಿರುವ ಕೆಳದಿ ವೀರಭದ್ರನ ಪ್ರತಿಮೆ, ಹಿರಿಯ ವೆಂಕಟಪ್ಪನಾಯಕ ಇಲ್ಲಿಯ ಬೃಹತ್ ರಥವನ್ನು ನಿರ್ಮಿಸಿದ್ದು, ಇವೆಲ್ಲವೂ ಕೆಳದಿ ಅರಸರು ಈ ಕ್ಷೇತ್ರಕ್ಕೆ ನೀಡಿದ ಮಹತ್ವವನ್ನು ತಿಳಿಸುತ್ತವೆ.[62] ಕ್ರಿ.ಶ. 1709ರ ಸುಬ್ರಹ್ಮಣ್ಯ ಶಾಸನ, ಸುಬ್ರಹ್ಮಣ್ಯ ದೇವರನ್ನು ಸಂತಾನ ಪ್ರಾಪ್ತಿಗೆ ಪೂಜಿಸಲಾಗುತಿತ್ತೆಂದು ವಿವರಿಸುತ್ತದೆ.[63] ಕುಕ್ಕೇ ಸುಬ್ರಹ್ಮಣ್ಯ, ಬಳ್ಳಮಂಜ ಸಮೀಪದ ಬೇಲುಪಾಡಿ, ಕಡಂದಲೆ, ಕುಮಾರಿಂಗಿಲ ಮತ್ತು ಮಂಗೋಡು, ಕಾಟು ಕುಕ್ಕೆ, ಮಂಜೇಶ್ವರ, ಕಂದಾವರ, ಬೇಳುವಾಡಿ (ಕಾಸರಗೋಡಿನ)ಗಳಲ್ಲಿಯೂ ಈ ಆರಾಧನೆ ಪ್ರಬಲವಾಗಿದೆ.ಸೂರಾಲು ಸಮೀಪದ ಅರಬಿ ಮತ್ತು ಕುಂದಾಪುರದ ಕಿರಿಮಂಜೇಶ್ವರದಲ್ಲಿ ಡಕ್ಕೆ ಅಥವಾ ವೈದ್ಯರು ಎನ್ನುವ ಪಂಗಡದವರಿದ್ದು ಅವರು ನಾಗನ ಸಾಂಪ್ರದಾಯಿಕ ಆರಾಧಕರು. ಅವರು ಈ ಭಾಗದ ವಿಶೇಷವಾದ ನಾಗಮಂಡಲವನ್ನು ನಡೆಸಿಕೊಡುತ್ತಾರೆ. ನಾಗನ ವಿಗ್ರಹಗಳನ್ನು ಮೂಡುಬಿದಿರೆ ಕಾರ್ಕಳ ಮಾತ್ರವಲ್ಲದೆ ತುಳುನಾಡಿನ ಎಲ್ಲಾ ಬಸದಿಗಳಲ್ಲಿ ಕಾಣಬಹುದು. ಹಾಗಾಗಿ ನಾಗನ ಆರಾಧನೆ ಎಲ್ಲಾ ಪಂಥಗಳನ್ನು ಒಂದುಗೂಡಿಸಿದೆ ಎನ್ನಬಹುದು.

**ಶಂಕರನಾರಾಯಣ:** ತುಳುನಾಡಿನಲ್ಲಿ ಶಂಕರನಾರಾಯಣನ ಆರಾಧನೆ ಶೈವ ಮತ್ತು ವೈಷ್ಣವ ಪಂಥದ ಸಮ್ಮಿಲನದ ಪ್ರತೀಕವಾಗಿರುವಂತೆ ತೋರುತ್ತದೆ. ಶಾಸನವೊಂದರ ಪ್ರಕಾರ, ಈ ಪಂಥ ಕ್ರಿ.ಶ. 13ನೇ ಶತಮಾನದಿಂದಲೇ ಆರಂಭಗೊಂಡಿರಬೇಕು.[64] ಕುಂದಾಪುರ ತಾಲೂಕಿನ ಕೋಡಗಿ ಶಂಕರನಾರಾಯಣ ಗ್ರಾಮವು ಈ ಆರಾಧನೆಯ ಪ್ರಮುಖ ಕೇಂದ್ರವಾಗಿದೆ. ಇಲ್ಲಿ ಶಂಕರನಾರಾಯಣ 2 ಲಿಂಗಗಳ ಅಥವಾ ಶಿವ ಮತ್ತು ವಿಷ್ಣುವಿನ ಐಕ್ಯದ ರೂಪದಲ್ಲಿ ಆರಾಧಿಸಲ್ಪಡುತ್ತದೆ.[65] ಕೆಳದಿ ಕಾಲದ ಶಾಸನಗಳು, ಈ ಸ್ಥಳದ ಮಹಿಮೆಯನ್ನು ವರ್ಣಿಸುತ್ತವೆ. ಕೆಳದಿ ಶಾಸನವೊಂದು ಶಂಕರನಾರಾಯಣ ಗ್ರಾಮವನ್ನು ತುಳು ರಾಜ್ಯದ ಪವಿತ್ರ ಸ್ಥಳ ಎಂಬುದಾಗಿ ಗುರುತಿಸುತ್ತದೆ.[66] ಕೆಳದಿ ಸದಾಶಿವ ನಾಯಕ ಕ್ರಿ.ಶ.1573 ಮತ್ತು 1583ರಲ್ಲಿ ಈ ದೇವಾಲಯಕ್ಕೆ ದಾನ ನೀಡಿದ್ದ.[67] ಕೆಳದಿ ಬಸವಪ್ಪ ನಾಯಕನ ಆಸ್ಥಾನ ಕವಿ ಸರಜ ನಾಗ, ತನ್ನ ಸುಕಸಪ್ತತಿ ಎಂಬ ಕೃತಿಯಲ್ಲಿ, ಈ ದೇವರನ್ನು ಮಂಗಳವನ್ನು ಉಂಟುಮಾಡುವವನು ಎಂದು ಕರೆದಿದ್ದಾನೆ.[68] ಕ್ರಿ.ಶ.1644ರಲ್ಲಿ, ಬೆಗ್ರು ಒಡೆಯ ಎಂಬವನು, ಕೆಳದಿ ವೀರಭದ್ರ ನಾಯಕ ಈ ಹಿಂದೆ ಈ ದೇವಳಕ್ಕೆ ನೀಡಿದ ದಾನವನ್ನು ಮುಂದುವರಿಸಲು ಸೂಚಿಸಿದ್ದ.[69] ಕೆಳದಿ ಭದ್ರಪ್ಪನೂ ಈ ದೇವಳಕ್ಕೆ ಧನಸಹಾಯ ಮಾಡಿದ್ದ.[70] ಕೆಳದಿ ಸೋಮಶೇಖರ ನಾಯಕ ಈ ದೇವರಿಗೆ ಆಭರಣಗಳನ್ನು ಮಾಡಿಸಿದ್ದು, ಇಂದಿಗೂ ಅವುಗಳನ್ನು ನೋಡಬಹುದಾಗಿದೆ. ಕ್ರಿ.ಶ.1674ರ ಶಾಸನದಲ್ಲಿ ಶಿವಪುರದ ಶಂಕರನಾರಾಯಣ ದೇವಳದ ಬಗ್ಗೆಯೂ ಮಾಹಿತಿ ಲಭ್ಯವಿದೆ.[71] ಕುಮುಟಾ, ಭಟ್ಕಳ, ಮತ್ತು ತುಳುನಾಡಿನ ಉತ್ತರಭಾಗದ ಕೆಲವು ಕಡೆಗಳಲ್ಲಿ ಶಂಕರನಾರಾಯಣ ದೇವಾಲಯವಿದೆಯಾದರೂ, ದಾಖಲೆಯ ಕೊರತೆಯಿಂದ ಇವುಗಳ ಚಾರಿತ್ರಿಕ ವಿಚಾರಗಳನ್ನು ತಿಳಿಯಲು ಸಾಧ್ಯವಿಲ್ಲ.

**ನಾಥ ಪಂಥ:** ಬೌದ್ಧ ಧರ್ಮದ ತಾಂತ್ರಿಕ ರೂಪವೆಂದು ಪರಿಗಣಿಸಲ್ಪಡುವ ಮತ್ತು ಶೈವ ಪಂಥದ ತಾಂತ್ರಿಕ ರೂಪವಾಗಿರುವ ನಾಥ ಪಂಥ ಕರಾವಳಿ ಪ್ರದೇಶದ ಕದ್ರಿ ಮೊದಲಾದ ಸ್ಥಳಗಳಲ್ಲಿ ಬೆಳೆದು ಕ್ರಿ.ಶ.16 ಮತ್ತು 17ನೇ ಶತಮಾನದಲ್ಲಿ ವಾಣಿಜ್ಯ ನಗರಗಳಾದ ಬಾರ್ಕೂರು ಬಸ್ರೂರು ಮತ್ತು ಮಂಗಳೂರುಗಳಿಗೆ ಸೀಮಿತವಾಗಿತ್ತು.[72] ಮಂಗಳೂರಿನ ಕದ್ರಿ. ನಾಥ ಪಂಥದ ಪ್ರಮುಖ ಕೇಂದ್ರವಾಗಿತ್ತು. ಇಲ್ಲಿ ಶಿವ ದೇವಾಲಯವಿದ್ದು, ಗೋರಕ್ಷನಾಥರ ವಿಗ್ರಹವನ್ನು ಕೆತ್ತಲಾಗಿದೆ. ಕ್ರಿ.ಶ. 1622–23ರಲ್ಲಿ ಮಂಗಳೂರಿನ ಮೂಲಕ ಸಾಗಿದ ಪೆಟ್ರೋ ಡೆಲ್ಲಾ ವಲ್ಲೆ ಕದ್ರಿಯಲ್ಲಿದ್ದ ದೇವಾಲಯ ಮತ್ತು ನಾಥಪಂಥ, ಇದರ ಯೋಗಿಗಳ (ಜೋಗಿ) ಮಾಹಿತಿ ನೀಡುತ್ತಾನೆ.[73] ಇಲ್ಲಿಯ ಗುರುಗಳಿಗೆ ದೇವಾಲಯದ ವಿಚಾರದಲ್ಲಿ ಹೆಚ್ಚಿನ ಪ್ರಭಾವವಿತ್ತು. ಆದರೆ ವೆಂಕಟಪ್ಪನ ತೆರಿಗೆ ಹೆಚ್ಚಳದಿಂದ ಈ ಧಾರ್ಮಿಕ ಕೇಂದ್ರಗಳು ಆರ್ಥಿಕ ಮುಗ್ಗಟ್ಟನ್ನು ಎದುರಿಸಿತ್ತು ಅಲ್ಲದೆ ಇಲ್ಲಿಯ ಮುಖ್ಯಸ್ಥರು ಆನೆ ಕುದುರೆ ಪಲ್ಲಕ್ಕಿಗಳಿಂದ ವಂಚಿತರಾದರೆಂದು ತಿಳಿದು ಬರುತ್ತದೆ.

ಈ ಎಲ್ಲಾ ಹಿನ್ನೆಲೆಗಳನ್ನು ನೋಡಿದಾಗ, ಈ ಕಾಲದ ತುಳುನಾಡಿನಲ್ಲಿ ವೈಷ್ಣವ ಶೈವ ಪಂಥದ ಸಂಘರ್ಷಗಳು ದೊಡ್ಡ ಮಟ್ಟದಲ್ಲಿ ಕಾಣಸಿಗುವುದಿಲ್ಲ. ಶೈವ ಮತ್ತು ವೀರಶೈವದ ನಡುವೆ ದೊಡ್ಡ ಮಟ್ಟದ ವ್ಯತ್ಯಾಸವನ್ನೂ ತುಳುನಾಡಿನ ಜನ ಗುರುತಿಸಿದಂತೆ ಕಂಡುಬರುವುದಿಲ್ಲ. ಉದಾರ ಶೈವ ಪಂಥದ ಹಿನ್ನೆಲೆಯಲ್ಲಿ ಶಿವ ದೇವಾಲಯಗಳಲ್ಲಿ ಶಕ್ತಿ, ಗಣಪತಿ ಆರಾಧನೆಯು ಬೆಳೆದು ಬಂತು. ಶಂಕರನಾರಾಯಣನ ಆರಾಧನೆ, ಶಿವನನ್ನು ಮತ್ತು ವಿಷ್ಣುವನ್ನು ಸಮೀಕರಿಸುವ ಪ್ರಯತ್ನವಾಗಿದ್ದಂತೆ ಕಂಡು ಬರುತ್ತದೆ. ಶಂಕರನಾರಾಯಣ ದೇವಾಲಯಗಳು ಕೆಳದಿ ಕಾಲಕ್ಕಿಂತ ಮೊದಲೇ ಸ್ಥಾಪನೆಯಾಗಿವೆಯಾದರೂ ಕೆಳದಿ ರಾಜರುಗಳು ಅವುಗಳಿಗೆ ಕೊಟ್ಟ ಪ್ರೋತ್ಸಾಹ, ಶೈವ ವೈಷ್ಣವ ಪಂಥಗಳ ನಡುವಿನ ಅವರ ಸಮನ್ವಯ ದೃಷ್ಟಿಕೋನವನ್ನು ತೋರಿಸುತ್ತದೆ.

## 7.2 ತುಳುನಾಡಿನಲ್ಲಿ ವೀರಶೈವ ಪ್ರಸರಣ

ತುಳುನಾಡಿನಲ್ಲಿ ವೀರಶೈವರ ಮೊದಲ ಹೆಜ್ಜೆ ಗುರುತುಗಳನ್ನು ಕ್ರಿ.ಶ.13ನೇ ಶತಮಾನದಲ್ಲೇ ಗುರುತಿಸಬಹುದಾಗಿದೆ. ಕ್ರಿ.ಶ.13ನೇ ಶತಮಾನದ ಬಾರ್ಕೂರು ಸೋಮೇಶ್ವರ ದೇವಳದ ಶಾಸನ,[74] ಇಲ್ಲಿಯ ದೊರೆ, ಶ್ರೀಮತ್ ಗಗನ ಶಿವಾಚಾರ್ಯರಿಗೆ ದಾನ ನೀಡಿದ ವಿಚಾರವನ್ನು ತಿಳಿಸುತ್ತದೆ. ಇದರಲ್ಲಿ ಬರುವ ಗುರುಗಳ ಉಪಾಧಿ ಹಾಗೂ ಹೆಸರು ನೋಡಿದರೆ ವೀರಶೈವ ಸಂಪ್ರದಾಯದ ಗಗನ ಶಿವಾಚಾರ್ಯರ ಮಠಕ್ಕೆ ದಾನವಾದಂತೆ ತೋರುತ್ತದೆ. ಈ ಶಾಸನ, ಬಾರ್ಕೂರು, ವೀರಶೈವ ಪರಿಸರದ ನೆಲೆಯಾಗಿ ಹೊಯ್ಸಳರ ಕಾಲಕ್ಕೆ ಇದ್ದಿರುವ ಸೂಚನೆಯಾಗಿದೆ. 'ಉದ್ಭಟ ಕಾವ್ಯ' ಎಂಬ ಚಂಪೂಕಾವ್ಯವನ್ನು ರಚಿಸಿದ ತುಳುನಾಡಿನ ಸೋಮರಾಜ ಎಂಬ ಕವಿಯು ತನ್ನ ಕಾವ್ಯದಲ್ಲಿ ಅಲ್ಲಮಪ್ರಿಯನೆಂದು ಪ್ರಾಚೀನ ವೀರಶೈವ

ಸಂತರ ಅಂಕಿತವನ್ನಿಟ್ಟುಕೊಂಡು ಪದ್ಯವನ್ನು ಬರೆದಿರುವನು.[75] ಬಸವಣ್ಣನವರ ಪವಾಡಗಳನ್ನು ನೋಡಬರುತ್ತಿದ್ದ ಶಿವಶರಣರಲ್ಲಿ ತುಳುನಾಡಿನವರೂ ಇದ್ದರೆಂದು ವಿರೂಪಾಕ್ಷ ಕವಿಯ ಚನ್ನಬಸವ ಪುರಾಣದ ಪದ್ಯದಲ್ಲಿ ಹೇಳಲಾಗಿದೆ.[76]

**ಅಂಗಮಲೆಯಾಳ ಮಾಳವ ಮಗಧ ಬರ್ಬರ ಕ ।**
**ಳಿಂಗ ಕಾಶ್ಮೀರ ಕೊಂಕಣ ಸಿಂಧುಹಮ್ಮೀರ ।**
**ವಂಗ ಹೊಯ್ಸಳ ತುಳುವ ಚೋಳ ಚೇರ ನು ।**

ಹೊಯ್ಸಳ ದೊರೆ 4ನೇ ಬಲ್ಲಾಳನೆಂದು ಖ್ಯಾತನಾದ ವೀರವಿರೂಪಾಕ್ಷನು ವೀರಬಲ್ಲಾಳನ ಮಗನಾಗಿದ್ದು ತಂದೆಯ ಅವಸಾನದ ಬಳಿಕ ಕ್ರಿ.ಶ. 1342ರಲ್ಲಿ ಪಟ್ಟವೇರಿದ್ದನು. ಈತನು ತನ್ನ ದಿಗ್ವಿಜಯದ ಕಾಲದಲ್ಲಿ ಹರದನಹಳ್ಳಿಯ ಶ್ರೀ ಗೋಸಲಾಚಾರ್ಯ[77] ಎಂಬ ವೀರಶೈವ ಜಂಗಮನಿಗೆ ಬರೆಸಿಕೊಟ್ಟ ಎರಡು ತಾಮ್ರಶಾಸನಗಳಿವೆ,[78] ಒಂದರಲ್ಲಿ, "ತುಳುವ ದೇಶಕ್ಕೆ ಬಂದು ತುಲಕಾಣ್ಯರಿಗೆ ಮಹಿಮೆಯಂ ತೋರಿ ಶತಪವಾಡ ಮಹನೀಯರೆಂದು ಬಿರುದಂ ಪಡೆದ ಶ್ರೀಮದ್ ಗೋಸಲಾರ್ಯವರ್ಯ" ಎಂಬ ವಾಕ್ಯವಿದೆ. ಇದು ಗೋಸಲಸ್ವಾಮಿಯು ತುಳುನಾಡಿಗೆ ಬಂದ ಉಲ್ಲೇಖವಾಗಿದೆ. ಈ ವೀರಶೈವ ಸಂತನು ಇಲ್ಲಿಗೆ ಬಂದು ತನ್ನ ಮಾಂತ್ರಿಕ ಶಕ್ತಿಯನ್ನು ಪ್ರದರ್ಶಿಸಿ ಜನರನ್ನು ತನ್ನೆಡೆಗೆ ಆಕರ್ಷಿಸಿದ್ದನು. ಹೀಗೆ ಹೊಯ್ಸಳರ ಕಾಲದಲ್ಲಿಯೇ ತುಳುನಾಡಿನಲ್ಲಿ ವೀರಶೈವ ಧರ್ಮವು ಪರಿಚಯಿಸಲ್ಪಟ್ಟಿತು. ಮುಂದೆ ಮಂದಗತಿಯಲ್ಲಿ ಪ್ರಸರಣ ಹೊಂದಿ ಉತ್ತರ ತುಳುನಾಡಿನಲ್ಲಿ ಹರಡಿತು. ಶಾಸನಗಳಮಾಹಿತಿಯ ಹಿನ್ನೆಲೆಯಲ್ಲಿ ಕೋಟೀಶ್ವರವು ವೀರಶೈವರ ಮೊದಲ ಕೇಂದ್ರವಾಗಿರಬೇಕೆಂದು ತಿಳಿಯಲು ಅವಕಾಶಗಳಿವೆ.[79]

ಕ್ರಿ.ಶ.16ನೇ ಶತಮಾನಕ್ಕಿಂತ ಮೊದಲು ಅಂದರೆ ಕೆಳದಿ ಅರಸರು ತುಳುನಾಡನ್ನು ಆಳುವ ಮೊದಲು ವ್ಯಾಪಾರಿಗಳ, ಸೈನಿಕರ, ಜಂಗಮರ ಹಾಗೂ ವಿಜಯನಗರ ಅಧಿಕಾರಿಗಳ ಮೂಲಕ ಕೋಟೇಶ್ವರ, ಬಸ್ರೂರು ಮೊದಲಾದ ಕಡೆಗಳಲ್ಲಿ ವೀರಶೈವ ಧರ್ಮವು ಪಸರಿಸಿತ್ತು.[80] ಈ ಜಂಗಮರು ಇಲ್ಲಿ ಖಾಯಂ ಆಗಿ ನೆಲೆಯೂರಿದ್ದರು ಎಂದು ತಿಳಿಯುತ್ತದೆ. ಬಾರ್ಕೂರಿನ ಕೆಲವೊಂದು ವಿಜಯನಗರದ ಅಧಿಕಾರಿಗಳೂ, ಬಾರ್ಕೂರು ರಾಜ್ಯದಲ್ಲಿ ವೀರಶೈವ ಧರ್ಮವನ್ನು ಪ್ರೋತ್ಸಾಹಿಸಿದರು.[81] ಹೀಗೆ ಹಂತ ಹಂತವಾಗಿ ಬೆಳೆದ ವೀರಶೈವ ಧರ್ಮವು ತುಳುನಾಡಿನಲ್ಲಿ ಈಗಾಗಲೇ ಇದ್ದಂತಹ ಶಿವಾಲಯಗಳ ಮೇಲೆ ಬಹಳಷ್ಟು ಪ್ರಭಾವವನ್ನು ಬೀರಿತು. ಮೂಡಬಿದಿರೆಯ ಕವಿ ರತ್ನಾಕರವರ್ಣಿಯೂ ಒಂದು ಕಾಲದಲ್ಲಿ ವೀರಶೈವನಾಗಿದ್ದ ಎನ್ನುವುದು ಈ ಪಂಥ ಇಲ್ಲಿ ಹರಡಿರಬೇಕು ಎಂಬುದಕ್ಕೆ ಪುಷ್ಠಿಯನ್ನೊದಗಿಸುತ್ತದೆ.[82] ಹೀಗೆ ವಿಜಯನಗರ ರಾಜ ಪ್ರತಿನಿಧಿಗಳ ಪ್ರೋತ್ಸಾಹದೊಂದಿಗೆ ತುಳುನಾಡಿನಲ್ಲಿ ವೀರಶೈವ ಧರ್ಮವು ಒಂದು ಪ್ರಭಾವೀ ಧರ್ಮವಾಗಿ ಬೆಳೆಯಿತು. ತುಳುನಾಡನ್ನಾಳಿದ ವಿಜಯನಗರ ರಾಜ್ಯಪಾಲರುಗಳಲ್ಲಿ ಲಿಂಗರಸ, ವಿರುಗಪ್ಪ, ಬಸವಣ್ಣ ಮೊದಲಾದವರು ವೀರಶೈವರಾಗಿದ್ದರು ಎಂಬುದು ವೀರಶೈವರು ರಾಜಪ್ರತಿನಿಧಿಗಳಾಗಿಯೂ ಪ್ರಭಾವೀ ವ್ಯಕ್ತಿಗಳಾಗಿ ಇಲ್ಲಿ ನೆಲೆನಿಂತಿದ್ದರು ಎಂಬುದನ್ನು ತಿಳಿಸುತ್ತದೆ. ಹೀಗೆ ಹೊಯ್ಸಳರ ಕಾಲದಲ್ಲಿ ಪರಿಚಯಿಸಲ್ಪಟ್ಟ

ವೀರಶೈವ ಧರ್ಮವು ವಿಜಯನಗರ ಕಾಲದಲ್ಲಿ ಉಡುಪಿ ಜಿಲ್ಲೆಯ ಬಾರ್ಕೂರು, ಕೋಟೇಶ್ವರ, ಬಸ್ರೂರು, ಕುಂದಾಪುರಗಳನ್ನು ಕೇಂದ್ರವಾಗಿಟ್ಟುಕೊಂಡು ಹೆಚ್ಚು ಪ್ರಭಾವಶಾಲಿಯಾಗಿ ಬಾರ್ಕೂರು ರಾಜ್ಯಾದ್ಯಂತ ಹರಡಿತ್ತು ಎಂಬುದು ತಿಳಿಯುತ್ತದೆ.

**ಕೆಳದಿ ಅರಸರ ಕಾಲದಲ್ಲಿ ವೀರಶೈವ ಧರ್ಮ**

ತುಳುನಾಡನ್ನಾಳಿದ ಕೆಳದಿ ಅರಸರು ವೀರಶೈವ ಮತಾವಲಂಬಿಗಳಾಗಿದ್ದರು. ಇವರ ಆಡಳಿತದ ಸುಮಾರು 250 ವರ್ಷಗಳು ತುಳುನಾಡಿನಲ್ಲಿ ವೀರಶೈವ ಧರ್ಮದ ಇತಿಹಾಸದಲ್ಲಿ ಉಚ್ಛ್ರಾಯಕಾಲ. ಬಹುತೇಕವಾಗಿ ಈಗಾಗಲೇ ಇಲ್ಲಿ ಹರಡಿದ್ದ ಶೈವ ಧರ್ಮದ ಜೊತೆಯಲ್ಲಿ ವೀರಶೈವ ಧರ್ಮವೂ ಬೆಳೆಯಿತು. ಹೊಯ್ಸಳ, ವಿಜಯನಗರ ಅರಸರ ಕಾಲದಲ್ಲಿ ಸ್ಥಾಪಿತವಾದ ವ್ಯಾಪಾರೀ ಕೇಂದ್ರಗಳು ಈಗ ವೀರಶೈವ ಧಾರ್ಮಿಕ ಚಟುವಟಿಕೆಗಳ ಕೇಂದ್ರವಾದವು. ಇದಲ್ಲದೆ ಈ ವಂಶದ ಅರಸರು, ಈಗಾಗಲೇ ಪೂಜಿಸಲ್ಪಡುತ್ತಿದ್ದ ಶಿವಾಲಯಗಳಿಗೆ ಸಾಕಷ್ಟು ದಾನಧರ್ಮಗಳನ್ನು ನೀಡಿ ಶಿವಾರಾಧನೆಯನ್ನು ಪ್ರೋತ್ಸಾಹಿಸಿದರು. ಶಿವಾರಾಧನೆಯ ಜೊತೆಗೆ ವೀರಭದ್ರ, ಭೈರವ, ಬಸವ (ನಂದಿ) ಹಾಗೂ ಭೂತಾರಾಧನೆ ಮೊದಲಾದ ಶಿವಗಣಾರಾಧನೆ, ಮುಂಚೂಣಿಗೆ ಬಂತು.

ಕೆಳದಿ ಅರಸ ಸದಾಶಿವ ನಾಯಕನು ಈ ನಾಡಿನಲ್ಲಿ ಅನೇಕ ಜಂಗಮ ಮಠಗಳನ್ನು ಸ್ಥಾಪಿಸಿದನು.[83] ಕ್ರಿ.ಶ.1562ರ ಶಂಕರನಾರಾಯಣದಲ್ಲಿರುವ ಶಾಸನವು ತಿಳಿಸುವಂತೆ ಅಲ್ಲಿ ಕೆಳದಿ ಸದಾಶಿವನಾಯಕ ವಿರೂಪಾಕ್ಷ ದೇವರಿಗೆ ಒಂದು ಮಠವನ್ನು ಕಟ್ಟಿಸಿದನು ಹಾಗೂ ಭೂದಾನವನ್ನು ನೀಡಿದನು.[84] ಹಾಗೆಯೇ ಕೆಳದಿ ನಾಯಕರ ಕೈಕೆಳಗೆ ದುಡಿಯುತ್ತಿದ್ದಂತಹ ಕೆಲವೊಂದು ಅಧಿಕಾರಿಗಳು ಇಲ್ಲಿರುವ ಶಿವಾಲಯಗಳಿಗೆ ಹಣವನ್ನು ಮತ್ತು ಭೂಮಿಯನ್ನು ದಾನವಾಗಿ ನೀಡಿದ್ದರು. ವೀರಶೈವ ಪ್ರಭಾವದಿಂದ ಪೂಜಿಸಲ್ಪಡುವ ಸಿದ್ದೇಶ್ವರ ದೇವಾಲಯಕ್ಕೂ ಗಣ್ಯ ವ್ಯಕ್ತಿಗಳು ದಾನವನ್ನು ನೀಡಿದ್ದರು ಹೀಗೆ ಆಳುವರಸರಿಂದ, ಅಧಿಕಾರಿಗಳಿಂದ ಹಾಗೂ ಗಣ್ಯ ವ್ಯಕ್ತಿಗಳಿಂದ ವೀರಶೈವ ಧರ್ಮಾನುಯಾಯಿಗಳಿಗೆ ದಾನಧರ್ಮಗಳು ನಡೆದಿದ್ದವು.

ಕೆಳದಿ ಅರಸ ವೆಂಕಟಪ್ಪ ನಾಯಕನ ಕಾಲದಲ್ಲಿ ತುಳುನಾಡಿನ ವೀರಶೈವ ಧರ್ಮವು ರಾಜಾಶ್ರಯದೊಂದಿಗೆ ಒಂದು ಪ್ರಭಾವೀ ಧರ್ಮವಾಗಿ ಪಸರಿಸಿತು. ಕವಿ ಲಿಂಗಣ್ಣನು ತಿಳಿಸುವಂತೆ ಕೆಳದಿ ವೆಂಕಟಪ್ಪ ನಾಯಕನು ಬಾರ್ಕೂರು, ಬಲ್ಲೆಹಳ್ಳಿ, ಬೋಳೂರು, ಶಂಕರನಾರಾಯಣ ಮತ್ತು ಮಂಗಳೂರುಗಳಲ್ಲಿ ಜಂಗಮ ಮಠಗಳನ್ನು ಸ್ಥಾಪಿಸಿದನು.[85] ಗಣಪತಿರಾವ್ ಐಗಳ್‌ರವರು ತಿಳಿಸುವಂತೆ ಈ ನಾಡಿನ ಜಂಗಮ ಮಠಗಳಿಗೆ ಬಲ್ಲೇಹಳ್ಳಿ ಮಠವು ಕೇಂದ್ರಸ್ಥಾನವಾಗಿತ್ತು. ಕೆಳದಿ ವೆಂಕಟಪ್ಪ ನಾಯಕನು ಈ ಮಠಗಳಿಗೆ ಶೃಂಗೇರಿ, ಬಾಳೇಹಳ್ಳಿ ಮತ್ತು ಇತರ ಮಠಗಳಿಗೆ ನೀಡುವಂತೆ ಉಂಬಳಿ ಮತ್ತು ದತ್ತಿಗಳನ್ನು ನೀಡುತ್ತಿದ್ದನು. ದಾಖಲೆಗಳು ತಿಳಿಸುವಂತೆ ಕ್ರಿ.ಶ.1616ರಲ್ಲಿ ಈತನು $105^1/_2$ ವರಹ ಮತ್ತು 1 ಹಣದಷ್ಟು ಭೂಕಂದಾಯವನ್ನು

ಕೊಲ್ಲೂರಿನ ಮಹತ್ತಿನ ಮಠಕ್ಕೆ ದಾನವಾಗಿ ನೀಡಿದನು.[86] ಅದೇ ವರ್ಷದ ಇನ್ನೊಂದು ದಾಖಲೆಯಂತೆ ವೆಂಕಟಪ್ಪ ನಾಯಕನು 1300 ಅಡಿಕೆ ಮತ್ತು 70 ತೆಂಗಿನಮರ ಬೆಳೆಯುವ ಭೂಮಿಯನ್ನು ಓರ್ವ ಜಂಗಮ ಗುರುವಿಗೆ ದಾನವಾಗಿ ನೀಡಿದ್ದನು.[87]

ತುಳುನಾಡಿನ ವೀರಶೈವ ಪಂಥದ ಇತಿಹಾಸದಲ್ಲಿ ಒಂದು ವಿಶೇಷ ಬೆಳವಣಿಗೆಯು ಕೆಳದಿ ವೆಂಕಟಪ್ಪ ನಾಯಕನ ಕಾಲದಲ್ಲಾಯಿತು. ಅದೇನೆಂದರೆ ತುಳುನಾಡಿನಲ್ಲಿ ಆಗ ಅಸ್ತಿತ್ವದಲ್ಲಿದ್ದ ಸಕಲ ವೀರಶೈವ ಮಠಗಳನ್ನು ಒಂದು ವ್ಯವಸ್ಥಿತ ಆಡಳಿತದ ಹತೋಟಿಗೆ ಒಳಪಡಿಸಿ ವೀರಶೈವ ಧರ್ಮದ ವ್ಯಾಪಕ ಪ್ರಚಾರಕ್ಕಾಗಿ ಅನುಕೂಲಗಳನ್ನು ಕಲ್ಪಿಸಿಕೊಡಲಾಯಿತು. ಇವುಗಳೆಲ್ಲವನ್ನೂ ಸೇರಿಸಿ ಮಹಾಮತ್ತು ಅಂದರೆ ಮಹಾಮತ್ತಿನ ಒಳಗಡೆ ಮಹತ್ತು ಎಂಬ ಒಂದು ಆಡಳಿತ ವ್ಯವಸ್ಥೆಯನ್ನು ಮಾಡಲಾಯಿತು. ಕ್ರಿ.ಶ.1623ರ ಎರಡು ದಾಖಲೆಗಳು ತಿಳಿಸುವಂತೆ ಕೊಲ್ಲೂರು ಮತ್ತು ಬಾರ್ಕೂರಿನ ಜಂಗಮ ಮಠಗಳು ಮಹಾಮತ್ತಿನ ಮಠದ ಆಡಳಿತಕ್ಕೆ ಒಳಪಟ್ಟಿದ್ದವು.[88]

ವೀರಭದ್ರ ನಾಯಕನೂ ಈ ಭಾಗದಲ್ಲಿ, ವೀರಶೈವ ಧರ್ಮದ ಪೋಷಣೆಯನ್ನು ಮುಂದುವರಿಸಿದನು. ಇವನು ಉಡುಪಿ ಜಿಲ್ಲೆಯ ಉಪ್ಪೂರಿನಲ್ಲಿ ಮತ್ತು ಕುಂದಾಪುರ ತಾಲೂಕಿನ ಹಳೇಕೇರಿ ಎಂಬಲ್ಲಿನ ಜಂಗಮ ಮಠಗಳಿಗೆ ಹಣ ಮತ್ತು ಭೂಮಿಯನ್ನು ದಾನವಾಗಿ ನೀಡಿದ್ದನು ಎಂಬ ವಿಚಾರವು ಕ್ರಿ.ಶ.1632 ಮತ್ತು 1638ರ ಶಾಸನದಿಂದ ತಿಳಿದುಬರುತ್ತದೆ.[89] ವೀರಭದ್ರನ ಕಾಲದಲ್ಲಿ ಹುಟ್ಟಿಕೊಂಡ ಒಂದು ವಿಶಿಷ್ಟ ಸಂಪ್ರದಾಯದಂತೆ ಕೆಲವು ವೀರಶೈವರು ವೈಯಕ್ತಿಕ ನೆಲೆಯಲ್ಲಿ ಸ್ಥಾಪಿಸಿದ ಮಠಗಳಿಗೆ ವೀರಭದ್ರನಾಯಕನು ಮಾನ್ಯತೆಯನ್ನು ನೀಡಿದುದು ಮಾತ್ರವಲ್ಲದೆ ಭೂಮಿಯನ್ನು ದಾನವಾಗಿ ನೀಡಿ ಧನ ಸಹಾಯವನ್ನು ಮಾಡುತ್ತಿದ್ದನು. ಸಣ್ಣಣ್ಣ ಎಂಬುವನು ಕುಂದಾಪುರ ತಾಲೂಕಿನ ಹಲಗೇರಿ ಎಂಬಲ್ಲಿ ಕ್ರಿ.ಶ.1638ರಲ್ಲಿ ಜಂಗಮ ಮಠವೊಂದನ್ನು ಸ್ಥಾಪಿಸಿದನು. ಕೆಳದಿ ವೀರಭದ್ರನ ಆಜ್ಞೆಯಂತೆ ಸಮೀಪದ ಬಿಜೂರು ಮತ್ತು ಕೆರ್ಗಲ್ ಎಂಬ ಹಳ್ಳಿಗಳಿಂದ 119 ಗದ್ಯಾಣಗಳಷ್ಟು ಆದಾಯವನ್ನು ಈ ಮಠಕ್ಕೆ ನೀಡಲಾಗಿತ್ತು.[90] ಕ್ರಿ.ಶ. 1641ರಲ್ಲಿ ಬಸವಣ್ಣನೆಂಬುವವನು ಬಸ್ರೂರಿನಲ್ಲಿ ಒಂದು ಜಂಗಮ ಮಠವನ್ನು ಸ್ಥಾಪಿಸಿದನು ಮತ್ತು ಈ ಮಠವನ್ನು ಮಹಾಮತ್ತು ಮಠದ ಅಧೀನಕ್ಕೆ ಒಳಪಡಿಸಲಾಯಿತು. ಈ ಮಠದ ಧರ್ಮಕ್ಕೆಂದು ಆದಿಮಲೆ ಸೀಮೆಯ ಬಜ್ಜಿಹಳ್ಳಿ ಎಂಬ ಗ್ರಾಮದಿಂದ 67 ವರಹ ಮತ್ತು ಒಂದು ಹಣವನ್ನು ದಾನವಾಗಿ ನೀಡಲಾಯಿತು.[91] ಕ್ರಿ.ಶ. 1641ರಲ್ಲಿ ಸ್ಥಳೀಯ ಬಸ್ರೂರಿನ ಜೈನ ವರ್ತಕರಿಂದಲೂ ಈ ಮಠಕ್ಕೆ ಭೂದಾನವನ್ನು ನೀಡಲಾಗಿತ್ತು.[92]

ಕೆಲವೊಂದು ಮಹಿಳೆಯರೂ ಮಠಗಳ ಸ್ಥಾಪನೆಗೆ ಮುಂದಾದರು. ಹಾಗೂ ಇಂತಹ ಮಠಗಳಿಗೂ ಕೆಳದಿ ಅರಸರು ಕೊಡುಗೈ ದಾನವನ್ನು ನೀಡಿದರು. ಕ್ರಿ.ಶ. 1641 ರಲ್ಲಿ ಮಹಾಮತ್ತು ಮಠದ ವ್ಯವಸ್ಥೆಯ ಅಡಿಯಲ್ಲಿ ಸೋಮೇಶ್ವರ ಎಂಬಲ್ಲಿ ಸಿದ್ದಮ್ಮಳ ಹೆಸರಿನಲ್ಲಿ ಮಠವೊಂದನ್ನು ಕಟ್ಟಲಾಯಿತು. ಈ ಮಠದ ಪೂಜಾದಿಗಳಿಗೆ ಕೆಳದಿ ವೀರಭದ್ರ ನಾಯಕ 53 ವರಹಗಳ ಕಂದಾಯ ಬರುವ ಭೂಮಿಯನ್ನು ದಾನ

ನೀಡಿದ್ದ.[93] ಕೆಳದಿ ಸೋಮಶೇಖರ ನಾಯಕನ ಹತ್ತಿರದ ಸಂಬಂಧಿಯಾದ ಪರಮೇಶ್ವರಮ್ಮ ಎಂಬುವಳು ಕ್ರಿ.ಶ.1665ರಲ್ಲಿ ಕೋಟೇಶ್ವರದಲ್ಲಿ ಜಂಗಮ ಮಠವೊಂದನ್ನು ಕಟ್ಟಿಸಿ ಆ ಮಠಕ್ಕೆ 100 ವರಹ ಆದಾಯ ಬರುವ ಬಾರ್ಕೂರು ಹೋಬಳಿಯ ನಲ್ವತ್ತುನಾಡು ಸೀಮೆಯ ಭೂಮಿಯನ್ನು ದಾನವಾಗಿ ನೀಡಲಾಯಿತು. ಈ ಮಠದಲ್ಲಿ ಷಡ್ದರ್ಶನದ ಅಧ್ಯಯನಕ್ಕಾಗಿ ತೆರಿಗೆ ಇಲ್ಲದೆ ಏಕಗಂಟಿನಲ್ಲಿಯೇ ಒಂದು ಗಾಡಿ ಅಡಿಕೆ ಹಾಗೂ 6 ಮಣ ಕರಿಮೆಣಸನ್ನು ದಾನವಾಗಿ ನೀಡಲಾಯಿತು.[94] ಕ್ರಿ.ಶ. 1723ರಲ್ಲಿ ಬಂಟ್ವಾಳ ಸೀಮೆಯ ಕುಳಿಯಾಳ ಮೇಡು ಗ್ರಾಮದಲ್ಲಿ ನಿರ್ವಾಣಯ್ಯನ ಪ್ರಭಾವದಿಂದ 34 ವರಹಗಳಷ್ಟು ಬೆಲೆಬಾಳುವ ಉತ್ತಾರವನ್ನು ವ್ಯವಸ್ಥೆ ಮಾಡಲಾಯಿತು. ಇದನ್ನು ಸೋಮಶೇಖರ ನಾಯಕನ ಸೊಸೆ ವೀರಮ್ಮಳು ನಿರ್ಮಿಸಿದ ವಿರಕ್ತ ಮಠಕ್ಕೆ ಹಸ್ತಾಂತರಿಸಲಾಯಿತು.[95] ಸ್ಥಳೀಯ ಮಾಹಿತಿಯಂತೆ ಗುಜ್ಜಾಡಿಯಲ್ಲಿ ಮೂರು ಜಂಗಮ ಮಠಗಳಿದ್ದವು. ಹಾಗೂ ಅವುಗಳಲ್ಲೊಂದು ವಿರಕ್ತ ಗೌರಮ್ಮನ ಮಠ.[96]

ಕ್ರಿ.ಶ. 17ನೇ ಶತಮಾನದ ಉತ್ತರಾರ್ಧದಲ್ಲಿ ಉಡುಪಿ ಜಿಲ್ಲೆಯ ಉತ್ತರ ಭಾಗದದಲ್ಲಿ ವೀರಶೈವ ಧರ್ಮವು ಹಿರಿಯ ಸೋಮಶೇಖರ ನಾಯಕನ ನಾಯಕತ್ವದಲ್ಲಿ ಪ್ರಸರಣಗೊಂಡಿತು. ಕ್ರಿ.ಶ. 1668ರ ಶಾಸನವು ಉಡುಪಿಯ ಮೂಳೂರಿನಲ್ಲಿ ಕಟ್ಟಿಸಿದ ಜಂಗಮ ಮಠಕ್ಕೆ ಕೆಳದಿ ಸೋಮಶೇಖರ ನಾಯಕನು 120 ಗದ್ಯಾಣಗಳ ಧನಸಹಾಯ ನೀಡಿದ್ದನ್ನು ತಿಳಿಸುತ್ತದೆ.[97] ಕೋಟೇಶ್ವರ, ಕೊಲ್ಲೂರು ಹಾಗೂ ಇತರ ಜಂಗಮ ಮಠಗಳು ಕೆಳದಿ ನಾಯಕರ ಕಾಲದಲ್ಲಿ ರಾಜಾಶ್ರಯದೊಂದಿಗೆ ಭೂದಾನವನ್ನೂ ಗದ್ಯಾಣಗಳನ್ನೂ ಪಡೆದು ಪ್ರಸಿದ್ಧಿಯನ್ನು ಹೊಂದಿದ್ದವು.[98] ಮೇಲಿನ ಅಂಶವನ್ನು ಗಮನಿಸಿದಾಗ ಕೋಟೇಶ್ವರವು ಅತಿ ಪುರಾತನ ಷಡ್ದರ್ಶನ ಕೇಂದ್ರವಾಗಿ, ಈ ನಾಡಿನಲ್ಲಿ ವೀರಶೈವ ಚಟುವಟಿಕೆಯನ್ನು ಪ್ರೋತ್ಸಾಹಿಸಿತು ಎಂದು ತಿಳಿಯಬಹುದು.

ಸ್ಥಳೀಯ ತುಂಡರಸರು ಜೈನ ಧರ್ಮೀಯರಾದರೂ ವೀರಶೈವ ಧರ್ಮಕ್ಕೆ ಪ್ರೋತ್ಸಾಹ ನೀಡಿದರು. ಸೂರಾಲಿನ ತೋಳಹ ವಂಶಸ್ಥರ ಕಾಲದ ಕೆಲವೊಂದು ಶಾಸನಗಳು ತಿಳಿಸುವಂತೆ ಸೂರಾಲಿನ ಅರಸರುಗಳು ಜೈನ ಧರ್ಮೀಯರಾದರೂ ವೀರಶೈವ ಧರ್ಮಕ್ಕೆ ಪ್ರೋತ್ಸಾಹವನ್ನು ನೀಡಿದರು. ಕ್ರಿ.ಶ. 1691ರ ಶಾಸನವು ತಿಳಿಸುವಂತೆ ತೋಳಹ ಅರಸನು ಮಹಾಲಿಂಗ ಎಂದು ಹೆಸರಿಸಲ್ಪಟ್ಟಿದ್ದನು ಮತ್ತು ರೇವಣ ಸಿದ್ಧದೇವನು ಈ ತೋಳಹ ಅರಸನಿಂದ ಭೂದಾನವನ್ನು ಪಡೆದಿದ್ದನು.[99] ಹಾಗೆಯೇ, ಪರ್ವತ ದೇವನೆಂಬವನಿಗೆ ತೋಳಹ ರಾಣಿಯು ನೀಡಿದ ದಾನದ ವಿವರವೂ ದೊರೆಯುತ್ತದೆ. ಕ್ರಿ.ಶ. 1725ರ ಶಾಸನವು ತಿಳಿಸುವಂತೆ ತೋಳಹ ಅರಸರು ಕ್ರಿ.ಶ. 18ನೇ ಶತಮಾನದಿಂದೀಚೆಗೆ ವೀರಶೈವ ಧರ್ಮಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ನೀಡಿದ್ದರು.[100] ಶಾಸನಾಧಾರದಂತೆ, ಬೆಳ್ತಂಗಡಿ ಬಳಿಯ ಬೈಲಂಗಡಿಯ ಮೂಲರಸರೂ, ದಾನದ ಮೂಲಕ ವೀರಶೈವ ಧರ್ಮವನ್ನು ಪ್ರೋತ್ಸಾಹಿಸಿದ್ದರು.[101] ಕ್ರಿ.ಶ. 17ನೇ ಶತಮಾನದ ಕೊನೆಯ ಭಾಗದಲ್ಲಿ ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ವಂಡ್ಸೆ, ಗುಜ್ಜಾಡಿ, ನಾಗೂರು, ಹಲಸನಾಡು ಮೊದಲಾದ

ಪ್ರದೇಶಗಳಲ್ಲಿ ವೀರಶೈವ ಮಠಗಳು ಸ್ಥಾಪನೆಯಾದವು.102 ಗುಹೇಶ್ವರ ದೇವಾಲಯದಲ್ಲಿರುವ ಶಾಸನದಿಂದ ತಿಳಿಯುವಂತೆ ಕ್ರಿ.ಶ.1709ರಲ್ಲಿ ಸಿದ್ದಬಸವಯ್ಯನೆಂಬವನು ಈ ಮಠಗಳಿಗೆ ದಾನ ಧರ್ಮಗಳನ್ನು ನೀಡಿದ್ದನು.[103] ಬಸವಪ್ಪನಾಯಕನ ಕಾಲದಲ್ಲಿ ಉಡುಪಿ ಜಿಲ್ಲೆಯ ಕಲ್ಯಾಣಪುರದಲ್ಲಿ ಕಟ್ಟಲ್ಪಟ್ಟ ಮಠಕ್ಕೆ ಕೆಳದಿ ಬಸವಪ್ಪನಾಯಕನು ನೀಡುತ್ತಿದ್ದ ಉತ್ತಾರವನ್ನು 88 ವರಹಗಳಿಗೆ ಏರಿಸಿದನು.[104]

ಕೆಳದಿ ಸಾಮ್ರಾಜ್ಯದ ಕೆಲವು ಪ್ರಭಾವಿ ವ್ಯಕ್ತಿಗಳು ರಾಜರಿಂದ ದಾನ ದತ್ತಿಗಳನ್ನು ಕೊಡಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದರು. ಕೆಳದಿ ನೃಪವಿಜಯದಿಂದ ತಿಳಿಯುವಂತೆ ಸೋಮಶೇಖರ ನಾಯಕನ ಕಾಲದಲ್ಲಿ ನಿರ್ವಾಣಯ್ಯ ಎನ್ನುವ ರಾಜನ ಸಂಬಂಧಿಕ ಬಹಳಷ್ಟು ಪ್ರಭಾವವನ್ನು ಹೊಂದಿದ್ದನು.[105] ಉಡುಪಿ ಜಿಲ್ಲೆಯ ಹೆಬ್ರಿ ಸೋಮೇಶ್ವರ ಸಮೀಪದ ಸೀತಾ ನದಿ ದಡದಲ್ಲಿ ಕೆಂಚನೆಂಬವನಿಂದ ಕಟ್ಟಲ್ಪಟ್ಟಿದ್ದ ವಿರಕ್ತ ಮಠದಿಂದ ಕ್ರಿ.ಶ.1719ರಲ್ಲಿ ಹೆಚ್ಚಿನ ಉಂಬಳಿಗಾಗಿ ಬಂದಂತಹ ಮನವಿಯನ್ನು ಸ್ವೀಕರಿಸಿದ ಸೋಮಶೇಖರ ನಾಯಕನು, ನಿರ್ವಾಣಯ್ಯನ ಶಿಫಾರಸ್ಸಿನ ಮೇರೆಗೆ, ಮಠದ ಪಕ್ಕದ ಜಾಗವನ್ನು ಮಾರಿ 594 ವರಹ ಮತ್ತು 1 ಧನವನ್ನು ದಾನವಾಗಿ ನೀಡಿದನು.[106] ಅದೇ ನಿರ್ವಾಣಯ್ಯನ ಶಿಫಾರಸ್ಸಿನಂತೆ ಕೊಲ್ಲೂರಿನ ಮಹತ್ತಿನ ಮಠಕ್ಕೆ ಮೂರೂವರೆ ವರಹ ಮತ್ತು ಪಕ್ಕದ ಹಳ್ಳಿಯನ್ನು ಅರಸ ಸೋಮಶೇಖರ ನಾಯಕನು ಉತ್ತಾರವಾಗಿ ನೀಡಿದ್ದನು.[107] ನಿರ್ವಾಣಯ್ಯ ಸ್ವತಃ ಹಿರೇ ಬಗ್ಗುಂಜಿಯಲ್ಲಿ ಮಠವನ್ನು ಸ್ಥಾಪಿಸಿದ ಮತ್ತು ಇದಕ್ಕೆ 85 ಗದ್ಯಾಣಗಳನ್ನು ಉತ್ತಾರ ರೂಪದಲ್ಲಿ ಕೆಳದಿ ಮುಖ್ಯಸ್ಥರಿಂದ ಪಡೆಯಲಾಗಿತ್ತು.[108]

ಎರಡನೇ ಸೋಮಶೇಖರ ನಾಯಕನ ನಂತರ ಪಟ್ಟಕ್ಕೆ ಬಂದ ಎರಡನೇ ಬಸವಪ್ಪನಾಯಕನು, ಇಲ್ಲಿ ವೀರಶೈವ ಧರ್ಮವನ್ನು ಮತ್ತಷ್ಟು ಪ್ರೋತ್ಸಾಹಿಸಿದನು. ಹಣವನ್ನೂ, ಭೂದಾನವನ್ನೂ ಇಲ್ಲಿರುವ ಮಠಗಳಿಗೆ ನೀಡಿದುದು ಮಾತ್ರವಲ್ಲದೇ, ಸ್ವತಃ ಮಠಗಳನ್ನೂ ಕಟ್ಟಿಸಿದನು. ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನಲ್ಲಿರುವ ಸಿದ್ಧಾಪುರ ಎಂಬಲ್ಲಿ ಒಂದು ದೊಡ್ಡ ವೀರಶೈವ ಮಠವನ್ನು ಕಟ್ಟಿಸಿದನು. ಈ ಮಠದ ಪರಿಸರವನ್ನು ಮಂತ್ರರಾಜಪುರ ಎಂದು ಹೆಸರಿಸಿ ಒಂದು ಹೊಸ ನಗರವನ್ನು ನಿರ್ಮಿಸಿದನು. ಈ ಜಂಗಮ ಮಠವನ್ನು ಗುರು ನಂಜುಂಡಸ್ವಾಮಿಗೆ ಅರ್ಪಿಸಲಾಯಿತು. ಗುರು ನಂಜುಂಡಸ್ವಾಮಿಯು ಈ ಮಠದ ಕಟ್ಟಳೆಗಾಗಿ ಅರಸನಿಂದ ಧಾರಾಳವಾಗಿ ದಾನವನ್ನು ಪಡೆದಿದ್ದನು. ಈ ಸಿದ್ಧಾಪುರದಲ್ಲಿಯೇ ಬಸವಪ್ಪನಾಯಕನು ಸಿದ್ಧೇಶ್ವರ ದೇವಾಲಯವನ್ನು ಪ್ರತಿಷ್ಠಾಪಿಸಿದನು. ಮತ್ತು ವಾರ್ಷಿಕ ಪೂಜಾದಿ ಉತ್ಸವಗಳಿಗೆ ಬೇಕಾದ ವ್ಯವಸ್ಥೆಯನ್ನು ಮಾಡಿದನು.[109] ಕ್ರಿ.ಶ.1712ರಲ್ಲಿ ಮುನಿನಾಡು ಸೀಮೆಯ ಮುಂಡುಗೋಪ್ಪ ಗ್ರಾಮದಲ್ಲಿ ನಿರ್ಮಿಸಿದ್ದ ಮಠಕ್ಕೆ ಕೆಳದಿ ಬಸವಪ್ಪ ಘಟ್ಟದ ಕೆಳಗಿನ ಸುಂಕದ ಕೇಂದ್ರಗಳಲ್ಲಿ ಎತ್ತಿನಗಾಡಿಗಳಲ್ಲಿ ಸಾಗಿಸುತ್ತಿದ್ದ ವಸ್ತುಗಳ ಮೇಲಿನ ಸುಂಕವನ್ನು ಕಡಿತಗೊಳಿಸಿದ.[110] ಹೀಗೆ ಘಟ್ಟದ ಮೇಲಿನ ಮಠಗಳಿಗೆ ಘಟ್ಟದ ಕೆಳಗೆ ಅಥವಾ ಘಟ್ಟದ ಕೆಳಗಿನ ಮಠಗಳಿಗೆ ಘಟ್ಟದ ಮೇಲೆ ಸುಂಕ ವಿನಾಯತಿ ನೀಡಿದ ಹಲವು ಉದಾಹರಣೆಗಳಿವೆ.

ಮೇಲಿನ ವಿವರಣೆಗಳಿಂದ ತಿಳಿಯುವಂತೆ ತುಳುನಾಡಿನಾದ್ಯಂತ ಕೆಳದಿ ಅರಸರ ರಾಜಾಶ್ರಯದೊಂದಿಗೆ

ವೀರಶೈವ ಧರ್ಮವು ಪ್ರಭಾವೀ ಧರ್ಮವಾಗಿ ಪಸರಿಸಿತ್ತು. ಜಂಗಮ ಮಠಗಳು, ದೇವಾಲಯಗಳು ನಿರ್ಮಿಸಲ್ಪಟ್ಟವು. ರಾಜಾಶ್ರಯದ ಮೂಲಕ, ವೈಯಕ್ತಿಕ ನಾಯಕತ್ವದಲ್ಲಿ ಹಾಗೂ ಕೆಲವೊಮ್ಮೆ ಮಹಿಳೆಯ ರಿಂದಲೂ ಜಂಗಮ ಮಠಗಳು ಹಾಗೂ ದೇವಾಲಯಗಳು ಸ್ಥಾಪನೆಗೊಂಡದ್ದನ್ನು ಗಮನಿಸಬಹುದು. ಹಲವಾರು ಮಠಗಳು ಪೂರ್ಣವಾಗಿ ನಶಿಸಿ ಹೋಗಿದ್ದರೂ ಇರುವಂತಹ ಕೆಲವೇ ಮಠಗಳು ತುಳುನಾಡಿನಲ್ಲಿ ವೀರಶೈವ ಧರ್ಮದ ಅಸ್ತಿತ್ವದ ಕುರುಹಾಗಿ ನಿಂತಿವೆ. ಹೊಯ್ಸಳ, ವಿಜಯನಗರ ಕಾಲದಿಂದಲೇ ಕರಾವಳಿ ಕರ್ನಾಟಕದಲ್ಲಿ ಜಂಗಮರ ಅಸ್ತಿತ್ವವನ್ನು ಕಾಣಬಹುದಾದರೂ, ಬಳಿಕ ಕೆಳದಿ ಆಡಳಿತದಲ್ಲಿ ಇನ್ನು ಹೆಚ್ಚು ವೀರಶೈವರು ಇಲ್ಲಿಗೆ ಬರುವಂತಾಯಿತು. ಇಲ್ಲಿ ಸ್ಥಾಪನೆಯಾದ ಜಂಗಮ ಮಠಗಳು, ಶಿವಾರಾಧನೆ, ದಾಸೋಹ, ದಾನ ಧರ್ಮಾದಿ ಸತ್ಕಾರ್ಯಗಳಿಂದ ಮೆರೆದಿದ್ದವು. ಲಿಂಗಣ್ಣ ಕವಿಯ ಪ್ರಕಾರ ಇಮ್ಮಡಿ ಸೋಮಶೇಖರ ನಾಯಕ ತುಳುನಾಡಿಗೆ ತೀರ್ಥಯಾತ್ರೆಗೆ ಬಂದಿದ್ದಾಗ ಇಬ್ಬರು ಬ್ರಾಹ್ಮಣರನ್ನು ವೀರಶೈವ ಪಂಥಕ್ಕೆ ಸೇರಿಸಿದ್ದ.[111] ಅಂದರೆ ಸೋಮಶೇಖರ ನಾಯಕ ಈ ಭಾಗದಲ್ಲಿ ವೀರಶೈವ ಧರ್ಮವನ್ನು ಹರಡುವಲ್ಲಿ ಸಕ್ರಿಯನಾಗಿದ್ದ ಎಂಬುದು ಸ್ಪಷ್ಟವಾಗುತ್ತದೆ.

**ತುಳುನಾಡಿನ ವೀರಶೈವ ಮಠಗಳು ಮತ್ತು ದೇವಾಲಯಗಳು**

ವೀರಶೈವ ಧರ್ಮ ಕರಾವಳಿ ಕರ್ನಾಟಕದಲ್ಲಿ ಪ್ರಚಲಿತದಲ್ಲಿತ್ತು ಎನ್ನುವುದಕ್ಕೆ ಇಲ್ಲಿರುವ ಮಠಗಳೇ ಪ್ರಮುಖ ಆಧಾರಗಳಾಗಿವೆ. ಕೆಳದಿ ಅರಸರುಗಳ ಕಾಲದಲ್ಲಿ ನಿರ್ಮಿತವಾದ ಇಂತಹ ಮಠಗಳಲ್ಲಿ ಕೆಲವೊಂದು ಕಡೆ ಮಠಾಧೀಶರುಗಳ ಮೂಲಕ ಈ ಪರಂಪರೆ ಮುಂದುವರೆದಿದ್ದರೆ, ಕೆಲವೊಂದು ಮಠಗಳು ಸಾಂಸಾರಿಕ ಸ್ವರೂಪವನ್ನು ತಾಳಿವೆ.

**ಮಠಗಳ ವಿಂಗಡನೆ :** ಕೆಳದಿ ಆಡಳಿತದ ಅವಧಿಯಲ್ಲಿ ನಿರ್ಮಾಣಗೊಂಡ ಮಠಗಳಲ್ಲಿ, (1) ವಿರಕ್ತ ಮಠಗಳು (2) ವಶೀಕೃತ ಮಠಗಳು (3) ಮಹತ್ತಿನ, ಮಹಾಮಹತ್ತಿನ ಮಠಗಳು (4) ಇತರ ಮಠಗಳು ಎಂಬ ವಿಧಗಳಿವೆ.[112]

ಆದರೆ ತುಳುನಾಡಿನ ವೀರಶೈವ ಮಠಗಳನ್ನು ಕ್ರೋಢೀಕರಿಸಿ 2 ಪ್ರಕಾರವಾಗಿ ವಿಂಗಡಿಸಲಾಗಿದೆ.[113] ಅವುಗಳೆಂದರೆ,

1. ಗುರು ವರ್ಗದ ಮಠಗಳು
2. ವಿರಕ್ತ ಮಠಗಳು

ಗುರು ಮಠಗಳು ಮಹತ್ತಿನ ಮಠಗಳೂ ಆಗಿದ್ದವು.[114] "ಮಠದ ಗುರುಗಳನ್ನು 'ಸುಭಾರಿಗಳು' ಎಂಬುದಾಗಿಯೂ ಕರೆಯುತ್ತಿದ್ದರು" ಸಾಮಾನ್ಯವಾಗಿ ಗುರುಗಳು ಬ್ರಹ್ಮಚಾರಿಗಳಾಗಿರುತ್ತಿದ್ದರು. ಈ ಮಠದ ಅಧ್ಯಕ್ಷತೆಯನ್ನು ಜಂಗಮ ವರ್ಗದಲ್ಲಿ ಹುಟ್ಟಿದವರು ಮಾತ್ರ ವಹಿಸಿಕೊಳ್ಳುವ ಅರ್ಹತೆಯುಳ್ಳವರಾಗಿದ್ದರು.

ಪುರೋಹಿತಶಾಹಿ ಅಧಿಕಾರವನ್ನು ಈ ಮಠಗಳು ಹೊಂದಿದ್ದವು.[115] ಗುರು ವರ್ಗದ ಮಠಾಧೀಶರು ಬ್ರಹ್ಮಚಾರಿಗಳೇ ಆಗಿರಬೇಕೆಂಬ ನಿಯಮವಿರಲಿಲ್ಲ. ವಿವಾಹಿತನಾಗಿದ್ದರೂ ಏಕಪತ್ನಿ ವ್ರತಸ್ಥನಾಗಿರಬೇಕೆಂಬ ನಿಬಂಧನೆ ಇತ್ತು. ಇಂತಹ ಮಠಗಳು ಕರಾವಳಿ ಕರ್ನಾಟಕದ ದಕ್ಷಿಣ ಭಾಗವಾದ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಉದಾಹರಣೆಗೆ ಎಣ್ಣೆಹೊಳೆ ಮಠ, ಕಲ್ಯಾಣಪುರ ಮಠ, ಪೊನ್ನೆಚಾರಿ ಮಠ, ಕಾರ್ಕಳದ ಜಂಗಮಮಠ, ಕಾಡುಹೊಳೆ ಮಠ ಇತ್ಯಾದಿ.

ಗುರುವರ್ಗದ ಮಠಗಳನ್ನು 2 ಪ್ರಕಾರವಾಗಿ ವಿಂಗಡಿಸಬಹುದು.

1. ಪಟ್ಟದೇವರ ಮಠಗಳು (ಪುತ್ರ ವರ್ಗದ ಮಠಗಳು)

2. ಶಿಷ್ಯ ವರ್ಗದ ಮಠಗಳು

ಪಟ್ಟದ ಮಠಗಳಲ್ಲಿ ಇವರ ಪೂರ್ವಾಶ್ರಮದ ತಂದೆ, ತಾಯಿ, ಅಣ್ಣ, ತಮ್ಮಂದಿರೆಲ್ಲ ಒಟ್ಟಿಗೆ ಇರುವುದು ರೂಢಿ. ಇವರು ತಮ್ಮ ಉತ್ತರಾಧಿಕಾರಕ್ಕೆ ತಮ್ಮ ಅಣ್ಣ ತಮ್ಮಂದಿರ ಮಕ್ಕಳಲ್ಲಿ ಒಬ್ಬರನ್ನು ಅಥವಾ ರಕ್ತ ಸಂಬಂಧಿಗಳಲ್ಲಿ ಒಬ್ಬರನ್ನು ಆರಿಸಿಕೊಳ್ಳುವ ಅವಕಾಶವಿರುತ್ತದೆ. ಈ ಮಠಗಳನ್ನು ಹಿರಿಯ ಮಠ, ಹಿರೇಮಠಗಳೆಂದು ಕರೆಯಲಾಗುತ್ತಿದೆ. ಪಟ್ಟದೇವರ ಮಠಗಳಲ್ಲಿ 'ಸ್ಥಿರ ಪಟ್ಟಾಧ್ಯಕ್ಷ' ಮತ್ತು 'ಚರ ಪಟ್ಟಾಧ್ಯಕ್ಷ'ಎಂಬ ಎರಡು ವಿಭಾಗಗಳಿದ್ದು 'ಚರ' ಎಂದರೆ ದೇಶದೆಲ್ಲೆಡೆ ಸಂಚರಿಸುತ್ತ ಹೋದೆಡೆಯಲ್ಲೆಲ್ಲ ಧರ್ಮಾಧಿಕಾರ ನಡೆಸುವವರು. ಇಂತಹ ಮಠಗಳು ಕರಾವಳಿ ಕರ್ನಾಟಕದಲ್ಲಿ ಹೆಚ್ಚಾಗಿ ಕಾಣಸಿಗುತ್ತವೆ.[116]

ಗುರುವರ್ಗದ ಮಠಗಳಲ್ಲಿ, ಪಂಚಪೀಠಗಳ ಕೆಲವು ಶಾಖಾಮಠಗಳು, ಜಂಗಮ ವಂಶಸ್ಥರಲ್ಲಿ ಸಮರ್ಥವಾದ ವಟುವನ್ನು ಉತ್ತರಾಧಿಕಾರಿಯನ್ನಾಗಿ ನೇಮಿಸಿಕೊಂಡು ಪಟ್ಟಾಧಿಕಾರಿ ಮಾಡುವ ಸಂಪ್ರದಾಯವನ್ನು ಬೆಳೆಸಿಕೊಂಡಿವೆ. ಇಂತಹ ಮಠಗಳನ್ನು ಶಿಷ್ಯವರ್ಗದ ಮಠಗಳೆಂದು ಕರೆಯಲಾಗುತ್ತದೆ. ಮಹತ್ತಿನ ಮಠಗಳಿಗೆ ಹೋಲಿಸಿದರೆ ವಿರಕ್ತ ಮತ್ತು ವಶೀಕೃತ ಮಠಗಳ ಸಂಖ್ಯೆ ಕಡಿಮೆ. ಜೀವನದಲ್ಲಿ ವೈರಾಗ್ಯ ಹೊಂದಿ ಅಧ್ಯಾತ್ಮದಲ್ಲಿ ಆಸಕ್ತಿ ಹೊಂದಿದವರು ಸ್ಥಾಪಿಸಿದ ಮಠ ವಿರಕ್ತ ಮಠವಾಗಿದೆ. ತುಳುನಾಡಿನಲ್ಲಿ ವಿರಕ್ತ ಮಠಗಳ ಗುಂಪಿಗೆ ಬರುವ ಮಠಗಳೆಂದರೆ ಗುರುಪುರಮಠ ಮತ್ತು ಮುರುಗಿ ಮಠ. ಇವುಗಳಲ್ಲಿ ಪ್ರಸ್ತುತ ಪಟ್ಟಾಧಿಕಾರಿಯ ಆಡಳಿತದಲ್ಲಿ ಮುಂದುವರಿದಿರುವ ಮಠವೆಂದರೆ ಗುರುಪುರ ಜಂಗಮ ಮಠ ಮಾತ್ರ.

ಬಾರಕೂರು, ಕೆರೆಕೊಪ್ಪ ಹಾಗೂ ಹೊಸಂಗಡಿಯ ಮಹತ್ತಿನ ಮಠಗಳ ಗುರುಸ್ಥಾನಕ್ಕೆ ಇಚ್ಛಿಸುವ ಅಭ್ಯರ್ಥಿಗಳಿಗೆ (ಮರಿದೇವರು) ಕೆಳದಿ ಅರಸರು ಕೆಲವು ಅರ್ಹತೆಗಳನ್ನು ನಿಗದಿಗೊಳಿಸಿದ್ದರು.[117] ಅವುಗಳೆಂದರೆ, ಆಕಾಂಕ್ಷಿಯು ಜಗಳಗಂಟನಾಗಿರಬಾರದು, ಅಲ್ಲಿ ಅತಿಥಿಗಳಿಗೆ ಸ್ವಾಗತವಿರಬೇಕು, ನಂಬಲರ್ಹನಿರಬೇಕು. ಶಿಷ್ಯರನ್ನು ಹೊಂದಿರಬೇಕು. ಇಂಥ ವ್ಯಕ್ತಿಯನ್ನು ದೊರೆ ಹಾಗೂ ಮಹತ್ತು ಕೂಡಿ ಒಪ್ಪಬೇಕು ಎಂದೆಲ್ಲ ಷರತ್ತುಗಳಿದ್ದವು. ಮಠಕ್ಕೆ ಭಕ್ತರು ಬರುತ್ತಿದ್ದು ಅದು ಜಂಗಮರನೇಕರಿಗೆ ವಿಶ್ರಾಂತಿಧಾಮವಾಗಿದ್ದು, ಸತ್ಯವನ್ನು

ಪಾಲಿಸಿ (ದಾಸೋಹದ ಮನೆ) ನಿರ್ವಹಿಸಬೇಕಾಗಿತ್ತು. ಮಠಗಳ ಕಾರ್ಯಭಾರದಲ್ಲಿ ಭಾರತೀಯ ವೇದಾಂತದ ಷಡ್ದರ್ಶನಗಳ ಅಧ್ಯಯನ, ವೀರಶೈವ ಧರ್ಮಜಾಗೃತಿ, ಚಾತುರ್ಮಾಸ್ಯ ಶಿವಾರಾಧನೆ, ಅನೇಕ ಎತ್ತುಗಳ ಸಾಕಾಣಿಕೆ, ಜಮೀನು ಸಾಗುವಳಿ ಮೇಲುಸ್ತುವಾರಿ, ಭಕ್ತರಿಂದ ಕಾಣಿಕೆ ವಸೂಲಿ, ಭೂ ಉತ್ಪನ್ನದ ಮಾರಾಟದ ಹಣದಿಂದ ಧಾರ್ಮಿಕ ಕಾರ್ಯಕ್ರಮಗಳ ಚಾಲನೆ, ಜಂಗಮರು ಹಾಗೂ ಭಕ್ತ ಜನರಿಗೆ ದಾಸೋಹ, ದೀನ ದಲಿತರಿಗೆ ಧನ ಸಹಾಯ, ದಾನಾದಿ ಕಾರ್ಯಗಳನ್ನು ಅವನು ಮಾಡಬೇಕಾಗಿತ್ತು.

ಅವಿಭಜಿತ ದಕ್ಷಿಣಕನ್ನಡ ಜಿಲ್ಲೆಯಲ್ಲಿ 64 ವೀರಶೈವ ಮಠಗಳು ಇದ್ದವು ಎಂಬುದಾಗಿ ತಿಳಿದು ಬರುತ್ತದೆ.[118] ಅವುಗಳೆಂದರೆ, ಬಸರೂರು, ಕೋಟೇಶ್ವರ, ಸಿದ್ದಾಪುರ, ಕೊಲ್ಲೂರು(ಇಲ್ಲಿ ನಾಲ್ಕು) ಮೂರಗ, ಬಾಳೆಕುದ್ರು ಬೆಣ್ಣೆಕುದ್ರು, ಶಂಕರನಾರಾಯಣ, ಬಾರಕೂರು, ಕಂಡ್ಲೂರು, ಉಪ್ಪೂರು, ಕಲ್ಯಾಣಪುರ, ಕೊಂಡಾಡಿ, ಸುರಾಲು, ಕುಂದಾಪುರ, ಉಡುಪಿ, ಪಾಂಗಾಳ, ಮೂಲ್ಕಿ(ಇಲ್ಲಿ ಎರಡು) ಸುರತ್ಕಲ್, ಮಂಗಳೂರು (ಇಲ್ಲಿ ಮೂರು) ಶಿರ್ವ, ನಾಳ, ಕೆರ್ವಾಸೆ, ನಾರಾವಿ, ಕಾರ್ಕಳ, ಸಾಣೂರು, ಮೂಡಬಿದರೆ, ವೇಣೂರು, ಪುಚ್ಚಮೊಗರು, ಗುರುವಾಯನಕೆರೆ, ಬೆಳ್ತಂಗಡಿ, ಉಪ್ಪಿನಂಗಡಿ, ಸುಬ್ರಮಣ್ಯ(ಇಲ್ಲಿ ನಾಲ್ಕು) ಹೊಸಮಠ, ಪಂಜ, ಬೆಳ್ಳಾರೆ, ವಿಟ್ಲ, ಕಾಡುಹೊಳೆ, ಎಣ್ಣೆಹೊಳೆ, ಉಳ್ಳಾಲ, ಮಂಜೇಶ್ವರ, ಕುಂಬಳೆ, ಕಾಸರಗೋಡು, ಚಂದ್ರಗಿರಿ, ಪಳ್ಳಿಕೆರೆ, ಹೊಸದುರ್ಗಾ, ಬಂಟವಾಳ, ಮಳಲಿ, ಗಂಜಿಮಠ, ಬೆಳುವಾಯಿ, ಕೊಳತ್ತೆಮಜಲು, ಅಸ್ಯೆಗೋಳಿ, ಬಾಸುಬೈಲು, ಗುರುಪುರ ಇತ್ಯಾದಿ. ಕೆಲವು ಶಾಸನೋಕ್ತ ಮಠಗಳನ್ನು ಹೆಸರಿಸಬಹುದಾಗಿದೆ. ಅವುಗಳೆಂದರೆ,[119] ಕೊಲ್ಲೂರಿನ ಸಿದ್ಧೇಶ್ವರ ಮಠ (ಕ್ರಿ.ಶ. 1485), ಶಂಕರನಾರಾಯಣ ವಿರೂಪಾಕ್ಷ ದೇವರ ಮಠ(ಕ್ರಿ.ಶ.1562) ಬಾರಕೂರಿನ ಮಹತ್ತಿನ ಮಠ (ಕ್ರಿ.ಶ.1621) ಸಿದ್ಧಮ್ಮಾಜಿ ನಿರ್ಮಿತ ಸೋಮೇಶ್ವರದ ಮಠ (ಕ್ರಿ.ಶ.1641) ಬಸರೂರು ಬಸವಪ್ಪ ನಿರ್ಮಿತ ಮಠ (ಕ್ರಿ.ಶ.1641) ಹೊಸಂಗಡಿಯ ಚನ್ನಣ್ಣ ನಿರ್ಮಿತ ಮಠ (ಕ್ರಿ.ಶ.1659) ಕೋಟೇಶ್ವರದ ಪರಮೇಶ ಅಯ್ಯ ನಿರ್ಮಿತ ಮಠ (ಕ್ರಿ.ಶ. 1665) ಸೂರಾಲಿನ ಮಹಂತದೇವರು ನಿರ್ಮಿತ ಮಠ (ಕ್ರಿ.ಶ 1676) ಮಹಾಲ ವೀರಣ್ಣ ನಿರ್ಮಿತ ಮಳಲಿ ಮಠ (ಕ್ರಿ.ಶ. 1689) ಕಲ್ಯಾಣಪುರದಲ್ಲಿ ಬಸವಯ್ಯ ನಿರ್ಮಿತ ಮಠ (ಕ್ರಿ.ಶ.1708). ಇವುಗಳಲ್ಲದೇ ಇತಿಹಾಸ ಪುಟಗಳಲ್ಲಿ ಸೇರ್ಪಡೆಯಾಗದೆ ಇರುವ ನಾಮಾವಶೇಷವಾಗಿರುವ ಮಠಗಳು ಇರಬಹುದು. ಈಗಲೂ ಇರುವ ಗಂಜೀಮಠ, ಗುರುವಯ್ಯನ ಮಠ ಹೆಸರುಗಳು ಇದಕ್ಕೆ ಸಾಕ್ಷಿಯಾಗಿವೆ. ಇವೆಲ್ಲವನ್ನು ಒಟ್ಟು ಸೇರಿಸಿದಾಗ ಈ ಸಂಖ್ಯೆ 100ಕ್ಕಿಂತಲೂ ಅಧಿಕವಾಗುವ ಸಾಧ್ಯತೆ ಇದೆ.

ಮೇಲೆ ಹೆಸರಿಸಿದ ಮಠಗಳಲ್ಲಿ, ಕೆಲವು ಮಠಗಳು ಉತ್ತಮ ರೀತಿಯಲ್ಲಿ ಇವೆ. ಇನ್ನು ಕೆಲವು ಮಠಗಳ ಕುರುಹುಗಳನ್ನು ಮಾತ್ರ ಕಾಣಲು ಸಾಧ್ಯ. ಇನ್ನು ಕೆಲವು ನಶಿಸಿ ಹೋಗಿ ಹೆಸರುಗಳು ಮಾತ್ರ ಕೇಳಸಿಗುತ್ತವೆ. ಈ ಮಠಗಳನ್ನು ಉತ್ತರದ ಮತ್ತು ದಕ್ಷಿಣದ ಮಠಗಳು ಎಂಬುದಾಗಿಯೂ ವಿಭಾಗಿಸಲಾಗಿತ್ತು. ಬಾರಕೂರು ಸಮೀಪದ ಬೆಣ್ಣೆಕುದುರು ಉತ್ತರದ 32 ಮಠಗಳಿಗೆ ಕೇಂದ್ರವಾಗಿದ್ದರೆ, ಮಂಗಳೂರು

ಸಮೀಪದ ಗುರುಪುರ ದಕ್ಷಿಣದ 32 ಮಠಗಳ ಕೇಂದ್ರವಾಗಿತ್ತು.[120]

**ಉಡುಪಿ ಜಿಲ್ಲೆ**

ಉಡುಪಿ ಜಿಲ್ಲೆಯಲ್ಲಿ ಸುಮಾರು 30 ವೀರಶೈವ ಮಠಗಳ ಕುರುಹುಗಳು ದೊರಕಿವೆ. ಆದರೆ ಇವೆಲ್ಲ ಸಂಸಾರಿ ಮನೆಗಳಾಗಿ ಪರಿವರ್ತನೆಗೊಂಡಿವೆ. ಆದರೆ ಈ ಮಠಗಳು ಮೊದಲೇ ವಿರಕ್ತ ಮಠವಾಗಿದ್ದು ನಂತರದಲ್ಲಿ ಸಂಸಾರಿ ಮಠಗಳಾಗಿವೆಯೇ ಅಥವಾ ಮೊದಲಿನಿಂದಲೇ ಈ ಮಠಗಳು ಸಂಸಾರಿ ಮನೆಗಳಾಗಿ ಇದ್ದವೆ ಎಂದು ತಿಳಿಯಲು, ಐತಿಹಾಸಿಕ ಆಧಾರಗಳು ಲಭ್ಯವಾಗಿಲ್ಲ. ಇಂದು ತುಳುನಾಡಿನಲ್ಲಿ ಅಸ್ತಿತ್ವದಲ್ಲಿರುವ ವೀರಶೈವ ಮಠಗಳ ಕ್ಷೇತ್ರಕಾರ್ಯ ನಡೆಸಿದಾಗ ಮತ್ತು ವಿವಿಧ ಮೂಲಗಳಿಂದ ಅಧ್ಯಯನ ನಡೆಸಿ ಈ ಕೆಳಗಿನ ಅವಲೋಕನಗಳನ್ನು ಮಾಡಲಾಗಿದೆ.

**ಶಿರಾಡಿ ಮಠ ಅಥವಾ ಜಂಗಮ ಮಠ:** ಉಡುಪಿ ನಗರ ಬಸ್ ನಿಲ್ದಾಣದ ಎದುರಿನಲ್ಲಿ ಈ ಜಂಗಮ ಮಠವಿದೆ. ಕೆಳದಿ ಗುಂಡಾ ಜೋಯಿಸರು ಈ ಮಠದ ಅಪ್ರಕಟಿತ ಚಾರಿತ್ರಿಕ ದಾಖಲೆಯೊಂದನ್ನು ಬೆಳಕಿಗೆ ತಂದಿದ್ದಾರೆ.[121] ಈ ದಾಖಲೆಯ ಪ್ರಕಾರ ಕೆಳದಿ ಇಮ್ಮಡಿ ಸೋಮಶೇಖರ ನಾಯಕನು ಉಡುಪಿ ಮತ್ತು ವೀರಾಪುರ ಮಹತ್ತಿನ ಮಠಗಳನ್ನು ನಿರ್ಮಿಸಿದ್ದನು. ಮಠದ ಮಧ್ಯಭಾಗದಲ್ಲಿ 'ಮಹಂತೇಶ್ವರರ' ಗದ್ದುಗೆ ಸ್ಥಾಪನೆಯಾಗಿದೆ. ಗದ್ದುಗೆಯ ಎಡಬದಿಯಲ್ಲಿ ಈಶ್ವರ ಲಿಂಗವನ್ನು ಪ್ರತಿಷ್ಠಾಪಿಸಿ ಪೂಜೆಯನ್ನು ಮಾಡಲಾಗುತ್ತಿದೆ. ಮಠದ ಬೃಹದಾಕಾರದ ಕೆತ್ತನೆ ಕಂಬಗಳಿದ್ದು ಕಟ್ಟಡದ ಛಾವಣಿಯು ಆಲಂಕೃತ ಕೆತ್ತನೆಯ ಕಲಾಕೃತಿಗಳಿಂದ ನಿರ್ಮಿಸಲ್ಪಟ್ಟಿದೆ. ಈ ಮಠಕ್ಕೆ ಸಂಬಂಧಿಸಿದಂತೆ ಸುಮಾರು 10 ರಿಂದ 12 ಎಕರೆ ಭೂಮಿ ಇದ್ದಿತು. ಆದರೆ ಈಗ ಕೇವಲ 3 ರಿಂದ 4 ಎಕರೆ ಭೂಮಿ ಮಾತ್ರ ಉಳಿದಿದೆ.[122]

**ಪಾಂಗಳ ಮಠ:** ಉಡುಪಿ ತಾಲೂಕಿನ ಪಾಂಗಳ ಗ್ರಾಮವು ಉಡುಪಿಯಿಂದ ದಕ್ಷಿಣಕ್ಕೆ 10ಕಿ.ಮೀ ದೂರದಲ್ಲಿದೆ. ಇಲ್ಲಿ ರಂಭಾಪುರಿ ಪೀಠದ ಶಾಖಾಮಠವು ಸ್ಥಾಪನೆಯಾಗಿದೆ. ಈ ಮಠದಲ್ಲಿ ವೀರಭದ್ರ ಹಾಗೂ ಸಿದ್ದೇಶ್ವರನ ಆರಾಧನೆಯಿದೆ. ಕೆಳದಿ ಅರಸರ ಕಾಲದಲ್ಲಿ ಸ್ಥಾಪನೆಯಾಗಿತ್ತೆಂದು ಹೇಳಲಾಗುವ ಈ ಮಠದ ಕಟ್ಟಡದ ಮುಂಭಾಗದಲ್ಲಿರುವ ಮೂರು ಎಕರೆ ಸೊಪ್ಪಿನ ಬೆಟ್ಟದಲ್ಲಿ ಮೂರು ಗದ್ದುಗೆಗಳು ನಿರ್ಮಾಣಗೊಂಡಿರುವುದು ಕಂಡುಬರುತ್ತದೆ. ನಾಲ್ಕು ಉಪ್ಪರಿಗೆಯನ್ನು ಒಳಗೊಂಡಿದ್ದ ಕಟ್ಟಡವು ಮರದ ಕೆತ್ತನೆಯ ಬೃಹದಾಕಾರದ ಕಂಬಗಳಿಂದ ನಿರ್ಮಿತಗೊಂಡಿದ್ದು, ಈಗ ಜೀರ್ಣೋದ್ಧಾರಗೊಂಡಿದೆ. ಧರ್ಮಸ್ಥಳದ ಅಣ್ಣಪ್ಪ, ಪಂಜುರ್ಲಿ, ಕಲ್ಕುಡ, ವರ್ತೆ(ಕಲ್ಲುರ್ಟಿ) ಚಾಮುಂಡಿ ಇತ್ಯಾದಿ ದೈವಗಳು ವೀರಶೈವ ಮನೆತನದವರಿಂದ ಪೂಜಿಸಲ್ಪಡುತ್ತಿರುವುದು, ಇಲ್ಲಿ ಸ್ಥಳೀಯ ಆಚರಣೆ–ರೂಢಿ–ಸಂಪ್ರದಾಯಗಳನ್ನು ಮೈಗೂಡಿಸಿಕೊಂಡ ಬದಲಾವಣೆಗೆ ಸಾಕ್ಷಿಯಾಗಿದೆ.

**ಕಲ್ಯಾಣಪುರ:** ಉಡುಪಿಯಿಂದ 6ಕಿ.ಮೀ. ದೂರದಲ್ಲಿರುವ. ಕಲ್ಯಾಣಪುರದ 'ಜಂಗಮಬೆಟ್ಟು' ಎಂಬ

ಪ್ರದೇಶದಲ್ಲಿ ಈ ಮಠ ಸ್ಥಾಪನೆಯಾಗಿದೆ. ಈ ಮಠವನ್ನು ಬಸವಯ್ಯ ನಿರ್ಮಿತ ಮಠ ಎಂದು ಹೇಳಲಾಗಿದೆ.[123] ಈ ಮಠದವರು ಹಿಂದೆ ಉಪ್ಪೂರಿನ ಮಠವನ್ನು ಶಾಖಾ ಮಠವಾಗಿ ಪಡೆದು ಅದನ್ನು ಬೆಳೆಸಿದ್ದರು. ಮಠವು ಈಗ ಜೀರ್ಣೋದ್ಧಾರಗೊಂಡಿದೆ. ಈ ಮಠದವರು ಬಾಳೆಹೊನ್ನೂರು ಮಠದ ಕಟ್ಟು ಕಟ್ಟಳೆಗಳನ್ನು ಅನುಸರಿಸುತ್ತಾರೆ. ಈ ಮಠದ ಪಕ್ಕದಲ್ಲಿರುವ ಶಿವಾಲಯದ ಉಸ್ತುವಾರಿಯನ್ನು ಈ ಮಠದ ಮನೆತನದವರು ನಡೆಸಿಕೊಂಡು ಹೋಗುತ್ತಿದ್ದಾರೆ. ಅಲ್ಲದೆ ಈ ಶಿವಾಲಯದ ಸುತ್ತಮುತ್ತಲಿನ ಪ್ರದೇಶವೆಲ್ಲವು ಈ ಮಠಕ್ಕೆ ಸಂಬಂಧಿಸಿದ್ದು ಈಗ ಜೀರ್ಣೋದ್ಧಾರಗೊಂಡಿದೆ. ಹಿಂದೆ ಈ ಪ್ರದೇಶವು ಜಂಗಮರ ವಾಸಸ್ಥಾನವಾಗಿದ್ದ ಕಾರಣದಿಂದಲೇ ಈ ಪ್ರದೇಶಕ್ಕೆ ಜಂಗಮ ಬೆಟ್ಟು ಎಂಬ ಹೆಸರು ಬಂದಿದೆ.

**ಸ್ವರಕಾಳ:** ಈ ಮಠವು  ಉಡುಪಿಯಿಂದ 16ಕಿ.ಮೀ. ದೂರದ ಪಿಲಾರು ಗ್ರಾಮದಲ್ಲಿ ಸ್ಥಾಪನೆಯಾಗಿದೆ. ಇಲ್ಲಿ ಸಿದ್ಧೇಶ್ವರನ  ಗದ್ದುಗೆ ಇದೆ. ಈ ಮಠದ ಪರಂಪರೆಯ ಗುರುಗಳ ಹೆಸರುಗಳು ಲಭ್ಯವಾಗಿಲ್ಲ. ಪ್ರಸ್ತುತ ಮಠಕ್ಕೆ 10 ಎಕರೆ ಕಾಡು ಹಾಗೂ 3 ಎಕರೆ ಬೇಸಾಯಕ್ಕೆ ಯೋಗ್ಯವಾದ ಜಮೀನು ಇದೆ.[124] ಈ ಮಠಕ್ಕೆ ಸಂಬಂಧಿಸಿದಂತೆ ಪಕ್ಕದಲ್ಲಿರುವ ಅಣ್ಣಪ್ಪ ಪಂಜುರ್ಲಿ, ಮೈಸಂದಾಯ, ಜುಮಾದಿ ಮತ್ತು ಜುಮಾದಿ ಭಂಟ, ಮೊದಲಾದ ದೈವಗಳ ಪೂಜೆಯನ್ನು ಮಠದ ಮನೆಯವರು ನಡೆಸುತ್ತಿರುವುದು ಗಮನಾರ್ಹ.[125] ಈ ಮಠದ ವಂಶಸ್ಥರು ಹಿಂದಿನಿಂದಲೂ ರಂಭಾಪುರಿ ಪೀಠಕ್ಕೆ ನಡೆದುಕೊಂಡು ಬಂದಿರುತ್ತಾರೆ.

**ಕೊಂಡಾಡಿ ಜಂಗಮ ಮಠ:** ಕೊಂಡಾಡಿ ಜಂಗಮ ಮಠವು ಉಡುಪಿ ತಾಲೂಕಿನ ಬೊಮ್ಮರ ಬೆಟ್ಟು ಗ್ರಾಮದಲ್ಲಿದೆ. ಇಲ್ಲಿಯ ಮಠವನ್ನು ಶಿವಪ್ಪನಾಯಕನ ಕಾಲದಲ್ಲಿ ನಿರ್ಮಿಸಲಾಗಿದೆ ಎನ್ನಲಾಗಿದೆ.[126] ಕೊಂಡಾಡಿ ಜಂಗಮ ಮಠದಲ್ಲಿ ಶ್ರೀ ಸಿದ್ದಲಿಂಗೇಶ್ವರ ಗುಡಿ ಇದೆ. ಹಳೆಯ ಕಟ್ಟಡವನ್ನು ಕೆಡವಿ ಹೊಸತಾಗಿಗುಡಿ ಮತ್ತು ಮನೆಯನ್ನು ನಿರ್ಮಿಸಲಾಗಿದೆ. ಎದುರುಬದಿಯಲ್ಲಿರುವ ಹಸ್ತಿ ಸೋಪಾನಗಳು ಗಮನಾರ್ಹವಾಗಿದೆ. ಶಿಲಾಪೀಠದ ಮೇಲೆ ಪಾಣಿಪೀಠದಲ್ಲಿರುವ ಶ್ರೀ ಸಿದ್ದಲಿಂಗೇಶ್ವರ ಲಿಂಗವು ಪಂಚ ಲೋಹದ ಶಿವನ ಮುಖಾಕೃತಿಯನ್ನು ಹೊಂದಿದೆ. ಅಂತೆಯೇ ಪಟ್ಟದ ಕತ್ತಿ, ಕಾಷ್ಟದ ಕರಡಿಗೆ, ಸನ್ಯಾಸಿ ದಂಡ,  ಮೊದಲಾದವು ಈ ಜಂಗಮಮಠ ಸನ್ಯಾಸಿ ಮಠವಾಗಿತ್ತು ಎಂಬ ಐತಿಹ್ಯಕ್ಕೆ ಪುರಾವೆ ನೀಡುತ್ತದೆ.[127] ಈ ಮಠವೂ ಹಿಂದೆ ಹೇರಳವಾದ ಭೂಮಿಯನ್ನು ಹೊಂದಿದ್ದು ಸನಿಹದಲ್ಲಿರುವ ಲಿಂಗ ಮುದ್ರೆಯ ಗಡಿಕಲ್ಲುಗಳು ಮೇರೆಯಾಗಿದೆ. ಸಮೀಪದಲ್ಲಿ ಬಸದಿ ಎಂಬ ಸ್ಥಳವಿದ್ದು ಇಲ್ಲಿ ಪಾಳುಬಿದ್ದ ಬಸದಿಯಿದೆ. ಈ ಬಸದಿ, ವೀರಶೈವ-ಜೈನ ಸಂಘರ್ಷದಿಂದ ನಾಶವಾಗಿರಬೇಕೆಂಬ ಸ್ಥಳೀಯ ಊಹಾಪೋಹಗಳಿವೆ ಯಾದರೂ ಇದಕ್ಕೆ ಯಾವುದೇ ಸ್ಪಷ್ಟ ಪುರಾವೆಗಳಿಲ್ಲ. ಕರಾವಳಿ ಕರ್ನಾಟಕದ ತುಳು ಜನಪದರ ನಾಗಾರಾಧನೆ, ಭೂತಾರಾಧನೆಯ ಪ್ರಭಾವ ಇಲ್ಲಿನ ಲಿಂಗಾಯಿತರ ಮೇಲೆ ಆಗಿದೆ. ಹಾಗಾಗಿ ಕೊಂಡಾಡಿ ಜಂಗಮ ಮಠದ ಪರಿಸರದಲ್ಲಿ ನಾಗಬನ ಹಾಗೂ ಪಂಚದೈವಗಳಿರುವ ಬ್ರಹ್ಮಸ್ಥಾನವಿದ್ದು ನೈಮಿತ್ತಿಕ ಪೂಜಾದಿಗಳು ನಡೆಯುತ್ತವೆ. ಸ್ಥಾನದ ಬೊಬ್ಬರ್ಯ ಮತ್ತು ಪಂಜುರ್ಲಿ ದೈವದ ಆರಾಧನೆಯೂ ಇಲ್ಲಿದೆ.

**ಕೋಡಿಬೆಟ್ಟು ಕೋಡಿಯಲ್ಲಿನ ಜಂಗಮ ಮಠ:** ಉಡುಪಿ ನಗರದಿಂದ 30ಕಿ.ಮೀ ದೂರದಲ್ಲಿ ಕುದಿಗ್ರಾಮದ ಕೋಡಿಬೆಟ್ಟು ಕೋಡಿ ಎಂಬಲ್ಲಿ ಒಂದು ಜಂಗಮ ಮಠ ಇತ್ತು ಎಂಬ ಸುಳಿವು ದೊರೆತಿದೆ. ಈಗ ಸಂಪೂರ್ಣ ನಾಮಾವಶೇಷವಾಗಿರುವ ಈ ಜಂಗಮಮಠದ ಇಂದಿನ ನೆಲೆಯು ಸುಮಾರು 7 ರಿಂದ 8 ಅಡಿ ಎತ್ತರದ ಸುತ್ತಲೂ ಕಲ್ಲು ಕಟ್ಟಿರುವ ಒಂದು ದಿಬ್ಬವಾಗಿರುತ್ತದೆ. 72 ಅಡಿ ಉದ್ದ, 60 ಅಡಿ ಅಗಲದ ಈ ದಿಬ್ಬದ ಮೇಲೆ ಮರಗಿಡ ಮುಳ್ಳು ಕಂಟಿಗಳು ಬೆಳೆದಿವೆ. ಪೂರ್ವದಲ್ಲಿ ಸನಿಹದಲ್ಲಿಯೇ ಒಂದು ಪುರಾತನ ಬಾವಿಯಿದೆ.[128]

**ಸೂರಾಲು:** ಉಡುಪಿ ತಾಲೂಕಿನ ಸೂರಾಲು ಪ್ರದೇಶದಲ್ಲಿ ಆಳುತ್ತಿದ್ದ ತೊಳಹ ಮನೆತನದ ಕ್ರಿ.ಶ.1691ರ ತಾಮ್ರ ಶಾಸನದಲ್ಲಿ,[129] ತುಳುನಾಡಿನ ಧಾರ್ಮಿಕ ಪರಿಸ್ಥಿತಿ ಹಾಗೂ ಕರಾವಳಿಯಲ್ಲಿ ವೀರಶೈವ ಧರ್ಮಕ್ಕೆ ಸಂಬಂಧಿಸಿದಂತೆ ಮಾಹಿತಿಗಳಿವೆ. ಸೋಸಲೆ ರೇವಣಸಿದ್ದ ದೇವರ ಶಿಷ್ಯರಾದ ಮಹತ ದೇವರಿಗೆ ಮದನದೇವಿ ತೊಳಹರು ಈ ಶಾಸನವನ್ನು ಬರೆಯಿಸಿಕೊಟ್ಟಿದ್ದರು. ಈ ಶಾಸನದಲ್ಲಿ ಮೊದಲು ಮಹಾಲಿಂಗರಸ ತೊಳಹರು, ರೇವಣ ಸಿದ್ದ ದೇವರಿಗೆ ನೀಡಿದ್ದ ಭೂಮಿಯ ವಿವರವಿದೆ. ಇದಲ್ಲದೆ ಹೊನ್ನಹಳ್ಳಿಯ ಚೆನ್ನವೀರ ಸೆಟ್ಟಿಗೆ ನೀಡಿದ್ದ ಭೂಮಿಯ ವಿವರವಿದೆ. ಕ್ರಿ.ಶ. 17ನೇ ಶತಮಾನದಲ್ಲಿ ಇಲ್ಲಿ ವೀರಶೈವ ಮಠ ರಾಜಾಶ್ರಯ ಪಡೆದು ನೆಲೆಸಿತ್ತೆಂಬುದು ಈ ಶಾಸನದಿಂದ ತಿಳಿಯುತ್ತದೆ. ಕ್ರಿ.ಶ.1725ರ ಸುಮಾರಿಗೆ ಸುರಾಲು ಪ್ರದೇಶದಲ್ಲಿ ಎರಡು ವೀರಶೈವ ಮಠಗಳಿದ್ದುದು ದಾಖಲೆಯೊಂದರಿಂದ.[130] ತಿಳಿದುಬರುತ್ತದೆ. ಸೂರಾಲಿನಲ್ಲಿದ್ದ ಪ್ರಧಾನ ಮಠವನ್ನು 'ಮಹತ್ತಿನ ಮಠವೆಂದೂ' ಸಮೀಪದ ಜಡ್ಡಿನಲ್ಲಿದ್ದ ಮಠವನ್ನು 'ಜಡ್ಡಿನ ಮಠ'ವೆಂದು ಉಲ್ಲೇಖಿಸಲಾಗಿದೆ. ವೀರಭದ್ರ ದೇವರಿಗೆ ಅಮೃತ ಪಡಿಗಾಗಿ ಬಿಟ್ಟ ಭೂಮಿಯ ವಿವರವನ್ನು ಈ ದಾಖಲೆ ನೀಡುವುದರಿಂದ ಇಲ್ಲಿನ ವೀರಭದ್ರ ದೇವಸ್ಥಾನದ ಮಹತ್ವ ತಿಳಿಯುತ್ತದೆ.

ಉಡುಪಿ ತಾಲೂಕಿನಲ್ಲಿ ಮೇಲೆ ಉಲ್ಲೇಖಿಸಿದ ಮಠಗಳ ಜೊತೆಗೆ ಉಪ್ಪೂರು ಮಠ (ಕಲ್ಯಾಣಪುರ ಮಠದ ಶಾಖಾಮಠ) ಬಾರಕೂರು ಮಠ, ಪೆರ್ಡೂರು ಮಠ, ಬ್ರಹ್ಮಾವರದ ಮಠ, ಸೂಡಮಠ, ಸಾಸ್ತಾನಮಠ ಮುಂತಾದ ಮಠಗಳ ಹೆಸರುಗಳನ್ನು ಗುರುತಿಸಲಾಗಿದೆ. ಆದರೆ ಇವುಗಳ ಕುರಿತಾಗಿ ಹೆಚ್ಚಿನ ಮಾಹಿತಿ ಲಭ್ಯವಾಗಿಲ್ಲ.

**ಕಾರ್ಕಳ ಮತ್ತು ಮೂಡಬಿದಿರೆ**

ಈ ಪ್ರದೇಶದಲ್ಲಿ ಸುಮಾರು 12 ಮಠಗಳು ಅಸ್ತಿತ್ವದಲ್ಲಿ ಇದ್ದ ಕುರುಹುಗಳು ಲಭಿಸುತ್ತವೆ. ಇವುಗಳಲ್ಲಿ ಪ್ರಮುಖವಾದ ಮಠಗಳೆಂದರೆ ಮೂಡಬಿದ್ರೆಯ ಪೊನ್ನಚಾರಿ ಮಠ ಮತ್ತು ಕಾರ್ಕಳದ ಚರಂತಿಮಠ. ಇವುಗಳನ್ನೂ ಸೇರಿಸಿ ಉಳಿದವುಗಳು ಹೆಸರಿಗೆ ಮಾತ್ರ ಅಸ್ತಿತ್ವದಲ್ಲಿ ಇದ್ದು ಅಲ್ಪಸ್ವಲ್ಪ ಕುರುಹುಗಳನ್ನು ಉಳಿಸಿಕೊಂಡು ಬಂದಿದೆ.

**ಮೂಡಬಿದ್ರೆಯ ಪೊನ್ನಚಾರಿ ಮಠ:** ಮೂಡಬಿದ್ರೆಯಲ್ಲಿ ವಿರಕ್ತ ಸಂಪ್ರದಾಯದ ಪೊನ್ನಚಾರಿ ಮಠವು ಶ್ರೀ ತೋಂಟದ ಸಿದ್ದಲಿಂಗೇಶ್ವರರ ಕಾಲದಲ್ಲಿ ಸ್ಥಾಪನೆಯಾಗಿ ಕೆಳದಿ ಅರಸರ ಕಾಲದಲ್ಲಿ ಅಭಿವೃದ್ಧಿಯನ್ನು ಕಂಡಿತ್ತು. ಈಗಿನ ಪಡಿವಾಳ್ಸ್ ಹೋಟೆಲಿನ ಪಕ್ಕದಲ್ಲಿ ಪೇಟೆಮಠ ಎಂಬ ಇನ್ನೊಂದು ಮಠವೂ ಇತ್ತು.[131] ಮಠದ ಕುರುಹನ್ನೂ ಒಂದು ಶಿವಲಿಂಗದ ಚಿತ್ರದ ಕೆತ್ತನೆಯ ಕಲ್ಲನ್ನು ಈಗಲೂ ಕಾಣಬಹುದಾಗಿದೆ. ಈ ಮನೆತನದ ಸಿದ್ದಲಿಂಗಯ್ಯ ಸ್ವಾಮಿಗಳ ಸಮಾಧಿಯನ್ನು ಪೊನ್ನಚಾರಿ ಮಠದ ಮುಂಭಾಗದಲ್ಲಿ ಕಾಣಬಹುದಾಗಿದೆ. ಈ ಮಠಕ್ಕೆ ಸಂಬಂಧಿಸಿದಂತೆ 2 ರಿಂದ 3 ಮನೆತನಗಳು ಈ ಮಠದ ಸುತ್ತಲೂ ಕಾಣಸಿಗುತ್ತದೆ. ಮಠದ ದೇವರಾಗಿ ಸಿದ್ಧೇಶ್ವರರ ಮೂರ್ತಿ ಇದೆ. ಈ ಜಂಗಮ ಮಠಕ್ಕೆ ಹೈದರಾಲಿ ಬಂದು ವಾಸ್ತವ್ಯ ಮಾಡಿ ಈ ಪ್ರದೇಶದ ಮಾಂಡಳಿಕ ಅರಸರಿಂದ ಪೊಗದಿ, ಕಪ್ಪ ತರಿಸಿಕೊಳ್ಳುತ್ತಿದ್ದ.[132] ಅವನ ಮಗ ಟಿಪ್ಪು ಸುಲ್ತಾನ್, ಸರದಾರರಾದ ಶೇಖ್ ಅಲಿ ನವಾಬ ಮತ್ತು ಕೋಟೆ ನರಸಪ್ಪಯ್ಯ ಎಂಬುವರು ಈ ಮಠದ ಸಂಪರ್ಕ ಹೊಂದಿದ್ದರೆಂದು ಹೇಳಲಾಗಿದೆ.[133] ಇವುಗಳಲ್ಲದೆ ಸಮೀಪದ ಕೋಟೆಬಾಗಿಲು ಬಳಿ ಚೌಕಿಮಠ ಎಂಬ ಇನ್ನೊಂದು ಮಠವೂ ಇತ್ತು ಎನ್ನಲಾಗಿದೆ.

**ಪುಚ್ಚಮೊಗರು ಹಿರೇಮಠ:** ಮೂಡಬಿದ್ರೆಯಿಂದ 10 ಕಿ.ಮೀ. ದೂರದಲ್ಲಿರುವ ಪುಚ್ಚಮೊಗರು ಗ್ರಾಮದಲ್ಲಿ ಹಿರೇಮಠವು ಸ್ಥಾಪನೆಯಾಗಿದೆ. ಇಲ್ಲಿ ಸಿದ್ಧೇಶ್ವರ ದೇವರ ಸ್ಥಾಪನೆಯಾಗಿದೆ. ಐತಿಹಾಸಿಕ ಕಾಲದಲ್ಲಿ ಸ್ಥಾಪನೆಗೊಂಡ ಈ ಮಠವು ಕಾಲಾಂತರದಲ್ಲಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ. ಮಠದ ಅಂದಿನ ಭವ್ಯತೆಯನ್ನು ಸಾರುವ ಮಠದ ದಪ್ಪನೆಯ ಕೆತ್ತನೆಯ ಕಂಬಗಳು ಇಂದು ಮಣಿಪಾಲದ 'ಹಸ್ತಶಿಲ್ಪ' ಹೆರಿಟೇಜ್ ವಿಲೇಜ್‌ನಲ್ಲಿವೆ.

**ಚರಂತಿಮಠ:** ಮೂಡುಬಿದಿರೆ ತಾಲೂಕಿನ ಮೂಲ್ಕಿಯ ಬಪ್ಪನಾಡು ಗ್ರಾಮದಲ್ಲಿ ಸ್ಥಾಪನೆಯಾಗಿದ್ದ ಶ್ರೀ ಚರಂತಿಮಠವು ಶ್ರೀ ಯಡಿಯೂರು ಸಿದ್ಧಲಿಂಗೇಶ್ವರರ ಕಾಲದಲ್ಲಿ ಸ್ಥಾಪನೆಯಾಗಿದೆ. ಶ್ರೀ ಸಿದ್ಧಲಿಂಗೇಶ್ವರರು ಕೇರಳದಲ್ಲಿ ಸಂಚಾರ ಕೈಗೊಂಡು ಈ ಪ್ರದೇಶಕ್ಕೆ ಬಂದು ನೆಲೆಸಿ ಧರ್ಮ ಜಾಗೃತಿಯನ್ನುಂಟುಮಾಡಿ ಮಠವನ್ನು ಸ್ಥಾಪಿಸಿದರು. ಗುರುಗಳು ಇಲ್ಲಿಗೆ ಬಂದಂತಹ ಸಂದರ್ಭದಲ್ಲಿ ಮುಸಲ್ಮಾನ ಬಂಧುವೊಬ್ಬರು ಶ್ರೀ ಸಿದ್ದಲಿಂಗೇಶ್ವರರ ಸೇವೆಯನ್ನು ಮಾಡಿ ಗುರುಗಳು ನಿರ್ಗಮಿಸಿದ ನಂತರ ಶ್ರೀ ಸಿದ್ದಲಿಂಗೇಶ್ವರರ ದೇವಾಲಯವನ್ನು ಸ್ಥಾಪಿಸಿದರೆಂದು ಹೇಳಲಾಗುತ್ತಿದೆ.[134]

**ಮಹಾಂತಿನ ಮಠ:** ಬಪ್ಪನಾಡು ಗ್ರಾಮದಲ್ಲಿ ಗುರು ಪೀಠದ ಶ್ರೀ ಮಹಾಂತಿನ ಮಠವು ಸ್ಥಾಪನೆಯಾಗಿದೆ. ಈ ಮಠ ಹನ್ನೆರಡನೆಯ ಶತಮಾನಕ್ಕೂ ಪೂರ್ವದಲ್ಲಿಯೇ ಸ್ಥಾಪನೆಯಾಗಿತ್ತೆಂದು ಹೇಳಲಾಗುತ್ತಿದೆಯಾದರೂ ಇದಕ್ಕೆ ಚಾರಿತ್ರಿಕ ಆಧಾರಗಳಿಲ್ಲ. ಹಾಗೆಯೇ ತೋಕೂರು ಸಮೀಪ ಶ್ರೀ ಚಂದ್ರಮೌಳೇಶ್ವರ ದೇವಸ್ಥಾನವು ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ.[135]

**ಎಣ್ಣೆಹೊಳೆ ಮಠ:** ಕಾರ್ಕಳದಿಂದ ಹೆಬ್ರಿಗೆ ಹೋಗುವ ಮಾರ್ಗದಲ್ಲಿ ಅಜೆಕಾರಿನಿಂದ ಎರಡು ಕಿ.ಮೀ

ದೂರದ ಎಣ್ಣೆಹೊಳೆ ಎಂಬ ಗ್ರಾಮದ ಮಠದಲ್ಲಿ 'ಜೋಡು ಸಿದ್ಧೇಶ್ವರ' ದೇವರನ್ನು ಸ್ಥಾಪಿಸಲಾಗಿದೆ. ಸಿದ್ಧೇಶ್ವರರ ಪಕ್ಕದಲ್ಲಿ ವೀರಭದ್ರ ಕಡಲೆಬಸಯ್ಯ, ಬಸವಣ್ಣ, ಮುಂತಾದ ದೇವರುಗಳ ವಿಗ್ರಹವಿದೆ. ಈ ಮಠದ ಪಕ್ಕದಲ್ಲಿ ಎಣ್ಣೆಹೊಳೆ ಎಂಬ ಹೆಸರಿನ ಹೊಳೆ ಹರಿಯುತ್ತದೆ. ಮಠಕ್ಕೆ ಸಂಬಂಧಿಸಿದ ಅಲ್ಪ ಸ್ವಲ್ಪ ಬೇಸಾಯದ ಗದ್ದೆಗಳಿವೆ. ಈ ಮಠದ ಅಕ್ಕಪಕ್ಕದಲ್ಲಿ ಈ ಮಠಕ್ಕೆ ಸಂಬಂಧಿಸಿದಂತೆ 3, 4 ಮನೆಗಳಿವೆ.

**ಸಾಣೂರು ಮಠ:** ಕಾರ್ಕಳದಿಂದ ಬೆಳ್ಮಣ್ಣಿಗೆ ಹೋಗುವ ರಸ್ತೆಯಲ್ಲಿ ಸಾಣೂರು (ಕುಂಟಲಪಾಡಿಯಲ್ಲಿ) ಎಂಬ ಸ್ಥಳದಲ್ಲಿ ಮಠ ಸ್ಥಾಪನೆಯಾಗಿದೆ. ಮಠದ ಕುರುಹುಗಳು ಸಂಪೂರ್ಣ ಅಳಿದಿದ್ದು, ಒಂದು ಸಣ್ಣ ಜೋಪಡಿಯಲ್ಲಿ ಬಸವಣ್ಣ ದೇವರಿಗೆ ಪೂಜೆ ನಡೆಯುತ್ತದೆ. ಆದರೆ ಪಕ್ಕದಲ್ಲಿರುವ ಅತ್ಯಂತ ವಿಶಾಲವಾದ ಮಠದ ಕೆರೆ, ಒಂದು ಕಾಲದಲ್ಲಿ ಈ ಪ್ರದೇಶ ಬಹಳಷ್ಟು ಮಹತ್ವವನ್ನು ಪಡೆದಿರಬೇಕೆಂಬ ಸುಳಿವು ನೀಡುತ್ತದೆ. ಹಾಗೆಯೇ ಕಾರ್ಕಳ ಮೂಡಬಿದ್ರಿ ನಡುವೆ ಮಠದ ಕೆರೆಯೊಂದಿದ್ದು, ಇಲ್ಲಿಯೂ ಹಿಂದೆ ಜಂಗಮ ಮಠವಿದ್ದಿರಬಹುದಾದ ಕುರುಹು ನೀಡುತ್ತದೆ.[136]

**ಕಾಡಹೊಳೆ ಜಂಗಮೇಶ್ವರ ಮಠ:** ವರಂಗ ಪ್ರದೇಶದ ಕಾಡುಹೊಳೆ ಎಂಬ ಸ್ಥಳದಲ್ಲಿ 'ಬಸವಣ್ಣ' ದೇವರ ಸ್ಥಾಪನೆಯಾಗಿದೆ. ಮಠವನ್ನು ಇತ್ತೀಚೆಗೆ ಜೀರ್ಣೋದ್ಧಾರ ಮಾಡಲಾಗಿದೆ. ಮಠವು ಹಿಂದೆ, 300 ಮುಡಿ ಅಕ್ಕಿಯನ್ನು ಬೆಳೆಯುವಂತಹ ಭೂಮಿಯನ್ನು ಹೊಂದಿತ್ತು ಎಂಬ ಅಂಶ ತಿಳಿದುಬರುತ್ತದೆ. ಈ ಮಠದಲ್ಲಿನ ದೇವರ ಪೂಜೆಯನ್ನು ಬ್ರಾಹ್ಮಣರು ನಡೆಸುತ್ತಿರುವುದು ಮತ್ತು ಈ ಮಠದ ಆಡಳಿತದಾರರು ಅಜಿಲರು ಎಂಬ ಉಪನಾಮದ ಜೈನವಂಶಸ್ಥರು ಎಂಬುದು ಗಮನಾರ್ಹ.[137] ಈ ಮಠದ ಮೂಲ ಮನೆತನದವರಿಂದ ಬ್ರಾಹ್ಮಣ ಮತ್ತು ಜೈನರ ಆಡಳಿತಕ್ಕೆ ಬಂದ ಹಿನ್ನೆಲೆ ತಿಳಿದು ಬಂದಿಲ್ಲ. ಬಹುಶ: ಈ ಮಠಕ್ಕೆ ಸಂಬಂಧಿಸಿದವರು ನಿಸ್ಸಂತತಿಯಾದಾಗ ಈ ಪಲ್ಲಟಗಳು ನಡೆದಿರಬೇಕು. ಈ ಮಠಕ್ಕೆ ಮೂಲ ಹೆಸರು ಸಿದ್ಧೇಶ್ವರ ಮಠ ಎಂಬುದಾಗಿದ್ದು, ಪ್ರಸ್ತುತ 'ಜಂಗಮೇಶ್ವರ' ಎಂಬ ಹೆಸರಿನಿಂದ ಕರೆಯಲ್ಪಡುತ್ತಿದೆ.[138]

**ಕಾರ್ಕಳದ ಚರಂತಿಮಠ:** ಕಾರ್ಕಳದ ರಥಬೀದಿಯಲ್ಲಿ ಸ್ಥಾಪನೆಯಾಗಿರುವ ಈ ಮಠದ ಮುಖ್ಯ ದೇವರು ವೀರಭದ್ರ. ಕಾರ್ಕಳದಲ್ಲಿ ಮೊದಲಿದ್ದ ಹಳೆ ವೀರಭದ್ರ ಗುಡಿಯ ಕಟ್ಟಡವು ಶಿಥಿಲವಾಗಲು ಈ ಹಿಂದಿನ ಅರ್ಚಕರಾದ ಶ್ರೀ ಗುರು ಶಾಂತಯ್ಯನವರ ಮುತ್ತಜ್ಜ ಜಾಲಂಧ್ರ ಸಹಿತವಾದ ಪ್ರದಕ್ಷಿಣ ಪಥದ ಶ್ರೀಗೋಲ ಗರ್ಭಗೃಹ ಕಟ್ಟಿಸಿದ್ದರು.[139] ಈ ಗುಡಿಯಲ್ಲಿರುವ ಚತುರ್ಭುಜ ಸ್ಥಾನಿಕ ವೀರಭದ್ರನಿಗೆ ಕರಂಡ ಮುಕುಟವಿದೆ. ಬಲ ಹಿಂಗೈಯಲ್ಲಿ ಖಟ್ವಾಂಗ ಬಾಣ(ತಲೆ ಬುರುಡೆ ಸಿಕ್ಕಿಸಿದ ಬಾಣ) ಎಡಹಿಂಗೈಯಲ್ಲಿ ಖಟ್ವಾಂಗ ಬಿಲ್ಲು, ಮುಂಗೈಯಲ್ಲಿ ನೀಳಖಡ್ಗ, ಎಡಮುಂಗೈಯಲ್ಲಿ ಸೊಂಟದ ಮಟ್ಟದಲ್ಲಿ ಎತ್ತಿ ಹಿಡಿದ ಸಣ್ಣ ಢಾಲು ಇದೆ. ಅಗಲ ಮುಖ, ಕರ್ಣಕುಂಡಲ, ಹಣೆಯಲ್ಲಿ ಶಿವಲಿಂಗ, ಕತ್ತಿನಲ್ಲಿ ಲಿಂಗದ ಕಾವಿ ಆಕೃತಿ ಇರುವ ಎತ್ತಿದ ಮೀಸೆಯ ಪ್ರಸನ್ನ ಗಂಭೀರ ವದನವಿದೆ. ಈ ಗುಡಿಯ ಎದುರು ಬದಿಯಲ್ಲಿ ಜಾಳೆಹೊನ್ನೂರು ಶಾಖೆಗೆ ಸೇರಿದ ಮಹತ್ತಿನ ಮಠವಿದ್ದು ಶಿಥಿಲವಾಗಿತ್ತು. ತದನಂತರ ಅದನ್ನು ಕ್ರಿ.ಶ. 1954ರಲ್ಲಿ ಜೀರ್ಣೋದ್ಧಾರ

ಮಾಡಿ ಜಂಗಮ ಮಠವಾಗಿ ರೂಪಿಸಲಾಯಿತು. ಈ ಮಠದಲ್ಲಿ ಬೆಳ್ಳಿಯ ವೀರಭದ್ರನ ಉತ್ಸವ ಮೂರ್ತಿ ಇದೆ.[140] ಇಲ್ಲಿ ನಡೆಯುವ ವಾರ್ಷಿಕ ಪೂಜಾದಿಗಳಲ್ಲಿ ವೀರಶೈವೇತರರೂ ಈ ದೇವರಿಗೆ ನಡೆದುಕೊಳ್ಳುತ್ತಾರೆ. ವಿಶೇಷವಾಗಿ ವೀರಶೈವರೊಡನೆ ಮಡಿವಾಳರೂ, ಈ ದೇವರಿಗೆ ನಡೆದುಕೊಳ್ಳುವಲ್ಲಿ ವೀರಶೈವ ಮಡಿವಾಳರ ಮೂಲಕ ವೀರಭದ್ರವತಾರಿ ಮಡಿವಾಳ ಮಾಚಯ್ಯನ ಆರಾಧನೆಯೂ ಇಲ್ಲಿ ಮೊದಲಿಗೆ ನಡೆಯುತ್ತಿದ್ದಿರಬೇಕು ಎಂದೆನಿಸುತ್ತಿದೆ. ತುಳುನಾಡಿನ ಇತರ ಜಂಗಮ ಮಠಗಳಲ್ಲಿ ವೀರಭದ್ರನ ಆರಾಧನೆ ಇದ್ದಿರಬಹುದಾದರೂ ಹೆಚ್ಚಿನ ಮಾಹಿತಿ ಲಭ್ಯವಿಲ್ಲ.

**ಕುಂದಾಪುರ ತಾಲೂಕು:** ಈ ತಾಲೂಕಿನಲ್ಲಿ ಸುಮಾರು 15ಕ್ಕೂ ಹೆಚ್ಚು ವೀರಶೈವ ಮಠಗಳು ಸ್ಥಾಪನೆಯಾಗಿದ್ದವು ಎಂಬುದಾಗಿ ತಿಳಿದುಬರುತ್ತದೆ. ಆದರೆ ಇಂದು ಕೆಲವೇ ಕೆಲವು ಮಠಗಳು ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿವೆ. ಅವುಗಳೆಂದರೆ, ಕೋಟೇಶ್ವರ ಮಠ, ಬೈಂದೂರು ಮಠ, ಬಾಸಬೈಲು ಮಠ, ಹಾಲಾಡಿ ಮಠ, ಸಿದ್ಧಾಪುರ ಮಠ, ಶಂಕರನಾರಾಯಣ ಮಠ ಮತ್ತು ಕಂಡಲೂರು ಮಠ,

**ಕೋಟೇಶ್ವರ ಮಠ:** ಕುಂದಾಪುರ ತಾಲೂಕಿನ ಕೋಟೇಶ್ವರದಲ್ಲಿ ತುಳುನಾಡಿನ ಅತ್ಯಂತ ಪ್ರಾಚೀನ ಮಠವೊಂದು ಸ್ಥಾಪನೆಯಾಗಿತ್ತು. ಈ ಮಠದಲ್ಲಿ 'ಬಸವೇಶ್ವರ' ದೇವರ ಸ್ಥಾಪನೆಯಾಗಿತ್ತು. ಆದರೆ ಈಗ ಅಲ್ಲಿರುವ 'ಬಸವೇಶ್ವರ' ದೇವರನ್ನು ಬಾಸುಬೈಲುನಲ್ಲಿರುವ ಬಾಳೆಕೊಪ್ಪ ಮಠದ ಹತ್ತಿರ ಇರುವ ಹೊಸಮನೆ ಶಿವಲಿಂಗಯ್ಯ ಎಂಬವರ ಮನೆಯಲ್ಲಿ ಪ್ರತಿಷ್ಠಾಪಿಸಲಾಗಿದೆ ಎನ್ನಲಾಗಿದೆ.[141] ಕ್ರಿ.ಶ 1373ರಲ್ಲಿ ನಂದಿನಾಥ, ಭೃಂಗಿನಾಥ, ವೀರಭದ್ರ ದೇವ ಮತ್ತು ಗಣಕುಮಾರ ಹೆಗ್ಗಡೆ ಎಂಬ ವ್ಯಕ್ತಿಗಳು ಕೋಟೇಶ್ವರ ದೇವಾಲಯಕ್ಕೆ ಅದೇ ಗ್ರಾಮದಲ್ಲಿನ ಕೆಲಭೂಮಿಯನ್ನು ಖರೀದಿಸಿ ಅದರೊಂದಿಗೆ 100 ಹೊನ್ನುಗಳನ್ನು ದಾನವಾಗಿ ನೀಡಿದ್ದರು. 'ಉಭಯ ಜಂಗಮರ' ಆರೋಹಣೆಗಾಗಿ ಎಂಬ ಉಲ್ಲೇಖ ಬರುವ ಹಿನ್ನೆಲೆಯಲ್ಲಿ ವೀರಶೈವರು ಈ ಪ್ರದೇಶದಲ್ಲಿದ್ದುದನ್ನು ಸೂಚಿಸುತ್ತದೆ.[142] ಕ್ರಿ.ಶ. 1562ರಲ್ಲಿ ಬಾರಕೂರು ರಾಜ್ಯಪಾಲ ಕಲೆಯ ಯೆಲ್ಲಪ್ಪ ಒಡೆಯನ ಆಡಳಿತ ಕಾಲದಲ್ಲಿ ಕೋಟೇಶ್ವರ ದೇವರ ಸನ್ನಿಧಿಯಲ್ಲಿ ಬಸರೂರ ಪಡುವ ಕೇರಿಯ ಗಣಪಸೆಟ್ಟಿಯ ಮಗ ಹೊಲೆಯ ಬಳಿಯ ಚತುಸೆಟ್ಟಿಯು ಮಠವನ್ನು ಕಟ್ಟಿಸಿ ಪೂಜಾದಿಗಳಿಗೆ ನೀಡಿದ ದಾನ ಶಾಸನೋಕ್ತವಾಗಿದೆ.[143] ಇಲ್ಲಿ ಕಾಣಸಿಗುವ ದಾಸೋಹ ಧರ್ಮವನ್ನು ಸೂಚಿಸುವ ನಿತ್ಯ ಛತ್ರ, ಮಠದ ಪಾದುಕೆ (ಗುರುಸೋಧಿ) ರುದ್ರಾಭಿಷೇಕ, ಶಿವರಾತ್ರಿ ಪುಣ್ಯಕಾಲದ ಧರ್ಮದ ಕ್ರಮ ಇವೆಲ್ಲ ವೀರಶೈವ ಮಠದ ಕ್ರಮಗಳಂತೆಯೇ ಕಾಣುತ್ತವೆ. ಸೋಮಶೇಖರ ನಾಯಕನ ಸಂಬಂಧಿ, ಪರಮೇಶ್ವರಮ್ಮ ಎಂಬವಳು ಇಲ್ಲಿ ಜಂಗಮ ಮಠವನ್ನು ಕಟ್ಟಿಸಿದ ಮಾಹಿತಿ ದೊರೆಯುತ್ತದೆ.[144]

**ಮಂತ್ರರಾಜಪುರದ ಹಿರಿಯಮಠ:** ಕೆಳದಿಯ ಬಸವಪ್ಪನಾಯಕನು ಕುಂದಾಪುರ ತಾಲೂಕಿನ ಈಗಿನ ಸಿದ್ದಾಪುರ ಪೇಟೆಯ ಸಮೀಪದ ಗ್ರಾಮವೊಂದನ್ನು ನವೀಕರಿಸಿ ಅದಕ್ಕೆ 'ಮಂತ್ರರಾಜಪುರ' ವೆಂದು ನಾಮಕರಣ ಮಾಡಿದ್ದಲ್ಲದೆ ಮಂತ್ರಿ ಷಡಕ್ಷರಯ್ಯನ ಮುಖಾಂತರ ಅಲ್ಲಿ ಮಠವನ್ನು ಕಟ್ಟಿಸಿ ವಿಶೇಷ

ಭೂದಾನ ದತ್ತಿಗಳನ್ನು ಶಿವಜಂಗಮಾರ್ಥವಾಗಿ ನೀಡಿ, ಆ ಮಠವನ್ನು ಗುರು ನಂಜುಂಡಸ್ವಾಮಿಗಳಿಗೆ ಧಾರೆಯೆರೆದನು.[145] ಮಂತ್ರರಾಜಪುರದಲ್ಲಿ ನಡೆಯುವ ಸಿದ್ಧೇಶ್ವರ ರಥೋತ್ಸವ ನೋಡಲು ಪ್ರತಿವರ್ಷ ಜಂಗಮ ಭಕ್ತರುಗಳು ಬರುತ್ತಿದ್ದರು ಎಂಬುದೂ ಈ ಮಠ ಪ್ರಸಿದ್ಧವಾಗಿತ್ತು ಎಂಬುದರ ಸೂಚನೆಯಾಗಿದೆ.[146]

**ಕಾಲಾತೋಡು ಮಠ:** ಕುಂದಾಪುರದ ಕಂಬದ ಕೋಣೆ ಮತ್ತು ಕೊಲ್ಲೂರು ಮಾರ್ಗದಲ್ಲಿ ಕಂಬದ ಕೋಣೆಯಿಂದ 3ಕಿ.ಮೀ ದೂರದಲ್ಲಿ ಕಾಲಾತೋಡು ಮಠ ಇದೆ. ಇಲ್ಲಿಯ ಮೂಲ ದೇವರು 'ಜಟ್ಟಿಗೇಶ್ವರ' ಆದರೆ ಇಲ್ಲಿ ಈಗ 'ಮಹಾಲಸ ಮಾರಿಕಾಂಬ' ದೇವರ ಪ್ರತಿಷ್ಠಾಪನೆ ಮಾಡಲಾಗಿದೆ.[147]

**ಅಲ್‌ಕುದ್ರು ಮಠ:** ಕುಂದಾಪುರ ತಾಲೂಕಿನಲ್ಲಿ ಇರುವ ಉಪ್ಪುಂದ ಎಂಬ ಊರಿನಲ್ಲಿ ಉಪ್ಪಿನ ಕುದ್ರು ಎಂಬ ಸ್ಥಳದಲ್ಲಿ ಒಂದು ಗೋಪಾಲಕೃಷ್ಣ ದೇವಸ್ಥಾನವಿದೆ. ಈ ದೇವಸ್ಥಾನದ ಉತ್ತರ ಭಾಗದಲ್ಲಿ ಪ್ರತ್ಯೇಕ ಗುಡಿಯಲ್ಲಿ ಪೂರ್ವಮುಖವಾಗಿ ಕೆಂಪುಕಲ್ಲಿನ ಗರ್ಭಗುಡಿಯಿದೆ. ಸುತ್ತಲೂ ಪೌಳಿ ಇದ್ದ ಹಾಗೆ ಕಲ್ಲಿನ ಪಂಚಾಂಗ ಇದೆ. ಈ ದೇವಸ್ಥಾನದಲ್ಲಿ ಪಾಣಿ ಪೀಠದ ಮೇಲೆ ಪುಟ್ಟ ಶಿವಲಿಂಗವಿದೆ. ದೇವಸ್ಥಾನದ ಆಡಳಿತವನ್ನು ಗೋಪಾಲಕೃಷ್ಣ ದೇವಸ್ಥಾನದ ಆಡಳಿತ ಮಂಡಳಿಯವರೇ ನಡೆಸುತಿದ್ದಾರೆ. ಈ ದೇವಸ್ಥಾನಕ್ಕೆ ಅಯ್ಯನವರ ಮಠ ಹೆಸರಿರುವುದರಿಂದ ಮತ್ತು ಅಲ್ಲಿನ ಸುತ್ತ ಮುತ್ತ ಪರಿಸರದವರ ಹೇಳಿಕೆಯಿಂದ ಇಲ್ಲಿ ವೀರಶೈವರು ಇದ್ದರು ಎಂಬುದು ತಿಳಿದುಬರುತ್ತದೆ.[148] ಅಯ್ಯನವರ ಮಠ' ವನ್ನು ಬ್ರಾಹ್ಮಣರು ಆಡಳಿತ ನಡೆಸಿಕೊಂಡು ಹೋಗುತ್ತಿರುವುದು ಮಠೀಯ ಸ್ಥಿತ್ಯಂತರವನ್ನು ಸೂಚಿಸುತ್ತದೆ.

**ಬಸರೂರು:** ಕುಂದಾಪುರ ತಾಲೂಕಿನ ಬಸರೂರು ದೇವಾಲಯಗಳ ಮಾತ್ರವಲ್ಲದೇ ಆರ್ಥಿಕ ವ್ಯವಹಾರಗಳ ಕೇಂದ್ರವೂ ಆಗಿತ್ತು. ಕ್ರಿ.ಶ.1527ರ ಬಸರೂರು ಮಹಾಲಿಂಗೇಶ್ವರ ದೇಗುಲ ಶಾಸನ ಹೇಳುವಂತೆ ಬಸರೂರ ಪಡುವ ಕೇರಿಯ ನಖರೇಶ್ವರದ ಸೋಮಣ್ಣ ಸೆಟ್ಟಿಯ ಮಗ ಶಂಕರ ಸೆಟ್ಟಿಯು ಮಠವನ್ನು ಕಟ್ಟಿಸಿ ಧರ್ಮ ಮಾಡಿದ ಸಂಗತಿ ತಿಳಿದುಬರುತ್ತದೆ.[149] ಕೆಳದಿ ವೀರಭದ್ರನ ಆಳ್ವಿಕೆಯ ಕಾಲದಲ್ಲಿ ಬಸ್ರೂರು ವೀರಶೈವ ಸಿದ್ಧಾಂತದ ಅಧ್ಯಯನ ಕೇಂದ್ರವಾಗಿದ್ದು, ಕ್ರಿ.ಶ.1641ರಲ್ಲಿ ಬಸವಣ್ಣ ಎಂಬವನು ಇಲ್ಲಿ ಮಠವನ್ನು ಸ್ಥಾಪಿಸಿದ್ದ. ಈ ಮಠಕ್ಕೆ ವೀರಭದ್ರ ನಾಯಕ ಭೂದಾನ ನೀಡಿದ್ದ.[150] ವೀರಭದ್ರನಾಯಕನ ಆಡಳಿತ ಕಾಲದಲ್ಲಿ ಬಸ್ರೂರಿನ ಜೈನ ವರ್ತಕರು ಇಲ್ಲಿ ಮಠ ಕಟ್ಟಲು ಸಹಾಯ ಮಾಡಿ ತಮ್ಮ ಭೂಮಿಯ ಕೆಲವು ಉತ್ಪತ್ತಿಗಳನ್ನು ಮೂಲಸಾಧನ ಪಟ್ಟಿಯಾಗಿ ಬಿಟ್ಟುಕೊಟ್ಟರು.[151] ಮೇಲೆ ತಿಳಿಸಿದವುಗಳೆಲ್ಲವೂ ಶಾಸನೋಕ್ತ ವೀರಶೈವ ಮಠಗಳಾಗಿದ್ದು ಇಂದಿಗೆ ಅವುಗಳ ಕುರುಹುಗಳು ಬಸರೂರಿನಲ್ಲಿ ಎಲ್ಲಿಯೂ ಕಾಣಸಿಗುವುದಿಲ್ಲ.

**ಚಿಲುಮೆ ಕೆರೆ:** ಕುಂದಾಪುರ ತಾಲೂಕಿನ ಬಸರೂರಿನಲ್ಲಿ ಈ ಕೆರೆ ಇದೆ. ಬಹಳ ಹಿಂದೆ ಇಲ್ಲಿ ವೀರಶೈವ ಮಠ ಹಾಗೂ ಗುಡಿ ಇದ್ದಿತೆಂದು ತಿಳಿದುಬರುತ್ತದೆ. ಅದರ ಸಮೀಪದಲ್ಲಿರುವ ಕೆರೆಯೇ ಚಿಲುಮೆ ಕೆರೆ. ಹಿಂದೆ ಗುಡಿ ಇದ್ದ ಜಾಗದಲ್ಲಿ ಈಗಲೂ ಪೂಜೆ ನಡೆಯುತ್ತದೆ. 'ಮತ್ಯಾಡಿ' ಎಂಬ ಲಿಂಗವಂತ ಕುಟುಂಬ ವರ್ಷಕ್ಕೊಮ್ಮೆ ಇಲ್ಲಿಗೆ ಬಂದು ಪೂಜೆ ಸಲ್ಲಿಸಿ ಹೋಗುತ್ತಿದ್ದರೆಂಬ ಮಾಹಿತಿ ಇದೆ.[152] ಬಸರೂರಿನ

ರೋಮನ್ ಕೆಥೋಲಿಕರ ಸೈಂಟ್ ಮೇರಿ ಇಗರ್ಜಿಯ ನೈರುತ್ಯದಿಕ್ಕಿನಲ್ಲಿ ಚಿಲುಮೆ ಮಠವಿದ್ದ ಜಾಗವನ್ನು ಕಾಣಬಹುದಾಗಿದೆ. ಮೇಲೆ ಉಲ್ಲೇಖಿಸಿದ ಮಠಗಳಲ್ಲದೇ ಇನ್ನು ಹಲವಾರು ಲಿಂಗವಂತ ಮಠಗಳು ಕುಂದಾಪುರ ತಾಲೂಕಿನಲ್ಲಿ ಇದ್ದವೆಂದು ಹೇಳಲಾಗಿದೆ. ಅವುಗಳೆಂದರೆ ಹುಣಸೆಮಕ್ಕಿ, ಬೈಂದೂರು ಮಠ, ಹಾಲಾಡಿ ಮಠ, ಶಂಕರನಾರಾಯಣ ಮಠ, ಕುಂಬಾಶಿ ಮಠ ಇತ್ಯಾದಿ.

**ಬಂಟ್ವಾಳ ತಾಲೂಕು**

ಇಲ್ಲಿ ಕೆಳದಿ ಅರಸರ ಕಾಲದಲ್ಲಿ ಲಿಂಗವಂತರ ಸುಮಾರು 8 ಮಠಗಳು ಸ್ಥಾಪನೆಯಾಗಿದ್ದವೆಂಬ ಮಾಹಿತಿ ದೊರೆಯುತ್ತದೆ. ಶೃಂಗೇರಿ ಮಠದ ನಿರೂಪವೊಂದು ಬಂಟ್ವಾಳ ಪೇಟೆಯಲ್ಲಿ ವೀರಮ್ಮ ಎಂಬವರ ಹೆಸರಲ್ಲಿ ಕಟ್ಟಿಸಿದ್ದ ವಿರಕ್ತ ಮಠದ ಸುಳಿವು ನೀಡುತ್ತದೆ.[153] ಬಂಟ್ವಾಳ ತಾಲೂಕಿನಲ್ಲಿ ಇದ್ದ 8 ಮಠಗಳಲ್ಲಿ ಪ್ರಸ್ತುತ 3 ಮಠಗಳನ್ನು ಗುರುತಿಸಬಹುದು.

**ಕುರ್ನಾಡು:** ಬಂಟ್ವಾಳ ತಾಲೂಕಿನ ಕಾರ್ನಾಡು ತಾಲೂಕು ಕೇಂದ್ರದಿಂದ ನೈರುತ್ಯಕ್ಕೆ 30ಕಿ.ಮೀ ದೂರದಲ್ಲಿದೆ. ಕುರ್ನಾಡು ಗ್ರಾಮದಲ್ಲಿ ಸ್ಥಾಪನೆಯಾಗಿದ್ದ ಮಠವು ಶ್ರೀಕಗ್ಗರೆ ಕಾಳಯ್ಯ ಸ್ವಾಮಿಗಳ ಕಾಲದಲ್ಲಿ ಪ್ರಸಿದ್ಧಿ ಪಡೆದಿತ್ತು ಎಂದು ಹೇಳಲಾಗುತ್ತದೆ.[154] ಆದರೆ ಈಗ ಮಠದ ಇತಿಹಾಸ ತಿಳಿಸುವ ಯಾವುದೇ ಕುರುಹುಗಳು ಸಿಗುತ್ತಿಲ್ಲ.

**ಮಠದಪಾಡಿ–ವಗ್ಗ:** ಬಂಟ್ವಾಳ ಬೆಳ್ತಂಗಡಿ ರಸ್ತೆಯಲ್ಲಿ ಕಾರಿಂಜ ಕ್ರಾಸ್ ಬಳಿ ಸ್ವಲ್ಪ ದೂರದಲ್ಲಿ ದಟ್ಟವಾದ ಗಿಡ ಮರಗಳಿಂದ ಆವೃತವಾದ ಮಠದ ಪಾಡಿ ಇದೆ. ಊರಿನ ಹಿರಿಯರು ಹೇಳುವಂತೆ ಈ ಹಿಂದೆ ಇದು ವೀರಶೈವರ ಮಠವಾಗಿತ್ತು. ಈ ಮಠದ ಕುರುಹುಗಳು ಇಂದಿಗೂ ಕಾಣಸಿಗುತ್ತವೆ. ಆದರೆ ಸುಮಾರು 150 ವರ್ಷಗಳ ಹಿಂದೆ ಕಲ್ಯಾಣಪ್ಪನ ದಾಳಿಯ ಸಂದರ್ಭದಲ್ಲಿ ಇಲ್ಲಿಯ ವೀರಶೈವರು ಈ ಸ್ಥಳವನ್ನು ಬಿಟ್ಟು ಹೋದರೆಂದು ಪ್ರತೀತಿ.[155]

**ವಿಟ್ಲದ ಕಾಡು ಮಠ:** ಬಂಟ್ವಾಳ ತಾಲೂಕಿನ ವಿಟ್ಲ ಗ್ರಾಮವು ತಾಲೂಕು ಕೇಂದ್ರದ ಉತ್ತರಕ್ಕೆ 30ಕಿ.ಮೀ ದೂರದಲ್ಲಿದೆ. ಇಲ್ಲಿ ಕಾಡು ಮಠವು ಕೆಳದಿಯ ಸೋಮಶೇಖರ ನಾಯಕನ ಕಾಲದಲ್ಲಿ ಸ್ಥಾಪನೆಯಾಗಿದ್ದು, ಕೆಳದಿ ಅರಸರ ಸಂಬಂಧಿ ನಿರ್ವಾಣಯ್ಯನ ಮನೆತನದವರು ಇದರ ಸ್ಥಾಪಕರು ಎಂದು ಹೇಳಲಾಗಿದೆ.[156] ವಿಟ್ಲ ಪ್ರಾಂತ್ಯದ ಸಾಮಂತನಾಗಿದ್ದ ಡೊಂಬ ಹೆಗ್ಗಡೆಯು ನಿರ್ವಾಣಯ್ಯನಿಗೆ ಕೆಲವು ಗ್ರಾಮಗಳನ್ನು ಕಾಡು ಮಠದ ನಿರ್ವಹಣೆಗೆಂದು ಬಿಟ್ಟು ಕೊಟ್ಟಿರುವ ಉಲ್ಲೇಖ ದೊರೆಯುತ್ತದೆ. ಈ ಮಠವು ದಕ್ಷಿಣ ಕನ್ನಡ ಜಿಲ್ಲೆಯ ಮಠಗಳಲ್ಲಿ ಅತ್ಯಂತ ಶ್ರೀಮಂತ ಮಠವಾಗಿತ್ತೆಂಬ ಅಭಿಪ್ರಾಯವಿದೆ. ಇಂದು ಈ ಮಠವು ಜೀರ್ಣೋದ್ಧಾರಗೊಂಡಿದೆ. ವಿಟ್ಲದ ಡೊಂಬ ಹೆಗ್ಗಡೆ, ಇಕ್ಕೇರಿಗೆ ಕಪ್ಪವನ್ನು ಕೊಡದೆ ಹೋಗಿದ್ದರಿಂದ ಅವನನ್ನು ಬಂಧಿಸಿ ಅರಮನೆಗೆ ಕೊಂಡು ಹೋಗುವಾಗ ಸಂಸ್ಥಾನದ ಪ್ರತಿನಿಧಿ ಸುಂಕಪ್ಪ ಶೆಟ್ಟಿಯ ಮಗ

ನಿರ್ವಾಣ ಶೆಟ್ಟಿ ಅವನಿಗೆ ಜಾಮೀನು ಕೊಟ್ಟು ಹಣವನ್ನು ಪಾವತಿಸಿ ಹೆಗ್ಗಡೆಯನ್ನು ಬಿಡುಗಡೆ ಮಾಡಲಾಯಿತು. ಈ ಸಹಾಯ ಸ್ಮರಿಸಿ ವಿಟ್ಲದ ಅರಸರು ಕೊಲ್ನಾಡು ಮತ್ತು ವಿಟ್ಲದ ಸಮೀಪದ ಚಂದಪ್ಪಾಡಿ, ಕಾಡುಮಠ ಮತ್ತು ಸರ್ಕಳ ಎಂಬ ಮೂರು ಭಾಗಗಳಲ್ಲಿ ಭೂಮಿಯನ್ನು ನಿರ್ವಾಣಶೆಟ್ಟಿಗೆ ಉಂಬಳಿ ಕೊಟ್ಟರು.[157]

**ಬೆಳ್ತಂಗಡಿ ತಾಲೂಕು:** ಈ ಭಾಗದಲ್ಲಿ ಶ್ರೀ ಯಡಿಯೂರು ಸಿದ್ದಲಿಂಗೇಶ್ವರರು ಹಾಗೂ ಕೆಳದಿ ಅರಸರ ಕಾಲದಲ್ಲಿ ಸುಮಾರು ಹದಿನೆಂಟು ಮಠಗಳು ಸ್ಥಾಪನೆಯಾಗಿದ್ದವೆಂದು ಹೇಳಲಾಗಿದೆ.[158] ಆದರೆ ಇಂದು ಕೇವಲ ಕೆಲವು ಮಠಗಳನ್ನು ಮಾತ್ರ ಗುರುತಿಸಬಹುದಾಗಿದೆ. ಬೆಳ್ತಂಗಡಿಯಲ್ಲಿ ಗುರುವಾಯನಕೆರೆಮಠ, ಕೊಕ್ಕರಮಠ, ವೇಣೂರು ಮಠ, ಬೆಳ್ತಂಗಡಿಮಠ, ನಾರಾವಿ ಮಠ, ಪುದೋಟೆ ಮಠ, ಬಾರ್ಯಮಠ ಎಂಬ 7 ಮಠಗಳ ಕೆಲವು ಮಾಹಿತಿಗಳು ಲಭಿಸುತ್ತವೆ. ಕ್ರಿ.ಶ. 1712ರ ಬೈಲಂಗಡಿ ಮೂಲರ ಶಾಸನವೊಂದು, ಚೆನ್ನಪ್ಪರಸರಾದ ಮೂಲರು, ಚೆನ್ನ ಮಲ್ಲಣ್ಣ ಮತ್ತು ಅವನ ಮಗ ಚೆನ್ನ ಬಸವಯ್ಯನಿಗೆ ಭೂ ಸ್ವಾಸ್ತಿಯನ್ನು ನೀಡಿದ್ದರು.[159] ಇಲ್ಲಿ ದಾನ ಸ್ವೀಕರಿಸಿದ ವ್ಯಕ್ತಿಗಳ ಹೆಸರನ್ನು ಗಮನಿಸಿದಾಗ, ಇದು ಈ ಭಾಗದಲ್ಲಿ ವೀರಶೈವ ಪರಂಪರೆಗೆ ದೊರೆತ ಆಶ್ರಯಕ್ಕೆ ಉದಾಹರಣೆಯಾಗಿದೆ.

**ಕಟ್ಟೆ ಮಠ:** ಈ ಮಠವು ಕುಮಾರಧಾರ ಮತ್ತು ನೇತ್ರಾವತಿ ನದಿಗಳ ಸಂಗಮ ಕ್ಷೇತ್ರವಾದ ಉಪ್ಪಿನಂಗಡಿಯ ಪೂರ್ವ ಭಾಗದಲ್ಲಿದ್ದು, ಕ್ರಿ.ಶ.1650ರಲ್ಲಿ ಸ್ಥಾಪನೆಯಾಗಿದೆ ಎಂಬ ಅಭಿಪ್ರಾಯವಿದೆ.[160] ದಾಸೋಹ ಧರ್ಮಕ್ಕೆ ಈ ಮಠ ಹೆಸರುವಾಸಿಯಾಗಿದ್ದು ಈ ಮಠದ ಪ್ರಸಿದ್ಧಿಗೆ ಕಾರಣರಾದವರು ಶ್ರೀ ಗುರುಶಾಂತಯ್ಯ ಸ್ವಾಮಿಗಳು. ಕೆಳದಿ ಅರಸರ ಶ್ರೇಯಸ್ಸನ್ನು ಬಯಸಿದ್ದ ಶ್ರೀ ಗುರುಶಾಂತಯ್ಯನವರನ್ನು ಕ್ರಿ.ಶ. 1780ರಲ್ಲಿ ಟಿಪ್ಪು ಸುಲ್ತಾನ್ ಬಂಧಿಸಿ ಕರೆದೊಯ್ಯುವಾಗ ಚಿನ್ನದ ನಾಣ್ಯಗಳನ್ನು ತಮ್ಮ ಖಾವಿಯ ನಿಲುವಂಗಿಯಲ್ಲಿ ತುಂಬಿ ಕೊಂಡು ದಾರಿಯುದ್ದಕ್ಕೂ ಬಡಬಗ್ಗರಿಗೆ ದಾನಮಾಡುತ್ತಾ ಹೋದರೆಂದು ಹೇಳುವ ಜನಪದ ಕಥೆಯೊಂದಿದೆ. ಈ ಮಠದಲ್ಲಿ ಇಂದು ಗಣಪತಿ ದೇವಾಲಯವು ಮಾತ್ರ ಉಳಿದಿದೆ.[161]

**ಗುರುವಾಯನಕೆರೆ ಮಠ:** ಬೆಳ್ತಂಗಡಿ ಸಮೀಪದ ಗುರುವಾಯನ ಕೆರೆ, ಕೆಳದಿ ಅರಸರ ಕಾಲದಲ್ಲಿ ವೀರಶೈವ ಕೇಂದ್ರವಾಗಿದ್ದು ಇಲ್ಲಿ ಮಠವಿತ್ತು. ಮಠಾಧಿಪತಿಯಾದ ಲುದ್ದಿ ಗುರುವಯ್ಯನು ಜನೋಪಕಾರವಾಗಿ ಕಟ್ಟಿಸಿದ ಕೆರೆ ಕಾಲಕ್ರಮದಲ್ಲಿ ಗುರುವಾಯನ ಕೆರೆಯಾಯಿತು ಎಂದು ಪ್ರತೀತಿ.[162]

**ವೇಣೂರು ಮಠ :** ವೇಣೂರಿನಲ್ಲಿ ನಿರ್ವಾಣ ಸ್ವಾಮಿಯವರ ಮಠವಿತ್ತೆಂದು ಕ್ರಿ.ಶ.1710ರ ಶಾಸನವೊಂದು ತಿಳಿಸುತ್ತದೆ.[163] ಅಲ್ಲಿ ಚೆನ್ನವೀರ ದೇವರು ಮಠಾಧಿಪತಿಯಾಗಿದ್ದು ವೇಣೂರಿನ ಪಟ್ಟಣ ಶೆಟ್ಟಿ, ಮೋನಪ್ಪ ಶೆಟ್ಟರು ಕೇಳಿಕೊಂಡ ಪ್ರಕಾರ ಅಜಿಲರಸರು ಈ ಮಠಕ್ಕೆ ಕೇಳದ ಮಾಗಣೆ ಅಡಿಂಜದ ಗ್ರಾಮದಲ್ಲಿ ಭೂ ಸ್ವಾಸ್ತಿ ನೀಡಿದ್ದರು.

**ಮಂಗಳೂರು ತಾಲೂಕು**

ಮಂಗಳೂರು ತಾಲೂಕಿನಲ್ಲಿ ಕೆಳದಿ ಅರಸರ ಕಾಲದಲ್ಲಿ ಹದಿನೆಂಟು ಮಠಗಳು ಇದ್ದವೆಂದು ಪ್ರತೀತಿ. ಆದರೆ ಇಂದು ಕೆಲವು ಮಠಗಳ ಹೆಸರುಗಳನ್ನು ಮಾತ್ರ ಗುರುತಿಸಬಹುದಾಗಿದೆ.

**ಗುರುಪುರ ಜಂಗಮ ಮಠ:** ಮಂಗಳೂರು ತಾಲೂಕಿನ ಗುರುಪುರ, ತಾಲೂಕು ಕೇಂದ್ರದಿಂದ ಈಶಾನ್ಯಕ್ಕೆ 15ಕಿ.ಮೀ ದೂರದಲ್ಲಿದೆ. ಇದನ್ನು ಕೆಳದಿ ವೆಂಕಟಪ್ಪ ನಾಯಕನು ನಿರ್ಮಿಸಿ ಗುರು ಚೆನ್ನಬಸಪ್ಪಸ್ವಾಮಿ ಎಂಬುವವರಿಗೆ ಉಂಬಳಿ ಸಹಿತವಾಗಿ ಧಾರೆ ಎರೆದುಕೊಟ್ಟನು ಎನ್ನಲಾಗಿದೆ.[164] ಕೆಳದಿ ರಾಣಿ ಚೆನ್ನಮ್ಮಾಜಿ ಕ್ರಿ.ಶ. 1676ರಲ್ಲಿ ಪೊಳಲಿ ದೇಗುಲದ ದರ್ಶನಕ್ಕೆ ಬಂದಾಗ ಈ ಮಠದಲ್ಲಿದ್ದಳು.[165] ಈ ಮಠಕ್ಕೆ ಮೂಳೂರು, ಕಂದಾವರ, ಕೊಳಂಬೆ, ಅಡ್ಡೂರು, ಕರಿಂಜೆ, ಎಲಿಯ, ಸಂಗಬೆಟ್ಟು, ನಡತೊಡಾರು, ಮೂಡಬಿದಿರೆ, ಮಂಜೇಶ್ವರ ಮುಂತಾದ ಗ್ರಾಮಗಳಲ್ಲಿ ಕೆಳದಿ ರಾಜರು ನೀಡಿದ್ದ ಉಂಬಳಿಗಳಿದ್ದವು. ಇದರಿಂದ ಹಾಗೂ ಈ ಮಠದ ಹೆಸರಿನ ಹಿನ್ನೆಲೆಯಲ್ಲಿ ಈ ಮಠವು ಕೆಳದಿ ಕಾಲದ ಗುರುಮಠವಾಗಿತ್ತೆಂದು ತೋರುತ್ತದೆ. ಇನ್ನೊಂದು ಮೂಲದ ಪ್ರಕಾರ ಈ ಜಂಗಮ ಮಠವು ಕ್ರಿ.ಶ. 15ನೇ ಶತಮಾನದಲ್ಲೇ ಸ್ಥಾಪನೆಯಾಗಿದೆ.[166] ಎಡೆಯೂರು ತೋಂಟದ ಸಿದ್ದಲಿಂಗೇಶ್ವರರು ಅನುಷ್ಠಾನ ಮಾಡಿದ ಜಾಗೃತ ಸ್ಥಳ ಇದಾಗಿದ್ದು ಮಠ ಸ್ಥಾಪನೆಗೊಂಡಿತು ಎಂದೂ ಹೇಳಲಾಗಿದೆ. ತದ ನಂತರ ಕ್ರಿ.ಶ.1615ರಲ್ಲಿ ಕೆಳದಿ ವೆಂಕಟಪ್ಪನಾಯಕನು ಮಠ ನಿರ್ಮಿಸಿ ಕೊಡುವ ಸಂದರ್ಭದಲ್ಲಿ ಅಲ್ಲಿಯ ಮೊದಲನೆ ಗುರು ಚೆನ್ನಬಸವಪ್ಪ ಸ್ವಾಮಿ ಆಗಿರುವ ಸಾಧ್ಯತೆ ಇದೆ. ತೊಳಹ ಮಹಲಿಂಗ ಅರಸನು ಕ್ರಿ.ಶ.1668ರಲ್ಲಿ ಬಿಟ್ಟ ದತ್ತಿ ಈ ಮಠದ ಗುರುಬಸವಪ್ಪನವರಿಗೇ ಇರಬೇಕು. ಸಂಗಬೆಟ್ಟು ಸಿದ್ದಕಟ್ಟೆಯಲ್ಲಿ ಈ ಮಠಕ್ಕೆ ಜಮೀನು ಇರುವಲ್ಲಿ ಅಲ್ಲಿಯ ಶಾಖಾ ಮಠವೊಂದರ ಉಸ್ತುವಾರಿಯೂ ಇವರಿಗಿದ್ದಿರಬೇಕು.[167] ಶಿವಯೋಗಿ ಶ್ರೀನೀಲಕಂಠ ಸನ್ಯಾಸಿಗಳು ಮುಳೂರಿಗೆ ಬಂದು ನೆಲೆಸಿ ಧರ್ಮ ಪ್ರಭಾವನೆ ಮಾಡುತ್ತಿದ್ದಾಗ ಇವರ ಆರಾಧ್ಯ ಭಕ್ತ ನಿರ್ವಾಣಪ್ಪನವರು ಶ್ರೀ ನೀಲಕಂಠೇಶ್ವರ ದೇವಸ್ಥಾನ ನಿರ್ಮಿಸಿ ಕೊಟ್ಟರು ಎನ್ನುವ ಅಭಿಪ್ರಾಯವೂ ಇದೆ.[168] ಮೂರೂರು ಕ್ರಮೇಣ ಮೂಳೂರು ಎಂದಾಯಿತು. ನಂತರದಲ್ಲಿ ಅಂದರೆ ಶಿವಾಚಾರ ಜಂಗಮ ಗುರುಗಳು ನೆಲೆಸಿದ ತಾಣ ಗುರುಪುರ ಎಂದಾಯಿತು. ಶ್ರೀ ನೀಲಕಂಠ ಸನ್ಯಾಸಿಗಳು ಶ್ರೀ ಗೋಸಲ ಸಿದ್ದೇಶ್ವರರ ಪರಂಪರೆಯಿಂದ ಬಂದವರು. ಇವರ ಭಕ್ತನಾಗಿದ್ದ ನಿರ್ವಾಣಯ್ಯ, ಶ್ರೀ ನೀಲಕಂಠ ಸನ್ಯಾಸಿಗಳಿಂದ ಮಠದ ಪುನರ್ ನಿರ್ಮಾಣಕ್ಕೆ ಅಸ್ತಿವಾರ ಹಾಕಿಸಿ ಇಲ್ಲಿ ಜಂಗಮಮಠವನ್ನು ಮತ್ತು ಶ್ರೀ ನೀಲಕಂಠೇಶ್ವರ ದೇವರ ದೇವಾಲಯವನ್ನು ಕಟ್ಟಿಸಿದ್ದ. ಇಲ್ಲಿ ಪಂಚ ಪರ್ವಾದಿಗಳು, ದಾನ ಧರ್ಮ ಮತ್ತು ದಾಸೋಹಗಳು ಆಚಂದ್ರಾರ್ಕವಾಗಿ ನಡೆಯುವ ಸಲುವಾಗಿ ಈ ಪ್ರದೇಶದ ಅಂದಿನ ದೊರೆ ಸೋಮಶೇಖರ ನಾಯಕನಿಗೆ ಅರಮನೆ ಕಾಣಿಕೆ ನೀಡಿ, ಅದರ ಪ್ರತಿಫಲವಾಗಿ ಸುಮಾರು ರೂಪಾಯಿ 2.320 ಕಂದಾಯ ತೆರುವ ಮೂಳೂರು, ಕಂದಾವರ, ಕೊಳಂಬೆ, ಅಡ್ಡೂರು, ಎಂಬ ನಾಲ್ಕು ಗ್ರಾಮಗಳನ್ನು ರಾಜನಿಂದ ಪಡೆದು.

ಧರ್ಮಕ್ಕೆ ಚ್ಯುತಿ ಬಾರದಂತೆ ಮಠದ ಆಡಳಿತ ನಿರ್ವಹಣೆಯನ್ನು ನಡೆಸುತ್ತ ಬರಬೇಕೆಂದು ಶ್ರೀ ನೀಲಕಂಠ ಸನ್ಯಾಸಿಗಳಿಗೆ, ನಿರ್ವಾಣಪ್ಪನವರು ಮಠದ ಸಮಸ್ತ ಜವಾಬ್ಧಾರಿಯನ್ನು ವಹಿಸಿ, ನೀಲಕಂಠೇಶ್ವರ ದೇವರ ದೇವಾಲಯ ಹಾಗೂ ಮಠವನ್ನು ತನ್ನ ಆರಾಧ್ಯ ಗುರುಗಳಿಗೆ ಭಕ್ತಿ ಪೂರ್ವಕವಾಗಿ ಸಮರ್ಪಿಸಿದ್ದನು.[169] ಈ ಮಠದ ಗುರು ಪರಂಪರೆಯ ಆಧಾರದ ಮೇಲೆ ಕನಿಷ್ಟ 330 ವರ್ಷಗಳ ಇತಿಹಾಸವನ್ನು ಗುರುತಿಸಬಹುದು.[170] ಹನ್ನೊಂದು ಗುರುಗಳ ಪೈಕಿ ಮಠದಲ್ಲಿ 9 ಗದ್ದುಗೆಗಳಿದ್ದು, ಗುರುಪರಂಪರೆಯ 8 ಹೆಸರುಗಳು ಮಾತ್ರ ದಾಖಲಾಗಿವೆ.

ಕೆಳದಿ ದೊರೆ ವೆಂಕಟಪ್ಪ ನಾಯಕ ರಾಜಪರಿವಾರದೊಂದಿಗೆ ಇಲ್ಲಿನ ಶ್ರೀ ಮಠಕ್ಕೆ ಸಂದರ್ಶನಾರ್ಥ ಬರುವಾಗ ತಂಗಲು ಇಲ್ಲಿ ಕಾಷ್ಠ ಶಿಲ್ಪದ ಅರಮನೆಯನ್ನು ನಿರ್ಮಿಸಿದ್ದ ಎನ್ನಲಾಗಿದೆ.[171] ಹಿಂದೆ ಅರಮನೆಗೆ ಉಪಯೋಗಿಸಿದ್ದು ಎನ್ನಲಾದ ಕಾಷ್ಠ ಶಿಲ್ಪದ ಬೃಹತ್ ಹೆಬ್ಬಾಗಿಲು ಮಠದ ಮಹಾದ್ವಾರವಾಗಿದೆ. ಇಕ್ಕೆಲಗಳಲ್ಲಿ ಪ್ರಾಂಗಣಗಳು, ಎರಡೂ ಕಡೆಗಳಲ್ಲಿ ದೊಡ್ಡ ದೊಡ್ಡ ಕಂಬಗಳು ಹೆಬ್ಬಾಗಿಲಿನಲ್ಲಿ ಪ್ರವೇಶಿಸಿದರೆ ಎರಡೂ ಕಡೆಗಳಲ್ಲಿ ಚಂದ್ರಸಾಲೆಯಂತಹ ವಿಶಾಲ ಚಾವಡಿಗಳಿವೆ. ಪಟ್ಟದ ಚಾವಡಿಯ ಒಳಭಾಗದ ವಿಶಾಲವಾದ ಹಜಾರದ ಗೋಡೆಯು ಹಿಂದೆ ಅರಮನೆಗೆ ಉಪಯೋಗಿಸಿದ್ದ ಚಿತ್ತಾರದ ಕುಸುರಿ ಕೆತ್ತನೆಯ ಮನಮೋಹಕ ಜಾಲರಿಯಿಂದ ಅಲಂಕೃತವಾಗಿದೆ. ಮಠದ ಬೋಧಿಕೆಗಳಲ್ಲಿ ಕೆಳದಿಯ ಕುರುಹು ಆಗಿ ಎರಡು ಗಿಳಿಯ ನಕ್ಷೆಗಳಿವೆ. ಮಠದ ಉಪ್ಪರಿಗೆ ಸಹ ವೈಶಿಷ್ಟ್ಯದಿಂದ ಕೂಡಿದೆ. ಕೆತ್ತನೆಗಳಿಂದ ಕೂಡಿದ ಬಾಗಿಲುಗಳು, ಕೆತ್ತನೆಯ ದೊಡ್ಡ ಕಂಬಗಳು ಇವುಗಳಿಂದ ಕಟ್ಟಲ್ಪಟ್ಟ ಬೃಹದಾಕಾರದ ಕಾಷ್ಠ ಶಿಲ್ಪದ ವೈಭವವನ್ನು ಸಾರುವ ಈ ಮಠವು ಇಂದಿಗೂ ಸುಸ್ಥಿತಿಯಲ್ಲಿದೆ.

**ನೀಲಕಂಠೇಶ್ವರ ದೇವಾಲಯ:** ಈ ದೇವಾಲಯವು ವಾಸ್ತು ವಿನ್ಯಾಸದ ಪ್ರಕಾರ ನಿರ್ಮಿಸಲಾಗಿದ್ದು, ಕಾಷ್ಠ ಶಿಲ್ಪದ ದೊಡ್ಡ ಬಾಗಿಲಿನಿಂದ ಒಳ ಹೊಕ್ಕರೆ ಮುಖ ಮಂಟಪ, ತೀರ್ಥ ಮಂಟಪ, ಸುತ್ತು ಪ್ರಾಕಾರದ ಪೌಳಿಯಿಂದ ಆವೃತವಾದ ಗರ್ಭಗುಡಿ ಇದೆ. ನೀಲಕಂಠೇಶ್ವರ ಸ್ವಾಮಿ ವಿಗ್ರಹ 30 ಇಂಚು ಎತ್ತರವಿದ್ದು ಕೃಷ್ಣ ಶಿಲೆಯಲ್ಲಿ ಕಡೆದ ಶಿವನ ಸುಂದರವಾದ ಮೂರ್ತಿಯಾಗಿದೆ. ತುಳುನಾಡು ಮಾತ್ರವಲ್ಲದೇ ಕರ್ನಾಟಕದಾದ್ಯಂತ ಲಿಂಗಾಯತರು ಶಿವನನ್ನು ಲಿಂಗ ರೂಪದಲ್ಲಿ ಆರಾಧಿಸಿದರೆ ಇಲ್ಲಿ ಮೂರ್ತಿರೂಪ ಇರುವುದು ವಿಶೇಷವಾಗಿದೆ. ವಿಗ್ರಹವು ಮೃಗಪಾಣಿಯಾಗಿ ಕೈಯಲ್ಲಿ ತ್ರಿಶೂಲ, ಢಮರುಗ, ಹಾಗೂ ರುದ್ರಾಕ್ಷ ಮಾಲೆಯನ್ನು ಧರಿಸಿ, ಶಿರದಲ್ಲಿ ಶಶಿಗಂಗೆಯರನ್ನು ಧರಿಸಿ ಕೊರಳಲ್ಲಿ ಲಿಂಗ ಹಾಗೂ ಪಾದುಕೆಯನ್ನು ಧರಿಸಿಕೊಂಡಿದೆ. ಮಠದ ಮುಂಭಾಗದ ರಾಜ ಬೀದಿಯಲ್ಲಿ ದಂಬೆ ಕಲ್ಲೊಂದು ಇದೆ. ಈ ದಂಬೆಕಲ್ಲಿನಲ್ಲಿ ಕಾಣಿಸುವ ಸೂರ್ಯ ಚಂದ್ರ ಸಂಕೇತಗಳು ಅಜರಾಮರತ್ವವನ್ನು ಸೂಚಿಸುತ್ತವೆಯಾದರೆ, ಕಲ್ಲಿನಲ್ಲಿ ಮೂಡಿಸಿರುವ ಲಿಂಗ ಹಾಗೂ ನಂದಿ ಶೈವಾರಾಧನೆಯನ್ನು ಸಾಂಕೇತಿಸುತ್ತದೆ ಈ ಕಲ್ಲಿನ ಗೋಲಕದೊಳಗೆ ಧ್ವಜ ಸ್ತಂಭವನ್ನು ಜೋಡಿಸಿ ಹಿಂದೆ ಇಲ್ಲಿ ಉತ್ಸವಾದಿಗಳ ಸಮಯದಲ್ಲಿ ಧ್ವಜಾರೋಹಣ ಮಾಡಲಾಗುತ್ತಿತ್ತು.

ಸುಮಾರು 40ಕಿ.ಗ್ರಾಂ. ತೂಕವಿರುವ ನಂದಿಯ ಬೆಳ್ಳಿಯ ಪಟಧ್ವಜವು ಚಿನ್ನದ ಲೇಪನದಿಂದ ಕಂಗೊಳಿಸುತ್ತದೆ. ಹಿಂದೆ ಈ ನಂದಿ ಪಟ ಧ್ವಜವನ್ನು 'ಕೊಡಿ ಮರದ' ಮೇಲೆ ಧ್ವಜ ಪತಾಕೆಯನ್ನಾಗಿ ಉಪಯೋಗಿಸುತ್ತಿದ್ದರು.[172] ವಿವಿಧ ಉದ್ದೇಶಗಳಿಗೆ ಉಪಯೋಗಿಸುವಂತಹ ಐದು ಬಾವಿಗಳಿವೆ. ಮಾತ್ರವಲ್ಲ ಒಂದು ತೀರ್ಥ ಬಾವಿಯೂ ಇದೆ. ಜಳಕದ ಕೆರೆ ಎಂಬುವ ಕೆರೆಯೊಂದಿದೆ. ದೇವಸ್ಥಾನದ ಹಿಂಭಾಗದಲ್ಲಿ ನಾಗಬನ, ಗುಳಿಗನ ಸಾನಿಧ್ಯ, ಕೊಟ್ಟುರಮ್ಮ(ಕೊಟ್ರಮ್ಮ) ಕಲ್ಲುರ್ಟಿ ದೈವ ಮಹಮ್ಮಾಯಿ ಮುಂತಾದ ದೈವ ಸಾನಿಧ್ಯಗಳಿವೆ. ಈ ವಿಚಾರಗಳು ಹೇಗೆ ವೀರಶೈವ ಧರ್ಮ ತುಳುನಾಡಿನಲ್ಲಿ ಅನ್ಯ ಆಚರಣೆಗಳನ್ನು ಸ್ವೀಕರಿಸಿತು ಎನ್ನುವುದರ ನಿದರ್ಶನವಾಗಿದೆ. ಟಿಪ್ಪುಸುಲ್ತಾನನ ಪ್ರತಿನಿಧಿ ಶೇಖ ಅಲಿ ನವಾಬ ಈ ಪ್ರಾಂತ್ಯದಲ್ಲಿ ಆಡಳಿತ ನಡೆಸುತ್ತಿದ್ದಾಗ ಇಲ್ಲಿನ ಜಂಗಮ ಸಂಸ್ಥಾನ ಮಠದಲ್ಲಿದ್ದ ಪಚ್ಚೆಕಲ್ಲಿನ ಚಪ್ಪಡಿ, ಸುಮಾರು 700ಕಿಲೋ ಗ್ರಾಂ ತೂಕದ ದೈತ್ಯಾಕಾರದ ಗಂಟೆ ಮತ್ತು ಬೆಳ್ಳಿಯ ಪಾತ್ರೆ, ಬಿಂದಿಗೆಗಳು, ಬಂಗಾರದ ನಗಗಳು, ರಾಮಟಂಕೆ ನಾಣ್ಯಗಳು ಮತ್ತು ರತ್ನಗಳನ್ನು ಲೂಟಿ ಮಾಡಿಕೊಂಡು ಹೋಗಿ ಸುಲ್ತಾನರ ಭಂಡಾರಕ್ಕೆ ಸೇರಿಸಿದ್ದ ಎನ್ನಲಾಗಿದೆ.[173] ನವರಾತ್ರಿ ಸಂದರ್ಭದಲ್ಲಿ ಮಠದಲ್ಲಿರುವ ಕೆಳದಿ ಅರಸೊತ್ತಿಗೆಯ ಆಯುಧಗಳಿಗೆ ಆಯುಧ ಪೂಜೆ ಮಾಡಿ ನಂತರ ಶಮೀ ವೃಕ್ಷದಲ್ಲಿ ಸಾಂಕೇತಿಕವಾಗಿ ಬಚ್ಚಿಡುವ ಕ್ರಮ ಇಲ್ಲಿ ಈಗಲೂ ಆಚರಣೆಯಲ್ಲಿದೆ.

**ಗಂಜಿಮಠ:** ಗುರುಪುರ ಮಠದಿಂದ ಸುಮಾರು 5 ಕಿ.ಮೀ. ದೂರದಲ್ಲಿ ಗಂಜಿಮಠದ ಸ್ಥಾಪನೆಯಾಗಿತ್ತು. ಇದು ಕೆಳದಿ ಅರಸರ ಕಾಲಕ್ಕೆ ವಿದ್ಯಾರ್ಥಿಗಳಿಗೆ ಗಂಜಿ ನೀಡುವ ಮಠವಾಗಿತ್ತು ಎಂದು ಪ್ರತೀತಿ. ಬಹುಶಃ ಈ ಕಾರಣದಿಂದ ಗಂಜಿಮಠ ಎಂಬ ಹೆಸರು ಬಂದಿರಬೇಕು. ಈ ಮಠದಲ್ಲಿ ಶಿವಲಿಂಗದ ಸ್ಥಾಪನೆ ಇತ್ತು. ಆದರೆ ಈಗ ಮಠವಿಲ್ಲ. ಅದರ ಪಂಚಾಂಗ, ಮಠದ ಬಾವಿಯನ್ನು ಮಾತ್ರ ನೋಡಬಹುದು. ಈ ಮಠದ ಎದುರುಗಡೆ ಒಂದು ಗಣಪತಿ ದೇವಾಲಯವಿದೆ. ಈ ಗಣಪತಿ ದೇವಾಲಯವು ಗಂಜಿಮಠ ಮತ್ತು ಗುರುಪುರ ಮಠಕ್ಕೆ ಸೇರಿದ್ದು ಎಂದು ಹೇಳಲಾಗುತ್ತಿದೆ. ಹಿಂದೆ ಈ ಗಣಪತಿಯ ಕೊರಳಲ್ಲಿ ಕರಡಿಗೆ(ಲಿಂಗು) ಇತ್ತು ಮತ್ತು ಈಗಲೂ ಗುರುಪುರ ಮಠದಲ್ಲಿ ನಡೆಯುವ ಉತ್ಸವ ದಿನದಂದು ಈ ಗಣಪತಿ ದೇವರಿಗೆ ಮೊದಲು ನೈವೇದ್ಯ ಕೊಟ್ಟ ನಂತರವೇ ಗುರುಪುರದ ಶ್ರೀ ನೀಲಕಂಠೇಶ್ವರನ ಪೂಜೆ ಆರಂಭಿಸಲಾಗುತ್ತದೆ ಎನ್ನುವ ಮಾಹಿತಿಗಳು ಈ ದೇವಳದ ವೀರಶೈವ ಮೂಲವನ್ನು ತಿಳಿಸುತ್ತದೆ.[174] ಆದರೆ ಈಗ ಈ ಗಣಪತಿ ದೇವಸ್ಥಾನದ ಉಸ್ತುವಾರಿ ಬ್ರಾಹ್ಮಣರ ಕೈಯಲ್ಲಿದೆ.

**ಬಸವನಗುಡಿ ಮಠ:** ಮಂಗಳೂರಿನ ಹೃದಯ ಭಾಗದಲ್ಲಿ ಬಸವನ ಗುಡಿ ಮಠವು ಸ್ಥಾಪನೆಯಾಗಿದೆ. ಪುರಾತನವಾದ ಈ ಮಠದಲ್ಲಿ ಆಡಳಿತವನ್ನು ನಡೆಸಿದ ಮಠಾಧೀಶರುಗಳ ವಿವರಗಳು ಲಭ್ಯವಿಲ್ಲ. ಈ ಮಠದಲ್ಲಿ ನಂದಿಯ ಒಂದು ವಿಗ್ರಹವು ಇರುವುದರಿಂದ 'ಬಸವನಗುಡಿ ಮಠ' ಎಂಬ ಹೆಸರು ಬಂದಿದೆ. ಪಂಚ ಪೀಠಗಳಲ್ಲಿ ಒಂದಾದ ಉಜ್ಜಯಿನಿ ಪೀಠದ ಶಾಖಾಮಠವಾಗಿ ಬೆಳೆಯುತ್ತಿರುವ ಈ ಮಠದಲ್ಲಿ ಗುರು ವಿರಕ್ತರೆಂಬ ಬೇಧವಿಲ್ಲ.

ಈ ಮಠಗಳನ್ನು ಹೊರತುಪಡಿಸಿ ಮಂಗಳೂರಿನಲ್ಲಿ ಮುರುಘಾಮಠ (ಮುರಗಿ ಮಠ) ಬಲಮಠ, ಹೊಸಮಠ, ಬೋಳೂರುಮಠ, ಸುರತ್ಕಲ್ ಮಠ, ಉಳ್ಳಾಲಮಠ, ಸೋಮೇಶ್ವರ ಮಠ ಈ ರೀತಿ 7 ಮಠಗಳಿದ್ದವೆಂಬ ಮಾಹಿತಿ ಇದ್ದರೂ ಇಂದು ಈ ಮಠಗಳು ಅಸ್ತಿತ್ವದಲ್ಲಿಲ್ಲ.

**ಸುಳ್ಯ ಪುತ್ತೂರು ಮತ್ತು ಕಾಸರಗೋಡು**

ಇಂದಿನ ಸುಳ್ಯ ತಾಲೂಕಿನ ವ್ಯಾಪ್ತಿಯಲ್ಲಿ ಯಡಿಯೂರು ಸಿದ್ದಲಿಂಗೇಶ್ವರರ ಮತ್ತು ಕೆಳದಿ ಕಾಲದಲ್ಲಿ ಸುಮಾರು ಎಂಟು ಮಠಗಳು ಸ್ಥಾಪನೆಯಾಗಿದ್ದವೆಂದು ಅಭಿಪ್ರಾಯವಿದೆ.[175] ಅವುಗಳಲ್ಲಿ ಸುಬ್ರಹ್ಮಣ್ಯದ ಸಮೀಪದ ಕುಮಾರ ಪರ್ವತದ ಮೇಲೆ ನಾಲ್ಕು ಮಠಗಳು ಸ್ಥಾಪಿತವಾಗಿದ್ದವು ಎಂದು ಹೇಳಲಾಗುತ್ತಿದೆ.[176] ಈ ಹೇಳಿಕೆಗೆ ಪೂರಕವೆಂಬಂತೆ ಇಷ್ಟ ಲಿಂಗಗಳು ಈ ಬೆಟ್ಟದ ಮೇಲೆ ದೊರೆತಿರುವುದು ಈ ಸ್ಥಳದಲ್ಲಿ ವೀರಶೈವ ಮಠಗಳು ಸ್ಥಾಪನೆಯಾಗಿದ್ದವೆಂಬುದಕ್ಕೆ ಸಾಕ್ಷಿಯಾಗಿದೆ.[177] ಸುಬ್ರಹ್ಮಣ್ಯದಲ್ಲಿದ್ದ ಮಠಗಳಿಗೆ ಹರಕೆ ರೂಪವಾಗಿ ಬರುತ್ತಿದ್ದ ಜಾನುವಾರುಗಳನ್ನು ಮಾರುತ್ತಿದ್ದುದು ಮುಂದೆ ಕುಳ್ಕುಂದ ಜಾನುವಾರು ಜಾತ್ರೆಗೆ ನಾಂದಿಯಾಯಿತೆಂದು ಹೇಳಲಾಗಿದೆ.[178] ಸುಳ್ಯ ತಾಲೂಕಿನ ಹೊಸಮಠ, ಪಂಜ, ಬೆಳ್ಳಾರೆಗಳಲ್ಲಿಯೂ ಮಠಗಳಿದ್ದ ಬಗ್ಗೆ ಉಲ್ಲೇಖಗಳಿವೆ. ಪುತ್ತೂರು ತಾಲೂಕಿನಲ್ಲಿ ಇದ್ದ ಹತ್ತು ಮಠಗಳಲ್ಲಿ ಈಗ ಕೊಯಿಲ ಮಠ, ಕಲ್ಲಾಪುರ ಮಠ, ಕರವಾಸಿ ಮಠ, ಕರಂಪಾಡಿ ಮಠದ ಕೆಲವು ಮಾಹಿತಿಗಳು ದೊರೆಯುತ್ತವೆ.

**ಮಂಜೇಶ್ವರ ಮಠ:** (ಕಾಸರಗೋಡು) ಹಿರಿಯ ಸೋಮಶೇಖರ ನಾಯಕನು ಮಂಜೇಶ್ವರ ಹೊಳೆಯ ಉತ್ತರ ದಿಕ್ಕಿನಲ್ಲಿ ಒಂದು ಜಂಗಮ ಮಠವನ್ನು ಕಟ್ಟಿಸಿ ಗುರುಮಲ್ಲಯ್ಯನವರಿಗೆ ಅದನ್ನು ಧಾರೆ ಎರೆದುಕೊಟ್ಟು ಅದಕ್ಕೆ ಉಂಬಳಿ ಬಿಟ್ಟ ವಿಷಯ ತಿಳಿದು ಬರುತ್ತದೆ.[179] ಈ ಮಠದ ಬಾಗಿಲಿನಲ್ಲಿದ್ದ ಲಿಂಗಮುದ್ರೆ ಇರುವ ಎರಡು ಶಿಲೆಕಲ್ಲುಗಳು ತಾಗಿಕೊಂಡಿರುವ ಕಟ್ಟೆ, ಒಂದು ಕೆರೆ ಈಗಲೂ ಇದೆ. ಅನೇಕ ಜಂಗಮ ಸಾಹುಕಾರರು ಇಲ್ಲಿ ಬಂದು ವ್ಯಾಸ್ತವ್ಯ ಮಾಡುತಿದ್ದರೆಂದು ಹೇಳಲಾಗಿದೆ. ಜಂಗಮ ಸಾಹುಕಾರರಲ್ಲೊಬ್ಬರು ಮಠದ ಅಯ್ಯನವರ ಹೆಸರಿನಲ್ಲಿ ಕಟ್ಟಿಸಿದ ಒಂದು ಕಟ್ಟೆಗೆ 'ಅಯ್ಯರ ಕಟ್ಟೆ' ಎಂಬ ಹೆಸರಿದೆ. ಮತ್ತೊಬ್ಬ ಸಾಹುಕಾರ ನಾಗಯ್ಯನೆಂಬಾತನು ಕಟ್ಟಿಸಿದ ಕಟ್ಟೆಯು ಹಿಂದೂ ಮತ್ತು ಜೈನರ ಪೇಟೆಯ ಗಡಿಯಲ್ಲಿದೆ. ಈಗ ಶ್ರೀ ಕಾಶೀಮಠದ ಶ್ರೀಪಾದಂಗಳವರ ಮಠವು ಆಚಾರ್ಯರ ಮಠವೂ ಇರುವ ಸ್ಥಳಗಳಿಗೆ ಗುರುಮಲ್ಲಯ್ಯನ ವರ್ಗ ಸ್ಥಳವೆಂಬ ಹೆಸರಿನಿಂದ ಕರೆಯುವುದು ಇದರ ವೀರಶೈವ ಮೂಲವನ್ನು ತಿಳಿಸುತ್ತದೆ.[180]

**ಪರಿವರ್ತನೆಗೊಂಡ ಮಠಗಳು:** ಕರಾವಳಿ ಕರ್ನಾಟಕದ ಮಠಗಳು ಹಲವು ಪರಿವರ್ತನೆಗೆ ಒಳಗಾಗಿವೆ. ಮೂಲದಲ್ಲಿದ್ದ ಎಷ್ಟೋ ಮಠಗಳಿಗೆ ವಾರಸುದಾರರು ಇಲ್ಲದೆ ಇದ್ದುದರಿಂದ ಈ ಮಠಗಳ ಸ್ವತ್ತು ವೈದಿಕ ಮಠಗಳ ಕೈಯಲ್ಲಿ ಸೇರಿವೆ. ಹೀಗೆ ಪರಿವರ್ತನೆಗೊಂಡ ಮಠಗಳ ಪಟ್ಟಿಯನ್ನು ಈ ಕೆಳಗೆ ಸಮೂದಿಸಲಾಗಿದೆ. ಅವುಗಳೆಂದರೆ ವೇಣೂರಿನ ಅಂಡಿಂಜೆ, ಮೂಡುಕೋಡಿ ಮಠ, ಕಾರ್ಕಳದಿಂದ 2, 3 ಕಿ.ಮೀ. ದೂರದಲ್ಲಿ

ಇರುವ ಪೆರ್ವಾಜೆ ಎಂಬ ಪ್ರದೇಶದಲ್ಲಿ ಇದ್ದ ಈಶ್ವರ ದೇವಸ್ಥಾನ. ಕಾರ್ಕಳ ಪೇಟೆಯಿಂದ ಪಶ್ಚಿಮಕ್ಕೆ 4. 5 ಕಿ.ಮೀ. ದೂರದಲ್ಲಿದ್ದ ಹಿರಿಯಂಗಡಿ ಎಂಬ ಪ್ರದೇಶದಲ್ಲಿನ ಶಿವತಿ ಕೆರೆ, ಉಪ್ಪಿನಂಗಡಿ ಎಂಬಲ್ಲಿನ ಕಟ್ಟೆಮಠ, ಮತ್ತು ಕಟ್ಟೆಮಠದ ಮೇಲುಗಡೆ 'ಗಿರಿ' ಎಂಬ ಬೆಟ್ಟದಲ್ಲಿದ್ದ ಶಿವಲಿಂಗು, ಕಾರ್ಕಳ ತಾಲೂಕಿನ ಕೆರೆವಾಸೆ ಎಂಬ ಮಠ, ಕಾರ್ಕಳ ತಾಲೂಕಿನ ಕಾಡುಹೊಳೆಮಠ ಮತ್ತು ಕುಂದಾಪುರ ತಾಲೂಕಿನ ಅಲ್‌ಕುದ್ರು ಮಠ ಹೀಗೆ ಅನೇಕ ಮಠಗಳು ವೈದಿಕರ ಕೈವಶವಾಗಿರುವುದು ತಿಳಿದುಬರುತ್ತದೆ. ಇನ್ನು ವೀರಶೈವ ಮೂಲ ಸ್ಥಳನಾಮಗಳಾಗಿ ಅಯ್ಯನೂರು, ಅಯ್ಯನಕಟ್ಟೆ, ಅಯ್ಯನೊಕ್ಕಲು, ಚರಂತಿ ಪೇಟೆ, ಶರಣ, ಮಠದ ಕೆರೆ, ಮಠದ ಬೆಟ್ಟು, ಜಂಗಮ ತೋಟ, ಹೊಸಮಠ, ಬಸವಮೂಲೆ, ಬಸವನಗುಡಿ, ಗುರುಮನೆ, (ಗುರ್ಮೆ) ಇತ್ಯಾದಿ ತುಳುನಾಡಿನಾದ್ಯಂತ ಕಂಡುಬರುತ್ತದೆ. ಇದನ್ನೆಲ್ಲ ಗಮನಿಸಿದರೆ ತುಳುನಾಡಿನಲ್ಲಿ 64 ಮಠಗಳಷ್ಟೇ ಅಲ್ಲದೆ ಆ ಸಂಖ್ಯೆ 100ಕ್ಕಿಂತಲೂ ಅಧಿಕವಾಗುವ ಸಾಧ್ಯತೆಯಿದೆ. ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಹಲವು ಗುತ್ತು ಮನೆಗಳಲ್ಲಿ ವೀರಶೈವರ ಭಸ್ಮದ ಪೆಟ್ಟಿಗೆ ಲಭ್ಯವಾಗಿದೆ. ಇದು ಸ್ಥಳೀಯ ಗುತ್ತು ಮನೆಗಳೊಂದಿಗೆ ಉತ್ತಮ ಬಾಂಧವ್ಯ ಹೊಂದಲು ವೀರಶೈವರು ನಡೆಸಿದ ಪ್ರಯತ್ನದ ಪರಿಣಾಮವಿರಬಹುದು.

ಕೆಳದಿ ಅರಸರು ವೀರಶೈವರಾದ ಹಿನ್ನೆಲೆಯಲ್ಲಿ, ಆ ಕಾಲದಲ್ಲಿ ಮಠಗಳಿಗೆ ಅಧಿಕ ಪ್ರೋತ್ಸಾಹ ನೀಡಿದರು. ಹೀಗಾಗಿ ಅಂದು ಉದಯಿಸಿದ ಮಠಗಳು ಧಾರ್ಮಿಕ, ಸಾಂಸ್ಕೃತಿಕ ಆಯಾಮಗಳನ್ನು ಇಟ್ಟುಕೊಂಡು ಕರಾವಳಿ ಕರ್ನಾಟಕದಲ್ಲಿ ಬೆಳೆದು ಬಂದದ್ದು ಈಗ ಇತಿಹಾಸ. ಈ ಅಧ್ಯಯನದಿಂದ ಹಲವು ವಿಚಾರಗಳು ಸ್ಪಷ್ಟವಾಗುತ್ತದೆ. ಮೊದಲನೆಯದಾಗಿ ವೀರಶೈವ ಪಂಥ ಕೆಳದಿಯರಸರ ತುಳುನಾಡಿನ ಪ್ರವೇಶಕ್ಕಿಂತ ಮೊದಲೇ ತುಳುನಾಡನ್ನು ಪ್ರವೇಶ ಮಾಡಿತ್ತು. ಆದರೆ ಅದು ಪ್ರಭಾವಶಾಲಿಯಾಗಿ ಹರಡಿದ್ದು ಮಾತ್ರ ಕೆಳದಿಯರಸರ ಕಾಲದಲ್ಲಿಯೇ. ನಾವಿಂದು ಗುರುತಿಸಿರುವ 64ಕ್ಕಿಂತಲ್ಲೂ ಅಧಿಕ ವೀರಶೈವ ಮಠಗಳಲ್ಲಿ ಹೆಚ್ಚಿನ ಮಠಗಳ ಸ್ಥಾಪನೆ ಕೆಳದಿಯರಸರ ಕಾಲದಲ್ಲಿಯೇ ಆಗಿರಬೇಕು. ಎಲ್ಲಾ ಮಠಗಳನ್ನು ಕೆಳದಿಯರಸರು ನೇರವಾಗಿ ನಿರ್ಮಾಣ ಮಾಡದಿದ್ದರೂ ಅವರ ರಾಜಾಶ್ರಯದಲ್ಲಿ ವೀರಶೈವ ವ್ಯಾಪಾರಿಗಳು, ಗುರುಗಳು, ಅಷ್ಟೇಕೆ ಮಹಿಳೆಯರೂ ಮಠ ನಿರ್ಮಾಣದಂತಹ ಕಾರ್ಯದಲ್ಲಿ ನಿರತರಾದರು. ಇನ್ನು ಮಠ ಮತ್ತು ವೀರಶೈವ ಧಾರ್ಮಿಕ ವಿಧಿ ವಿಧಾನಗಳಿಗೆ ಅನೇಕರು ದಾನ ದತ್ತಿಗಳನ್ನು ನೀಡಿದರು. ಅಂತಹವರಲ್ಲಿ ವೀರಶೈವರಲ್ಲದ ಸ್ಥಳೀಯ ಜೈನರಸರನ್ನೂ ಉಲ್ಲೇಖಿಸಬಹುದು. ಇದು ಸಾಮರಸ್ಯದ ದ್ಯೋತಕವಾದರೆ ಇನ್ನೊಂದು ಅರ್ಥದಲ್ಲಿ ಸ್ಥಳೀಯರಸರಿಗೆ ಎಲ್ಲಾ ಮತ ಪಂಥ ಆಚರಣೆಗಳನ್ನು ಪೋಷಿಸುವ ಅನಿವಾರ್ಯತೆಯೂ ಇತ್ತು. ಸಾರ್ವಭೌಮರಾದ ಕೆಳದಿಯರಸರನ್ನು ಮೆಚ್ಚಿಸಲು ಮತ್ತು ಆಡಳಿತ ಸುಗಮವಾಗಿರಲು ಎಲ್ಲಾ ಮತ ಪಂಥಗಳಂತೆ ಲಿಂಗಾಯತ ಪಂಥವನ್ನೂ ಪೋಷಿಸುವುದು ಅವರಿಗೆ ಅನಿವಾರ್ಯವಾಗಿತ್ತು.

ತುಳುನಾಡಿನಲ್ಲಿ ಪ್ರಸರಣಗೊಂಡ ವೀರಶೈವ ಧರ್ಮಕ್ಕೂ, ಜೈನ ಧರ್ಮಕ್ಕೂ ಸಂಘರ್ಷವಿತ್ತು ಎನ್ನುವ ಐತಿಹ್ಯಗಳಿವೆಯಾದರೂ ಇದಕ್ಕೆ ಪೂರಕ ದಾಖಲೆಗಳಿಲ್ಲ. ಆದರೆ ಮೂಡಬಿದಿರೆ ಸಮೀಪದ ನೆಲ್ಲಿತೀರ್ಥದಲ್ಲಿ ಇಲ್ಲಿಯ ಬ್ರಾಹ್ಮಣರಿಗೂ ಜಂಗಮರಿಗೂ ಸಂಘರ್ಷವೇರ್ಪಟ್ಟಿತ್ತು. ಕ್ರಿ.ಶ.1574ರಲ್ಲಿ ನೆಲ್ಲಿತೀರ್ಥದ ಶಿವಲಿಂಗವನ್ನು ಕಿತ್ತುಹಾಕಿದ್ದಕ್ಕೆ ಜಂಗಮರಿಗೂ ಬ್ರಾಹ್ಮಣರಿಗೂ ನಡೆದ ವ್ಯಾಜ್ಯವನ್ನು ಅಬ್ಬಕ್ಕ ಬಗೆಹರಿಸುತ್ತಾಳೆ.[181] ಇಂತಹ ಒಂದೆರಡು ಉದಾಹರಣೆಗಳನ್ನು ಬಿಟ್ಟರೆ ತುಳುನಾಡಿನಲ್ಲಿ ವೀರಶೈವರ ಸಾಮರಸ್ಯದ ಜೀವನವನ್ನು ಗುರುತಿಸಬಹುದು.

ಶೈವಾರಾಧನೆಯ ಜನಪ್ರಿಯತೆಯ ಹಿನ್ನೆಲೆಯಲ್ಲಿಯೇ ತುಳುನಾಡಿನಲ್ಲಿ ವೀರಶೈವ ಮತ ಜನಪ್ರಿಯವಾಗಿರಬೇಕು. ವೀರಶೈವ ಪ್ರಭಾವದಿಂದ ಇಲ್ಲಿನ ಶಿವಾಲಯಗಳು ಮಹಾಲಿಂಗ, ಸಿದ್ದೇಶ್ವರ ಮುಂತಾದ ವೀರಶೈವ ಹಿನ್ನೆಲೆಯ ಹೆಸರುಗಳಿಂದ ಕರೆಯಲ್ಪಟ್ಟವು ಎನ್ನಲಾಗಿದೆ. ಉದಾಹರಣೆಗೆ ಸೂರಾಲಿನ ಮತ್ತು ಬಸ್ರೂರಿನ ಮಹಾದೇವ ದೇವಳಗಳು ಮಹಾಲಿಂಗೇಶ್ವರ ದೇಗುಲಗಳೆಂದು ಕರೆಯಲ್ಪಟ್ಟವು.[182] ಹಾಗೆಯೇ ಉಳಿದ ಹಲವಾರು ಮಹಾದೇವ ದೇಗುಲಗಳು ಕ್ರಿ.ಶ. 1463ರ ಕಾಲಕ್ಕೆ ವೀರಶೈವ ಪ್ರಭಾವದ ಕಾರಣ  ಮಹಾಲಿಂಗ ಎಂಬ ಹೆಸರಿನಲ್ಲಿ ಅನ್ವಯವಾಯಿತು ಎಂಬ ಗುರುರಾಜ ಭಟ್ ಅವರ ಅಭಿಪ್ರಾಯದ ಕುರಿತು,[183] ಭಿನ್ನ ನಿಲುವುಗಳಿವೆ. ಉಡುಪಿಯ ಕಳತ್ತೂರು, ಬನ್ನಿಂಜೆ, ಬ್ರಹ್ಮಾವರ, ಪರ್ಕಳ, ಉದ್ಯಾವರ, ಮಂಗಳೂರು ಸಮೀಪದ ಇಡ್ಯ, ಕುಂದಾಪುರದ ಗಂಗನಾಡು, ಪುತ್ತೂರು, ಮೊದಲಾದ ಕಡೆ ಮಹಾಲಿಂಗೇಶ್ವರ ಅಥವಾ ಮಹಾಲಿಂಗ ದೇವರನ್ನು ಪೂಜಿಸಲಾಗುತ್ತದೆ, ಬಸ್ರೂರು ಮತ್ತು ಸೂರಾಲಿನಲ್ಲಿಯೂ ಮಹಾಲಿಂಗೇಶ್ವರ ದೇವಾಲಯಗಳಿವೆ. ಉಡುಪಿಯ ಚೊಕ್ಕಾಡಿ, ಬೆಳ್ಮಣ್ಣುವಿನ ಮದ್ಮ, ಕಾರ್ಕಳದ ಕೌಡೂರು, ಬಂಟ್ವಾಳದ ಮಂಚಿ, ಮೊದಲಾದ ಕಡೆಗಳಲ್ಲಿ ಮಹಾದೇವ ದೇವಳಗಳಿವೆ. ಆದರೆ ಆ ಮುನ್ನವೂ ಶಾಸನಗಳಲ್ಲಿ ಮಹಾಲಿಂಗ ಎಂಬ ಹೆಸರು ಆ ನಂತರವೂ ಮಹಾದೇವ ಎಂಬ ಹೆಸರಿನ ಅನ್ವಯ ಶಿವಾಲಯಗಳು ತುಳುನಾಡಿನಲ್ಲಿ ಕಾಣಬರುವುದು.[184] ಹಾಗೆಯೆ ಕೆಳದಿಯರಸರ ತುಳುನಾಡಿನ ನಂಟಿಗೆ ಮೊದಲೇ ಇಲ್ಲಿಯ ದೇವಳಗಳು ಮಹಾಲಿಂಗ ದೇವಳಗಳೆಂದು ಕರೆಯಲ್ಪಟ್ಟಿದ್ದವು. ಉದಾಹರಣೆಗೆ ಬಸ್ರೂರಿನ ಮಹಾಲಿಂಗೇಶ್ವರ ದೇಗುಲದ ಕ್ರಿ.ಶ.1528ರ ಶಾಸನ,[185] ನಖರೇಶ್ವರದ ಮಹಾಲಿಂಗ ಎಂದು ಉಲ್ಲೇಖಿಸುತ್ತದೆ. ಹಾಗಾಗಿ ಈ ನಾಮಾಂತರ ವೀರಶೈವರ ಪ್ರಭಾವದಿಂದ ಎಂದು ಸ್ಪಷ್ಟವಾಗಿ ಹೇಳಲು ಸಾಧ್ಯವಾಗದು.

ಕೆಳದಿಯರಸರು ವೀರಭದ್ರನ ಆರಾಧಕರು. ವೀರಭದ್ರ ವೀರಶೈವರಿಗೆ ಆರಾಧ್ಯ ದೈವ. ಕೆಳದಿಯಲ್ಲಿರುವ ವೀರಭದ್ರ ದೇವಾಲಯ ಅದಕ್ಕೆ ಸಾಕ್ಷಿ. ತುಳುನಾಡಿನ ವೀರಭದ್ರ ದೇಗುಲದ ಉಸ್ತುವಾರಿ ನೋಡಿಕೊಳ್ಳುವವರು ಮತ್ತು ಭಕ್ತರು ಬಹುತೇಕವಾಗಿ ಪದ್ಮಶಾಲಿ ಜನಾಂಗದವರು (ಬಿಳಿನೇಯ್ಗೆಯವರು). ವೀರಶೈವರಲ್ಲಿಯೂ ಪದ್ಮಶಾಲಿ ವರ್ಗದ ವ್ಯಾಪಾರಿಗಳಿರುವುದು ಗಮನಾರ್ಹ ಅಂಶವಾಗಿದೆ. ಇವರು ತುಳುನಾಡಿನಲ್ಲಿ ಹಿಂದೆ ವೀರಶೈವರಾಗಿದ್ದರೇ ಎಂದು ಚಿಂತಿಸಲು ಅವಕಾಶಗಳಿವೆ. ಕಾರ್ಕಳದ ರಥಬೀದಿಯಲ್ಲಿ ಚರಂತಿಮಠವಿದ್ದು

ಇಲ್ಲಿ ವೀರಭದ್ರನನ್ನು ಪೂಜಿಸಲಾಗುತ್ತಿದೆ. ಇಲ್ಲಿಂದ ಅನತಿ ದೂರದಲ್ಲಿ ಇನ್ನೊಂದು ವೀರಭದ್ರ ದೇವಳವಿದ್ದು ಇದೂ ಕೂಡ ವೀರಶೈವರದ್ದು ಎಂಬ ಅಭಿಪ್ರಾಯಗಳಿವೆ. ಆದರೆ ಇಂದು ಅದು ಶೆಟ್ಟಿಗಾರರೆಂಬ ಪದ್ಮಶಾಲಿ ಜನಾಂಗದವರಿಗೆ ಸೇರಿದೆ. ಪದ್ಮಶಾಲಿಗಳೂ ವೀರಭದ್ರನ ಆರಾಧಕರು. ಪ್ರಮುಖವಾಗಿ ವೀರಶೈವರಿಗೆ ವೀರಭದ್ರ ಆರಾಧ್ಯದೈವ ಹಾಗೂ ವೀರಶೈವಾನ್ವಯವು ವೀರಭದ್ರನಿಗೆ ತೀರ ನಿಕಟವಾದುದು. ತುಳುನಾಡಿನಲ್ಲಿ ಕಂಡುಬರುವ ಹೆಚ್ಚಿನ ವೀರಭದ್ರ ದೇವಾಲಯಗಳು, ಕ್ರಿ.ಶ.15 ಮತ್ತು 18ನೇ ಶತಮಾನದ ನಡುವೆ ಸ್ಥಾಪನೆಯಾದವೆಂದು ಹೇಳಲಾಗಿರುವುದರಿಂದ,[186] ತುಳುನಾಡಿನಲ್ಲಿ ವೀರಶೈವ ಪ್ರಸರಣದ ಕಾಲಕ್ಕೆ ಇದು ಸರಿ ಹೊಂದುತ್ತದೆ. ಸಿದ್ದಕಟ್ಟೆಯ ಬಳಿ ಪ್ರತಿಷ್ಠಾಪಿತ ಪಣಂಬೂರು ಮೂಲದ ವೀರಭದ್ರ, ಕಾರ್ಕಳದ ವೀರಭದ್ರ, ಗಾಂಧಿಬಜಾರಿನ ಆದಿಶಕ್ತಿ ವೀರಭದ್ರ, ಹಿರಿಯಡ್ಕದ ಮಹತೋಭಾರ ವೀರಭದ್ರಸ್ವಾಮಿ, ಇದಲ್ಲದೆ ಉಳ್ಳಾಲ, ಮಾನಂಪಾಡಿ, ಕಲ್ಲಾಪು, ಮಂಗಳೂರು (ರಥಬೀದಿ), ಉದ್ಯಾವರ, ಕಣಂಚಾರು, ಸಾವೂರು, ಇಂದಬೆಟ್ಟು, ಬಸ್ರೂರು, ಹಾಲಾಡಿ, ಕಲ್ಯಾಣಪುರ, ಕನ್ಯಾನ ಕರ್ಣಾಲು, ಸುರತ್ಕಲ್ಲು, ಕನ್ನಮೂಲ, ಇತ್ಯಾದಿ ಕಡೆ ವೀರಭದ್ರ ದೇಗುಲ ಅಥವಾ ಮೂರ್ತಿಗಳು ಕಂಡುಬರುತ್ತದೆ.[187] ಅಲ್ಲದೆ ತುಳುನಾಡಿನಲ್ಲಿ ಬಹಳವಾಗಿ ಪದ್ಮಶಾಲಿ ಜನಾಂಗದವರು ವೀರಭದ್ರ–ಭದ್ರಕಾಳಿಯ ಪೂಜಕರಾಗಲು ಅವರು ಹಿಂದೆ ವೀರವಣಿಜ ಕಸುಬುಗಳಲ್ಲಿ ತೊಡಗಿ ವೀರಶೈವ ಪ್ರಭಾವವನ್ನು ಅಳವಡಿಸಿಕೊಳ್ಳಲು ಕಾರಣವಾಗಿರಬೇಕು. ಒಟ್ಟಿನಲ್ಲಿ ಈ ಎರಡು ಪಂಗಡಗಳ ನಂಟನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಇನ್ನು ಕಾರ್ಕಳದ ಚರಂತಿಮಠದಲ್ಲಿ ವಿಶೇಷವಾಗಿ ವೀರಶೈವರೊಡನೆ ಮಡಿವಾಳರೂ, ಈ ದೇವರಿಗೆ ನಡೆದುಕೊಳ್ಳುವಲ್ಲಿ ವೀರಭದ್ರವತಾರಿ ಮಡಿವಾಳ ಮಾಚಯ್ಯನ ಆರಾಧನೆಯೂ ಇಲ್ಲಿ ಮೊದಲಿಗೆ ನಡೆಯುತ್ತಿದ್ದಿರಬೇಕು.

ಕೆಳದಿ ನಾಯಕರ ರಾಜಾಶ್ರಯದ ಹೊರತಾಗಿಯೂ ವೀರಶೈವ ಮಠಗಳು ತುಳುನಾಡಿನಲ್ಲಿ ಹೇಳಿಕೊಳ್ಳುವಂತಹ ಪ್ರಸಿದ್ಧಿ ಪಡೆಯಲಿಲ್ಲ. ಇದಕ್ಕೆ ಪ್ರಮುಖ ಕಾರಣಗಳೆಂದರೆ,

1. ರಾಜಾಶ್ರಯವನ್ನೇ ನಂಬಿದ್ದ ಆ ಧರ್ಮದ ಕಡೆ ಸ್ಥಳೀಯರು ಒಲವು ತೋರಲಿಲ್ಲ. ಕೆಳದಿಯ ಪತನದ ನಂತರ ರಾಜಕೀಯ ಅಸ್ಥಿರತೆ ಮುಂದುವರೆದುದು ಇಳಿಗಾಲಕ್ಕೆ ಕಾರಣವಾಗಿತ್ತು.
2. ಬ್ರಿಟಿಷರ ಆಡಳಿತ ಬಂದ ಮೇಲೆ ಇಲ್ಲಿಯ ಲಿಂಗಾಯತರಿಗೆ ಇತರ ಪ್ರದೇಶಗಳ ಸಂಪರ್ಕ ಕಡಿತಗೊಂಡ ಕಾರಣ ವೀರಶೈವರ ಸಂಖ್ಯೆ ಇಳಿಕೆಗೊಂಡಿತು.
3. ಕೆಲವು ಮಠಗಳು ಅನ್ಯಾಕ್ರಮಿತವಾದದ್ದು ಇಳಿಮುಖಕ್ಕೆ ಕಾರಣವಾಯಿತು. ಉದಾಹರಣೆಗೆ ಹೈದರ್ ಆಲಿ ಡೊಂಗರಕೇರಿಯಲ್ಲಿ ಜಂಗಮ ಮಠವೊಂದನ್ನು ಕೆಡವಿ ಅದರ ಕಲ್ಲುಗಳಿಂದ ಮಸೀದಿಯೊಂದನ್ನು ನಿರ್ಮಿಸಿದ ಎಂದು ಹೇಳಲಾಗಿದೆ.[188] ಈ ಭಾಗದಲ್ಲಿ ಪ್ರಾಬಲ್ಯವನ್ನು ಮೆರೆದ ಹೈದರ್ ಅಲಿ, ಟಿಪ್ಪು ಸುಲ್ತಾನರಿಂದ ಈ ಪಂಥ ರಾಜಾಶ್ರಯವನ್ನು ಪಡೆಯಲು ವಿಫಲವಾಯಿತು. ಮಾತ್ರವಲ್ಲದೆ ಹಣಕಾಸಿನ ನೆರವಿಲ್ಲದೆ ಅದು ಅವನತಿಯತ್ತ ಸಾಗಿತು.

4. ವೀರಶೈವ ಸನ್ಯಾಸಿಗಳು ಕೆಳದಿ ನಾಯಕರಿಂದ ಸಾಕಷ್ಟು ಕೊಡುಗೆಗಳನ್ನು ಪಡೆಯುತ್ತಿದ್ದ ಕಾರಣ ಸೋಮಾರಿಗಳಾದರು ಮತ್ತು ತಮ್ಮ ಪಂಥವನ್ನು ಜನಪ್ರಿಯಗೊಳಿಸುವ ಕಡೆ ಹೆಚ್ಚು ಗಮನ ಕೊಡಲಿಲ್ಲ ಎಂಬ ಅಭಿಪ್ರಾಯಗಳಿವೆ.[189]

5. ಉದಾರವಾದ ಶೈವ ಪಂಥದ ಅಸ್ತಿತ್ವದ ಕಾರಣದಿಂದ ತುಳುನಾಡಿನ ಜನರು ಶಿವ ಮತ್ತು ವೀರಶೈವ ಆರಾಧನೆಯ ನಡುವೆ ಹೆಚ್ಚಿನ ವ್ಯತ್ಯಾಸವನ್ನು ಕಾಣಲಿಲ್ಲ. ತುಳುನಾಡಿನ ಶೈವ ದೇವಾಲಯಗಳನ್ನು ವೀರಶೈವರು ಗೌರವದಿಂದ ಕಾಣುತ್ತಿದ್ದರು ಮತ್ತು ಕೆಲವು ವೀರಶೈವ ಮಠಗಳು ಪ್ರಮುಖ ಶಿವ ದೇವಾಲಯಗಳ ಧಾರ್ಮಿಕ ವಿಧಿಗಳ ಹೊಣೆಗಾರಿಕೆಯನ್ನು ವಹಿಸಿಕೊಂಡಿದ್ದವು.[190]

6. ಕೆಳದಿಯರಸರ ಕಾಲದಲ್ಲಿ ಬಹಳಷ್ಟು ಸಂಖ್ಯೆಯ ಮಠಗಳು ಅಸ್ತಿತ್ವದಲ್ಲಿದ್ದರೂ ಅಷ್ಟು ಸಂಖ್ಯೆಯ ವೀರಶೈವರು ಇಲ್ಲಿದ್ದರೆಂದು ಹೇಳಲು ಸಾಧ್ಯವಿಲ್ಲ. ಕೇವಲ ರಾಜಾಶ್ರಯದ ಬಲದಿಂದ ಈ ಮಠಗಳು ಪ್ರಗತಿಯನ್ನು ಹೊಂದಿರಬಹುದು. ಉದಾಹರಣೆಗೆ ಜೈನ ಬಸದಿಗಳ ಸಂಖ್ಯೆಗೆ ಅನುಗುಣವಾಗಿ ಜೈನ ಧರ್ಮೀಯರು ಈ ಭಾಗದಲ್ಲಿ ಇದ್ದರೆಂದು ಹೇಳಲು ಸಾಧ್ಯವಿಲ್ಲ. ರಾಜಾಶ್ರಯ ಮತ್ತು ಸಮಾಜದ ಮೇಲುಸ್ತರದಲ್ಲಿ ಈ ಸಮುದಾಯಗಳಿರುವುದು ಈ ರೀತಿಯ ಮಠ ನಿರ್ಮಾಣಗಳಿಗೆ ಕಾರಣವಾಗಿರಬಹುದು. ಸಮುದಾಯಗಳ ಆರ್ಥಿಕ ಪರಿಸ್ಥಿತಿ ಉತ್ತಮವಾಗಿದ್ದುದು ಕಾರಣವಾಗಿರಬಹುದು. ನೂರಾರು ಮಠಗಳಿದ್ದರೂ ಅಷ್ಟು ಸಂಖ್ಯೆಯ ವೀರಶೈವರ ಕುರಿತಾಗಿ ದಾಖಲೆಗಳು ನಮಗೆ ಲಭ್ಯವಾಗುವುದಿಲ್ಲ. ಬುಕಾನನ್ ತುಳುನಾಡಿನಲ್ಲಿ ಸಂಚರಿಸಿದ ಕಾಲದಲ್ಲಿ ಕೇವಲ 1464 ಸಂಖ್ಯೆಯ ಲಿಂಗಾಯತರನ್ನು ಮಂಗಳೂರು ಪ್ರದೇಶದಲ್ಲಿ ಗುರುತಿಸಲಾಗಿತ್ತು[191] ಎನ್ನುವುದು ಈ ಅಭಿಪ್ರಾಯಕ್ಕೆ ಪೂರಕವಾಗಿದೆ.

7. ರಾಜಾಶ್ರಯದೊಂದಿಗೆ ಮುಂಚೂಣಿಗೆ ಬಂದ ಈ ವೀರಶೈವ ಮಠಗಳು ರಾಜಾಶ್ರಯದ ಅಂತ್ಯದೊಂದಿಗೆ ಇಳಿಮುಖವಾದವು. ಅದಕ್ಕೆ ಈ ಮಠಗಳ ಇಂದಿನ ಸ್ಥಿತಿಯೇ ಉದಾಹರಣೆಯಾಗಿದೆ. ಅದೆಷ್ಟೋ ಮಠಗಳು ಹೇಳ ಹೆಸರಿಲ್ಲದೆ ಹೋಗಿವೆ. ಅನೇಕ ಮಠಗಳಿದ್ದ ಪ್ರದೇಶದಲ್ಲಿ ಒಂದೇ ಒಂದು ಕುಟುಂಬವು ಇಲ್ಲ. ಇನ್ನು ಕೆಲವು ಮಠಗಳ ಹಿನ್ನೆಲೆ ಐತಿಹಾಸಿಕವಾಗಿ ಮಹತ್ವದ್ದಾದರೂ ಮಠದ ಸುತ್ತ ಈ ಪಂಗಡದ ಕೇವಲ 3–4 ಮನೆಗಳಿವೆ. ಗುರುಪುರ ಮಠವನ್ನು ಬಿಟ್ಟರೆ ಉಳಿದವು ಸಂಸಾರಿ ಮಠಗಳಾಗಿವೆ. ಹಾಗಾಗಿ ತುಳುನಾಡಿನ ಮಟ್ಟಿಗೆ ಈ ಮಠಗಳು ಮುಂಚೂಣಿಯಲ್ಲಿರಲು ಕೆಳದಿಯ ರಾಜಾಶ್ರಯವೇ ಕಾರಣವಾಗಿತ್ತು. ಹಾಗೂ ಕೆಳದಿಯ ಅವನತಿಯೊಂದಿಗೆ ಈ ಪಂಥವೂ ಇಳಿಗಾಲವನ್ನು ಕಂಡಿತು.

8. ಇನ್ನು ತುಳುನಾಡಿನಲ್ಲಿ ವೈದಿಕ ಧರ್ಮದ ವಿಶೇಷವೇನೆಂದರೆ, ಶೈವ, ವೈಷ್ಣವ, ವೀರಶೈವ

ಎನ್ನುವ ಭೇದಗಳು ವಿದ್ವತ್ ಮಟ್ಟದಲ್ಲಿ ತೀವ್ರವಾಗಿತ್ತೇ ಹೊರತು ಜನಸಾಮಾನ್ಯರಲ್ಲಿ ಆ ರೀತಿಯ ಭೇದಗಳು ದೊಡ್ಡ ಮಟ್ಟದಲ್ಲಿ ಇರಲಿಲ್ಲ. ಈ ನಿಟ್ಟಿನಲ್ಲಿ ವೀರಶೈವರ ಮಠಗಳನ್ನು ಸ್ಥಳೀಯ ಹಿಂದೂ ಸಮಾಜವೂ ಶಿವನ ಆರಾಧನೆಯ ಹಿನ್ನೆಲೆಯಲ್ಲಿ ಸ್ವೀಕರಿಸಿರಬೇಕು. ಈ ನಿಟ್ಟಿನಲ್ಲಿ ಶೈವ ವೀರಶೈವದ ನಡುವೆ ತುಳುನಾಡಿನ ಜನ ಭೇದವೆಣಿಸಲಿಲ್ಲ. ಉದಾಹರಣೆಗೆ ಕೋಟೇಶ್ವರ, ಗುರುಪುರ ಮುಂತಾದ ಶಿವಕೇಂದ್ರಗಳೇ ಈ ಕಾಲದಲ್ಲಿ ವೀರಶೈವ ಕೇಂದ್ರಗಳೂ ಆಗಿತ್ತು. ಇಂದಿಗೂ ಅನೇಕ ವೀರಶೈವ ಕೇಂದ್ರಗಳೂ ವೀರಶೈವರಲ್ಲದ ಬಹುಸಂಖ್ಯಾತ ಹಿಂದೂಗಳ ಪೋಷಣೆಯಿಂದಲೇ ನಡೆಯುತ್ತವೆ. ಉದಾಹರಣೆಗೆ ಗುರುಪುರ ಮಠ.

ಇಂದು ವೀರಶೈವ ಮಠಗಳು ಮತ್ತು ಅಲ್ಲಿರುವ ವೀರಶೈವರು ತುಳುನಾಡಿನ ಧಾರ್ಮಿಕ ಆಚರಣೆಗಳಿಂದ ಪ್ರಭಾವಿತರಾಗಿ ಸ್ಥಳೀಯತೆಯನ್ನು ಮೈಗೂಡಿಸಿಕೊಂಡಿದ್ದಾರೆ. ಗುರುಪುರ, ಕೊಂಡಾಡಿ, ಪಾಂಗಳ ಮುಂತಾದ ಹಲವು ಮಠಗಳಲ್ಲಿ ತುಳುನಾಡಿನ ಭೂತಾರಾಧನೆಯನ್ನು ತಮ್ಮದೇ ಎಂಬ ರೀತಿಯಲ್ಲಿ ಒಪ್ಪಿಕೊಂಡಿದ್ದಾರೆ. ಅಂದರೆ ಘಟ್ಟದ ಮೇಲಿನ ವೀರಶೈವರು ತುಳುನಾಡಿಗೆ ಬಂದು ತಮ್ಮದಲ್ಲದ ಸ್ಥಳೀಯ ಭೂತಾರಾಧನೆಯನ್ನು ಸ್ವೀಕರಿಸಿದ ಬಗೆಯನ್ನು ಕಾಣಬಹುದು ಇದು ಸ್ಥಳೀಯ ಸಾಮಾಜಿಕ ಮನೋಧರ್ಮಕ್ಕೆ ಹೊಂದಿಕೊಂಡ ವೀರಶೈವದ ಸಾಮರಸ್ಯದ ಕುರುಹಾಗಿದೆ. ಇನ್ನು ಅಲ್‌ಕುದ್ರು ಮಠದಲ್ಲಿ ಇಂದು ಪೂಜಾದಿಗಳನ್ನು ಬ್ರಾಹ್ಮಣರು ನಡೆಸುತ್ತಿದ್ದರೆ, ಮಠದ ಆಡಳಿತ ಅಜಿಲರೆಂಬ ಜೈನ ಮನೆತನದವರು ನಡೆಸುತ್ತಾರೆ. ಈ ರೀತಿಯ ಧಾರ್ಮಿಕ ಸಾಂಸ್ಕೃತಿಕ ಪಲ್ಲಟಗಳು ಹೇಗೆ ವೀರಶೈವ ಪಂಥ ತುಳುನಾಡಿನಲ್ಲಿ ಸ್ಥಳೀಯತೆಯೊಂದಿಗೆ ರಾಜಿಮಾಡಿಕೊಂಡು ಉಳಿದು ಬಂದಿತು ಎಂಬುದನ್ನು ತೋರಿಸುತ್ತದೆ. ಆದಾಗ್ಯೂ ರಾಜಾಶ್ರಯದ ಕೊರತೆಯಿಂದ ಅಸ್ತಿತ್ವದಲ್ಲಿರುವ ಹೆಚ್ಚಿನ ಮಠಗಳು ಸಂಸಾರಿ ಮಠಗಳಾಗಿ ನಾಮಕಾವಸ್ತೆಯಲ್ಲಿ ಉಳಿದು ಬಂದವು.

### 7.3 ಕೆಳದಿ ಆಳ್ವಿಕೆಯ ಕಾಲದ ತುಳುನಾಡಿನ ಜೈನಧರ್ಮ

ಕ್ರಿ.ಶ. ಹನ್ನೆರಡನೆಯ ಶತಮಾನದಿಂದ ಜೈನಧರ್ಮದ ಸ್ಪಷ್ಟ ಹೆಜ್ಜೆಗುರುತುಗಳನ್ನು ತುಳುನಾಡಿನಲ್ಲಿ ಗುರುತಿಸಬಹುದಾದರೂ, ಇತ್ತೀಚೆಗೆ ಉಡುಪಿಗೆ ಸಮೀಪದ ಪರ್ಕಳದಲ್ಲಿ ಸಿಕ್ಕಿದ ಮುರಕಲ್ಲಿನ ಮೇಲಿನ ಬರಹ, ಕ್ರಿ.ಶ. 5ನೇ ಶತಮಾನದಲ್ಲಿಯೇ ಈ ಪ್ರದೇಶದಲ್ಲಿ ಅಸ್ತಿತ್ವದಲ್ಲಿದ್ದ ಯಾಪನೀಯ ಜೈನಪಂಗಡದ ಸುಳಿವನ್ನು ನೀಡುತ್ತದೆ.[192] ಕರ್ನಾಟಕದ ಇತರ ಕಡೆ ಜೈನಧರ್ಮ ಕ್ರಿ.ಶ. ಹನ್ನೆರಡನೇ ಶತಮಾನದಿಂದಲೇ ತೀರ ಕುಸಿತಕ್ಕೆ ಒಳಗಾದರೆ, ತುಳುನಾಡಿನ ಮಟ್ಟಿಗೆ, ಈ ಕಾಲವು ಜೈನಧರ್ಮದ ಉಚ್ಛ್ರಾಯ ಕಾಲ ಎನ್ನಬಹುದು. ವಿಜಯನಗರದಸರ ಕಾಲದಲ್ಲಿ ತುಳುನಾಡಿನ ಜೈನಧರ್ಮಕ್ಕೆ ದೊರೆತ ಮನ್ನಣೆ ಕೆಳದಿಯರಸರ ಕಾಲದಲ್ಲಿ ಸಿಗದೆ ಅದು ತನ್ನ ಜನಪ್ರಿಯತೆಯನ್ನು ಕಳೆದುಕೊಂಡಿತು ಎನ್ನುವ ವಾದ ವಿವಾದಗಳಿವೆ. ಈ

ಹಿನ್ನೆಲೆಯಲ್ಲಿ ಈ ಭಾಗದಲ್ಲಿ ಕೆಳದಿಯರಸರ ಕಾಲದ ಜೈನಧರ್ಮದ ಸ್ಥಿತಿಗತಿಯ ಕುರಿತು ಚರ್ಚಿಸಲಾಗಿದೆ.

ಜೈನ ಸಂಸ್ಕೃತಿಯ ಸಂವರ್ಧನೆಯ ದೃಷ್ಟಿಯಿಂದ ಇಲ್ಲಿಯ ಮಠಗಳು ಬಸದಿಗಳು ವಹಿಸಿದ ಪಾತ್ರ ಹಿರಿದಾದುದು. ಆಯಾ ಮಠಗಳ ವ್ಯಾಪ್ತಿಗೆ ಒಳಪಟ್ಟಂತೆ, ಅನೇಕ ಜೈನ ಬಸದಿಗಳೂ ಹೊಸದಾಗಿ ತಲೆಯೆತ್ತಿದ್ದವು. ವಿಜಯನಗರ ಅರಸರ ಉದಾರ ನೀತಿಯ ಫಲವಾಗಿ, ತುಳುನಾಡಿನ ಜೈನಧರ್ಮವು ಸರ್ವಾಂಗೀಣ ಅಭಿವೃದ್ಧಿ ಹೊಂದಲು ಕಾರಣವಾಯಿತು. ಕರಾವಳಿ ಭಾಗದಲ್ಲಿ ಕ್ರಿ.ಶ.13ನೇ ಶತಮಾನದಿಂದಲೇ ಜೈನ ಮಠಾಧಿಪತಿಗಳು ಜೈನ ಧರ್ಮದ ಹಾಗೂ ಸಮಾಜದ ಅಭಿವೃದ್ಧಿಗೆ ಕಾರಣರಾಗಿದ್ದರು. ಈ ಮಠಾಧಿಪತಿಗಳು ಸ್ಥಳೀಯ ರಾಜರನ್ನು, ಸಮಾಜದ ಪ್ರಮುಖರನ್ನು ಬಸದಿ ನಿರ್ಮಾಣಕ್ಕೆ ಪ್ರೋತ್ಸಾಹಿಸುತಿದ್ದರು. ಈ ಭಾಗದಲ್ಲಿ ನಿರ್ಮಾಣವಾದ ಹಲವಾರು ಜೈನ ಸ್ಮಾರಕಗಳ ಹಿಂದಿನ ಪ್ರೇರಣಾ ಶಕ್ತಿಗಳಾಗಿ ಮಠಾಧಿಪತಿಗಳು ಇರುವುದನ್ನು ಶಾಸನಗಳ ಅಧ್ಯಯನವೂ ತೋರಿಸುತ್ತವೆ. ಕ್ರಿ.ಶ.1504ರ ಮೂಡಬಿದಿರೆಯ ಶಾಸನ ಮೂಡಬಿದಿರೆಯ ಚಾರುಕೀರ್ತಿ ಪಂಡಿತದೇವರನ್ನು 72 ಜೈನ ಧಾರ್ಮಿಕ ಸಂಸ್ಥಾನಗಳಿಗೆ ಉನ್ನತ ಸ್ವಾಮಿಗಳೆಂದು ಮಾಹಿತಿ ನೀಡುತ್ತದೆ.[193] ಕೆಳದಿಯ ಆಡಳಿತದಲ್ಲಿಯೂ ಮೂಡಬಿದಿರೆ, ವೇಣೂರು, ಮೂಲ್ಕಿ ಮೊದಲಾದ ಜೈನ ಧಾರ್ಮಿಕ ಕೇಂದ್ರಗಳು ಮೂಡಬಿದಿರೆ ಜೈನ ಮಠದ ಅಧೀನದಲ್ಲಿದ್ದು ಇಲ್ಲಿಯ ಚಾರುಕೀರ್ತಿ ಸ್ವಾಮೀಜಿಯವರು ಈ ಜನರ ಮೇಲೆ ಪ್ರಭಾವವನ್ನು ಹೊಂದಿದ್ದರು. ಹಾಗೆಯೇ ಗೇರುಸೊಪ್ಪೆ ಮತ್ತು ಕಾರ್ಕಳದ ಸ್ವಾಮೀಜಿಗಳೂ ಕ್ರಿ.ಶ. 16 ಮತ್ತು 17ನೇ ಶತಮಾನದಲ್ಲಿ ಜೈನಧರ್ಮದ ಉನ್ನತಿಗೆ ಕಾರಣರಾಗಿದ್ದರು. ಕಾರ್ಕಳದ ಲಲಿತಕೀರ್ತಿ ಭಟ್ಟಾರಕರು ಕಳಸ, ಕಾರ್ಕಳ, ಮತ್ತು ಅಜಿಲರ ಸೀಮೆಯಲ್ಲಿ ಜೈನ ಧರ್ಮದ ಪ್ರಗತಿಯಲ್ಲಿ ಪ್ರಮುಖ ಪಾತ್ರ ವಹಿಸಿದರು. ಈ ಮಠಗಳಲ್ಲದೆ ತುಳುನಾಡಿನ ಜನರು ತುಳುನಾಡಿಗಿಂತ ಹೊರಗಿದ್ದ ಹುಂಬುಚ, ಶ್ರವಣಬೆಳಗೊಳ ಮತ್ತು ಉತ್ತರ ಭಾರತದ ಊರ್ಜಯಂತಗಿರಿಯ(ಗುಜರಾತಿನ ಗಿರಿನಾರ್) ಸಾನಿಧ್ಯಗಳಿಗೂ ವಿಶೇಷ ಗೌರವವನ್ನು ಹೊಂದಿದ್ದರು.[194]

ವಿಜಯನಗರ ಅರಸರುಗಳ ಆಳ್ವಿಕೆ ಈ ಭಾಗದಲ್ಲಿ ಆಂತರಿಕ ಮತ್ತು ಅಂತಾರಾಷ್ಟ್ರೀಯ ವ್ಯಾಪಾರ ಬಿರುಸುಗೊಳ್ಳಲು ಕಾರಣವಾಯಿತು. ಇದರ ಪರಿಣಾಮವಾಗಿ ಜೈನ ವ್ಯಾಪಾರಿ ಸಂಘಗಳು ಮತ್ತು ಆಡಳಿತಗಾರರು ಹೆಚ್ಚು ಪ್ರಾಮುಖ್ಯತೆ ಪಡೆದುಕೊಂಡರು. ಕರಾವಳಿ ಕರ್ನಾಟಕದಲ್ಲಿ ಈ ವ್ಯಾಪಾರಿಗಳಿಗೆ ದೊರೆತ ಪ್ರೋತ್ಸಾಹದಿಂದ ಅತ್ಯಂತ ಹೆಚ್ಚು ಲಾಭವಾದದ್ದು ಜೈನ ಧರ್ಮಕ್ಕೆ. ಇವರುಗಳು ಸಮಗ್ರವಾಗಿ ಜೈನ ಬಸದಿಗಳ ನಿರ್ಮಾಣ ಅಥವಾ ಜೀರ್ಣೋದ್ಧಾರವನ್ನು ಕೈಗೊಂಡ ಬಗ್ಗೆ ಶಾಸನಗಳು ವಿವರಿಸುತ್ತವೆ.[195] ಸ್ಥಾನಪತಿ ಅಥವಾ ಸ್ಥಾನಿಕ, ಕರ್ತ, ಇಂದ್ರ, ಹಲರು, ಸಮಸ್ತ ಹಲರು, ಸೆಟ್ಟಿಕಾರರು ಮತ್ತು ಜೈನ ಸಾಧುಗಳು ಬಸದಿಯ ಆಡಳಿತವನ್ನು ನಿರ್ವಹಿಸುತ್ತಿದ್ದರು. ಉದಾಹರಣೆಗೆ ಕ್ರಿ.ಶ. 1586ರ ಕಾರ್ಕಳದ ಶಾಸನ ಕಾರ್ಕಳದ ಚತುರ್ಮುಖ ಬಸದಿಯ ಪೂಜಾದಿಗಳಿಗೆ 14 ಸ್ಥಾನಿಕರನ್ನು ನೇಮಕಗೊಳಿಸಿದ ಕುರಿತು ಮಾಹಿತಿ ನೀಡುತ್ತದೆ.[196] ಶಾಸನಗಳಲ್ಲಿ ಬಸದಿಕರ್ತರ ಉಲ್ಲೇಖಗಳೂ ಬರುತ್ತವೆ. ಆವನು ದಾನ

ದತ್ತಿಗಳ ಜಾರಿಯಲ್ಲಿ ಪ್ರಮುಖ ಪಾತ್ರವಹಿಸಿದ್ದ. ಕ್ರಿ.ಶ 1579ರ ಕಾರ್ಕಳದ ಶಾಸನ ಹೇಳುವಂತೆ ಬಸದಿಯಲ್ಲಿ ಶಾಸ್ತ್ರ ಅಧ್ಯಯನಕ್ಕಾಗಿ ಶ್ರಾವಕರು ಶಾಂತಿಕೀರ್ತಿದೇವನಿಗೆ ನೀಡಿದ ದತ್ತಿಯನ್ನು ಜಾರಿಗೊಳಿಸುವ ಜವಾಬ್ದಾರಿಯನ್ನು ಬಸ್ತಿಕರ್ತ, ಲಲಿತಕೀರ್ತಿಭಟ್ಟಾರಕರು ಮತ್ತು ಭೈರರಸ ಒಡೆಯರಿಗೆ ನೀಡಲಾಯಿತು.[197] ಕ್ರಿ.ಶ.1592ರ ಕಾರ್ಕಳದ ಇನ್ನೊಂದು ಶಾಸನ ಗುರುರಾಯ ಬಸದಿಗೆ ದತ್ತಿ ನೀಡಲು ಬಸದಿಕರ್ತನ ಒಪ್ಪಿಗೆಯನ್ನು ಪಡೆಯಲಾಯಿತು ಎಂದು ಹೇಳಿದೆ.[198] ಆದರೆ ಇಂದು ಜೈನರಲ್ಲಿ ಈ ಆಡಳಿತ ವರ್ಗಗಳಿಲ್ಲ. **ಜೈನಧರ್ಮದ ಸ್ಥಿತ್ಯಂತರಗಳು:** ಕ್ರಿ.ಶ. 16 ಮತ್ತು 17ನೇ ಶತಮಾನದಲ್ಲಿ ತುಳುನಾಡಿನ ಜೈನಧರ್ಮವನ್ನು ಅವಲೋಕಿಸಿದಾಗ ವೈದಿಕ ಧರ್ಮದ ಅನೇಕ ಲಕ್ಷಣಗಳು ಜೈನಧರ್ಮದ ಮೇಲೆ ಪ್ರಭಾವ ಬೀರಿರುವುದನ್ನು ಗಮನಿಸಬಹುದು. ಈ ಧರ್ಮದ ಹಲವು ದೇವರುಗಳ ಪ್ರಭಾವ ಜೈನಧರ್ಮದ ಮೇಲಾಗಿದೆ. ಬಸದಿಗಳಿಗೆ ದಾನ ದತ್ತಿಗಳನ್ನು ನೀಡಿದಾಗ ಹಿಂದೂ ದೇವರುಗಳನ್ನು ಪ್ರಾರ್ಥಿಸಲಾಗುತ್ತಿತ್ತು. ಉದಾಹರಣೆಗೆ, ಕಾಯಿಕಿಣಿ ಮತ್ತು ಮಾವಳಿಯಲ್ಲಿ ದೊರೆತ ಕ್ರಿ.ಶ.16ನೇ ಶತಮಾನದ ಶಾಸನಗಳಲ್ಲಿ ತೀರ್ಥಂಕರರೊಂದಿಗೆ ಗಣಪತಿ ಮತ್ತು ಶಿವನ ಪ್ರಾರ್ಥನೆಯನ್ನು ಕಾಣಬಹುದು.[199] ಗೋವರ್ಧನಗಿರಿಯ ಶಾಸನವೊಂದರಲ್ಲಿ ಜೈನ ಧರ್ಮವನ್ನು ಶೈವ ಮತ್ತು ವೈಷ್ಣವ ಮತದೊಂದಿಗೆ ಸಮೀಕರಿಸುವ ಪ್ರಯತ್ನವನ್ನು ಕಾಣಬಹುದು.[200] ಈ ಕಾಲಘಟ್ಟದಲ್ಲಿ ತೀರ್ಥಂಕರರೊಂದಿಗೆ ಬ್ರಹ್ಮಯಕ್ಷನ ಆರಾಧನೆಯನ್ನು ಈ ಹಿನ್ನೆಲೆಯೊಂದಿಗೂ ನೋಡಬಹುದಾಗಿದೆ. ಕಾರ್ಕಳದ ಚತುರ್ಮುಖ ಬಸದಿಯಲ್ಲದೆ, ಮೂಡಬಿದಿರಿ, ವೇಣೂರು, ಭಟ್ಕಳ, ಕಾಯಿಕಿಣಿ ಮೊದಲಾದ ಸ್ಥಳಗಳಲ್ಲಿರುವ ಬಸದಿಗಳಲ್ಲಿ ಬ್ರಹ್ಮದೇವರನ್ನು ಪೂಜಿಸಲಾಗುತ್ತದೆ. ಕ್ರಿ.ಶ.1586ರ ಚತುರ್ಮುಖ ಬಸದಿಯ ಶಾಸನ ಉಲ್ಲೇಖಿಸುವಂತೆ 6ನೇ ಭೈರವರಾಯ ಹೊಸತಾಗಿ ನಿರ್ಮಾಣ ಮಾಡಿದ ಚತುರ್ಮುಖ ಬಸದಿಯಲ್ಲಿ ಇತರ ತೀರ್ಥಂಕರರೊಂದಿಗೆ ಬ್ರಹ್ಮದೇವನನ್ನೂ ಪ್ರತಿಷ್ಠಾಪಿಸಿದ.[201] ಅದೇ ರೀತಿ ಜೈನ ರಾಜರುಗಳು ತುಳುನಾಡಿನಲ್ಲಿ ಹಿಂದೂ ದೇವತೆಗಳನ್ನು ತಮ್ಮ ರಾಜ್ಯದ ಪ್ರಮುಖ ಸೀಮೆ ದೇವರಾಗಿ ಸ್ವೀಕಾರ ಮಾಡಿದ್ದರು. ಈ ರಾಜರುಗಳ ಪಟ್ಟದ ಉಂಗುರದಲ್ಲಿ ಹಿಂದೂ ದೇವರುಗಳ ಹೆಸರನ್ನು ಕೆತ್ತಲಾಗಿದ್ದು ಅವುಗಳನ್ನು ಅಧಿಕೃತ ಮುದ್ರೆಗಳೆಂದು ಪರಿಗಣಿಸಲಾಗಿತ್ತು. ಉದಾಹರಣೆಗೆ, ಬಂಗರಿಗೆ ಸೋಮನಾಥ, ಪುತ್ತಿಗೆಯ ಚೌಟರಿಗೆ ಸೋಮನಾಥ, ಅಜಿಲರಿಗೆ ವೇಣೂರಿನ ಮಹಾಲಿಂಗ ದೇವ, ಸಾಮಂತರಿಗೆ ಸಿಮಂತೂರಿನ ಆದಿಜನಾರ್ಧನ, ಮಾರಮ್ಮ ಹೆಗ್ಗಡೆಯವರಿಗೆ ಎರ್ಮಾಳಿನ ಜನಾರ್ಧನ, ತೋಳಹರಿಗೆ ಸೂರಾಲಿನ ಮಹಾದೇವ, ಭೈರರಸ ಒಡೆಯರಿಗೆ ಕಳಸನಾಥ ಪಟ್ಟದ ದೇವರಾಗಿದ್ದರು.[202]

ಕ್ರಿ.ಶ. 16 ಮತ್ತು 18 ನೇ ಶತಮಾನದ ನಡುವೆ ಜೈನಧರ್ಮ ಶಕ್ತಿ ಮತ್ತು ತಾಂತ್ರಿಕ ಆರಾಧನೆಗೆ ಒಳಪಟ್ಟಿತು.[203] ಈ ಕಾಲದಲ್ಲಿ ದೇವಿಯರ ಆರಾಧನೆ ಪ್ರಾಮುಖ್ಯತೆಯನ್ನು ಪಡೆಯಿತು. ಅವರನ್ನು ತೀರ್ಥಂಕರರ ಯಕ್ಷ ಯಕ್ಷಿಯರೆಂದು ಪರಿಗಣಿಸಲಾಗಿತ್ತು. ಈ ಯಕ್ಷಿಯರನ್ನು ದೇವರ ಹಂತಕ್ಕೆ ಏರಿಸಿ ಬಸದಿಗಳಲ್ಲಿ ಆರಾಧಿಸಲಾಗುತ್ತಿತ್ತು.[204] ಜ್ವಾಲಾಮಾಲಿನಿ, ಕೂಷ್ಮಾಂಡಿನಿ, ಮತ್ತು ಪದ್ಮಾವತಿ ದೇವಿಯರ

ಆರಾಧನೆಯನ್ನು ಇಲ್ಲಿ ಗಮನಿಸಬಹುದು. ಪಾರ್ಶ್ವನಾಥ ಜಿನನ ಯಕ್ಷಿಯಾದ ಪದ್ಮಾವತಿಯ ಆರಾಧನೆ ಈ ಭಾಗದಲ್ಲಿ ಹೆಚ್ಚಾಗಿತ್ತು.[205] ತುಳುನಾಡಿನಾದ್ಯಂತ ಸುಮಾರು 180 ರಷ್ಟು ಬಸದಿಗಳಿದ್ದು ಇಲ್ಲಿ ಪದ್ಮಾವತೀ ದೇವಿ ಆರಾಧನೆಯಿಲ್ಲದ ಬಸದಿಯೇ ಇಲ್ಲವೆನ್ನುವಷ್ಟು ಇಂದು ಈ ಯಕ್ಷಿ ಆರಾಧನೆ ಪ್ರಾಮುಖ್ಯತೆಯನ್ನು ಪಡೆದಿದೆ. ಕ್ರಿ.ಶ.1586ರಲ್ಲಿ ಭೈರವರಾಯ ಚತುರ್ಮುಖ ಬಸದಿಯಲ್ಲಿ ಪದ್ಮಾವತಿಯನ್ನು ಪ್ರತಿಷ್ಠಾಪಿಸಿ, ಪೂಜಾದಿಗಳಿಗೆ ವ್ಯವಸ್ಥೆ ಮಾಡಿದ. ಚಂದ್ರಮನ ಪ್ರಕಾರ ಏಳನೇ ಭೈರವ, ಕ್ರಿಶ. 1646ರಲ್ಲಿ ಪದ್ಮಾವತಿಗೆ ಚಿನ್ನದ ಸರವನ್ನು ಅರ್ಪಿಸಿ ಅಭಿಷೇಕವನ್ನು ಮಾಡಿದ. ಹಾಗೆಯೇ ಈ ಕವಿ ತನ್ನ ಕೃತಿಯನ್ನು ಬರೆಯುವುದಕ್ಕೆ ಮೊದಲು ಪದ್ಮಾವತಿಯನ್ನು ಪ್ರಾರ್ಥಿಸಿದ್ದ.[206] ಭಕ್ತರಿಗೆ ಸಂತಸವನ್ನು ಕರುಣಿಸುವ, ಮಕ್ಕಳನ್ನು ಕರುಣಿಸುವ ದೇವಿಯಾಗಿಯೂ ಅವಳಿಗೆ ಮನ್ನಣೆ ಇದೆ. ಪದ್ಮನಾಭ ಮತ್ತು ಸುರಾಲ ಕವಿಗಳ ಪದ್ಮಾವತಿಯ ಪ್ರಶಂಸೆಯ ಕವನಗಳು ಅವಳ ಜನಪ್ರಿಯತೆಯನ್ನು ತೋರಿಸುತ್ತವೆ. ಹಾಗೆಯೇ ಈ ಕಾಲದಲ್ಲಿ ಸರಸ್ವತಿಯ ಆರಾಧನೆಯೂ ಜೈನರಲ್ಲಿತ್ತು. ಹಾಗಿದ್ದರೂ ಇಂದಿಗೂ ಜೈನರು ತಾಂತ್ರಿಕ ವಿಧಿಗಳಿಗೆ ಸಂಬಂಧಿಸಿದ ಯಕ್ಷಿಯರು ತೀರ್ಥಂಕರರಿಗೆ ಅಧೀನರೆಂಬ ಮೂಲಸಿದ್ಧಾಂತವನ್ನು ನಂಬುತ್ತಾರೆ.

ತುಳುನಾಡಿನ ಭೂತಾರಾಧನೆಗೂ ಜೈನರಿಗೂ ಅವಿನಾಭಾವ ಸಂಬಂಧವಿದೆ. ಜೈನರು ತಮ್ಮದಲ್ಲದ ಭೂತಾರಾಧನೆಯನ್ನು ಒಪ್ಪಿಕೊಳ್ಳುವಲ್ಲಿ ಬೇರೆ ಬೇರೆ ಕಾರಣಗಳೊಂದಿಗೆ ದೈವಗಳ ಕುರಿತಾದ ಭಯವೂ ಕಾರಣವಾಗಿತ್ತು. ಧೂಮಾವತಿ ದೈವದ ಪಾಡ್ದನದಲ್ಲಿ ವೇಣೂರು ಪರಿಸರದಲ್ಲಿ ಜೈನರಿಗೆ ಭಯ ಹುಟ್ಟಿಸಿ ಆ ದೈವ ಅವರಿಂದ ಆರಾಧನೆಗೆ ಒಳಗಾದ ಸಂಕಥನವಿದೆ.[207] ತುಳುನಾಡಿನಲ್ಲಿ ಭೂತಾರಾಧನೆಯನ್ನು ಊರ್ಜಿತಗೊಳಿಸಿದವರಾಗಿ ಬೀಡು ಬಲ್ಲಾಳರು ಕಾಣಿಸಿಕೊಳ್ಳುತ್ತಾರೆ.

ಈ ಮೇಲಿನ ಅಂಶಗಳನ್ನು, ಕೂಲಂಕುಷವಾಗಿ ವಿಶ್ಲೇಷಿಸಿದಾಗ, ತಿಳಿದು ಬರುವುದೇನೆಂದರೆ, ಪಾರಮಾರ್ಥಿಕ ಸುಖ ಅಥವಾ ಮೋಕ್ಷದ ಉದ್ದೇಶವೇ ಪ್ರಮುಖವಾಗಿರುವ ಜೈನಧರ್ಮದಲ್ಲಿ ಲೌಕಿಕ ಸುಖದ ಪ್ರಾರ್ಥನೆಗಳಿಗೆ ಅವಕಾಶವಿಲ್ಲ. ಆಧ್ಯಾತ್ಮಿಕ ಸಾಧನೆ ಮಾಡಿದವರಿಗೆ ಇದು ಸಾಧ್ಯವಾದರೂ ಜನ ಸಾಮಾನ್ಯರಿಗೆ ಇದು ಕಷ್ಟದ ಕೆಲಸ. ಈ ಹಿನ್ನೆಲೆಯಲ್ಲಿ ಜೈನಧರ್ಮದ ಉಳಿವಿಗಾಗಿ ವೈದಿಕ ಧರ್ಮದ ಮಾದರಿಯಲ್ಲಿ ಕಾಮಿತಾರ್ಥಗಳನ್ನು ನೀಡುವ ಯಕ್ಷ ಯಕ್ಷಿಯರ ಆರಾಧನೆ ಈ ಕಾಲದ ತುಳುನಾಡಿನಲ್ಲಿ ಪ್ರಬಲವಾಯಿತು. ಆ ದೇವತೆಗಳು ಬೇಡಿದ್ದನ್ನು ಕೊಡುವವರಾಗಿದ್ದರು. ಇದು ಜೈನಧರ್ಮವನ್ನು ತುಳುನಾಡಿನಲ್ಲಿ ಉಳಿಸಲು ಅನಿವಾರ್ಯವಾಯಿತು. ಆ ಕಾರಣದಿಂದಲೇ ತುಳುನಾಡಿನ ಎಲ್ಲಾ ಬಸದಿಗಳಲ್ಲಿ ಈ ಯಕ್ಷ ಯಕ್ಷಿಯರ, ಕ್ಷೇತ್ರಪಾಲ, ನಾಗನ ಆರಾಧನೆ ಊರ್ಜಿತಗೊಂಡಿತು. ಮಾತ್ರವಲ್ಲದೆ ಭೂತಾರಾಧನೆಯಂತಹ ಹಲವು ಆಚರಣೆಗಳು ಜೈನಧರ್ಮದ ಭಾಗವಾಗಿ ಮುಂದುವರಿಯಿತು. ಜೈನರು ತಮ್ಮದಲ್ಲದ ಭೂತಾರಾಧನೆಯನ್ನು ಒಪ್ಪಿಕೊಳ್ಳುವಲ್ಲಿ ಬೇರೆ ಬೇರೆ ಕಾರಣಗಳಿವೆ. ಧಾರ್ಮಿಕ ಸಾಮರಸ್ಯ, ಆಡಳಿತ ನಿಯಂತ್ರಣ ಮತ್ತು ದೈವಗಳ ಕುರಿತಾದ ಭಯ ಮುಂತಾದ ವಿಚಾರಗಳು. ತುಳುನಾಡಿನ

ಜೈನರು ಭೂತಾರಾಧನೆಯನ್ನುಊರ್ಜಿತಗೊಳಿಸಲು ಕಾರಣವಾಯ್ತು. ಪ್ರಾಣಿಬಲಿಯೇ ಪ್ರಧಾನವಾಗಿದ್ದ ತುಳುನಾಡಿನ ಭೂತಾರಾಧನೆ, ಬಲಿಯಂತಹ ಹಿಂಸೆ ಇಲ್ಲದ ಆರಾಧನಾ ಪದ್ಧತಿಯಾಗಿ ಬೆಳೆಯಲು ತುಳುನಾಡಿನ ಜೈನಧರ್ಮ ಕಾರಣವಾದದ್ದು ಈ ಕಾಲದ ಸಾಮಾಜಿಕ ಧಾರ್ಮಿಕ ಪಲ್ಲಟವಾಗಿದೆ.

**ಜೈನ–ವೀರಶೈವ ಸಂಘರ್ಷ–ಸಮನ್ವಯತೆ**

ವಿಜಯನಗರ ಕಾಲದಲ್ಲಿ ತುಳುನಾಡಿನ ಪ್ರಬಲವಾಗಿ ಬೆಳೆದ ಜೈನ ಧರ್ಮ, ಕೆಳದಿ ಕಾಲದಲ್ಲಿ ತನ್ನ ಇಳಿಗಾಲವನ್ನು ಕಂಡಿತು ಎಂಬ ಅಭಿಪ್ರಾಯಗಳಿವೆ. ಆದರೆ ಈ ಕುರಿತಾಗಿ ವಿದ್ವಾಂಸರಲ್ಲಿ ಒಮ್ಮತವಾದ ಅಭಿಪ್ರಾಯಗಳಿಲ್ಲ. ಜೈನ ಧರ್ಮ ಕೆಳದಿಯ ಆಡಳಿತದಲ್ಲಿ ಜನಪ್ರಿಯತೆಯನ್ನು ಕಳೆದುಕೊಂಡಿತು ಮತ್ತು ಈ ಇಳಿಗಾಲಕ್ಕೆ ವೀರಶೈವರಾದ ಕೆಳದಿಯರಸರ ಧಾರ್ಮಿಕ ನೀತಿಗಳು ಕಾರಣ ಎಂಬ ಅಭಿಪ್ರಾಯಗಳು ಒಂದೆಡೆಯಾದರೆ, ಕೆಳದಿ ರಾಜರು ಸರ್ವ ಧರ್ಮ ಸಹಿಷ್ಣುಗಳು ಎಲ್ಲಾ ಧರ್ಮದ ಜನರನ್ನು ಪೋಷಿಸಿದರು ಎಂಬ ನಿಲುವುಗಳಿವೆ. ಈ ಹಿನ್ನೆಲೆಯಲ್ಲಿ ಜೈನ ಧರ್ಮದ ಹಿನ್ನಡೆಯ ಕಾರಣಗಳು, ವೀರಶೈವ ಕೆಳದಿಯರಸರ ಜಿನಧರ್ಮದ ಕುರಿತಾದ ನಿಲುವುಗಳನ್ನು ಪರಿಶೀಲಿಸಬೇಕಾಗುತ್ತದೆ.

ವಿಜಯನಗರದ ಆಡಳಿತದಲ್ಲಿ ಸ್ಥಳೀಯ ಜೈನ ರಾಜರುಗಳು, ಬಲ್ಲಾಳರು, ಹೆಗ್ಗಡೆಗಳು, ವ್ಯಾಪಾರಿ ಸಮುದಾಯಗಳು ತುಳುನಾಡಿನಲ್ಲಿ ಭದ್ರವಾದ ನೆಲೆಯನ್ನು ಹೊಂದಿದ್ದರು ಎಂಬುದು ಸರ್ವವಿದಿತವಾಗಿದೆ. ಆದರೆ ಕೆಳದಿ ಹಾಗೂ ಪೋರ್ಚುಗೀಸರ ಯುದ್ಧದಿಂದಾಗಿ ಸ್ಥಳೀಯ ಜೈನರಸರಾದ ಗೇರುಸೊಪ್ಪೆ, ಹಾಡುವಳ್ಳಿ, ಭಟ್ಕಳದ ದೊರೆಗಳೂ ತೋಳಹರ, ಬಂಗ, ಅಜಿಲ, ಚೌಟ, ಸಾಮಂತ ಮತ್ತು ಕಾರ್ಕಳದ ಭೈರರಸರು ತೀವ್ರವಾದ ಕಷ್ಟ–ನಷ್ಟಗಳಿಗೆ ಗುರಿಯಾಗಬೇಕಾಯಿತು. ವಿಜಯನಗರದ ಪತನಾನಂತರ ಈ ಅರಸರೆಲ್ಲ ಅತಂತ್ರರಾದರು. ಉದಾಹರಣೆಗೆ, ಗೇರುಸೊಪ್ಪೆಯ ಅರಸರು ಪೋರ್ಚುಗೀಸರಿಗೆ ಕಪ್ಪಕೊಡಬೇಕಾಗಿ ಬಂತು. ಜೊತೆಗೆ ದೂರದ ವಿಜಾಪುರದ ಆದಿಲ್‌ಷಹನಿಗೂ ಕಪ್ಪಕಾಣಿಕೆಯನ್ನು ನೀಡಬೇಕಾಯಿತು.[208] ಸಂಕಣ್ಣ ನಾಯಕನೂ ಅನಂತರ ಅಧಿಕಾರಕ್ಕೆ ಬಂದ ಚಿಕ್ಕ ಸಂಕಣ್ಣ ನಾಯಕನೂ ಕರಾವಳಿಯ ಮೇಲೆ ದಂಡೆತ್ತಿ ಬಂದಿದ್ದರು. ಕೆಳದಿಯರಸರು ಕಾರ್ಕಳದ ಭೈರರಸನಿಂದ ಕಪ್ಪಕಾಣಿಕೆಯನ್ನೂ ಪಡೆದರಲ್ಲದೇ, ಗೇರುಸೊಪ್ಪೆಯ ಭೈರಾದೇವಿಯನ್ನೂ, ಸೋದೆಯ ಅರಸಪ್ಪ ನಾಯಕನನ್ನೂ ಸೋಲಿಸಿ ಸಾಕಷ್ಟು ಸಂಪತ್ತನ್ನು ಸೂರೆಗೈದರು. ಅನಂತರ ಪಟ್ಟಕ್ಕೆ ಬಂದ ಒಂದನೇ ವೆಂಕಟಪ್ಪನು ಕೆಳದಿ ಸಿಂಹಾಸನದ ಗದ್ದುಗೆಯೇರಿದ ನಂತರ ಈ ಜೈನ ಅರಸರು ಸಾಕಷ್ಟು ಕಷ್ಟ ನಷ್ಟಗಳನ್ನು ಅನುಭವಿಸಬೇಕಾಯಿತು. ಅವನು ಸದೆಬಡಿದ ತುಳುನಾಡಿನ ಸಮಸ್ತ ರಾಜರು ಬಲ್ಲಾಳರು ಹೆಗ್ಗಡೆಗಳು ಜೈನಧರ್ಮಕ್ಕೆ ಸೇರಿದವರಾಗಿದ್ದದು ಆ ಧರ್ಮಕ್ಕೆ ಸಹಜವಾಗಿಯೇ ಹಿನ್ನಡೆಯಾಗಲು ಕಾರಣವಾಯಿತು. ಗೇರುಸೊಪ್ಪೆಯ ನಾಶದ ವಿಷಯವನ್ನು ಇಟಲಿಯ ಪ್ರವಾಸಿಯಾದ ಪಿಯತ್ರೋ ಡೆಲ್ಲಾ ವಲ್ಲೆ ತನ್ನ ಪ್ರವಾಸಕಥನದಲ್ಲಿ ವಿವರಿಸಿದ್ದಾನೆ.[209] ವೆಂಕಟಪ್ಪ ನಾಯಕ

ರಾಜಧಾನಿಯನ್ನು ವಶಪಡಿಸಿಕೊಂಡನಲ್ಲದೆ, ಗೇರುಸೊಪ್ಪೆ ರಾಜ್ಯ ತನ್ನ ಕೈಬಿಟ್ಟು ಹೋಗದಿರುವಂತೆ ರಾಜಧಾನಿಯನ್ನೂ ಅರಮನೆಯನ್ನೂ ನಾಶಪಡಿಸಿದನು. "ಹೀಗಾಗಿ ಇತ್ತೀಚಿನವರೆಗೆ ಅದ್ದೂರಿಯಿಂದ ಇದ್ದ ನಗರ ಇಂದು ಕಾಡಾಗಿದೆ. ಮನೆಗಳಿದ್ದ ಕಡೆ ಭಾರಿ ಭಾರಿ ಮರಗಳು ಬೆಳೆದುನಿಂತಿವೆ. ರೈತರ ನಾಲ್ಕೈದು ಗುಡಿಸಲುಗಳನ್ನು ಬಿಟ್ಟರೆ, ಅಲ್ಲಿ ಬೇರಾವ ಕುರುಹುಗಳೂ ಇಲ್ಲ..." ಎಂಬುದಾಗಿ ಪಿಯತ್ರೋ-ಡೆಲ್ಲಾ-ವಲ್ಲೆ ಮಾಹಿತಿ ನೀಡುತ್ತಾನೆ.[210] ಈ ಆಕ್ರಮಣದಿಂದ, ಕೇವಲ ಗೇರುಸೊಪ್ಪೆಯ ನಗರ ನಾಶ ಮಾತ್ರವಲ್ಲದೆ, ತುಳುನಾಡಿನ ಉತ್ತರಭಾಗದಲ್ಲಿ ಜೈನಧರ್ಮದ ಅವನತಿಯೂ ಆಯಿತು.

ಕೆಳದಿ ಅರಸರ ಕಾಲದಲ್ಲಿ ಜೈನ ರಾಜರುಗಳಂತೆ, ಜೈನಧರ್ಮವೂ, ತೀವ್ರವಾದ ಆಘಾತಕ್ಕೆ ಗುರಿಯಾಗಬೇಕಾಯಿತು. ಕೆಳದಿ ಅರಸರು ಕಟ್ಟಾ ವೀರಶೈವ ಮತಾವಲಂಬಿಗಳು. ಅವರು ಸಕಲ ಧರ್ಮಗಳನ್ನು ಸಹನೆಯಿಂದ ನೋಡುತ್ತಿದ್ದು ಎಲ್ಲಾ ಜಾತಿ ಮತದವರಿಗೆ ಆಶ್ರಯವಾಗಿದ್ದರು.[211] ಎಂಬ ಹೇಳಿಕೆಗಳಿಗೆ ಅಪವಾದವೆಂಬಂತೆ, ಅವರು ಜೈನಧರ್ಮದ ಬಗ್ಗೆ ಹಲವು ಸಂದರ್ಭಗಳಲ್ಲಿ ನಿಷ್ಠುರವಾಗಿಯೇ ನಡೆದುಕೊಂಡರು. ಜೈನಧರ್ಮಕ್ಕೆ ಸಂಬಂಧಿಸಿದಂತೆ ಅವರ ಪ್ರೋತ್ಸಾಹವು ದೊಡ್ಡ ಮಟ್ಟದಲ್ಲಿ ಕಂಡುಬರುವುದಿಲ್ಲ. ಒಂದೆರಡು ಉದಾಹರಣೆಗಳನ್ನು ಬಿಟ್ಟರೆ ಮಿಕ್ಕ ಸಂದರ್ಭಗಳಲ್ಲಿ ಅವರು ನಿರ್ದಯ ಧೋರಣೆಯನ್ನು ತಳೆದು, ಜೈನಧರ್ಮದ ಅವನತಿಗೆ ಮುಖ್ಯ ಕಾರಣಕರ್ತರಾದರು ಎನ್ನುವುದು ಕೆಲವು ವಿದ್ವಾಂಸರು ಅಭಿಪ್ರಾಯ.[212] ಇದಕ್ಕೆ ಪೂರಕವಾಗಿ ಬಾರ್ಕೂರಿನ ಜನಜನಿತ ಕಥೆಗಳಲ್ಲಿರುವಂತೆ ವೆಂಕಟಪ್ಪ ನಾಯಕನು ತನ್ನ ದಳವಾಯಿ ಲಿಂಗಣ್ಣನನ್ನು ತುಳುನಾಡಿನ ಮೇಲೆ ಕಳುಹಿಸಿ ಬಾರಕೂರು ರಾಜ್ಯವನ್ನು ಸ್ವಾಧೀನಪಡಿಸಿಕೊಂಡನಲ್ಲದೆ, ಸಕಲ ವಸ್ತುವಾಹನವನ್ನೂ ಸೂರೆಗೊಂಡನು. ಕೋಟೆ, ಪೇಟೆಯನ್ನು ಸುಟ್ಟು ಸೂರೆಮಾಡಿದನು. ಜಿನಬಿಂಬಗಳನ್ನು ಒಡೆದು ಹಾಕಿದನು. ಸ್ತಂಭ, ಗೋಪುರ, ಬಸದಿಗಳನ್ನು ಮಣ್ಣುಗೂಡಿಸಿದನು. ಬಾರಕೂರಿನ ಇತಿಹಾಸದಲ್ಲಿ ವೆಂಕಟಪ್ಪ ನಾಯಕನನ್ನು 'ಜಿನಧರ್ಮಕುಠಾರ' 'ಜಿನಬಿಂಬ ಭೇದಕ' ಎಂದು ಮುಂತಾಗಿ ವರ್ಣಿಸಲಾಗಿದೆ.[213] ಕೆಳದಿ ಅರಸರ ಒತ್ತಡಕ್ಕೆ ಮಣಿದು ಸೋದೆ ಮತ್ತು ಬಿಳಗಿಯ ಜೈನ ರಾಜ ಮನೆತನದವರು, ಜೈನಮತವನ್ನು ಬಿಟ್ಟು, ವೀರಶೈವ ಧರ್ಮವನ್ನು ಸ್ವೀಕರಿಸಿದರಲ್ಲದೆ, ಜನಸಾಮಾನ್ಯರೂ ಕೂಡ ಈ ಧರ್ಮದಲ್ಲಿ ಆಸಕ್ತಿಯನ್ನು ವಹಿಸಿದರು. ನೂರಾರು ಜಂಗಮ ಮಠಗಳ ಸ್ಥಾಪನೆ ತುಳುನಾಡಿನಲ್ಲಿ ಇವರ ಕಾಲದಲ್ಲಿ ನಡೆಯಿತು.[214] ಈ ಎಲ್ಲಾ ರಾಜಕೀಯ ಘಟನೆಗಳ ಹಿನ್ನೆಲೆಯಲ್ಲಿ ತುಳುನಾಡಿನಲ್ಲಿ ಜೈನ ಧರ್ಮದ ಅವನತಿಗೆ ಪ್ರಮುಖವಾಗಿ ಕೆಳದಿಯರಸರು ಕಾರಣವೆಂದು ಹೇಳಲಾಗಿದೆ.

ಜೈನ ಪ್ರಭುತ್ವವು ಗೇರುಸೊಪ್ಪೆ, ಭಟ್ಕಳ, ಹಾಡುವಳ್ಳಿ ಈ ಕೇಂದ್ರ ಭಾಗದಲ್ಲಿ ಕುಸಿದು ಬಿದ್ದು, ನೆಲಕಚ್ಚಿದಾಗ ತುಳುನಾಡಿನಲ್ಲಿ ಜೈನಧರ್ಮವು ಅತಂತ್ರವಾಗಿ, ಅಳಿವು-ಉಳಿವಿನ ಪ್ರಶ್ನೆ ಎದುರಾಯಿತು. ಈ ಕೆಳದಿ ಅರಸರ ಜೊತೆಗೆ, ಪೋರ್ಚುಗೀಸರು ಮುಸ್ಲಿಮರು ಅವ್ಯಾಹತ ದಾಳಿಗಳನ್ನು ನಡೆಸಿ ಜೈನಧರ್ಮಕ್ಕೆ ಆಳವಾದ ಪೆಟ್ಟನ್ನು ನೀಡಿದರು. ಗೋವೆಯ ಪೋರ್ಚುಗೀಸರು, ಭಟ್ಕಳದ ಮೇಲೆ ದಾಳಿ ಮಾಡಿ, ಆ

ಊರನ್ನು ಸುಟ್ಟು ಸೂರೆ ಮಾಡಿದರಲ್ಲದೇ, ಚೆನ್ನಾದೇವಿಯ(ಕ್ರಿ.ಶ.1542) ಅರಮನೆಯನ್ನೂ ಹಾಳು ಗೆಡವಿದ್ದರು. ಈ ಯುದ್ಧದಲ್ಲಿ ಹೋರಾಡಿ, ಪ್ರಾಣತೆತ್ತವರ ಕೆಲವು ವೀರಗಲ್ಲುಗಳು ಕಾಯ್ಕಿಣಿಯಲ್ಲಿವೆ.[215] ದೂರದ ಬಿಜಾಪುರದ ಆದಿಲ್ ಷಹನೂ ಕೂಡ, ಆಗಾಗ ತನ್ನ ದಂಡು ಕಳುಹಿಸಿ, ಭಟ್ಕಳ–ಹೊನ್ನಾವರ ನಗರಗಳನ್ನು ಸುಟ್ಟು ಸೂರೆಗೈದನು. ಇದಕ್ಕೆ ಬೆಂಬಲವಾಗಿ ಜೈನರ ಸಾಮೂಹಿಕ ಮತಾಂತರವೂ ನುಂಗಲಾರದ ತುತ್ತಾಯಿತು. ತುಳುನಾಡಿನ ದಕ್ಷಿಣ ಭಾಗದಲ್ಲಿ ಆಳ್ವಿಕೆ ನಡೆಸುತ್ತಿದ್ದ ಜೈನ ತುಂಡರಸರೆಲ್ಲರೂ ಸಾಕಷ್ಟು ಸಾವು ನೋವುಗಳನ್ನು ಅನುಭವಿಸಬೇಕಾಯಿತು. ಬಂಗರಾಜನು ಪೋರ್ಚುಗೀಸ್ ಮತ್ತು ಕೆಳದಿ ಅರಸರ ಒತ್ತಡಕ್ಕೆ ಕಟ್ಟುಬಿದ್ದು ತನ್ನ ಸರ್ವಸ್ವವನ್ನೂ ಕಳೆದುಕೊಳ್ಳಬೇಕಾಯಿತು.[216]

ಕೆಳದಿಯರಸರ ಜಿನಧರ್ಮದ ಕುರಿತಾದ ನೀತಿಯನ್ನು ತಿಳಿಯಲು ಕೆಳದಿಯ ಪರಿಸರವನ್ನೂ ಪರಿಶೀಲಿಸಬೇಕಾಗುತ್ತದೆ. ಕೆಳದಿಯಲ್ಲಿ ಈಗ ಒಂದು ಜೈನ ಬಸದಿಯಿದ್ದು, ಅದನ್ನು ಕೆಳದಿಯರಸರು ನಿರ್ಮಿಸಿದ್ದರು ಎಂದು ಹೇಳಲಾಗಿದೆ.[217] ಆದರೆ ಈ ಬಸದಿಗೆ ಸಂಬಂಧಿಸಿದ ಶಾಸನವೊಂದರ ಮಾಹಿತಿಯಂತೆ,[218] ಕೆಳದಿ ಜೈನ ಬಸದಿಯು ಕ್ರಿ.ಶ.1171ರಲ್ಲಿ ನಿರ್ಮಾಣವಾಯಿತು. ಅಂದರೆ ಕೆಳದಿ ಸಾಮ್ರಾಜ್ಯದ ಉಗಮಕ್ಕೆ ಮೊದಲೇ ಈ ಬಸದಿ ಅಸ್ತಿತ್ವದಲ್ಲಿತ್ತು ಎನ್ನುವ ಅಂಶ ತಿಳಿದುಬರುತ್ತದೆ. ಈ ಕುರಿತಾದ ಪೂರಕ ದಾಖಲೆಗಳನ್ನು ಪರಿಶೀಲಿಸಿದಾಗ ಕಂಡು ಬರುವ ಪ್ರಮುಖ ಅಂಶವೆಂದರೆ, ಹಿಂದೆ ಕೆಳದಿಯಲ್ಲಿ ಜೈನ ಧರ್ಮೀಯರು ಬಹುಸಂಖ್ಯೆಯಲ್ಲಿದ್ದರು ಎಂಬುದು. ಈ ಮಾತಿಗೆ ಪೂರಕವಾಗಿ ಕೆಳದಿಯ ಸುತ್ತಮುತ್ತ ಬಸ್ತಿ ಕೆರೆ, ಬಸ್ತಿ ಭಾವಿ, ಬಸ್ತಿ ಗದ್ದೆ, ಬಸ್ತಿ ಹೊಂಡ, ಬಸ್ತಿ ದಿನ್ನೆ, ಬಸ್ತಿ ಕಾನು, ಬಸ್ತಿ ನಾಗರ, ಬಸ್ತಿ ಬನ, ಬಸ್ತಿ ವಡ್ಡೆ, ಬಸ್ತಿ ಗುಡ್ಡ, ಬಸ್ತಿ ಬೈಲು, ಈ ರೀತಿಯಾಗಿ ಗುರುತಿಸಬಹುದಾದ ಅನೇಕ ಸ್ಥಳಗಳು ಕಂಡುಬರುತ್ತಿದೆ. ಹಾಗಾಗಿ ಇಷ್ಟು ಸಂಖ್ಯೆಯಲ್ಲಿ ಇದ್ದಿರಬಹುದಾದ ಜೈನರ ಬಸದಿಗಳು ಏನಾದವು ಜೈನರು ಏನಾದರು ಎನ್ನುವ ಪ್ರಶ್ನೆ ನಮ್ಮನ್ನು ಕಾಡುತ್ತದೆ. ಇಲ್ಲಿನ ಜೈನರು ರಾಜಕೀಯ ಕಾರಣದಿಂದಲೋ, ಬರಗಾಲಕ್ಕೆ ಹೆದರಿಯೋ, ರೋಗದ ಭಯದಿಂದಲೋ, ಊರು ಸುಟ್ಟದ್ದರಿಂದಲೋ ಈ ಪ್ರದೇಶವನ್ನು ಬಿಟ್ಟು ಬೇರೆ ಕಡೆಗೆ ಹೋಗಿರಬಹುದು ಎಂಬ ಅಭಿಪ್ರಾಯಗಳೂ ಇದೆ.[219] ನೂರಾರು ವೀರಶೈವ ಮಠಗಳ ನಿರ್ಮಾಣ ಮಾಡಿದ ಕೆಳದಿಯರಸರು ಕೆಳದಿಯ ಸುತ್ತ ಮುತ್ತ ಯಾವ ಬಸದಿಯನ್ನೂ ನಿರ್ಮಿಸಿದಂತೆ ತೋರುವುದಿಲ್ಲ. ಅದರ ಬದಲಿಗೆ ಅಸ್ತಿತ್ವದಲ್ಲಿದ್ದಿರಬಹುದಾದ ಬಸದಿಗಳೇ ಕಾಲಾಂತರದಲ್ಲಿ ಕಣ್ಮರೆಯಾದವು. ಅಂದರೆ ವೀರಶೈವರಾದ ಈ ಅರಸರು ಬಸದಿಗಳನ್ನು ನಾಶ ಮಾಡಿದರು ಎಂದು ಹೇಳಲಾಗದಿದ್ದರೂ, ಪರೋಕ್ಷವಾಗಿ ಜೈನ ವಿರೋಧಿ ನಿಲುವಿಗೆ ಬೆಂಬಲಿಸಿದ್ದರೇ ಎಂಬ ಸಂದೇಹಕ್ಕೆ ಅವಕಾಶವಿದೆ. ಈ ಸಂದೇಹಕ್ಕೆ ಕಾರಣ ಮಧ್ಯಕಾಲದಲ್ಲಿ ಜಿನಮತದ ಮೇಲೆ ವೀರಶೈವರು ನಡೆಸಿದ ಅವ್ಯಾಹತ ದಾಳಿ.

ಮಧ್ಯಕಾಲದ ಕರ್ನಾಟಕದಲ್ಲಿ ಜೈನಧರ್ಮದ ಪ್ರಸಾರಕ್ಕೆ ತಡೆಯಾದ ಪ್ರಬಲವಾದ ಕಾರಣಗಳಲ್ಲಿ,

ಬಸವಣ್ಣನವರ ನಾಯಕತ್ವದಲ್ಲಿ ನಡೆದ ಧಾರ್ಮಿಕ ಕ್ರಾಂತಿಯೂ ಒಂದು. ಇದರ ಫಲವಾಗಿ ಪುನರುಜ್ಜೀವನಗೊಂಡ ವೀರಶೈವ ಧರ್ಮವು ಗಳಿಸಿದ ಜನಪ್ರಿಯತೆ ಗಮನಾರ್ಹವಾದದ್ದು. ಕಲ್ಯಾಣದ ಕ್ರಾಂತಿಯಲ್ಲಿ ಶರಣರು, ಬಿಜ್ಜಳನನ್ನು ಕೊಂದ ಬಳಿಕ ಅಲ್ಲಿಯ ಬಸದಿಗಳನ್ನು ಹಾಳುಮಾಡಿದ್ದಲ್ಲದೇ, ಜೈನರನ್ನು ವೀರಶೈವರನ್ನಾಗಿ ಪರಿವರ್ತಿಸಿದರು. ಈ ಆಘಾತ ಜೈನಧರ್ಮಕ್ಕೆ ನುಂಗಲಾರದ ತುತ್ತಾಯಿತು. ಚಿದಾನಂದಮೂರ್ತಿಯವರು ಹೇಳುವಂತೆ, ಜೈನವೀರ ಬಣಜಿಗರೆಂಬ ವ್ಯಾಪಾರಿ ಸಮಾಜವನ್ನು ವೀರಶೈವರನ್ನಾಗಿ ಮಾಡಿದ್ದು, ಜೈನ ಸಮಾಜಕ್ಕೆ ತುಂಬಲಾರದ ನಷ್ಟವಾಯಿತು.[220] ಇದೇ ಕಾಲದಲ್ಲಿ ಬಸವಣ್ಣನವರ ಕ್ರಾಂತಿಯಿಂದ ಹುಟ್ಟಿಕೊಂಡ ವೀರಶೈವ ಉಗ್ರ ಭಕ್ತರು, ಜೈನ ಬಸದಿಗಳನ್ನು ಒಡೆದುಹಾಕಿ ಅದರಲ್ಲಿ ಶಿವಲಿಂಗವನ್ನು ಸ್ಥಾಪಿಸಿದ ಅನೇಕ ನಿದರ್ಶನಗಳಿವೆ. ಗೊಗ್ಗಿದೇವ, ವಿರುಪರಸ, ಆದಯ್ಯ, ಏಕಾಂತದ ರಾಮಯ್ಯರಂತಹ ಶಿವಶರಣರು, "ಜಿನನೊಡೆದು ಬಸದಿಯನಳಿದು ಜಿಸುಟು ನೆಲನಂ ಖಂಡಿಸಿ ವೀರಸೋಮನಾಥ ದೇವರಂ ಪ್ರತಿಷ್ಠೆ ಮಾಡಿದ" ಸಾಹಸಗಾಥೆಯನ್ನು ವರ್ಣಿಸುವುದನ್ನು ನೋಡಿದರೆ, ಜೈನಧರ್ಮಕ್ಕೆ ಒದಗಿದ ದುರವಸ್ಥೆಯ ಚಿತ್ರ ಕಣ್ಣಿಗೆ ಕಟ್ಟುತ್ತದೆ. ಈ ಶಾಸನಗಳು, ಗೊಗ್ಗಿದೇವನನ್ನು ಜೈನಮೃಗಬೇಂಟೆಗಾರ, ಜೈನ ಕುಠಾರನೆಂದು ವರ್ಣಿಸಿದರೆ, 'ಜಿನಸಮಯವನದಹನ ದಾವಾನಳಂ,' 'ಬಸದಿಗಳಂ ಹೊಸೆದು ಮುಕ್ಕಿ ಶಿವಲಿಂಗಂ ಕಣ್ಗೊಳಿಸಿದವ'ನೆಂದು ವಿರುಪರಸನನ್ನು ಸ್ತುತಿಸುತ್ತದೆ.[221] ಏಕಾಂತದ ರಾಮಯ್ಯನು 'ಬರಸಿಡಿಲಂತೆರಗಿ ಜಿನನ ತಲೆಯಂ ಮುರಿದಂ' ಎಂದು ಅಬ್ಬಲೂರ ಶಾಸನವು,[222] ಆತನನ್ನು ಕೊಂಡಾಡುತ್ತದೆ. ಹಾಗಾಗಿ ಮಧ್ಯಕಾಲದಲ್ಲಿ ವೀರಶೈವರ ಒಂದು ಗುಂಪು ಜಿನಧರ್ಮದ ಮೇಲೆ ಪ್ರಹಾರವೆಸಗಿದ್ದು ಸ್ಪಷ್ಟವಾಗಿದೆ. ಈ ನಿಟ್ಟಿನಲ್ಲಿ ಕರಾವಳಿಯುದ್ಧಕ್ಕೂ ಸಂಘರ್ಷದಲ್ಲಿ ತೊಡಗಿದ್ದ ವೀರಶೈವ ಮತಾವಲಂಬಿಗಳಾದ ಕೆಳದಿಯರಸರೂ ತುಳನಾಡಿನಲ್ಲಿ ಜಿನಧರ್ಮದ ಮೇಲೆ ಪ್ರಹಾರ ಮಾಡಿರಬಹುದೇ ಎಂಬ ಸಂದೇಹ ಬರುವುದು ಆಶ್ಚರ್ಯವೇನೂ ಅಲ್ಲ.

ಆದರೆ ಇದಕ್ಕೆ ವ್ಯತಿರಿಕ್ತವಾಗಿ, ಕೆಳದಿ ರಾಜ್ಯದಲ್ಲಿ ಜೈನಧರ್ಮಕ್ಕೆ ಪೋಷಣೆ ದೊರೆಯಲಿಲ್ಲ ಎನ್ನುವ ಹಾಗಿಲ್ಲ. ಜೈನ ಕೇಂದ್ರಗಳಾದ ಹುಂಚ, ಮೂಡುಬಿದಿರೆ, ಧರ್ಮಸ್ಥಳ ಮೊದಲಾದ ಧಾರ್ಮಿಕ ಕ್ಷೇತ್ರಗಳೂ ಕೆಳದಿ ರಾಜ್ಯದಲ್ಲಿದ್ದವು.[223] ಸದಾಶಿವ ನಾಯಕನ ಕಾಲದಲ್ಲಿ ಕಾಪುವಿನಲ್ಲಿ ಹದಿನೈದನೆಯ ತೀರ್ಥಂಕರನಾದ ಧರ್ಮನಾಥ ಬಸದಿಗೆ, ಜೈನಗುರುವಾದ ಮುನಿಚಂದ್ರ ದೇವರ ಆಧ್ಯಾತ್ಮಿಕ ಒಳಿತಿಗಾಗಿ ಅವರ ಶಿಷ್ಯನಾದ ದೇವಚಂದ್ರ ದೇವರಿಗೆ ದಾನ ನೀಡಲಾಗಿತ್ತು.[224] ಕೆಳದಿ ವೆಂಕಟಪ್ಪ ನಾಯಕನು ಮೂಡಬಿದ್ರಿ ತ್ರಿಭುವನತಿಲಕ ಚೂಡಾಮಣಿ ಬಸದಿಯ ಪೂಜೆ, ನಂದಾದೀಪಕ್ಕೆ ದಾನ ಧರ್ಮಗಳನ್ನು ನೀಡಿದನು. ಅಲ್ಲದೆ ಈ ಬಸದಿಯ ನವೀಕರಣಕ್ಕೆ ದಾನಧರ್ಮಗಳನ್ನು ನೀಡಿದನು.[225] ವೆಂಕಟಪ್ಪನಾಯಕನು ತನ್ನ ಆಸ್ಥಾನಕ್ಕೆ ಬಂದಿದ್ದ ಜೈನಶಾಸ್ತ್ರ ವಿಶಾರದ ಸಮಂತಭದ್ರ ದೇವನನ್ನು ಆದರದಿಂದ ಬರಮಾಡಿಕೊಂಡು ಗೌರವಿಸಿದ್ದನು.[226] ಮೂಡಬಿದಿರೆ ಸಮೀಪದ ಪುತ್ತಿಗೆಯಿಂದ ಆಳುತಿದ್ದ ಚಿಕ್ಕರಾಯ ಒಡೆಯ ಚೌಟ ಮತ್ತು ಮೂಡಬಿದಿರೆ

ಜೈನ ಮಠದ ಶ್ರೀ ಅಭಿನವ ಚಾರುಕೀರ್ತಿ ದೇವ ಮತ್ತು ನಗರದ 8 ಮಂದಿ ಸೆಟ್ಟಿಗಾರರೊಡನೆ ಕ್ರಿ.ಶ. 1640ರಲ್ಲಿ ಆದ ಒಪ್ಪಂದಕ್ಕೆ ವೀರಭದ್ರನಾಯಕನು ಸಾಕ್ಷಿಯಾಗಿದ್ದನು.[227] ಚೌಟ ರಾಜನ ಕಡೆಯವರು ಮೂಡುಬಿದಿರೆಯ ಶ್ರೀ ದಿಗಂಬರ ಜೈನ ಮಠದ ಒಕ್ಕಲಿನವರ ಮನೆಗಳನ್ನು ಲೂಟಿ ಮಾಡಿ ಮನೆಗಳಿಗೆಲ್ಲ ಬೀಗ ಹಾಕಿ ಹೋದದ್ದರಿಂದ ಬೇಸರಗೊಂಡ ಶ್ರೀ ದಿಗಂಬರ ಜೈನ ಮಠದ ಅಭಿನವ ಚಾರುಕೀರ್ತಿ ಪಂಡಿತ ದೇವರು ತಮ್ಮ ಅಧೀನಕ್ಕೆ ಬರುವ ಅಲ್ಲಿರುವ ಎಲ್ಲ ಹದಿನೆಂಟು ಬಸದಿಗಳನ್ನು ಮುಚ್ಚಿ ಆ ಊರನ್ನೇ ಬಿಟ್ಟು ಹೋದಾಗ ಕೆಳದಿಯ ವೀರಭದ್ರ ನಾಯಕನ ಮುಂದಾಳತ್ವದಲ್ಲಿ ಈ ವಿವಾದವನ್ನು ಪರಿಹರಿಸಲಾಗಿತ್ತು. ಕ್ರಿ.ಶ. 1646ರಲ್ಲಿ ಕಾರ್ಕಳದ ಬಾಹುಬಲಿಯ ಮಸ್ತಕಾಭಿಷೇಕಕ್ಕೆ ವೀರಭದ್ರ ನಾಯಕನು ಆರ್ಥಿಕ ಸಹಾಯವನ್ನು ಮಾಡಿದ್ದ.[228] ಕ್ರಿ.ಶ. 18ನೇ ಶತಮಾನದಲ್ಲಿ ನಡೆದ ವೇಣೂರಿನ ಮಸ್ತಕಾಭಿಷೇಕಕ್ಕೆ ಕೆಳದಿಯರಸ ಬಸಪ್ಪ ನಾಯಕ ಸಹಕಾರವನ್ನು ನೀಡಿದ್ದ.[229] ಈ ಎಲ್ಲ ಘಟನೆಗಳನ್ನು ಅವಲೋಕಿಸಿದಾಗ ಬಾರಕೂರಿನಲ್ಲಿ ಜೈನ ಮಂದಿರವನ್ನು ಕೆಳದಿಯರಸರ ನಿರ್ದೇಶನದ ಮೂಲಕ ನಿರ್ಮೂಲನೆ ಮಾಡಲಾಯಿತು ಎಂಬುದಾಗಿ ಕೇಳಿ ಬರುವ ಮಾತುಗಳನ್ನು ಮತ್ತೊಮ್ಮೆ ಪರಾಮರ್ಶಿಸಬೇಕಾಗುತ್ತದೆ.

ಕೆಳದಿ ನಾಯಕರು ಬೇರೆ ಬೇರೆ ಸಂದರ್ಭಗಳಲ್ಲಿ ತುಳುನಾಡಿನ ರಾಜರುಗಳೊಂದಿಗೆ ಸಂಘರ್ಷದಲ್ಲಿ ತೊಡಗಿದ್ದರು. ವೆಂಕಟಪ್ಪನಾಯಕನಂತೂ ತುಳುನಾಡಿನ ಮೇಲೆ ದಿಗ್ವಿಜಯವನ್ನೇ ಸಾಧಿಸಿದ. ಈ ಸಂದರ್ಭದಲ್ಲಿ ತುಳುನಾಡಿನಲ್ಲಿ ಆಳ್ವಿಕೆ ಮಾಡುತ್ತಿದ್ದ ರಾಜರೆಲ್ಲರೂ ಜೈನಧರ್ಮೀಯರೇ ಆಗಿದ್ದರು. ಹಾಗಾಗಿ ಕೆಳದಿಯರಸರು ರಾಜಕೀಯ ಉದ್ದೇಶಗಳಿಗೆ ಕರಾವಳಿಯ ಮೇಲೆ ದಾಳಿ ಮಾಡಿದರೂ ಅದು ಜೈನ ಧರ್ಮೀಯರ ಮೇಲಿನ ದಾಳಿಯಂತೆ ಕಂಡುಬರುತ್ತದೆ. ರಾಜಕೀಯ, ಆರ್ಥಿಕ ಅಥವಾ ಇನ್ನಾವುದೇ ಉದ್ದೇಶಗಳಿಗೆ ಈ ದಾಳಿ ನಡೆದಿದ್ದರೂ ದಾಳಿಗೊಳಗಾದ ರಾಜರೆಲ್ಲರೂ ಜೈನ ಧರ್ಮೀಯರಾಗಿದ್ದುದು ಮತ್ತು ಕಾಕತಾಳೀಯವಾಗಿ ಅದೇ ಸಂದರ್ಭದಲ್ಲಿ ಈ ಭಾಗದಲ್ಲಿ ಜೈನ ಧರ್ಮ ಕ್ಷೀಣಿಸಿದ್ದು ಕಂಡುಬರುತ್ತದೆ. ಒಂದು ಪ್ರದೇಶದ ಹತ್ತಾರು ರಾಜಮನೆತನಗಳ ಮೇಲೆ ವೀರಶೈವ ಪಂಥದ ಉನ್ನತಿಗೆ ಬದ್ಧನಾದ ರಾಜನ ದಾಳಿ ನಡೆದುದು ಖಂಡಿತವಾಗಿಯೂ ಆ ರಾಜ ವಂಶಗಳ ಮೇಲೆ ಮಾತ್ರವಲ್ಲ ಅವರು ಅನುಸರಿಸುತಿದ್ದ ಧರ್ಮಗಳ ಮೇಲೆ ಪರಿಣಾಮವನ್ನು ಬೀರಿರಲೇಬೇಕು. ಜೈನ ರಾಜರುಗಳು ಅತಂತ್ರರಾದಾಗ ಅವರ ಪ್ರಭಾವದ ಬೆಳಕಿನಲ್ಲಿದ್ದ ಜೈನ ಧರ್ಮ ರಾಜಕೀಯ ಶಕ್ತಿಯನ್ನು ಕಳೆದುಕೊಂಡು ಕ್ಷೀಣಿಸಿರುವುದು ಸಹಜವಾಗಿದೆ. ಹಾಗಾಗಿ ಈ ದೃಷ್ಟಿಯಲ್ಲಿಯೂ ಕೆಳದಿ ಅರಸರ ಕಾಲದಲ್ಲಿ ಜೈನ ಧರ್ಮದ ಪ್ರಭಾವ ಇಳಿಮುಖವಾಯಿತೆನ್ನಬಹುದು.

ಇನ್ನು ಪಿಯತ್ರೋ ಡೆಲ್ಲಾ ವಲ್ಲೆಯ ಹೇಳಿಕೆಯಂತೆ ಗೇರುಸೊಪ್ಪೆ ನಗರದ ಲೂಟಿ ಮತ್ತು ನಾಶದ ಕುರಿತಾದ ಮಾಹಿತಿಗಳೂ ಪ್ರಾಮುಖ್ಯವಾಗಿವೆ. ಗೇರುಸೊಪ್ಪೆಯ ಮೇಲೆ ವೆಂಕಟಪ್ಪನಾಯಕ ಕ್ರಿ.ಶ. 1606ರಲ್ಲಿ ದಾಳಿ ನಡೆಸಿದ್ದರೆ ಕೇವಲ ಸುಮಾರು 15 ವರ್ಷಗಳ ಅಂತರದಲ್ಲಿ ಪಿಯತ್ರೋ –ಡೆಲ್ಲಾ–ವಲ್ಲೆ ಆ

ಪ್ರದೇಶಕ್ಕೆ ಭೇಟಿ ನೀಡಿದ್ದ. ಹಾಗಾಗಿ ಅವನ ಹೇಳಿಕೆಗಳು ಸಂಪೂರ್ಣವಾಗಿ ನಿರಾಧಾರವಾಗಿರಲು ಸಾಧ್ಯವಿಲ್ಲ. ಇದು ರಾಜಕೀಯವಾಗಿ ಗೇರುಸೊಪ್ಪೆಯ ಪ್ರಭಾವವನ್ನು ಮುಗಿಸುವ ಉದ್ದೇಶವನ್ನು ಹೊಂದಿರಬಹುದು. ಗೆದ್ದಂತಹ ರಾಜರುಗಳು ಸೋತ ರಾಜರುಗಳ ರಾಜಧಾನಿಯನ್ನು ಲೂಟಿ ಮಾಡುವುದು ಹೊಸದೇನಲ್ಲ. ಆದರೆ ಗುಡಿ, ಗೋಪುರಗಳನ್ನು ನಾಶ ಮಾಡಿದರೆಂಬ ಹೇಳಿಕೆಗಳು ನಿಜವಾಗಿದ್ದಲ್ಲಿ ಅದು ಕೆಳದಿ ಅರಸನ ಧಾರ್ಮಿಕ ಸಹಿಷ್ಣುತೆಯನ್ನು ಪ್ರಶ್ನಿಸುವಂತದ್ದಾಗಿದೆ. ರಾಜಕೀಯ ಉದ್ದೇಶಗಳಿಗೆ ಮಾಡುವ ಯಾವುದೇ ಯುದ್ಧಗಳು ಯಾವುದೇ ಧರ್ಮದ ಬುನಾದಿಗೆ ಪೆಟ್ಟು ಕೊಡುವ ಪ್ರಯತ್ನಗಳನ್ನು ಮಾಡಿದ್ದರೆ ಆ ರಾಜ ಧರ್ಮಾಂಧನೆನಿಸಿಕೊಳ್ಳುತ್ತಾನೆ. ಇದಕ್ಕೆ ಪೂರಕವಾಗಿ ಬಾರ್ಕೂರಿನ ಕಥೆಗಳಲ್ಲಿ ಬರುವ ಜಿನ ಧರ್ಮದ ಮರ್ಮಾಘಾತದ ವಿಚಾರಗಳು ನಿಜವಾಗಿದ್ದಲ್ಲಿ ವೆಂಕಟಪ್ಪನಾಯಕನ ವ್ಯಕ್ತಿತ್ವ ಪ್ರಶ್ನಾರ್ಹವಾಗುತ್ತದೆ.

ಆದರೆ ಕ್ರಿ.ಶ. 1622ರ ಶಾಸನ ಮೂಡಬಿದಿರೆಯ ಸೇನಗಣದ ಸಮಂತಭದ್ರದೇವರ ಧಾರ್ಮಿಕ ಪ್ರಭಾವವನ್ನು ವಿವರಿಸುತ್ತದೆ.[230] ಜೈನ ಶಾಸ್ತ್ರಗಳಲ್ಲಿ ಪಾರಂಗತರಾಗಿದ್ದ ಸಮಂತಭದ್ರ ದೇವರು ಇಕ್ಕೇರಿಗೆ ತೆರಳಿ, ಕೆಳದಿ ವೆಂಕಟಪ್ಪನ ಆಸ್ಥಾನಕ್ಕೆ ಭೇಟಿ ನೀಡಿ, ಅಲ್ಲಿದ್ದ ವಿದ್ವಾಂಸರನ್ನು ಚರ್ಚೆಯಲ್ಲಿ ಸೋಲಿಸಿ ನಾಯಕನಿಂದ ಗೌರವವನ್ನು ಸ್ವೀಕರಿಸಿದ್ದರು. ಅಲ್ಲದೆ ತ್ರಿಭುವನತಿಲಕ ಚೂಡಾಮಣಿ ಬಸದಿಯ ಜೀರ್ಣೋದ್ಧಾರಕ್ಕೆ ಹಣಕಾಸಿನ ನೆರವನ್ನೂ ಪಡೆದರು. ಈ ಶಾಸನ ತುಳು ಸಮಂತಭದ್ರ ದೇವರು ಆ ಬಸದಿಯ ಜೀರ್ಣೋದ್ಧಾರ ಮಾಡಿದ್ದಾಗಿ ಹೇಳುತ್ತದೆ. ಕೆಳದಿಯರಸರ ಕುರಿತಾಗಿರುವ ಒಂದು ಮುಖ್ಯ ಸಂದೇಹವನ್ನು ಪರಿಹರಿಸುವಲ್ಲಿ ಈ ಶಾಸನ ಅತ್ಯಂತ ಪ್ರಮುಖ ದಾಖಲೆಯಾಗಿದೆ. ಕ್ರಿ.ಶ.17ನೇ ಶತಮಾನದ ಮೊದಲ ದಶಕದಲ್ಲಿ ಗೇರುಸೊಪ್ಪೆ ಬಾರ್ಕೂರು ಮೊದಲಾದ ಕಡೆ ಜೈನ ಶ್ರದ್ಧಾ ಕೇಂದ್ರಗಳ ಮೇಲೆ ದೌರ್ಜನ್ಯ ನಡೆಸಿದ್ದ ಎನ್ನಲಾದ ವೆಂಕಟಪ್ಪ ನಾಯಕ, ಕ್ರಿ.ಶ.1622ರಲ್ಲಿ ತಾನು ನಾಶ ಮಾಡಲು ಯತ್ನಿಸಿದ್ದ ಜಿನಧರ್ಮಕ್ಕೆ ಮತ್ತೆ ಪ್ರೋತ್ಸಾಹ ನೀಡಿದ ಎಂದರೆ ನಂಬಲು ಸಾಧ್ಯವಾಗದು. ಹಾಗಾಗಿ ಗೇರುಸೊಪ್ಪೆ ಮತ್ತು ಬಾರ್ಕೂರಿನಲ್ಲಿ ರಾಜಕೀಯ ನೆಲೆಯಲ್ಲಿ ಅಲ್ಲಿಯ ಅಧಿಕಾರವನ್ನು ಶಾಶ್ವತವಾಗಿ ತನ್ನದಾಗಿಸಿಕೊಳ್ಳಲು ನಗರ ನಾಶದಂತಹ ಕೆಲಸಕ್ಕೆ ಅನುಮೋದನೆ ನೀಡಿರಬೇಕೇ ಹೊರತು ಧರ್ಮಾಂಧನಾಗಿ ಬಸದಿಗಳ ನಾಶ ಮಾಡಿದ್ದ ಎನ್ನುವುದನ್ನು ಒಪ್ಪಿಕೊಳ್ಳಲು ಯಾವುದೇ ಸಕಾರಣಗಳಿಲ್ಲ. ಕೆಳದಿ ವೀರಭದ್ರನ ಆಳ್ವಿಕೆಯ ಕಾಲದಲ್ಲಿ ನಡೆದ ಇನ್ನೊಂದು ಘಟನೆ ಇಲ್ಲಿಯ ಧಾರ್ಮಿಕ ಇತಿಹಾಸದಲ್ಲಿ ಮುಖ್ಯವಾದುದಾಗಿದೆ. "ಬಸ್ರೂರಿನ ಜೈನ ವರ್ತಕರು ಕಪ್ಪೆಯ ಬಸವಣ್ಣನಿಗೆ ಮಠಕಟ್ಟಲು ಸಹಾಯ ಮಾಡಿ ಇಲ್ಲಿ ಲಿಂಗಾಯತ ಧಾರ್ಮಿಕ ಕಟ್ಟಳೆಗಳು ಸಾಂಗವಾಗಿ ಮುಂದುವರಿದುಕೊಂಡು ಬರಲು ತಮ್ಮ ಭೂಮಿಯ ಕೆಲವು ಉತ್ಪತ್ತಿಗಳನ್ನು ಮೂಲಸಾಧನ ಪಟ್ಟಿಯಾಗಿ ಬಿಟ್ಟುಕೊಟ್ಟರು.[231] ಈ ಘಟನೆಯೂ ಸಾಮರಸ್ಯಕ್ಕೆ ಪೂರಕವಾಗಿದೆ. ಅಲ್ಲದೆ ತುಳುನಾಡಿನಲ್ಲಿ ಜೈನ ವೀರಶೈವ ಸಂಘರ್ಷದ ವಿಚಾರಗಳನ್ನು ಅಲ್ಲಗಳೆಯಲು ಇದು ಸಹಕಾರಿಯಾಗಿದೆ. ಹಾಗಾಗಿ ಪ್ರತ್ಯಕ್ಷವಾಗಿ ತುಳುನಾಡಿನಲ್ಲಿ ಜೈನಧರ್ಮ ಇಳಿಮುಖವಾಗಲು ಕೆಳದಿಯ ಆಳ್ವಿಕೆ ಕಾರಣವಾಗಿತ್ತು

ಎಂದು ಹೇಳಲು ಸಾಧ್ಯವಿಲ್ಲ.

ಬಾರ್ಕೂರಿನ ಕಥೆಗಳಲ್ಲಿ ಬರುವ ಜಿನಧರ್ಮದ ಮೇಲಿನ ಆಕ್ರಮಣದ ಕಥೆಗಳು ಜನಜನಿತವಾಗಿವೆಯಾದರೂ ಅವುಗಳ ಮೂಲ ಯಾವುದು ತಿಳಿದಿಲ್ಲ. ಹಲವು ಬಾರಿ ಐತಿಹ್ಯಗಳನ್ನು ನಂಬಬಹುದಾದರೂ ಅ ಕಥೆಗಳಿಗೆ ಏನಾದರೂ ಪೂರಕ ದಾಖಲೆಗಳು ಲಭ್ಯವಿರಬೇಕು. ತುಳುನಾಡಿನ ಈ ಭಾಗದಲ್ಲಿ ಹತ್ತಾರು ಜಿನಬಸದಿಗಳು ನೆಲಸಮವಾಗಿವೆ. ಆದರೆ ಎಲ್ಲ ಬಸದಿಯ ಅವನತಿಗೆ ಸಂಘರ್ಷವೇ ಕಾರಣ ಎಂದು ನಿರ್ಣಯಿಸಲು ಸಾಧ್ಯವಿಲ್ಲ. ನಿಸ್ಸಂತತಿ, ರಾಜಾಶ್ರಯದ ಕೊರತೆ ಮೊದಲಾದ ಕಾರಣಗಳಿಂದ ಅವು ಅವನತಿಯಾಗಿರಬಹುದು. ಅಂತಹುದೇ ಒಂದೆರಡು ಕಾರಣಗಳು ಬಾರ್ಕೂರಿನ ಜಿನಬಸದಿಗಳ ಅಂತ್ಯಕ್ಕೆ ಕಾರಣವಾಗಿರಬಹುದು. ಇನ್ನು ಜನಜನಿತವಾದ ಕಥೆಗಳಿಗೆ ವೆಂಕಟಪ್ಪ ನಾಯಕನ ಯುದ್ಧಗಳು ಮತ್ತು ಅವನ ಕುರಿತಾದ ಭೀತಿ ಕಾರಣವಾಗಿರಬೇಕು. ಕೆಳದಿಯ ಬಗ್ಗೆ ಬಾರ್ಕೂರಿನಲ್ಲಿ ಅಥವಾ ಘಟ್ಟದ ಕೆಳಗೆ ಭೀತಿಯಿತ್ತು ಎನ್ನುವುದಕ್ಕೆ ಮಕ್ಕಳು ಆಟವಾಡುವಾಗ ಹೇಳುತಿದ್ದರು ಎನ್ನಲಾದ ಪದಗಟ್ಟವೇ ಸಾಕ್ಷಿ. ಇಬ್ಬರು ಮಕ್ಕಳು ಕಾಲಿಗೆ ಕಾಲು ತಾಗಿಸಿ ಬಿಮ್ಮನೆ ನಿಂತುಕೊಂಡು ತೋಳುಗಳನ್ನು ನೀಡಿ ಕೈಕೈ ಹಿಡಿದು ದೇಹವನ್ನು ಮಾಲಿಸಿ ಗರ್‍ರನೆ ತಿರುಗುತ್ತಾ,

**ಬಟ್ಟಂ ಗೋಣಿ– ಬಡಬಡ ಗೋಣಿ**

**ಹೆಡಗೇ ತಾರೋ– ಇಕ್ಕೇರಿ ಮಕ್ಕಳ– ಹಿಡ್ಕೊಂಡು ಹೋಗೋ**

ಎಂದು ಹೇಳುತ್ತಾ ಕೈಬಿಟ್ಟು ಬಿದ್ದು ಬಿಡುವರು.[232] ಮಕ್ಕಳಾಟವಾದರೂ ಈ ಪದಗಟ್ಟಿನಲ್ಲಿ ಅರ್ಥವಿಲ್ಲದಿರದು. ಇಕ್ಕೇರಿ ಮಕ್ಕಳೆಂದರೆ ಇಲ್ಲಿ ಕೆಲವರಿಗಾದರೂ ಒಂದು ಬಗೆಯ ತಿರಸ್ಕಾರವಿದ್ದಿರಬೇಕು. ಹಾಗಾಗಿ ಈ ಭೀತಿಯ ಹಿನ್ನೆಲೆಯಲ್ಲಿ ಕೆಲವು ಜನಜನಿತವಾದ ಕಥೆಗಳು ಹುಟ್ಟಿರಬಹುದು.

ತುಳುನಾಡಿನಲ್ಲಿ ವಿಜಯನಗರ ಕಾಲದವರೆಗೆ ಗಮನಾರ್ಹವಾಗಿ ಅಸ್ತಿತ್ವವಿಲ್ಲದಿದ್ದ ವೀರಶೈವ ಪಂಥ ಕೆಳದಿ ಅರಸರ ಕಾಲದಲ್ಲಿ ವ್ಯಾಪಕವಾಗಿ ಹರಡಿದ ವೇಗವನ್ನು ಗಮನಿಸಿದರೆ ಕೆಳದಿ ಅರಸರ ಕಾಲದಲ್ಲಿ ಜೈನಧರ್ಮಕ್ಕೆ ಸ್ವಲ್ಪ ಮಟ್ಟಿನ ಹಿನ್ನಡೆಯಾಗಿದೆ ಎಂದು ಗುರುತಿಸಬಹುದು. ಈ ಕಾಲದಲ್ಲಿ ಸುಮಾರು 64 ಕ್ಕಿಂತಲೂ ಹೆಚ್ಚು ಸ್ಥಳಗಳಲ್ಲಿ ಜಂಗಮ ಮಠದ ಸ್ಥಾಪನೆಯಾಯಿತು. ಆದರೆ ಎಲ್ಲಿಯೂ ಕೂಡ ಜೈನ ಬಸದಿಗಳನ್ನು ಜಂಗಮ ಮಠಗಳಾಗಿ ಪರಿವರ್ತಿಸಿದ ಕುರುಹುಗಳು ತುಳುನಾಡಿನಲ್ಲಿ ಲಭ್ಯವಿಲ್ಲ. ಉಡುಪಿಯ ಸಮೀಪದ ಕೊಂಡಾಡಿ ಜಂಗಮ ಮಠದ ಸಮೀಪ ಪಾಳುಬಿದ್ದ ಬಸದಿಯಿದ್ದು ಸ್ಥಳೀಯ ಜನರು ಇದನ್ನು ಜೈನ ವೀರಶೈವ ಸಂಘರ್ಷದ ಹಿನ್ನೆಲೆಯಲ್ಲಿ ಮತ್ತು ಟಿಪ್ಪುವಿನ ದಾಳಿಯ ಹಿನ್ನೆಲೆಯಲ್ಲಿಯೂ ಗುರುತಿಸುತ್ತಾರೆ. ಆದರೆ ಇದಕ್ಕೆ ಯಾವುದೇ ಆಧಾರಗಳಿಲ್ಲ. ಬಸದಿ ಎಂದು ಕರೆಯಲ್ಪಡುವ ಈ ಪ್ರದೇಶದಲ್ಲಿ ಇಂದು ಎಲ್ಲಿಯೂ ಜೈನರ ಮನೆಗಳಿಲ್ಲ. ಈ ಜೈನರು ಏನಾದರು ಎಂದು ತಿಳಿಯಲು ನಮಗೆ ಯಾವುದೇ ಸ್ಪಷ್ಟ ದಾಖಲೆಗಳಿಲ್ಲ.

ಈ ಕುರಿತಾಗಿ ಸ್ಪಷ್ಟ ನಿರ್ಧಾರ ಮಾಡುವ ಮೊದಲು ಹದಿನಾರನೇ ಶತಮಾನದಿಂದ ಹದಿನೆಂಟನೇ ಶತಮಾನದವರೆಗಿನ ತುಳುನಾಡಿನ ಜೈನ ಧರ್ಮದ ಸ್ಥಿತಿಗತಿಗಳನ್ನು ಅವಲೋಕಿಸಬೇಕು. ಕ್ರಿ.ಶ.17ನೇ ಶತಮಾನದ ಉದ್ದಕ್ಕೂ ಉತ್ತರ ಕನ್ನಡ ಜಿಲ್ಲೆಯ ಗೇರುಸೊಪ್ಪ, ಭಟ್ಕಳ ಮುಂತಾದ ಸ್ಥಳಗಳಲ್ಲಿ ಜೈನ ಧರ್ಮದ ಪ್ರಭಾವ ಇಳಿಮುಖವಾಯಿತು ಮಾತ್ರವಲ್ಲದೆ ವಿದೇಶಿಯಾತ್ರಿಕರಾದ ಪಿಯತ್ರೋ ಡೆಲ್ಲಾ ವಲ್ಲೆ,[233] ಮತ್ತು ಪೀಟರ್ ಮಂಡಿ,[234] ಗೇರುಸೊಪ್ಪೆ ಮತ್ತು ಭಟ್ಕಳಗಳಲ್ಲಿ ಭಗ್ನವಾದ ಬಸದಿಗಳನ್ನು ನೋಡಿದ್ದಾಗಿ ವಿವರಿಸಿರುವುದೂ ಈ ಭಾಗದಲ್ಲಿ ಜೈನ ಧರ್ಮ ಅವನತಿಯಾದುದರ ಸಾಕ್ಷಿಯಾಗಿದೆ. ಸ್ಥಳೀಯ ನಂಬಿಕೆಗಳ ಪ್ರಕಾರ ವೀರಶೈವ ಧರ್ಮದ ಚಟುವಟಿಕೆಗಳು, ಮತ್ತು ಮುಸಲ್ಮಾನರು, ಈ ಭಾಗದಲ್ಲಿ ಜೈನ ಧರ್ಮದ ಅವನತಿಗೆ ಕಾರಣವಾದರು ಎಂಬ ಅಭಿಪ್ರಾಯವಿದೆ.[235] ಆದರೆ ಈ ಅವನತಿಗೆ ಕೆಳದಿಯರಸರ, ಆದಿಲ್ ಷಾಹಿಗಳ, ಪೋರ್ಚುಗೀಸರ ರಾಜಕೀಯ ಆರ್ಥಿಕ ಮಹತ್ವಾಕಾಂಕ್ಷೆಗಳು ಕಾರಣವಾಗಿರಬೇಕು.

ಉತ್ತರ ಕನ್ನಡ ಜಿಲ್ಲೆಯ ಸ್ಥಳಗಳಲ್ಲಿ ಜೈನಧರ್ಮ ಜನಪ್ರಿಯತೆಯನ್ನು ಕಳೆದುಕೊಂಡರೂ ದಕ್ಷಿಣ ಕನ್ನಡದ ಮೂಡುಬಿದಿರೆ, ವೇಣೂರು, ಮೂಲ್ಕಿ ಮತ್ತು ಕಾರ್ಕಳಗಳು ಕ್ರಿ.ಶ.17ನೇ ಶತಮಾನದಲ್ಲೂ ಪ್ರಮುಖ ಜೈನ ಕೇಂದ್ರಗಳಾಗಿ ಪ್ರಸಿದ್ಧಿ ಪಡೆದವು. ಜೈನಧರ್ಮ ಬಂಗ ಹಾಗೂ ಸಾವಂತರ ಆಳ್ವಿಕೆಯಲ್ಲಿಯೂ ಪ್ರಗತಿಯನ್ನು ಕಂಡಿತು. ರಾಮಚಂದ್ರ ಚರಿತೆ ಮತ್ತು ಜಿನದತ್ತರಾಯ ಚರಿತ್ರೆಗಳು ಕ್ರಮವಾಗಿ ಶಾಂತೇಶ್ವರ ಮತ್ತು ರತ್ನತ್ರಯ ಬಸದಿಗಳು ಆಚರಿಸುತ್ತಿದ್ದ. ವಿಧಿ ವಿಧಾನಗಳನ್ನು ವಿವರಿಸುತ್ತದೆ.[236] ಹಾಗೆಯೇ ಮೂಲ್ಕಿ ಪರಿಸರದ ಅರ, ಅನಂತನಾಥ ಮತ್ತು ಚಂದ್ರನಾಥ ಬಸದಿಗಳ ಕುರಿತು ಪದ್ಮನಾಭ ಕವಿಯ ಜಿನದತ್ತರಾಯ ಚರಿತೆಯಲ್ಲಿ ವಿವರಿಸಲಾಗಿದೆ.[237] ಮೂಡಬಿದಿರೆಯ ಬಸದಿಗೆ ಪುತ್ತಿಗೆಯ ಚೌಟರಾಣಿ 3ನೇ ಅಬ್ಬಕ್ಕ ದಾನ ನೀಡಿದ್ದಳು.[238] ಕ್ರಿ.ಶ. 1611ರಲ್ಲಿ ಬಂಗರಾಜ ತನ್ನ ರಾಣಿ ಶಂಕರದೇವಿಯೊಂದಿಗೆ ಸೇರಿ ಬೆಳ್ತಂಗಡಿಯ ಶಾಂತೀಶ್ವರ ಬಸದಿಗೆ ನೀಡಿದ್ದ ದಾನವನ್ನು ನವೀಕರಿಸಿದ.[239]

ಕ್ರಿ.ಶ. 17ನೇ ಶತಮಾನದಲ್ಲಿ ಕಾರ್ಕಳವೂ ಜೈನ ಕೇಂದ್ರವಾಗಿ ಮುಂದುವರಿಯಿತ್ತಾದರೂ ಚಂದ್ರಮನ ಮಾಹಿತಿಯಂತೆ ಈ ಶತಮಾನದ ಮೊದಲ ದಶಕದಲ್ಲಿ ಜೈನಧರ್ಮಕ್ಕೆ ಸ್ವಲ್ಪ ಮಟ್ಟಿನ ಹಿನ್ನಡೆಯಾಗಿತ್ತು. ಕೆಲವು ವರ್ಷಗಳಿಂದ ಗೊಮ್ಮಟನ ಪೂಜೆ ನಿಂತು ಹೋಗಿತ್ತು.[240] ಅದಕ್ಕೆ ಯಾವಕಾರಣ ಎಂದು ಅವನು ತಿಳಿಸಿಲ್ಲ. ಇದು ಕಾರ್ಕಳದ ರಾಜಕೀಯ ಪರಿಸ್ಥಿತಿಯ ಕಾರಣದಿಂದ ಇರಬೇಕು. ಕಾರ್ಕಳದ ಭೈರರಸರು ಈ ಕಾಲದಲ್ಲಿ ಕೆಳದಿಯರಸರೊಂದಿಗೆ ನಿರಂತರ ಸಂಘರ್ಷದಲ್ಲಿ ತೊಡಗಿದ್ದರು ಎಂಬುದಾಗಿ ಕೆಳದಿ ನೃಪವಿಜಯ ತಿಳಿಸುತ್ತದೆ.[241] ಆದರೆ ಜೈನಧರ್ಮ ಇಮ್ಮಡಿ ಭೈರರಸನ ಕಾಲದಲ್ಲಿ ಪ್ರಗತಿಯನ್ನು ಕಂಡಿತು. ಕ್ರಿ.ಶ.1646ರಲ್ಲಿ ಇವನು ಕಾರ್ಕಳದಲ್ಲಿ ಗೊಮ್ಮಟನ ಮಸ್ತಕಾಭಿಷೇಕ ಮಾಡಿಸಿದ.[242] ಈ ಸಂದರ್ಭದಲ್ಲಿ ಬಂಗ, ಅಜಿಲ ಮತ್ತು ಚೌಟರಸರು ಭೂಕಂದಾಯವನ್ನು ಒದಗಿಸಿ ಮಸ್ತಕಾಭಿಷೇಕದ ಯಶಸ್ಸಿಗೆ ಸಹಕರಿಸಿದ್ದರು. ಅದೇ ಸಂದರ್ಭದಲ್ಲಿ ಕೆಳದಿ ವೀರಭದ್ರ ನಾಯಕನೂ ಮಸ್ತಕಾಭಿಷೇಕಕ್ಕೆ ಆರ್ಥಿಕ ಸಹಾಯವನ್ನು ಮಾಡಿದ್ದ.[243]

ಹಾಗಾಗಿ ಚಂದ್ರಮ ಹೇಳಿದಂತೆ ಈ ಕಾಲದಲ್ಲಿ ಜೈನಧರ್ಮಕ್ಕೆ ಆದ ಹಿನ್ನಡೆ ತಾತ್ಕಾಲಿಕವಾಗಿದ್ದು ಇದಕ್ಕೆ ಕೆಳದಿ ನಾಯಕರು ಕಾರಣವೆನ್ನಲು ಸಾಧ್ಯವಿಲ್ಲ.

ಅದೇ ರೀತಿ ಮೂಲ್ಕಿಯ ಸಾಮಂತರಸರು ಈ ಕಾಲದಲ್ಲಿ ಮೂಲ್ಕಿಯಲ್ಲಿ ಜೈನಧರ್ಮದ ಪ್ರೋತ್ಸಾಹವನ್ನು ಮುಂದುವರೆಸಿದರು. ಹದಿನೇಳನೇ ಶತಮಾನದಲ್ಲಿ ವೇಣೂರಿನ ಅಜಿಲರೂ ಜಿನಧರ್ಮದ ಪ್ರಧಾನ ಪೋಷಕರಾಗಿದ್ದರು. ಕ್ರಿ.ಶ. 1604ರಲ್ಲಿ ತಿಮ್ಮಣ್ಣ ಅಜಿಲ ವೇಣೂರಿನಲ್ಲಿ ಗೊಮ್ಮಟನ ಮೂರ್ತಿಯನ್ನು ಪ್ರತಿಷ್ಠಾಪಿಸಿದ.[244] ಕ್ರಿ.ಶ. 1604ರಲ್ಲಿ ತಿಮ್ಮಣ್ಣಾಜಿಲನ ಪತ್ನಿಯರಾದ ಮಲ್ಲಿದೇವಿ ಮತ್ತು ಬಿನ್ನಾಣಿಯರು ಕ್ರಮವಾಗಿ ಅಕ್ಕಂಗಳ ಮತ್ತು ಬಿನ್ನಾಣಿ ಬಸದಿಗಳನ್ನು ಕಟ್ಟಿಸಿದರು.[245] ಹಾಗೆಯೇ ರಾಜರುಗಳಲ್ಲದೇ ಇತರರೂ ಜಿನಧರ್ಮದ ಪೋಷಕರಾಗಿದ್ದರು.[246] ಜೈನ ಶಾಸ್ತ್ರಗಳಲ್ಲಿ ವಿದ್ವಾಂಸರಾದ ಮತ್ತು ಗುರುಗಳಾಗಿದ್ದ ಪ್ರಭಾಚಂದ್ರ ದೇವರು ಮೂಲ್ಕಿ ಪರಿಸರದ ಜೈನರಿಗೆ ಸ್ಫೂರ್ತಿಯಾಗಿದ್ದರು. ಅನಂತನಾಥ, ಚಂದ್ರನಾಥ, ಮಹಾವೀರ, ಪಾರ್ಶ್ವನಾಥ ಮತ್ತು ಇತರ ದೇವರನ್ನು ಮೂಲ್ಕಿಯ ವಿವಿಧ ಬಸದಿಗಳಲ್ಲಿ ಪೂಜಿಸಲಾಗುತ್ತಿತ್ತು. ಮೂಲ್ಕಿಯ ರಾಜ ಚೆನ್ನರಾಯ ಸಾಮಂತ (1730–1751) ತನ್ನ ಅರಮನೆಯಲ್ಲಿ ಚಂದ್ರನಾಥ ಬಸದಿಯ ನಿರ್ಮಾಣ ಮಾಡುವುದರ ಮೂಲಕ ಮತ್ತು ಪರಿಸರದ ಬಸದಿಗಳ ಜೀರ್ಣೋದ್ಧಾರ ಮಾಡುವ ಮೂಲಕ ಜೈನ ಧರ್ಮದ ರಕ್ಷಣೆಗೆ ಕಟಿಬದ್ಧನಾಗಿದ್ದ.[247]

ಕ್ರಿ.ಶ.18ನೇ ಶತಮಾನದಲ್ಲಿ ಜೈನಧರ್ಮ, ಅದರ ಪ್ರಮುಖ ಕೇಂದ್ರಗಳಾದ ಕಾರ್ಕಳ, ಮೂಡಬಿದಿರೆ, ವೇಣೂರು ಮತ್ತು ಬಂಗಾಡಿಗಳಲ್ಲಿಯೂ ಇಳಿಮುಖವಾದಂತೆ ತೋರುತ್ತದೆ. ಕ್ರಿ.ಶ.1748ರ ಶಾಸನ ಹೇಳುವಂತೆ ಚಂದ್ರನಾಥ ಬಸದಿಯ ಪೂಜೆ ನಿಂತು ಹೋಗಿತ್ತು.[248] ಕ್ರಿ.ಶ. 1746ರಲ್ಲಿ ರಚನೆಯಾದ ತ್ರಿಭುವನತಿಲಕ ಚೂಡಾಮಣಿ ಬಸದಿಯ ಜೀರ್ಣೋದ್ಧಾರ ಚರಿತೆ ವಿವರಿಸುವಂತೆ ಮೂಡಬಿದಿರೆಯ ಮತ್ತು ಕಾರ್ಕಳದ ಜೈನ ಸ್ಮಾರಕಗಳು ಬರಿದಾಗಿದ್ದವು.[249] ಆದರೂ ಪ್ರಾದೇಶಿಕ ಮುಖ್ಯಸ್ಥರು ಮತ್ತು ಗಣ್ಯರು ಜೈನ ಧರ್ಮದ ಪುನರುತ್ಥಾನಕ್ಕೆ ಗಂಭೀರ ಪ್ರಯತ್ನಗಳನ್ನು ಮಾಡಿದರು. ದಾನಗಳನ್ನು ನವೀಕರಣಗೊಳಿಸುವ ಮೂಲಕ ಬಸದಿಗಳನ್ನು ಜೀರ್ಣೋದ್ಧಾರ ಮಾಡುವ ಮೂಲಕ ಮತ್ತು ಜೈನ ಸಾಹಿತಿಗಳಿಗೆ ಸಾಹಿತ್ಯ ರಚನೆಗೆ ಪ್ರೋತ್ಸಾಹ ಕೊಡುವುದರ ಮೂಲಕ ಈ ಪ್ರಯತ್ನಗಳು ಸಾಗಿತ್ತು. ಕ್ರಿ.ಶ 1739ರಲ್ಲಿ ಹಾಸನದ ಪುಟ್ಟಣ್ಣ ಶೆಟ್ಟಿ ಎಂಬವನು ತನ್ನ ಸ್ವಂತ ಖರ್ಚಿನಿಂದ ಕಾರ್ಕಳದ ಗೊಮ್ಮಟನಿಗೆ ಮಹಾ ಮಸ್ತಕಾಭಿಷೇಕ ಮಾಡಿಸಿದ.[250] ಅದೇ ರೀತಿ ಚಾರುಕೀರ್ತಿ ಪಂಡಿತ ದೇವರ ಹಾಗು ಹಲರ ಸಹಕಾರದಿಂದ ಮೂಡಬಿದಿರೆಯ ತ್ರಿಭುವನ ತಿಲಕ ಚೂಡಾಮಣಿ ಬಸದಿಯ ಜೀರ್ಣೋದ್ಧಾರವನ್ನು ಮಾಡಿಸಿ ಪಂಚಕಲ್ಯಾಣ ಮಹೋತ್ಸವವನ್ನು ನೆರವೇರಿಸಿದ.[251] ಚೌಟ ರಾಣಿ 3 ನೆಯ ಅಬ್ಬಕ ದೇವಿ, ಚಂದ್ರಶೇಖರ ಚಿಕ್ಕರಾಜ ಕ್ರಮವಾಗಿ ಜೈನ ಕವಿಗಳಾದ ಪಟ್ಟಾಭಿರಾಮ (ರತ್ನಶೇಖರ) ಮತ್ತು ಸುರಾಲ (ಪದ್ಮಾವತಿ ಚರಿತ್ರೆ)ರಿಗೆ ಆಶ್ರಯ ನೀಡಿದ್ದರು.[252]

ಈ ಎಲ್ಲಾ ಅಂಶಗಳನ್ನು ಗಮನಿಸುವಾಗ ಜೈನಧರ್ಮಕ್ಕೆ ಕೆಳದಿಯರಸರ ಕಾಲದಲ್ಲಿ ಬಹಳಷ್ಟು

ಹಿನ್ನಡೆಯಾಯಿತೆಂದು ಹೇಳಲು ಸಾಧ್ಯವಾಗುವುದಿಲ್ಲ. ಒಂದೆರಡು ಸಂದರ್ಭಗಳಲ್ಲಿ ಹಿನ್ನಡೆ ಕಂಡು ಬಂದರೂ ಅದು ತಾತ್ಕಾಲಿಕ ಹಿನ್ನಡೆಯಾಗಿತ್ತು ಅಥವಾ ವಿಜಯನಗರದರಸರ ಕಾಲದ ರೀತಿಯ ಉನ್ನತ ಬೆಳವಣಿಗೆ ಈ ಕಾಲದಲ್ಲಿ ಸಾಧ್ಯವಾಗಲಿಲ್ಲ ಎಂಬುದಕ್ಕೆ ರಾಜಕೀಯ ಕಾರಣಗಳೇ ಮುಖ್ಯವಾಗಿದ್ದವಲ್ಲದೆ, ಧಾರ್ಮಿಕ ಸಂಘರ್ಷಗಳನ್ನು ಈ ಹಿನ್ನೆಲೆಯಲ್ಲಿ ಗುರುತಿಸಲು ಸಾಧ್ಯವಿಲ್ಲ. ಅದರಲ್ಲಿಯೂ ಕೆಳದಿಯ ರಾಜರು ನೇರವಾಗಿ ಈ ಹಿನ್ನಡೆಗೆ ಕಾರಣವೆನ್ನಲು ಈ ಮೇಲಿನ ಮಾಹಿತಿಗಳನ್ನು ನೀಡಿದ ಯಾವ ದಾಖಲೆಗಳೂ ಕೆಳದಿಯರಸರನ್ನು ದೂಷಿಸುವುದಿಲ್ಲ.

**ಜೈನಧರ್ಮದ ಇಳಿಮುಖಕ್ಕೆ ಇತರ ಕಾರಣಗಳು:** ಕರ್ನಾಟಕದಲ್ಲಿ ಜೈನಧರ್ಮದ ಒಟ್ಟು ಚಿತ್ರಣವನ್ನು ಗಮನಿಸಿದಾಗ ಕ್ರಿ.ಶ.12ನೇ ಶತಮಾನದಿಂದ ಈಚೆಗೆ ಅದರ ಇಳಿಮುಖಕ್ಕೆ ಸಂಘರ್ಷವಲ್ಲದ ಇತರ ಕಾರಣಗಳನ್ನೂ ಗಮನಿಸಬೇಕಾಗುತ್ತದೆ. ಚಿದಾನಂದಮೂರ್ತಿಯವರು ಹೇಳುವಂತೆ,[253] ಜೈನಧರ್ಮ ಮತ್ತು ವೀರಶೈವಧರ್ಮಕ್ಕೆ ನಡೆದ ಘರ್ಷಣೆಯು ವಿದ್ವತ್ತಿನ ಮಟ್ಟ ಮತ್ತು ಜನಸಾಮಾನ್ಯರ ಮಟ್ಟ ಹೀಗೆ ಎರಡು ಬಗೆಯಾಗಿತ್ತು. ವಿದ್ವತ್‌ಮಟ್ಟದಲ್ಲಿ ಜೈನಧರ್ಮ ಗೆದ್ದಿತ್ತಾದರೂ, ಜನಸಾಮಾನ್ಯರ ಮಟ್ಟದಲ್ಲಿ ಅದು ಸೋಲನ್ನು ಒಪ್ಪಿಕೊಂಡಿತು. ಏಕೆಂದರೆ, ಅಹಿಂಸಾ ಪ್ರಧಾನವಾದ ಜೈನಧರ್ಮವು ಹಿಂಸೆ ರಕ್ತಪಾತಕ್ಕೆ ಯಾವಾಗಲೂ ಹಿಂಜರಿಯುತ್ತದೆ. ಪರಿಸ್ಥಿತಿಯ ಒತ್ತಡದಿಂದ ಅಂತಹ ಪ್ರಸಂಗ ಒದಗಿ ಬಂದಾಗಲೂ ಅದು ಎದುರಾಳಿಯೊಡನೆ ಹೋರಾಟಕ್ಕೆ ಇಳಿಯುವುದಿಲ್ಲ. ಶರಣಾಗತಿಯನ್ನೇ ಬಯಸುತ್ತದೆ. ಕರ್ನಾಟಕದ ಚರಿತ್ರೆಯನ್ನು ಕಣ್ಣಿಟ್ಟು ನೋಡಿದರೆ, ಜೈನಧರ್ಮದ ಇಳಿಮುಖಕ್ಕೆ ಅದರ ಈ ನಿಲುವು, ಬಹುಮಟ್ಟಿಗೆ ಕಾರಣವಾಯಿತೆನ್ನಬಹುದು.

ತಾತ್ವಿಕ ನೆಲೆಯಲ್ಲೂ ಜೈನಧರ್ಮವು ಸಾಕಷ್ಟು ಸಮಸ್ಯೆಯನ್ನು ಎದುರಿಸಬೇಕಾಗಿ ಬಂತು. ಜನಸಾಮಾನ್ಯರ ಮನಸ್ಸನ್ನು ಅಹಿಂಸಾತ್ಮಕ ನೆಲೆಯಲ್ಲಿ ಹಿಡಿದಿಟ್ಟುಕೊಳ್ಳುವುದು ಸುಲಭದ ಕೆಲಸವಾಗಿರಲಿಲ್ಲ. ಅಪರಿಗ್ರಹ, ದೇಹದಂಡನೆಯಂತಹ ಕಠೋರ ತತ್ವಗಳನ್ನು ಪಾಲಿಸುವುದು, ಜನಸಾಮಾನ್ಯರಿಂದ ಸಾಧ್ಯವಿರಲಿಲ್ಲ. ಮೋಕ್ಷವನ್ನು ಪಡೆಯಲು ಜೈನಧರ್ಮ ಹಾಕಿಕೊಟ್ಟ ಮಾರ್ಗಗಳು ಅನುಕರಣೆಗೆ ಸುಲಭವಾಗಿರಲಿಲ್ಲ. ಕಠೋರ ತಪಶ್ಚರ್ಯವನ್ನು ಕೈಗೊಂಡು, ದೇಹವನ್ನು ದಂಡಿಸಿ, ಸಲ್ಲೇಖನ ಸ್ವೀಕರಿಸಿ ಪ್ರಾಣತ್ಯಾಗ ಮಾಡುವುದು ಜೈನರ ನೆಲೆಯಲ್ಲಿ ಪ್ರಶಂಸನೀಯವಾದರೂ, ಜನಸಾಮಾನ್ಯರ ದೃಷ್ಟಿಯಿಂದ ಸುಲಭವಾಗಿರಲಿಲ್ಲ. ಆದರಲ್ಲೂ ದೇವರ ಕರುಣೆಗೆ, ಅನುಗ್ರಹಕ್ಕೆ ಪಾತ್ರವಾಗುವುದು ಜೈನಧರ್ಮದಲ್ಲಿ ಶಕ್ಯವಿಲ್ಲ. ತೀರ್ಥಂಕರನು ಕೇವಲ ಆದರ್ಶ ಮಾತ್ರ. ಅವನು ಜನರ ಈ ಭವದ ಕಷ್ಟವನ್ನು ಎಂದೂ ಪರಿಹರಿಸಲಾರ. ಸುಖವನ್ನು ನೀಡಲಾರ. ಜೈನಧರ್ಮದ ಮೂಲ ಉದ್ದೇಶ ಮೌಲ್ಯಗಳು ಏನನ್ನೇ ಸಾರುತ್ತಿರಲಿ, ಜನಸಾಮಾನ್ಯರು ಯಾವಾಗಲೂ ತಮ್ಮ ಕಷ್ಟವನ್ನು ಪರಿಹರಿಸಿ, ಸುಖವನ್ನು ನೀಡುವ ದೇವರನ್ನು ನಂಬುತ್ತಾರೆ. ಈ ದೃಷ್ಟಿಯಿಂದ ಜೈನಧರ್ಮಕ್ಕಿಂತಲೂ ವೀರಶೈವ, ವೈಷ್ಣವಧರ್ಮಗಳು ಜನಸಾಮಾನ್ಯರ ಹೃದಯವನ್ನು ಸುಲಭವಾಗಿ

ಗೆದ್ದುಕೊಂಡವು. ಜೈನಧರ್ಮದ ಪ್ರಾಬಲ್ಯ ಕುಗ್ಗುವುದಕ್ಕೆ ಇದೂ ಒಂದು ಕಾರಣವೆನ್ನಬಹುದು. ಜೈನಧರ್ಮ ಎದುರಿಸುತ್ತಿದ್ದ ಈ ಆಂತರಿಕ ಬಿಕ್ಕಟ್ಟು ಮತ್ತು ತಾತ್ವಿಕ ತೊಡಕುಗಳನ್ನು ಮನಗಂಡ ಅಂದಿನ ಜೈನಾಚಾರ್ಯರು, ಇವನ್ನು ನಿವಾರಿಸುವಲ್ಲಿ ಶಕ್ತಿಮೀರಿ ಪ್ರಯತ್ನವನ್ನು ನಡೆಸಿದ್ದರು. ಜೈನತತ್ವಕ್ಕೆ ಒಪ್ಪಿತವಲ್ಲದ ಎಷ್ಟೋ ಅಂಶಗಳನ್ನು ಅವರು ಒಪ್ಪಿಕೊಳ್ಳಲೇಬೇಕಾಗಿ ಬಂತು. ಯಶಸ್ತಿಲಕ ಚಂಪೂ ಗ್ರಂಥದಲ್ಲಿ ಇದರ ಬಗ್ಗೆ ಸೂಚನೆ ಸಿಗುತ್ತದೆ.[254] ಜನಸಾಮಾನ್ಯರಿಗಾಗಿ ಮಂತ್ರ ತಂತ್ರಗಳ ಆರಾಧನೆ, ಉಪಾಸನೆಯನ್ನು ಅವಲಂಬಿಸುವುದರಲ್ಲಿ ತಪ್ಪಿಲ್ಲವೆಂದೂ, ಜೈನಧರ್ಮದ ಮೂಲತತ್ವಗಳಿಗೆ ಎಲ್ಲಿಯ ವರೆಗೆ ಅಡ್ಡಿ ಬರುವುದಿಲ್ಲವೋ ಅಲ್ಲಿಯವರೆಗೆ ಲೌಕಿಕವಾದ ಧರ್ಮಾಚರಣೆಗಳನ್ನು ನಡೆಸಬಹುದೆಂಬ ಅಂಗೀಕಾರವು ಅದರಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ಇದರ ಪರಿಣಾಮವಾಗಿ ಸಾತ್ವಿಕ ಯಜ್ಞಯಾಗಾದಿಗಳು, ತಂತ್ರೋಪಾಸನೆ, ಯಕ್ಷ ಯಕ್ಷಿಯರ ಆರಾಧನೆಗಳು ಜೈನರಲ್ಲೂ ರೂಢಿಗೆ ಬಂದವು.[255]

ಈ ಎಲ್ಲಾ ಗೊಂದಲಗಳು ಜನಸಾಮಾನ್ಯರ ಮೇಲೆ ಪ್ರಭಾವವನ್ನು ಬೀರಿದ್ದವು. ಹೀಗೆ ಕರ್ನಾಟಕದಲ್ಲಿ ತನ್ನ ಪ್ರಭುತ್ವವನ್ನು ಸಾಧಿಸಿ, ಕೀರ್ತಿ ಪತಾಕೆಯನ್ನು ಹಾರಿಸಿದ ಜೈನಧರ್ಮವು, ಹನ್ನೊಂದನೆಯ ಶತಮಾನದ ತರುವಾಯ, ರಾಜಕೀಯ ಆಶ್ರಯವನ್ನು ಕಳೆದುಕೊಂಡು, ಇಳಿಗಾಲವನ್ನು ಕಂಡ ಸಂದರ್ಭದಲ್ಲಿ ಘಟ್ಟದ ಕೆಳಗಿನ ಕರಾವಳಿ ತೀರದ ತುಳುನಾಡಿನಲ್ಲಿ ಆಶ್ರಯ ಪಡೆದುಕೊಂಡದ್ದು ಚಾರಿತ್ರಿಕವಾಗಿ ಮಹತ್ವದ ಘಟನೆಯಾಯಿತು. ಜೈನಧರ್ಮವು ಈ ನೆಲದ ಸಂಸ್ಕೃತಿಯೊಡನೆ ಉದಾರವಾಗಿ ಬೆರೆಯಿತು. ಬದುಕಿನ ಎಲ್ಲಾ ಸ್ತರಗಳಲ್ಲಿ ಹೊಂದಾಣಿಕೆಯನ್ನು ಮಾಡಿಕೊಂಡು, ಒಂದು ರೀತಿಯ ಸಮನ್ವಯವನ್ನು ಸಾಧಿಸಿತು. ಕರ್ನಾಟಕದ ಇತರ ಕಡೆಗಳಲ್ಲಿ ಜಿನಧರ್ಮಕ್ಕೆ ಒದಗಿಬಂದ ಇಳಿಗಾಲ ತುಳುನಾಡಿನಲ್ಲಿ ತಡವಾಗಿ ಆರಂಭವಾಯಿತು ಅಷ್ಟೆ. ಹಾಗಾಗಿ ಕೆಳದಿಯರಸರು ಜಿನಧರ್ಮದ ವಿನಾಶಕ್ಕೆ ಕಾರಣವಾದರೆಂಬ ಹೇಳಿಕೆಗಳನ್ನು ಅಷ್ಟು ಸುಲಭವಾಗಿ ಸ್ವೀಕರಿಸಲು ಸಾಧ್ಯವಾಗುವುದಿಲ್ಲ. ಉಳಿದ ಕಡೆಗಳಲ್ಲಿ ವೀರಶೈವರು ಜಿನಧರ್ಮದ ಮೇಲೆ ನಡೆಸಿದ ಪ್ರಹಾರವನ್ನು ತುಳುನಾಡಿನಲ್ಲಿ ಕೆಳದಿಯರಸರು ನಡೆಸಿದರು ಎಂಬ ಹೇಳಿಕೆಗಳು, ಊಹಾಪೋಹಗಳಿವೆಯಷ್ಟೇ ಅಲ್ಲದೆ ಅದನ್ನು ದೃಢೀಕರಿಸಲು ಸ್ಪಷ್ಟ ಸಾಕ್ಷಿಗಳಿಲ್ಲ. ಪಿಯತ್ರೋ ಡೆಲ್ಲಾ ವಲ್ಲೆಯ ಹೇಳಿಕೆಗಳಲ್ಲಿ ಗೇರುಸೊಪ್ಪೆಯ ಅರಮನೆ, ನಗರಗಳನ್ನು ವೆಂಕಟಪ್ಪ ನಾಶಪಡಿಸಿದ್ದಾನೆ ಎಂದಿದೆಯೇ ಹೊರತು ಗುಡಿಗೋಪುರಗಳ ನಾಶದ ಉಲ್ಲೇಖಗಳಿಲ್ಲ. ಇನ್ನು ಬಾರ್ಕೂರಿನ ಕಥೆಗಳಲ್ಲಿ ಇವರು ಬಾರಕೂರಿನಲ್ಲಿ ಜೈನ ಮಂದಿರವನ್ನು ನಾಶ ಮಾಡಿದರು ಎಂಬುದಾಗಿ ಕೇಳಿಬರುವ ಮಾತುಗಳು ಸತ್ಯಕ್ಕೆ ದೂರವಾದ ಸಂಗತಿ ಎನಿಸುತ್ತದೆ. ಯಾಕೆಂದರೆ ಈ ಕುರಿತಾಗಿ ಲೇಖನ ಬರೆದಿರುವ ಬೇಕಲ ರಾಮನಾಯಕರಾಗಲೀ, ಕೃತಿ ರಚನೆ ಮಾಡಿರುವ ಬಾಬು ಅವರಾಗಲೀ, ಯಾವ ಆಧಾರದಲ್ಲಿ ಈ ಉಲ್ಲೇಖಗಳನ್ನು ಮಾಡಿದ್ದಾರೆ ಎಂಬುದಕ್ಕೆ ಮಾಹಿತಿಗಳು ಲಭ್ಯವಿಲ್ಲ. ಹಲವು ಜೈನ ಬಸದಿಗಳು ದೇವಾಲಯಗಳಾಗಿ ಪರಿವರ್ತಿತವಾದ ನಿದರ್ಶನಗಳಿವೆ. ಆದರೆ ಕೆಳದಿಯರಸರು ಅಂತಹ ಕೆಲಸ ಮಾಡಿದ ಯಾವುದೇ ಉದಾಹರಣೆಗಳಿಲ್ಲ.

ನೂರಾರು ವೀರಶೈವ ಮಠಗಳು ಈ ಭಾಗದಲ್ಲಿ ನಿರ್ಮಾಣವಾದರೂ ಬಸದಿಯನ್ನು ನೆಲಸಮಗೊಳಿಸಿ ಯಾವುದೇ ಮಠವನ್ನು ಕಟ್ಟಿಸಿದ ಉದಾಹರಣೆಗಳು ತುಳುನಾಡಿನಲ್ಲಿ ದೊರೆಯುವುದಿಲ್ಲ. ನೆಲಸಮವಾಗಿರುವ ಎಲ್ಲಾ ಬಸದಿಗಳ ಅವನತಿಯ ಹಿನ್ನೆಲೆಯನ್ನು ಸಂಘರ್ಷದ ಹಿನ್ನೆಲೆಯಲ್ಲೇ ನೋಡುವುದು ಸರಿಯಲ್ಲ. ಅವುಗಳಿಗೆ ಮೇಲೆ ಸೂಚಿಸಿದಂತಹ ಹಲವಾರು ಕಾರಣಗಳಿರುತ್ತವೆ.

ತುಳುನಾಡಿನ ಉತ್ತರ ಭಾಗ ಕೆಳದಿ ನಾಯಕರ ನೇರ ಆಳ್ವಿಕೆಗೆ ಒಳಪಟ್ಟರೆ ತುಳುನಾಡಿನ ದಕ್ಷಿಣ ಭಾಗದ ಸ್ಥಿತಿಗತಿಗಳು ವಿಭಿನ್ನ ಹಿನ್ನೆಲೆಯನ್ನು ಹೊಂದಿವೆ. ಸ್ಥಳೀಯ ತುಂಡರಸರಿಗೆ ಸಹಾಯಕರಾಗಿದ್ದ ಬಲ್ಲಾಳರು ಅಥವಾ ಹೆಗ್ಗಡೆಗಳು ಜೈನರಾಗಿದ್ದು ತಮ್ಮದೇ ಆದ ಅಧಿಕಾರ ವ್ಯಾಪ್ತಿಯನ್ನು ಹೊಂದಿದ್ದರು. ಶಾಸನಗಳಲ್ಲಿ ಈ ಸ್ಥಳೀಯ ಆಡಳಿತಗಾರರ ಹೆಸರುದೊಡ್ಡ ಮಟ್ಟದಲ್ಲಿ ಕಾಣಿಸಿಕೊಳ್ಳದಿದ್ದರೂ ಭೂತಾರಾಧನೆಗೆ ಸಂಬಂಧಿಸಿದ ಪಾಡ್ದನಗಳಲ್ಲಿ ಇವರು ಅನಿವಾರ್ಯವಾಗಿ ಪ್ರಧಾನವಾಗಿ ಕಾಣಿಸಿಕೊಳ್ಳುತ್ತಾರೆ. ಉದಾಹರಣೆಗೆ ಸುಳ್ಯ, ಪುತ್ತೂರು,ಸುಬ್ರಹ್ಮಣ್ಯ ಪ್ರದೇಶಗಳಲ್ಲಿ ಉಳ್ಳಾಕುಲು ಆರಾಧನೆ ಮತ್ತು ಅವುಗಳ ಆಡಳಿತಾತ್ಮಕ ಸಮುದಾಯ ಸಂಬಂಧದಲ್ಲಿ ಇಂದು ಗೌಡರಿದ್ದರೆ, ಇಲ್ಲಿಯ ಐತಿಹ್ಯಗಳು ಮತ್ತು ಮೌಖಿಕ ಆಧಾರಗಳು ಇದರ ಮೂಲವನ್ನು ಬಲ್ಲಾಳರವರೆಗೆ ಕೊಂಡುಹೋಗುತ್ತವೆ. ತುಳುವ ದೈವಾರಾಧನೆಯನ್ನು ಊರ್ಜಿತಗೊಳಿಸಿದ ಪ್ರಧಾನ ಸಮುದಾಯವಾಗಿ ಬಲ್ಲಾಳರು, ಹೆಗ್ಗಡೆಗಳು, ಗುತ್ತಿನ ಮುಖ್ಯಸ್ಥರು ಕಾಣಿಸಿಕೊಳ್ಳುತ್ತಾರೆ.

ಗಣಪತಿರಾವ್ ಐಗಳ್ ಉಲ್ಲೇಖಿಸಿರುವರ ಅಮರ ಸುಳ್ಯದ ಬಲ್ಲಾಳನ ಬೀಡು ಇಂದಿನ ಸುಳ್ಯದ ಪನ್ನೆ ಬೀಡಾಗಿದೆ. ಈ ಬೀಡಿಗೆ ಸೇರಿದ ಹಲವು ಶಾಖೆಗಳಲ್ಲಿ ಕೊನೆಯ ಸಂತತಿಯಾಗಿ ಅಷ್ಟ ಬಲ್ಲಾಳ್ತಿಯರು ಆಡಳಿತ ನಡೆಸುತ್ತಿದ್ದರೆಂದು ಪ್ರತೀತಿ. ಈ ಬಲ್ಲಾಳ್ತಿಯರ ಸಂತತಿ ಕೊನೆಗೊಂಡಾಗ ಇವರ ಭೂ ಆಸ್ತಿಯನ್ನು ಉಳ್ಳಾಕುಳ ಆರಾಧನಾ ಪದ್ಧತಿಯೊಂದಿಗೆ ಗೌಡರು ಅಥವಾ ಸ್ಥಳೀಯರು ನಿರ್ವಹಿಸಿರಬೇಕು. ಮೌಖಿಕ ಆಧಾರದಲ್ಲಿ ಈ ಅಷ್ಟ ಬಲ್ಲಾಳ್ತಿಯರನ್ನು, ಮತ್ತು ಅವರ ಉತ್ತರಾಧಿಕಾರಿಗಳನ್ನು ಗುರುತಿಸಲಾಗಿದೆ.[256] ಈ ಎಲ್ಲಾ ಬೀಡಿನ ಕೇಂದ್ರಗಳಲ್ಲಿ ಉಲ್ಲಾಕುಳು ಆರಾಧನಾ ಪರಂಪರೆ ಇವೆ. ಇಲ್ಲಿ ದೊರಕುವ ಐತಿಹ್ಯಗಳು ಬಲ್ಲಾಳ ಉಲ್ಲಾಕುಳು ಸಂಬಂಧವನ್ನು ನಿರೂಪಿಸುವ ಜೊತೆಯಲ್ಲಿ ಇಲ್ಲಿಯ ಭೂ ಆಸ್ತಿ ಕಾಲಕ್ರಮೇಣ ಹೇಗೆ ಇತರ ವರ್ಗದವರಿಗೆ ಅದರಲ್ಲಿಯೂ ಪ್ರಧಾನವಾಗಿ ಗೌಡರಿಗೆ ಹಸ್ತಾಂತರವಾಯಿತೆಂದು ವಿವರಿಸುತ್ತವೆ. “ಬಲ್ಲಾಳ ಕಾಲದ ಪೂರ್ವಕಟ್ಟಳೆ, ಅನ್ಯಾಯ ಮಾಡಿದ ಬಲ್ಲಾಳ ಸಂತತಿಯನ್ನು ನಾಶಮಾಡಿ ನಿಮ್ಮ ಬೆನ್ನ ಹಿಂಬಾಲಿಸಿದೆವು”[257] ಎನ್ನುವ ಮಾತುಗಳು, ಜೀಡಿನ ಮುಖ್ಯಸ್ಥರಾದ ಜೈನರಿಂದ, ಸ್ಥಳೀಯ ಗೌಡರಿಗೆ ಅಧಿಕಾರ ನೀಡಲ್ಪಟ್ಟ ಸ್ಥಿತ್ಯಂತರವನ್ನು ನಿರೂಪಿಸುತ್ತವೆ. ಈ ಭಾಗದಲ್ಲಿ ಜೈನರ ಅವನತಿಗೆ ಐತಿಹ್ಯಗಳು ಕೊಡುವ ಪ್ರಮುಖ ಕಾರಣವೆಂದರೆ ನಿಸ್ಸಂತತಿ. ಸ್ಥಳೀಯ ಯಜಮಾನೀಯ ಗೌಡರ ಮಾತುಗಳಲ್ಲಿ, ನಿಸ್ಸಂತತಿಯಾದ ಬಲ್ಲಾಳರ ಆಸ್ತಿ ನಮಗೆ ಉಂಬಳಿಯಾಗಿ ಬಂದಿದೆಯೆನ್ನುವಲ್ಲಿ ಇದು ಸ್ಪಷ್ಟವಾಗುತ್ತದೆ.

ಬಲ್ಲಾಳ ಸಂತತಿಯ ವಿನಾಶದ ಈ ಬಗೆಯ ಸಂಕಥನಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಅಲ್ಪಸಂಖ್ಯಾತರಾಗಿದ್ದ ಅಧಿಕಾರ ಸ್ಥಾನಿ ಬಲ್ಲಾಳರು ಪ್ರಬಲ ಸಮುದಾಯಗಳಿಂದ ಸ್ಥಾನ ಪಲ್ಲಟ ಹೊಂದಿರುವುದು ಸ್ಪಷ್ಟ. ಬಂಗರೇ ಮೊದಲಾದ ಜೈನ ಅರಸರಿಗೆ ಸಹಾಯಕರಾಗಿ ಸುಳ್ಯದ ಈ ಭಾಗದಲ್ಲಿಯೂ ಅನೇಕ ಜೈನ ಬಲ್ಲಾಳರ ಬೀಡುಗಳಿದ್ದವು. ಬಸದಿಗಳಿದ್ದವು. ಆದರೆ ಇಂದು ಮರ್ಕಂಜದ ಬಲ್ನಾಡನ್ನು ಬಿಟ್ಟರೆ ಉಳಿದ ಎಲ್ಲಾ ಕಡೆಗಳಲ್ಲಿ ಬಸದಿಗಳು ನಾಮಾವಶೇಷವಾಗಿದೆ. ಬಲ್ನಾಡಿಗೆ ಸಮೀಪದ ಕಂದ್ರಪ್ಪಾಡಿ, ಸುಬ್ರಹ್ಮಣ್ಯದಿಂದ 10 ಮೈಲಿ ದೂರದಲ್ಲಿದೆ. 'ಬಸದಿ ಕಾಡೆಂದು' ಕರೆಯಲ್ಪಡುವ ಕಂದ್ರಪ್ಪಾಡಿಯ ಕೇಂದ್ರದಲ್ಲಿ ಈಗ ಉಳಿದಿರುವುದು ಶಿಲಾಮಯ ಬಸದಿಯ ಅವಶೇಷಗಳು ಮಾತ್ರ. ಇಂದು ಇಲ್ಲಿ ಜೈನರು ನಾಮಾವಶೇಷವಾಗಿದ್ದಾರೆ. ಕಂದ್ರಪ್ಪಾಡಿಯಲ್ಲದೆ, ಪಂಜದ ಬಸ್ತಿಕಾಡು, ಯೇನೆಕಲ್ಲು, ನಡುಗಲ್ಲು, ಕೊಂಬಾರು, ಬೆಳ್ಳಾರೆ ಮುಂತಾದ ಕಡೆಗಳಲ್ಲಿ ಪಾಳು ಬಸದಿಗಳ ಅವಶೇಷಗಳಿವೆ. ಸುಳ್ಯ ತಾಲೂಕಿನ ಬಲ್ನಾಡನ್ನು ಬಿಟ್ಟರೆ ಇಡೀ ತಾಲೂಕಿನಲ್ಲಿ ಇಂದು ಜೈನರಿಲ್ಲ.[258] ಇಂದು ಸುಳ್ಯ ತಾಲೂಕಿನ ವಿವಿಧೆಡೆಗಳಲ್ಲಿ ಯಜಮಾನಿಕೆಯ ನೆಲೆಯಲ್ಲಿ ದೈವಾರಾಧನೆಯನ್ನು ನಡೆಸುತ್ತಿರುವ ಗೌಡರು ಸಂಘರ್ಷದ ಮೂಲಕ ಬಲ್ಲಾಳರ ಸ್ಥಾನಪಲ್ಲಟಕ್ಕೆ ಕಾರಣರಾದರು ಎಂಬ ಅಭಿಪ್ರಾಯಕ್ಕೆ ಪೂರಕವಾಗಿ, ಪುರುಷ, ಬಚ್ಚನಾಯಕ ದೈವಗಳ ಪಾಡ್ದನಗಳಲ್ಲಿ ವ್ಯಕ್ತವಾಗುವ ಸಂಘರ್ಷಗಳು ಕೂಡ ಇದೇ ಸಂದೇಶ ನೀಡುತ್ತವೆ. ಯಾವಾಗ ಬೀಡು ಬಲ್ಲಾಳರು ತಮ್ಮ ಅಸ್ತಿತ್ವವನ್ನು ಕಳೆದುಕೊಂಡರೋ ಆಗ ಗೌಡರು ಮುಂಚೂಣಿಗೆ ಬಂದರು ಮತ್ತು ತಮ್ಮ ಯಜಮಾನಿಕೆಯನ್ನು ಸ್ಥಾಪಿಸಿದರು. ಈ ಭಾಗಕ್ಕೆ ವಲಸೆ ಬಂದ ಗೌಡರು ಕೆಲವು ಸಂದರ್ಭಗಳಲ್ಲಿ ಸಂಘರ್ಷದ ಮೂಲಕ, ಇನ್ನು ಕೆಲವು ಸಂದರ್ಭದಲ್ಲಿ ಜೈನ ಬಲ್ಲಾಳ ವಂಶದ ನಿಸ್ಸಂತತಿಯ ಕಾರಣಕ್ಕೆ ಭೂ ಹಿಡುವಳಿಯನ್ನು ಪಡೆದರು ಮತ್ತು ಅಧಿಕಾರವನ್ನು ಹಿಡಿದರು. ವಲಸಿಗರಾಗಿ ತುಳುನಾಡಿಗೆ ಬಂದಿರುವ ಗೌಡರು, ಬಲ್ಲಾಳರಲ್ಲಿ ಶ್ರಮಿಕ ವರ್ಗವಾಗಿ ಸೇರಿಕೆಯಾದದ್ದು, ನಂತರ ಸಂತತಿ ಬೆಳೆದು ಪ್ರಬಲರಾದದ್ದು ಕಾಲಾನುಗತ ಸಂಗತಿ. ಬಲ್ಲಾಳರ ಆಸ್ತಿಯನ್ನು ತಾವು ಹೊಂದಿ ಭೂಮಿ ಸಂಬಂಧಿಯಾಗಿದ್ದ ದೈವಗಳನ್ನು ಆರಾಧಿಸಿದ್ದು, ದೈವಾರಾಧನೆಯ ಮೂಲಕ ಅಧಿಕಾರ ನೆಲೆಗಳಲ್ಲಿ ಸ್ಥಾಪನೆಯಾಗಿ ಗೌಡರು ಯಾಜಮಾನ್ಯರಾದದ್ದು ಈ ಕಾಲದ ಸಾಮಾಜಿಕ ಪಲ್ಲಟವಾಗಿದೆ. ಈ ಅಂಶಗಳೂ ಈ ಭಾಗದಲ್ಲಿ ಜೈನ ಧರ್ಮದ ಅವನತಿಗೆ ಕಾರಣವಾಗಿತ್ತು.

ಮತಾಂತರದ ಪ್ರಕ್ರಿಯೆಗಳೂ ಜೈನ ಧರ್ಮದ ಇಳಿಮುಖಕ್ಕೆ ಕಾರಣವಾಗಿತ್ತು. ಜೈನರು ಬಂಟರಾಗಿ ಯಾವ ಕಾಲದಲ್ಲಿ ಪರಿವರ್ತನೆ ಹೊಂದಿದರೆಂದು ತಿಳಿಯದಿದ್ದರೂ ಈ ಪರಿವರ್ತನೆಯೂ ಜೈನ ಧರ್ಮಕ್ಕೆ ಹೊಡೆತ ನೀಡಿತು. ಇನ್ನು ಹಲವು ಸಂದರ್ಭಗಳಲ್ಲಿ ಬಂಟರು ಅತಿಕ್ರಮಣದ ಮೂಲಕ ಜೈನರನ್ನು ಸ್ಥಾನ ಪಲ್ಲಟಗೊಳಿಸಿರುವ ಸುಳಿವುಗಳಿವೆ. ತುಳುವ ಭಾಷಿಕರಲ್ಲೊಂದು ಗಾದೆಮಾತಿದೆ.[259] 'ಬಂಟೆ ಸೊರ್ಕ್ಂಡ ಬಲ್ಲಾಳೆ; ಒಳ್ಳೆ ಸೊರ್ಕ್ಂಡ ಮಂಡೆಲಿ.' (ಬಂಟ ಸೊಕ್ಕಿದರೆ ಬಲ್ಲಾಳ. ನೀರ ಹಾವು ಸೊಕ್ಕಿದರೆ ವಿಷಯುಕ್ತ

ಮಂಡೆಲಿಯೆನ್ನುವ ಹಾವಾಗುತ್ತದೆ) ಈ ಸಂದರ್ಭಕ್ಕೆ ಅನ್ವಯಿಸುವ ಹಾಗೆ ಮೂಲತಃ ಈ ಬಲ್ಲಾಳರು ಜೈನರಾಗಿದ್ದು ಕಾಲಾಂತರದಲ್ಲಿ ಬಂಟರು ಆ ಸ್ಥಾನವನ್ನು ಅಲಂಕರಿಸಿರಬೇಕು. ಇಲ್ಲಿ ವ್ಯಕ್ತವಾಗುವ "ಸೊಕ್ಕಿದ ಬಂಟ" ಎನ್ನುವ ಪದ ಜೈನ ಬಲ್ಲಾಳರನ್ನು, ಬಂಟರು ಬಲ ಪ್ರಯೋಗದಿಂದ ಸ್ಥಾನಪಲ್ಲಟಗೊಳಿಸಿ ಅಧಿಕಾರ ಗ್ರಹಣ ಮಾಡಿದ ಸೂಚನೆಯಾಗಿದೆ. ಇಂದು ತುಳುನಾಡಿನ ಕೆಲವು ಬೀಡುಗಳಲ್ಲಿ ಬಂಟರು ವಾಸವಿದ್ದು ಸದ್ರಿ ಬೀಡುಗಳು ಮೂಲತ: ಜೈನರಿಗೆ ಸೇರಿದ್ದು ಎಂದು ಅಲ್ಲಿ ವಾಸವಿರುವ ಬಂಟರು ಅದರ ಮೂಲವನ್ನು ವಿವರಿಸುತ್ತಾರೆ.[260] ಇನ್ನು ತುಳುನಾಡಿನ ಉತ್ತರ ಭಾಗದಲ್ಲಿ "ಜೈನರ ಗಂಟು ನಾಡವರಿಗೆ" ಎನ್ನುವುದೂ ಸ್ಥಾನ ಪಲ್ಲಟದ ಕುರುಹಾಗಿದೆ. 'ಜೈನ ಕೆಟ್ಟು ಜಂಗಮನಾದ' ಎನ್ನುವ ಮಾತೂ ವೀರಶೈವ ಮತಾಂತರದ ಸೂಚನೆಯೇ ಆಗಿದೆ. ವಿಜಯನಗರ ಮತ್ತು ಕೆಳದಿ ಕಾಲದಲ್ಲಿ ಭಟ್ಕಳ ಪರಿಸರದಲ್ಲಿ ಜೈನರು ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡಿರುವುದಕ್ಕೆ, ಚೆರಿಯೊ ಪಾಂಡೆಲ್, ಚೆಟ್ಟಿರೊ ಭಂಡಸಾಲೆ, ಜೈನ್ ತಾನ್, ಬೆಳಿಯ ಬಲ್ಲಾಳ ಅಗತ್, ಚೆರಿಯೋ ಬಲ್ಲಾಳ ಅಗತ್ ಮುಂತಾದ ಜೈನ ಮನೆತನಗಳ ಹೆಸರುಗಳು ಮತ್ತು ಹೆಂಗಸರ ಒಡವೆಗಳು ಸಾಕ್ಷಿಗಳಾಗಿವೆ.[261]

ಹಾಗೆಯೇ ಹಿಂದೆ ಬಹುಸಂಖ್ಯೆಯಲ್ಲಿದ್ದ ಜೈನರೇನಾದರು? ಎಂಬ ಪ್ರಶ್ನೆಗೆ ಸಾಂಕ್ರಾಮಿಕ ರೋಗಗಳಲ್ಲಿ ಸತ್ತು ಹೋದರು. ಸಂತಾನವಿಲ್ಲದಾಯಿತು, ಉಳಿದವರು ಪಶ್ಚಿಮದ ಕಡೆ ವಲಸೆ ಹೋದರು. ಜೈನರ ಕೇರಿಗೆ ರಾತ್ರಿ ಹೊತ್ತಿನಲ್ಲಿ ಬೆಂಕಿ ಬಿತ್ತು ಇತ್ಯಾದಿ ಉತ್ತರಗಳು ದೊರೆಯುತ್ತವೆ. ಹಾಗೆಯೇ ರೋಗ ಬಂದು ಕೇರಿಯವರಲ್ಲಿ ಕೆಲವರು ಸತ್ತು ಹೋದರೆಂದೂ, ಉಳಿದವರು ಊರುಬಿಟ್ಟು ಹೋದರೆಂದೂ ಸಮುದಾಯ ಅಭಿಪ್ರಾಯಪಡುತ್ತದೆ.[262] ಕಂದ್ರಪ್ಪಾಡಿಯಲ್ಲಿ ಬಸದಿಯ ಬಳಿಯಿರುವ ಪುರುಷ ದೈವಕ್ಕೆ ಜೈನರು ಅಗೌರವ ತೋರಿದ್ದು ಅವರ ಕೇರಿಗೆ ಬೆಂಕಿ ಬಿದ್ದು ಸರ್ವನಾಶಕ್ಕೆ ಕಾರಣವಾಯಿತೆಂದು ಹೇಳಲಾಗುತ್ತದೆ.[263] ಬಹುಶಃ ಆರ್ಥಿಕ ಮತ್ತು ಮತೀಯ ಮೂಲದ ಘರ್ಷಣೆಗಳು ಈ ಬೆಂಕಿ ಮೂಲಕ್ಕೆ ಕಾರಣವಾಗಿರುವ ಸಾಧ್ಯತೆಯೂ ಇದೆ. ಒಟ್ಟಿನಲ್ಲಿ ರಾಜಕೀಯ, ಮತೀಯ ಮತ್ತು ವಲಸೆ ಪ್ರಕ್ರಿಯೆಗಳು ಈ ವಿನಾಶದ ವಿಚಾರಗಳಿಗೆ ಕಾರಣವಾಗಿದೆ ಎನ್ನಬಹುದು.

ಹಾಗಾಗಿ, ಬದಲಾದ ರಾಜಕೀಯ ಸನ್ನಿವೇಷಗಳು, ರಾಜಾಶ್ರಯದ ಕೊರತೆ, ನಿಸ್ಸಂತತಿ, ಮತೀಯ ಸಂಘರ್ಷಗಳು ದೊಡ್ಡ ಮಟ್ಟದಲ್ಲಿ ತುಳುನಾಡಿನ ಪೂರ್ವ ಮತ್ತು ಉತ್ತರ ಭಾಗದಲ್ಲಿ ಜೈನಧರ್ಮದ ಇಳಿಮುಖಕ್ಕೆ ಕಾರಣವಾಯ್ತು ಎನ್ನಬಹುದು. ಗೇರುಸೊಪ್ಪೆ ಮತ್ತು ಸಂಗೀತಪುರದ ಸಾಳುವರಸರ ಆಳ್ವಿಕೆ ಕೊನೆಯಾದದ್ದು ಜೈನರ ಮಟ್ಟಿಗೆ ದೊಡ್ಡ ಹೊಡೆತವಾಗಿತ್ತು. ಅಲ್ಲದೇ ಜೈನರ ಧಾರ್ಮಿಕ ಸಂಸ್ಥೆಗಳಿಗೆ ದಾನ ದತ್ತಿಗಳನ್ನು ಒದಗಿಸುವವರಿರಲಿಲ್ಲ. ಹಾಗೆಯೇ ನಾಯಕತ್ವದ ಕೊರತೆಯೂ ಇತ್ತು. ಇನ್ನು ರಾಜಕೀಯ ಸಂಘರ್ಷದ ನೆಲೆಯಲ್ಲಿ ವಿವೇಚಿಸುವುದಾದರೆ, ತುಳುನಾಡಿನ ಜೈನ ಧರ್ಮದ ಇಳಿಮುಖವಾಗಲು ಕೆಳದಿ ರಾಜರು ಮಾತ್ರ ಕಾರಣರಲ್ಲ. ಪೋರ್ಚುಗೀಸರು ಮೊದಲಾದ ಯುರೋಪಿಯನ್ನರು, ಅಷ್ಟು

ಮಾತ್ರವಲ್ಲದೆ, ಬಂಗರು, ಚೌಟರು, ಅಜಿಲರು, ಸಾವಂತರು, ಭೈರರಸರು ಮುಂತಾದ ಸ್ಥಳೀಯ ಜೈನರಸರ ಆಂತರಿಕ ಸಂಘರ್ಷಗಳು ಅವರನ್ನು ದುರ್ಬಲಗೊಳಿಸುವ ಮೂಲಕ ಕರಾವಳಿಯಲ್ಲಿ ಜೈನಧರ್ಮ ತನ್ನ ಉಚ್ಛ್ರಾಯ ಸ್ಥಿತಿಯನ್ನು ಕಳೆದುಕೊಳ್ಳಲು ಕಾರಣವಾಗಿತ್ತು ಎನ್ನುವುದು ಹೆಚ್ಚು ಸೂಕ್ತವಾಗುತ್ತದೆ. ಈ ಎಲ್ಲಾ ಹಿನ್ನೆಲೆಗಳನ್ನು ನೋಡುವಾಗ ಕೆ.ಜಿ ವಸಂತ ಮಾಧವ ಅವರು ಹೇಳುವಂತೆ ಕ್ರಿ.ಶ.1763ರಲ್ಲಿ ಹೈದರಾಲಿಯ ಆಕ್ರಮಣದೊಂದಿಗೆ ಇಲ್ಲಿಯ ರಾಜ ಪ್ರಮುಖರು ತಮ್ಮ ರಾಜಕೀಯ ಅಧಿಕಾರವನ್ನು ಕಳೆದುಕೊಂಡದ್ದು ತುಳುನಾಡಿನಲ್ಲಿ ಜೈನ ಧರ್ಮದ ವೈಭವಯುತ ಕಾಲಘಟ್ಟ ಕೊನೆಗೊಳ್ಳುವಂತಾಯಿತು[264] ಎಂಬ ವಿಚಾರವನ್ನು ಸಮರ್ಥಿಸಲು ಸಾಧ್ಯವಾಗುವುದಿಲ್ಲ. ಯಾಕೆಂದರೆ ಈ ಮೇಲೆ ಚರ್ಚಿಸಿದ ವಿವಿಧ ವಿಚಾರಗಳನ್ನು ಪರಿಗಣಿಸಬೇಕಾಗುತ್ತದೆ. ಈ ಎಲ್ಲಾ ಹಿನ್ನೆಲೆಯಲ್ಲಿ ಕೆಳದಿಯರಸರು ಧಾರ್ಮಿಕ ಹಿನ್ನೆಲೆಯಲ್ಲಿ ಜೈನ ಧರ್ಮಕ್ಕೆ ಅಂತ್ಯ ಹಾಡದಿದ್ದರೂ ಪರೋಕ್ಷವಾಗಿ ರಾಜಕೀಯ ಹಿನ್ನೆಲೆಯಲ್ಲಿ, ಅದರ ಇಳಿಗಾಲಕ್ಕೆ ಕಾರಣಕರ್ತರಾದರು ಎನ್ನುವುದು ತಿಳಿದು ಬರುತ್ತದೆ.

### 7.4 ಇಸ್ಲಾಂ – ಕ್ರೈಸ್ತ ಧರ್ಮ – ಧಾರ್ಮಿಕ, ಸಾಮಾಜಿಕ ನೆಲೆಗಳು

**ಇಸ್ಲಾಂ :** ಕೆಳದಿ ಆಳ್ವಿಕೆಯ ಕಾಲದಲ್ಲಿ ಅರಬ್ಬರು, ಟರ್ಕರು, ಮಾಪಿಳ್ಳೆಗಳು, ಬ್ಯಾರಿಗಳು, ನವಾಯತರು ಮೊದಲಾದ ಮುಸ್ಲಿಮರು ತುಳುನಾಡಿನಲ್ಲಿದ್ದು ಇಲ್ಲಿಯ ಸಮಾಜ ಹಾಗೂ ಆರ್ಥಿಕ ಜೀವನದ ಭಾಗವಾಗಿದ್ದರು. ತುಳುನಾಡಿನ ಉತ್ತರ ಭಾಗದಲ್ಲಿ ಕಾಳೀನದಿಯಿಂದ ಗೋವಾದವರೆಗೆ ಆದಿಲ್‌ಷಾಹಿ ಸಾಮ್ರಾಜ್ಯದ ವಿಸ್ತರಣೆ ಈ ಪ್ರದೇಶದಲ್ಲಿ ಮುಸ್ಲಿಮರ ಜನಸಂಖ್ಯೆ ವೃದ್ಧಿಯಾಗಲು ಕಾರಣವಾಯ್ತು.[265] ವ್ಯಾಪಾರವೇ ಪ್ರಧಾನ ವೃತ್ತಿಯಾಗಿದ್ದ ಇವರಿಗೆ, ಸಮುದ್ರ ತೀರದ ಕರಾವಳಿ ಪ್ರದೇಶ, ವ್ಯಾಪಾರದ ವ್ಯಾಪಕ ಅವಕಾಶವನ್ನು ಒದಗಿಸಿದ್ದ ಹಿನ್ನೆಲೆಯಲ್ಲಿ ಕರಾವಳಿಯುದ್ದಕ್ಕೂ ಇವರು ನೆಲೆ ನಿಲ್ಲುವಂತಾಯಿತು. ಕ್ರಿ.ಶ. 14ನೇ ಶತಮಾನದಲ್ಲಿ ತುಳುನಾಡಿಗೆ ಭೇಟಿ ನೀಡಿದ ಇಬನ್ ಬಟೂಟ, ಮಂಗಳೂರಿನಲ್ಲಿ ನಾಲ್ಕು ಸಾವಿರ ಮುಸಲ್ಮಾನರಿದ್ದರೆಂದು ತಿಳಿಸುತ್ತಾನೆ.[266] ಕ್ರಿ.ಶ. 16ನೇ ಶತಮಾನದಲ್ಲಿ ಕರಾವಳಿಗೆ ಭೇಟಿ ನೀಡಿದ ಬಾರ್ಬೋಸನ ಅವಲೋಕನದಂತೆ ಹೊನ್ನಾವರ, ಭಟ್ಕಳ ಮತ್ತು ಮಂಗಳೂರುಗಳಲ್ಲಿ ಮುಸ್ಲಿಮರು ವಾಸಿಸುತ್ತಿದ್ದರು ಮಾತ್ರವಲ್ಲದೆ ಅಲ್ಲಿ ಹಲವು ಮಸೀದಿಗಳಿಗಳಿದ್ದವು.[267] ಮಣೇಲಿನ ಮಸೀದಿ ಪಿಯತ್ರೋ ಡೆಲ್ಲಾ ವಲ್ಲೆಯ ಆಗಮನಕ್ಕೆ ಮೊದಲೇ ಇತ್ತು ಎನ್ನುವುದು ಅದರ ಪ್ರಾಚೀನತೆಯನ್ನು ತಿಳಿಸುತ್ತದೆ.[268]

ಕರಾವಳಿ ಭಾಗಕ್ಕೆ ಈ ಕಾಲದಲ್ಲಿ ಆಗಮಿಸಿದ ಮುಸ್ಲಿಂ ಸಂತರು ಇಲ್ಲಿಯ ಜನರೊಂದಿಗೆ ಜಾತ್ಯಾತೀತವಾಗಿ ಬೆರೆತು ಜನರ ಸಾಮಾಜಿಕ ಜೀವನದಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಮುಸ್ಲಿಂ ಸಂತರ ಮರಣದ ನಂತರದ ಗೋರಿಗಳು ಪ್ರಮುಖ ಆಧ್ಯಾತ್ಮಿಕ ಕೇಂದ್ರಗಳಾಗಿ ಮುಂದುವರೆದವು. ಕ್ರಿ.ಶ.17ನೇ ಶತಮಾನದಲ್ಲಿ ಇದೇ ಗೋರಿಗಳು, ದರ್ಗಾಗಳಾಗಿ ಆರಾಧನಾ ಕೇಂದ್ರಗಳಾದವು. ಕರಾವಳಿಯ

ಚಿತ್ತಕುಲದಿಂದ ಕಾಸರಗೋಡಿನವರೆಗೆ ಇಂತಹ ದರ್ಗಾಗಳು ಈ ಕಾಲಘಟ್ಟದಲ್ಲಿ ನಿರ್ಮಿಸಲ್ಪಟ್ಟವು. ಅಂತಹ ಒಂದು ಪ್ರಮುಖ ದರ್ಗಾ ಕಾಸರಗೋಡಿನಲ್ಲಿ ನಿರ್ಮಾಣವಾಗಿದ್ದು ಅದು ಮಲಿಕ್ ಇಬನ್ ಮುಹಮ್ಮದನಿಗೆ ಸಮರ್ಪಿಸಲಾಗಿದೆ. ಇದು ಮುಸ್ಲಿಮರ ಪವಿತ್ರ ಮಂದಿರವಾಗಿದೆ.[269] ಪ್ರಸಿದ್ಧವಾದ ಉಳ್ಳಾಲದ ದರ್ಗಾ, ಷರೀಫ್ ಉಲ್ ಮದನಿ ಎಂಬ ಸಂತನಿಗೆ ಸಮರ್ಪಿತವಾಗಿದ್ದು ತುಳುನಾಡಿನ ಪ್ರಮುಖ ದರ್ಗಾವಾಗಿದೆ. ಈ ಸಂತ, ಕ್ರಿ.ಶ.1569ರಲ್ಲಿ ಮದಿನಾದಿಂದ ಉಳ್ಳಾಲಕ್ಕೆ ಬಂದನೆಂದು ಹೇಳಲಾಗಿದೆ. ಸ್ಥಳೀಯ ಮಹಿಳೆಯನ್ನು ವಿವಾಹವಾದ ಈತ ತನ್ನ ಜೀವಿತಾವಧಿಯಲ್ಲಿ ಹಲವು ಪವಾಡಗಳನ್ನು ಮಾಡಿ ಜನರ ಪ್ರಶಂಸೆಯನ್ನು ಪಡೆದಿದ್ದನೆಂದು ಹೇಳಲಾಗಿದೆ.[270] ಮೂಲ್ಕಿ ಪರಿಸರದಲ್ಲಿ ಜಿಂದಾಶಾಹ್ವಾಲಿ (Jindashahwali) ಹಜಿನಿಮ್ ಮತ್ತು ಬಿಸಮನ್ (Bisaman) ರಿಗೆ ಸಮರ್ಪಿತವಾದ ದರ್ಗಾಗಳಿವೆ. ಈ ದರ್ಗಾಗಳೂ ಕ್ರಿ.ಶ.17ನೇ ಶತಮಾನದಲ್ಲಿ ನಿರ್ಮಾಣವಾಗಿರಬೇಕೆಂದು ನಂಬಲಾಗಿದೆ.[271] ಕೆನರಾ ಪ್ರದೇಶದ ಕೆಲವು ದರ್ಗಾಗಳು ನಿರ್ದಿಷ್ಟವಾಗಿ ಮಿರ್ಜಾನ್ ಮತ್ತು ಚಿತ್ತಕುಲದ ದರ್ಗಾಗಳು ಆದಿಲ್‌ಷಾಹಿ ದೊರೆಗಳಿಂದ ಭೂ ದಾನವನ್ನು ಪಡೆದವು.[272]

ತುಳುನಾಡಿನಲ್ಲಿ ಮುಸ್ಲಿಮರ ಸಂಪರ್ಕ ಪ್ರಧಾನವಾಗಿ ಆಗಿರುವುದು ವ್ಯಾಪಾರದ ದೃಷ್ಟಿಯಿಂದ. ಆ ಕಾರಣದಿಂದಲೇ ತುಳುನಾಡಿನ ಮುಸ್ಲಿಮರು ಸಾಮಾನ್ಯವಾಗಿ 'ವ್ಯಾಪಾರಿ' ಎಂಬ ಶಬ್ದದ ತದ್ಭವವಾದ. ಬ್ಯಾರಿ' ಹೆಸರಿನಿಂದ ಕರೆಯಲ್ಪಡುತ್ತಾರೆ. ಪಾಡ್ದನಗಳಲ್ಲಿಯೂ ಮುಸ್ಲಿಮರು ಪ್ರಧಾನವಾಗಿ ವ್ಯಾಪಾರ ವೃತ್ತಿಗೆ ಸಂಬಂಧಿಸಿದಂತೆ ಇರುವುದರಿಂದ 'ಬ್ಯಾರಿಗಳು' ಎಂದೇ ಉಲ್ಲೇಖಿಸಲ್ಪಟ್ಟಿದ್ದಾರೆ. ಈ ಕಾಲದಲ್ಲಿ ರಚನೆಯಾದ ಪಾಡ್ದನಗಳಲ್ಲಿಯೂ ಮುಸ್ಲಿಮರು ವ್ಯಾಪಾರಿಗಳಾಗಿ ಕಾಣಿಸಿಕೊಳ್ಳುತ್ತಾರೆ. ಈ ಕಾಲದಲ್ಲಿ ಮುಸ್ಲಿಮರು ತಳ ಸಮುದಾಯದ ಹಿಂದುಗಳ ಸಹಾಯದಿಂದ ಸಮುದ್ರ ವ್ಯಾಪಾರದಲ್ಲಿ ತೊಡಗಿದ್ದರು.[273] ವ್ಯಾಪಾರವೇ ಅವರ ಪ್ರಮುಖ ಕಸುಬು ಆಗಿದ್ದುದರಿಂದ ಭೂ ಹಿಡುವಳಿದಾರರಾಗಿ ಅಥವಾ ಬೇಸಾಯಗಾರರಾಗಿ ಅವರು ದೊಡ್ಡ ಮಟ್ಟದಲ್ಲಿ ಕಾಣಿಸುವುದಿಲ್ಲ. ಕರಾವಳಿಯಲ್ಲಿ ಪೋರ್ಚುಗೀಸರ ಆಗಮನಕ್ಕಿಂತ ಮೊದಲು ಅರಬ್ಬರೇ ಮೊದಲಾದ ಮುಸ್ಲಿಂ ವ್ಯಾಪಾರಿಗಳು ಪ್ರಬಲರಾಗಿದ್ದರು, ವಿಜಯನಗರ ಕಾಲದವರೆಗೂ ಮುಸ್ಲಿಂ ವ್ಯಾಪಾರೀ ಸಂಘವಾದ ಹಂಜಮಾನರು ಇಲ್ಲಿಯ ವ್ಯಾಪಾರ ವ್ಯವಹಾರಗಳಲ್ಲಿ ಪ್ರಮುಖ ಪಾತ್ರವಹಿಸಿದ್ದರು. ಅವರು ಅರೇಬಿಯಾ, ಮಸ್ಕತ್, ಆಫ್ರಿಕಾದೊಂದಿಗೆ ವಿದೇಶೀ ವ್ಯಾಪಾರ, ಮಲಬಾರ್ ತೀರದೊಂದಿಗೆ ಆಂತರಿಕ ವ್ಯವಹಾರದಲ್ಲಿ ತೊಡಗಿದ್ದರು.[274] ಆದರೆ ಕೆಳದಿ ಕಾಲದ ದಾಖಲೆಗಳಲ್ಲಿ ಹಂಜಮಾನರು ಕಾಣಿಸಿಕೊಳ್ಳುವುದಿಲ್ಲ. ಅಂದರೆ, ಕೆಳದಿ ಕಾಲದಲ್ಲಿ ಇವರು ತಮ್ಮ ಪ್ರಭಾವವನ್ನು ಕಳೆದುಕೊಂಡರು.

ಕ್ರಿ.ಶ.15 ಮತ್ತು 16ನೇ ಶತಮಾನದಲ್ಲಿ ಪೋರ್ಚುಗೀಸರ ಚಟುವಟಿಕೆಗಳು ಮುಸ್ಲಿಮರ ಆರ್ಥಿಕ ಚಟುವಟಿಕೆಗಳ ಮೇಲೆ ಋಣಾತ್ಮಕ ಪರಿಣಾಮ ಬೀರಿತು. ಕೆನರಾ ಪ್ರದೇಶದ ವಿದೇಶೀ ವ್ಯಾಪಾರದ

ಏಕಸ್ವಾಮ್ಯತೆಯ ವಿಚಾರದಲ್ಲಿ ಇಬ್ಬರ ನಡುವೆ ಸ್ಪರ್ಧೆಯೇರ್ಪಟ್ಟಿತು. ಪೋರ್ಚುಗೀಸರು ಸ್ಥಳೀಯ ರಾಜರ ಸಹಾಯದಿಂದ ಮುಸ್ಲಿಂರನ್ನು ವಿಶೇಷವಾಗಿ ಅರಬ್ಬರನ್ನು ಹೊರ ಹಾಕಲು ಪ್ರಯತ್ನಿಸುತ್ತಿದ್ದರು. ಇದು ಪೋರ್ಚುಗೀಸರು ಮತ್ತು ಮುಸ್ಲಿಂರ ನಡುವೆ ಶಸ್ತ್ರ ಸಂಘರ್ಷಕ್ಕೂ ಕಾರಣವಾಯಿತು. ಕ್ರಿ.ಶ 1548ರಲ್ಲಿ ಪೋರ್ಚುಗೀಸರು ವಿಜಯನಗರದ ದೊರೆ ಹಾಗೂ ಭಟ್ಕಳದ ರಾಣಿಯೊಂದಿಗೆ ಒಪ್ಪಂದಗಳನ್ನು ಮಾಡಿಕೊಂಡರು. ಈ ಒಪ್ಪಂದದಲ್ಲಿ ಮುಸ್ಲಿಂ ವ್ಯಾಪಾರಿಗಳಿಗೆ ತಮ್ಮ ಬಂದರುಗಳಲ್ಲಿ ವ್ಯಾಪಾರ ಮಾಡಲು ಅವಕಾಶ ಕೊಡಬಾರದೆಂದು ಒತ್ತಾಯಿಸಿದ್ದರು.[275] ಕ್ರಿ.ಶ. 17ನೇ ಶತಮಾನದ ಪೂರ್ವಾರ್ಧದಲ್ಲಿ ಕೆಳದಿ ನಾಯಕರೊಂದಿಗೆ ಮಾಡಿಕೊಂಡ ಒಪ್ಪಂದದಲ್ಲಿಯೂ ಇದೇ ರೀತಿ ಒತ್ತಾಯವನ್ನು ಮಾಡಲಾಗಿತ್ತು.[276] ಕ್ರಿ.ಶ.1591ರಲ್ಲಿ ಬಸ್ರೂರಿನಲ್ಲಿ ಸ್ಥಳೀಯರು ಮುಸ್ಲಿಂ ವ್ಯಾಪಾರಿಗಳಿಗೆ ಅಕ್ಕಿಯನ್ನು ಮಾರಿದರೆ ಅವರಿಗೆ ಒಂದು ಕೋರ್ಜಿ ಅಕ್ಕಿಗೆ (30 ಮುಡಿ) 5 ಲಾರಿನ್‌ಗಳಂತೆ (1 ಲಾರಿನ್ = 15.50ಪೈಸೆ ಅಥವಾ 9 ಇಂಗ್ಲಿಷ್ ಷಿಲ್ಲಿಂಗ್‌ಗಳು) ಪೋರ್ಚುಗೀಸರು ದಂಡ ವಿಧಿಸುತ್ತಿದ್ದರು.[277]

ಆದಾಗ್ಯೂ ಮುಸ್ಲಿಮರು ಸ್ಥಳೀಯ ರಾಜರುಗಳ ಆಡಳಿತ ಮತ್ತು ಸೈನ್ಯದ ವಿಚಾರದಲ್ಲಿ ತಮ್ಮ ಪ್ರಭಾವವನ್ನು ಹೊಂದಿದ್ದರು. ಕ್ರಿ.ಶ.1551ರಲ್ಲಿ ಮುಸ್ಲಿಮನಾದ ಏಕದಳಖಾನ್, ಬಾರ್ಕೂರಿನ ರಾಜ್ಯಪಾಲನಾಗಿದ್ದು, ಕೋಟೇಶ್ವರ ದೇವಳದಲ್ಲಿ 2 ಗುಂಪುಗಳ ಮಧ್ಯೆ ಸಂಘರ್ಷ ತಲೆದೋರಿ ದೇವಾಲಯ ಮುಚ್ಚಲ್ಪಟ್ಟಾಗ ಆತ ದೇವಳದ ಆಗು ಹೋಗುಗಳನ್ನು ಚರ್ಚಿಸಿ ಸರಿ ದಾರಿಗೆ ತರುತ್ತಾನೆ.[278] ಹಮ್ಮು ಬ್ಯಾರಿ ಎನ್ನುವವನು ಬಾರ್ಕೂರಿನ ಹತ್ತಿರದ ಹೊಸ ಕೇರಿ ಎನ್ನುವಲ್ಲಿ ಮಠವೊಂದಕ್ಕೆ ದತ್ತಿ ನೀಡುವ ತೀರ್ಮಾನದಲ್ಲಿ ಭಾಗಿಯಾಗಿದ್ದ ವಿಷಯ ಕ್ರಿ.ಶ.1569ರ ಬಾರ್ಕೂರಿನ ಶಾಸನದಲ್ಲಿ ಉಲ್ಲೇಖವಾಗಿದೆ.[279] ಪೋರ್ಚುಗೀಸ್ ಮತ್ತು ಸ್ಥಳೀಯ ಆಧಾರಗಳು ತಿಳಿಸುವಂತೆ ಬಂಗರು ಮತ್ತು ಚೌಟರಸರ ಸೈನ್ಯದಲ್ಲಿ ಮುಸ್ಲಿಂ ಸೈನಿಕರೂ ದಾಖಲಾಗಿದ್ದರು. ಕ್ರಿ.ಶ.16ನೇ ಶತಮಾನದ್ದು ಎನ್ನಲಾದ ಅತ್ತಾವರ ದೆಯ್ಯೊಂಗೊಳು ಪಾಡ್ದನ, ಬಂಗರ ಪ್ರಾಂತ್ಯದಲ್ಲಿ ಮುಸ್ಲಿಮರಿಗೆ ವಿಶೇಷವಾದ ಸ್ಥಾನಮಾನಗಳಿತ್ತು ಎಂದು ತಿಳಿಸುತ್ತದೆ.[280] ಕ್ರಿ.ಶ 1567ರಲ್ಲಿ ಮೊದಲನೆಯ ಅಬ್ಬಕ್ಕ ದೇವಿ ಉಳ್ಳಾಲದಿಂದ ಆಳ್ವಿಕೆ ಮಾಡುತ್ತಿದ್ದಾಗ ಅನೇಕ ಮೂರರನ್ನು(ಮುಸ್ಲಿಮರನ್ನು) ತನ್ನ ಸೈನ್ಯದಲ್ಲಿ ಹೊಂದಿದ್ದಳು.[281] ಪಿಯತ್ರೋ ಡೆಲ್ಲಾ ವಲ್ಲೆ ಕೆಳದಿಯ ಸೇನಾಪತಿಯಾದ ಮೂಸೆಬಾಯಿಯನ್ನು ಹೆಸರಿಸುತ್ತಾನೆ. ಮೊದಲು ಅವನು ಬಂಗರಾಜನ ಕೆಳಗೂ ಸೇವೆಸಲ್ಲಿಸುತ್ತಿದ್ದ ಎನ್ನಲಾಗಿದೆ.[282] ಕೆಳದಿ ವೆಂಕಟಪ್ಪ ನಾಯಕನ ಉತ್ತರಾಧಿಕಾರಿಗಳೂ ಮುಸ್ಲಿಮರನ್ನು ಸೇನೆಯಲ್ಲಿ ನಿಯುಕ್ತಿಗೊಳಿಸಿರುವುದು ಕಂಡುಬರುತ್ತದೆ. ಕ್ರಿ.ಶ.1706ರ ದಾಖಲೆಯಂತೆ ಪೊಕ್ಕಚ್ಚು ಬ್ಯಾರಿ ಎಂಬಾತ ಕೆಳದಿಯ ಒಂದು ಸೇನೆಯ ದಂಡನಾಯಕನಾಗಿ ಮಲಬಾರಿಗಳ ಮೇಲೆ ದಾಳಿ ಮಾಡಿದ್ದ. ಅದಕ್ಕಾಗಿ ನಾಯಕ ಅವನಿಗೆ ಉತ್ತಾರವನ್ನು ದಯಪಾಲಿಸಿದ್ದ.[283] ಕ್ರಿ.ಶ.1757ರಲ್ಲಿ ಸೇಕಲ್ಲಿ, ಮಂಗಳೂರಿನ ಅಧಿಕಾರಿಯಾಗಿದ್ದ.[284]

ಕೆಳದಿನಾಯಕರು ಮುಸ್ಲಿಮರಿಗೆ ಅವರ ಧರ್ಮವನ್ನು ಅನುಸರಿಸಲು ಅನುವು ಮಾಡಿಕೊಟ್ಟಿರಲ್ಲದೆ

ಮಸೀದಿ ನಿರ್ಮಾಣಕ್ಕೆ ದಾನ ದತ್ತಿಗಳನ್ನು ನೀಡಿದ್ದರು.[285] ಹಾಗಾಗಿಯೇ ಮುಸ್ಲಿಮರು ಭಟ್ಕಳ, ಮಂಗಳೂರುಗಳಲ್ಲಿ ಪ್ರಮುಖ ಮಸೀದಿಗಳನ್ನು ಹೊಂದಿದ್ದರು.[286] ಬಂಟ್ವಾಳ ಸಮೀಪದ ಅಜಿಲಮೊಗರು ಎನ್ನುವಲ್ಲಿ ಅಜಿಲ ಅರಸರು ಸೂಫೀ ಸಂತ ಬಾಬಾ ಫಕ್ರುದ್ದೀನ್‌ನ ದರ್ಗಕ್ಕೆ ಸ್ಥಳದಾನ ಮಾಡಿದ್ದರು.[287] ಮುಸ್ಲಿಮರು ನಾವಿಕರಾಗಿ ಕೂಲಿಗಳಾಗಿ ಹಾಗು ಸೈನಿಕರಾಗಿ ಸ್ಥಳೀಯ ಅರಸರಾದ ಬಂಗ, ಅಜಿಲ, ಮತ್ತು ಚೌಟ ಅರಸರ ಸೇವೆಯಲ್ಲಿದ್ದರು. ಕ್ರಿ.ಶ. 1702ರಲ್ಲಿ ಮುಸ್ಲಿಮರು ಆರ್ಥಿಕವಾಗಿ ಬಲಿಷ್ಠರಾಗಿದ್ದು ಬಂಗ, ಅಜಿಲ ಅರಸರಿಗೆ ಸಾಲವನ್ನೂ ನೀಡುತ್ತಿದ್ದ ಅಂಶ ತಿಳಿದುಬರುತ್ತದೆ.[288]

ಕರಾವಳಿಗೆ ಆಗಮಿಸಿದ ಮುಸ್ಲಿಮರು ಕರಾವಳಿಯ ಸಂಸ್ಕೃತಿಯ ಭಾಗವಾದ ಹಲವು ಉದಾಹರಣೆಗಳಿವೆ. ಕ್ರಿ.ಶ.1763ರ ದಾಖಲೆಯಲ್ಲಿ ಬಪ್ಪ ಬ್ಯಾರಿಯ ಉಲ್ಲೇಖ ಕಂಡು ಬರುತ್ತದೆ.[289] ಬಪ್ಪನಾಡು ದೇವಳ ಪುನರ್ನಿರ್ಮಾಣ ಮಾಡುವಲ್ಲಿ ಈ ಮುಸ್ಲಿಂ ಭಕ್ತನ ಸಹಕಾರ ಮೌಖಿಕವಾಗಿಯೂ ಜನಜನಿತವಾಗಿದೆ. ಹಿಂದೂ ದೇವಳವೊಂದರಲ್ಲಿ ಮುಸ್ಲಿಂ ಭಕ್ತನೊಬ್ಬನ ಪ್ರವೇಶ ಗಮನಾರ್ಹವಾಗಿದೆ. ತುಳುನಾಡಿನ ಮುಸಲ್ಮಾನರಿಗೂ ಭೂತಾರಾಧನೆಗೂ ಪರಸ್ಪರ ನಂಟಿದೆ. 'ಬೊಬ್ಬರ್ಯ' ಎಂಬ ಪಾಡ್ದನವು ಮುಸ್ಲಿಂ (ಬ್ಯಾರಿ) ವ್ಯಾಪಾರಿಯೊಬ್ಬನು ಭೂತವಾದ ಕತೆಯನ್ನು ಒಳಗೊಂಡಿದೆ.[290] 'ಕೊರತಿ' ಪಾಡ್ದನದಲ್ಲಿ ಮುಸ್ಲಿಂಬ್ಯಾರಿಯ ಬಗ್ಗೆ ವಿವರಗಳು ಸಿಗುತ್ತವೆ.[291] ಮೂಲ್ಕಿ ಬಳಿಯ ಚರಂತಿ ಮಠದ ಸ್ಥಾಪನೆಯ ಹಿಂದೆ, ಬಪ್ಪ ಬ್ಯಾರಿ ಎಂಬವನ ಪಾತ್ರ ಜನಜನಿತವಾಗಿದೆ.[292] ಭೂತಾರಾಧನೆಗೂ ಮುಸ್ಲಿಮರಿಗೂ ನಿಕಟವಾದ ಸಂಬಂಧವನ್ನು ಇಂತಹ ಕೆಲವು ಪಾಡ್ದನಗಳು ತೋರಿಸಿಕೊಡುತ್ತವೆ. ತುಳುನಾಡಿನ ಭೂತಾರಾಧನೆ ಸಂದರ್ಭದಲ್ಲಿ ಮುಸ್ಲಿಮರು ಭಾಗವಹಿಸುವುದನ್ನು ಇಂದಿಗೂ ನೋಡಬಹುದು. ಬೊಬ್ಬರ್ಯ ಭೂತದಂತೆಯೇ ಅಲಿಚಾಮುಂಡಿ ಭೂತವೂ ಮುಸ್ಲಿಂ ವ್ಯಕ್ತಿಯೊಬ್ಬನು ಭೂತವಾಗಿ ಪರಿವರ್ತನೆಗೊಂಡ ಸಂಕಥನವನ್ನು ಹೊಂದಿದೆ. ಈ ಎರಡು ಭೂತಗಳೂ ಅವುಗಳ ಉತ್ಸವದ ವೇಳೆ ಉಳಿದ ಭೂತಗಳಿಗಿಂತ ಉಡುಗೆ ತೊಡುಗೆಗಳಲ್ಲಿ ಭಿನ್ನವಾಗಿದೆ. 'ಮುಂಡದಾಯೆ' ಪಾಡ್ದನದಲ್ಲಿ ಮುಸ್ಲಿಂ ವ್ಯಕ್ತಿಗಳು ಕಥೆಯ ಪಾತ್ರಗಳಾಗಿ ಬರುತ್ತಾರೆ. ಇಲ್ಲಿ ಉದ್ಯಾವರದ ಕುಞಲ್, ಕುಟ್ಯಾಲ್ ಮತ್ತು ಪಾತುಮ್ಮ ಎನ್ನುವ ಮುಸ್ಲಿಂ ಮಹಿಳೆಯ ವಿಚಾರವಿದೆ. ಪಾತುಮ್ಮ, ಮುಂಡದಾಯೆ ಭೂತದ ನೇಮಕ್ಕೆ ಬೆಲ್ಲ ಕೊಡಲು ನಿರಾಕರಿಸಿದ ಕಾರಣ ಭೂತದ ಉಪಟಳದಿಂದ ನೀರಿನಲ್ಲಿ ಮುಳುಗಿ ಸಾಯುತ್ತಾಳೆ.[293] ತುಳುನಾಡಿನಲ್ಲಿ ಭೂತಾರಾಧನೆಯನ್ನು ಜೈನರು ಒಪ್ಪಿಕೊಂಡ ರೀತಿಯಲ್ಲಿ ಮುಸಲ್ಮಾನರು ಒಪ್ಪಿಕೊಂಡಿರುವ ಕುರಿತು ಇರುವ ಸಂಕಥನ, ಭೂತದ ಕುರಿತಾದ ನಂಬಿಕೆಯನ್ನು ಮುಸ್ಲಿಮರಲ್ಲಿ ಭಯದ ಮೂಲಕ ಹುಟ್ಟಿಸುವ ಪ್ರಯತ್ನ ನಡೆದಿತ್ತೇ ಎನ್ನುವ ಅನುಮಾನ ಹುಟ್ಟಿಸುತ್ತದೆ.

ಅರಬರ ಒಡನಾಟವು ತುಳುನಾಡಿನ ಸಾಂಸ್ಕೃತಿಕ ಚಿತ್ರಣದಲ್ಲಿ ಹಲವು ಬದಲಾವಣೆಗಳನ್ನು ತಂದಿತು. ಹಾಗೆಯೇ ಅರಬೀ ಮತ್ತು ತುಳುಭಾಷೆಗಳು ಮಿಶ್ರವಾಗಿ ಬ್ಯಾರಿ ಭಾಷೆಯ ಉದಯವಾಯಿತು

ಎನ್ನುವ ಅಭಿಪ್ರಾಯವಿದೆ. ಉದಾಹರಣೆಗೆ ತುಳುವಿನ "ಸೊಲ್ಮೆ" ಅಥವಾ ಸಲಾಂ ಶಬ್ದ ಅರಬ್ ಮೂಲದ್ದು ಎಂಬುದಾಗಿ ಭಾಷಾ ತಜ್ಞರ ಅಭಿಪ್ರಾಯ.[294] ಕೆಳದಿಯ ಕಾಲದಲ್ಲಿ ಮುಸಲ್ಮಾನರ ರಾಜಕೀಯ ವರ್ಚಸ್ಸು ಮತ್ತು ಆರ್ಥಿಕ ಬಲಾಢ್ಯತೆ ಇಲ್ಲಿಯ ಜನರಿಗೆ ಅಭದ್ರತೆಯ ವಾತಾವರಣ ಸೃಷ್ಟಿಸಲಿಲ್ಲ. ಬದಲಾಗಿ ಅರಬರಿಗೆ ಎಲ್ಲಾ ಕಡೆ ವ್ಯಾಪಾರಿ ಮಳಿಗೆಗಳನ್ನು ನಿರ್ಮಿಸಲು ಕರಾವಳಿಯ ಅರಸರು ಪ್ರೋತ್ಸಾಹಿಸಿದ್ದರು.[295] ಆದರೆ ಬಂಗರಾಜ ಪಲ್ಲಕ್ಕಿಯಲ್ಲಿ ಕುಳಿತು ಹೋಗುವುದನ್ನು ಮುಸಲ್ಮಾನರು ಸಹಿಸುತ್ತಿರಲಿಲ್ಲ ಎಂದು ಪೋರ್ಚುಗೀಸ್ ದಾಖಲೆಗಳು ತಿಳಿಸುತ್ತವೆ.[296] ಇದರಿಂದಾಗಿಯೇ ಬಂಗರಾಜ, ತನಗೆ ವಿಧೇಯರಾಗಿರದ ಇವರನ್ನು ಮಟ್ಟ ಹಾಕಲೆಂದೇ ಪೋರ್ಚುಗೀಸರಿಗೆ ಜಾಗ ನೀಡಿದನೆಂದು ಹೇಳಲಾಗಿದೆ. ಯಾಕೆಂದರೆ ಮುಸ್ಲಿಂ ವ್ಯಾಪಾರಿಗಳಿಗೂ ಪೋರ್ಚುಗೀಸರಿಗೂ ಈ ಮೊದಲೇ ವೈರತ್ವವಿತ್ತು. ಒಟ್ಟಿನಲ್ಲಿ ಈ ಕಾಲದಲ್ಲಿ ತುಳುನಾಡಿನಲ್ಲಿ ಕಾಣಿಸಿಕೊಂಡ ಮುಸ್ಲಿಮರು, ಇಲ್ಲಿನ ಆರ್ಥಿಕ ಧಾರ್ಮಿಕ ಸಾಮಾಜಿಕ ವಿಚಾರಗಳಲ್ಲಿ ಪ್ರಮುಖ ಪಾತ್ರವಹಿಸಿರುವುದು ಕಂಡುಬರುತ್ತದೆ.

**ಕ್ರೈಸ್ತ ಧರ್ಮ** : ಕೆನರಾ ಕರಾವಳಿ ಪ್ರದೇಶದಲ್ಲಿ ವಾಸ್ಕೋಡಗಾಮನ ಆಗಮನಕ್ಕೂ ಮೊದಲು ಕ್ರೈಸ್ತಧರ್ಮವನ್ನು ಪಾಲಿಸುವ ಜನರಿದ್ದರು ಎಂದು ಹೇಳಲಾಗಿದೆ. ಆದರೆ ಅದು ಖಾಯಂವಾಸದ ನೆಲೆಯಲ್ಲಿರಲಿಲ್ಲ.[297] ಪೋರ್ಚುಗೀಸರ ಆಗಮನಕ್ಕಿಂತ ಮೊದಲು ತುಳುನಾಡಿನಲ್ಲಿ ಕ್ರೈಸ್ತರ ಚಟುವಟಿಕೆಗಳ ಕುರಿತು ನಿಖರವಾದ ಮಾಹಿತಿ ದೊರೆಯುವುದಿಲ್ಲ. ತುಳುನಾಡಿಗೆ ಪೋರ್ಚುಗೀಸರ ಆಗಮನ ಬಳಿಕ ಕ್ರೈಸ್ತ ಧರ್ಮವು ಇಲ್ಲಿ ಭದ್ರವಾಗಿ ನೆಲೆಯೂರುತ್ತದೆ. ಪೋರ್ಚುಗೀಸ್ ಕ್ರೈಸ್ತರೊಂದಿಗೆ ಗೋವಾ ಭಾಗದಿಂದ ವಲಸೆ ಬಂದ ಕೊಂಕಣಿ ಕ್ರೈಸ್ತರೂ ಈ ಭಾಗದಲ್ಲಿ ನೆಲೆಕಂಡುಕೊಂಡರು. ಕ್ರೈಸ್ತ ಧರ್ಮಪ್ರಚಾರದಲ್ಲಿ ಪೋರ್ಚುಗೀಸರು ಎಷ್ಟರಮಟ್ಟಿಗೆ ತೊಡಗಿಸಿಕೊಂಡರೆಂದರೆ ಅದು ಅವರ ರಾಜ್ಯ ನೀತಿಯಾಗಿತ್ತು.[298] ಕ್ರೈಸ್ತ ಧರ್ಮ ಹರಡುವಲ್ಲಿ ಅವರ ಮೊದಲ ಪ್ರಯತ್ನ ಕ್ರಿ.ಶ.1501ರಲ್ಲಿ ಅಂಜಿದ್ವೀಪದಲ್ಲಿ ಕೆಲವು ಸ್ಥಳೀಯರನ್ನು ಮತಾಂತರ ಮಾಡುವುದರೊಂದಿಗೆ ಆರಂಭವಾಯಿತು.[299] ಕ್ರಿ.ಶ 1526ರಲ್ಲಿ ಫ್ರಾನ್ಸಿಸ್ಕಾನರು ಮಂಗಳೂರಿನಲ್ಲಿ ಒಂದು ರೆಗ್ಯುಲರ್ ಮಿಷನ್‌ನ್ನು ಸ್ಥಾಪಿಸಿದರು. ಅದೇ ರೀತಿ ಅವರ್ ಲೇಡಿ ರೊಸಾರಿಯೊಗೆ ಮಂಗಳೂರಿನಲ್ಲಿ, ದ ಲೇಡಿ ಆಫ್ ಮರ್ಸಿಗೆ ಉಳ್ಳಾಲದಲ್ಲಿ, ಸಂತ ಫ್ರಾನ್ಸಿಸ್ ಅಸ್ಸಿಸ್ಸಿಗೆ ಫರಂಗಿ ಪೇಟೆಯಲ್ಲಿ ಹೀಗೆ 3 ಚರ್ಚುಗಳನ್ನು ನಿರ್ಮಿಸಲಾಯ್ತು.[300] ಕ್ರಿ.ಶ. 1534ರ ಹೊತ್ತಿಗೆ ಕೆನರಾ ಪ್ರಾಂತ್ಯ, ಧರ್ಮಾಪ್ರಚಾರದ ನೆಲ(The land of mission) ಎಂದು ಪರಿಗಣಿಸಲ್ಪಟ್ಟಿತ್ತು ಮತ್ತು ಈ ಪ್ರದೇಶ ಹೊಸದಾಗಿ ಗೋವಾದಲ್ಲಿ ಸ್ಥಾಪಿಸಲ್ಪಟ್ಟ ಬಿಷಪ್ಪರ ಕಾರ್ಯವ್ಯಾಪ್ತಿಯಲ್ಲಿತ್ತು.

ಸಂತ ಫ್ರಾನ್ಸಿಸ್ ಜೇವಿಯರ್ ಕೆನರಾ ಕರಾವಳಿ ಪ್ರದೇಶಕ್ಕೆ ಭೇಟಿ ನೀಡದಿದ್ದರೂ ಈ ಪ್ರದೇಶದಲ್ಲಿ ಧರ್ಮ ಪ್ರಚಾರಕ್ಕೆ ವಿಪುಲ ಅವಕಾಶಗಳಿವೆ ಎಂದು ನಂಬಿದ್ದ.[301] ಕ್ರಿ.ಶ. 1546ರಲ್ಲಿ ಜೇವಿಯರ್ ಗೋವಾದಲ್ಲಿ ಕಾಲೇಜೊಂದನ್ನು ಸ್ಥಾಪಿಸಿ ಮತಾಂತರ ಮಾಡುವ ಉದ್ದೇಶವನ್ನು ಹೊಂದಿದ್ದಾಗ ಕೆನರಾದ 6 ಜನ

ಅದರಲ್ಲಿ ಭಾಗವಹಿಸಿದ್ದರು ಎನ್ನಲಾಗಿದೆ.[302] ಇನ್‌ಕ್ವಿಸಿಶನ್, ಬರಗಾಲ ಮತ್ತು ಗೋವಾದ ರಾಜಕೀಯ ಸಮಸ್ಯೆಗಳ ಕಾರಣದಿಂದಾಗಿ, ಕ್ರಿ.ಶ. 16ನೇ ಶತಮಾನದ ಉತ್ತರಾರ್ಧದಲ್ಲಿ ಗೋವಾದ ಕ್ರೈಸ್ತರು ಕರಾವಳಿಯ ಈ ಭಾಗಕ್ಕೆ ವಲಸೆ ಬಂದರು.[303] ಕ್ರಿ.ಶ.1570ರಲ್ಲಿ ಕೆಲವು ಜೆಸ್ಯೂಟ್‌ಗಳು ಬಸ್ರೂರಿಗೆ ಆಗಮಿಸಿದರು ಮತ್ತು ಕ್ರಿ.ಶ.1574ರಲ್ಲಿ ಅಲ್ಲಿ ಒಂದು ಚರ್ಚಿನ ನಿರ್ಮಾಣ ನಡೆಯಿತು. ಮುಂದೆ ಹೊನ್ನಾವರವೂ ಮಿಷನರಿಗಳ ಕೇಂದ್ರವಾಯಿತು.[304] ಹಾಗಾಗಿ ಕ್ರಿ.ಶ.16ನೇ ಶತಮಾನದ ಕೊನೆಯಲ್ಲಿ ಹೊನ್ನಾವರ, ಬಸ್ರೂರು, ಮಂಗಳೂರು ಮತ್ತು ನೆರೆಯ ಪ್ರದೇಶಗಳು ಚರ್ಚುಗಳನ್ನು ಹೊಂದಿದ್ದವು ಮತ್ತು ಧರ್ಮ ಪ್ರಚಾರದ ಕಾರ್ಯವನ್ನು ಆ ಕಾಲಘಟ್ಟದಲ್ಲೇ ಪ್ರಾರಂಭಿಸಲಾಗಿತ್ತು ಎಂಬುದಾಗಿ ತಿಳಿಯುತ್ತದೆ. ಕೆನರಾ ಪ್ರದೇಶದಲ್ಲಿ ಹಾದು ಹೋದ ವಿದೇಶೀ ಯಾತ್ರಿಕರು ಪೋರ್ಚುಗೀಸ್ ಕೋಟೆಯಲ್ಲಿದ್ದ ಕ್ರೈಸ್ತರ ಧಾರ್ಮಿಕ ಸಂಸ್ಥೆಗಳನ್ನು ಗಮನಿಸಿದ್ದಾರೆ.[305] ಪಿಯತ್ರೋ ಡೆಲ್ಲಾ ವೆಲ್ಲೆ ಮಂಗಳೂರು ಮತ್ತು ಹೊನ್ನಾವರದಲ್ಲಿದ್ದ ಕ್ರೈಸ್ತ ದೇವಾಲಯಗಳನ್ನು ಗಮನಿಸಿದ್ದ. ಮಂಗಳೂರಿನಲ್ಲಿ ಕೋಟೆಯ ಒಳಗೆ ಮತ್ತು ಹೊರಗೆ ದೇವಾಲಯಗಳಿದ್ದು ಇಬ್ಬರು ಫ್ರಾನ್ಸಿಸ್ಕಾನರು ಮತ್ತು ಒಬ್ಬ ವಿಕಾರ್ ಅಲ್ಲಿದ್ದರೆಂದು ಹೇಳುತ್ತಾನೆ.[306] ಕ್ರಿ.ಶ.16ನೇ ಶತಮಾನದ ಉತ್ತರಾರ್ಧದಲ್ಲಿ ಪೋರ್ಚುಗೀಸರು ಮಂಗಳೂರು, ಬಸ್ರೂರು, ಮತ್ತು ಹೊನ್ನಾವರಗಳಲ್ಲಿ ಕೋಟೆಯ ನಿರ್ಮಾಣ ಮಾಡುವುದರೊಂದಿಗೆ ಪ್ರತೀ ಕೋಟೆಗಳಲ್ಲಿ ಕ್ರೈಸ್ತ ದೇವಾಲಯದ ನಿರ್ಮಾಣ ಮಾಡುತ್ತಾರೆ. ಶ್ರದ್ಧೆಯ ಧರ್ಮಪ್ರಚಾರಕ ಬೋಧಕರು ಈ ಕಾಲದಲ್ಲಿ ಸ್ಥಳೀಯ ಜನರನ್ನು ದೊಡ್ಡ ಮಟ್ಟದಲ್ಲಿ ಮತಾಂತರ ಮಾಡುತ್ತಿದ್ದರು.[307] ಕ್ರಿ.ಶ. 17ನೇ ಶತಮಾನದ ಉತ್ತರಾರ್ಧದಿಂದ, ಕ್ರಿ.ಶ. 18ನೇ ಶತಮಾನದ ಮಧ್ಯ ಭಾಗದವರೆಗೆ ಧರ್ಮ ಪ್ರಚಾರಕರ ಪರವಾಗಿ ಗೋವಾ ಸರಕಾರ ಬಹಳಷ್ಟು ಕೆಲಸ ಮಾಡುತ್ತಿತ್ತು. ಕೆಳದಿಯರಸರೊಂದಿಗೆ ಕ್ರಿ.ಶ 1678ರಲ್ಲಿ ಮಾಡಿಕೊಂಡ ಒಪ್ಪಂದವು ಇದನ್ನು ದೃಢೀಕರಿಸುತ್ತದೆ.[308]

ಕ್ರಿ.ಶ. 17ನೇ ಶತಮಾನದ ಮೊದಲ ದಶಕದಲ್ಲಿ ಕೆನರಾ ಪ್ರದೇಶದಲ್ಲಿ ಕ್ರೈಸ್ತ ಧರ್ಮದ ಹರಡುವಿಕೆ ತೀವ್ರವಾಗಿರಲಿಲ್ಲ ಎಂಬುದು ವಿದೇಶೀಯರ ಅನಿಸಿಕೆಯಾಗಿತ್ತು. ಉದಾಹರಣೆಗೆ ಆಂಟನಿಯೋ ಬೊಕರೊ ಕ್ರಿ.ಶ 1633ರಲ್ಲಿ ಬರೆಯುತ್ತಾ, "ಕೆನರಾದ ರಾಜನ ವ್ಯಾಪ್ತಿಯಲ್ಲಿ ಎಲ್ಲರೂ ಹಿಂದುಗಳಾಗಿದ್ದು ಕ್ರೈಸ್ತರಿಲ್ಲ. ಧರ್ಮಕ್ಕೆ ಸೇರ್ಪಡೆಯ ಕುರಿತಾದ ಅವರ ತಿರಸ್ಕಾರ ಎಷ್ಟು ಇತ್ತೆಂದರೆ ಈ ರೀತಿ ಮತಾಂತರವಾದ ಉದಾಹರಣೆಗಳು ಬಹಳ ಅಪರೂಪ. ಇದಕ್ಕೆ ಭಾಷಾ ಸಂವಹನದ ಕೊರತೆಯೇ ಕಾರಣ ಎಂದು ಅವನು ನಂಬಿದ್ದ. ಯಾವುದೇ ಧರ್ಮಪ್ರಚಾರಕರು ಇಕ್ಕೇರಿ ಸಾಮ್ರಾಜ್ಯವನ್ನು ಸಂಪರ್ಕಿಸಿಲ್ಲ ಎನ್ನುವ ಅಭಿಪ್ರಾಯವನ್ನು ಅವನು ವ್ಯಕ್ತಪಡಿಸುತ್ತಾನೆ.[309]

ಕ್ರಿ.ಶ. 17ನೇ ಶತಮಾನದ ಉತ್ತರಾರ್ಧದಲ್ಲಿ ಡಚ್ಚರು ಹಾಗೂ ಪೋರ್ಚುಗೀಸರ ವೈರತ್ವದಿಂದಾಗಿ ಕೆನರಾ ಪ್ರಾಂತ್ಯದಲ್ಲಿ ರೋಮನ್ ಕ್ಯಾಥೋಲಿಕ್ ಪಂಥಕ್ಕೆ ಸ್ವಲ್ಪ ಹಿನ್ನಡೆಯಾಯಿತು. ಪರಿಣಾಮವಾಗಿ ಪೋರ್ಚುಗೀಸ್ ಬೋಧಕರು ಗೋವಾಕ್ಕೆ ತೆರಳಿದರು. ಉದಾಹರಣೆಗೆ, ಸಂತ ಮರಿಯ ಎನ್ನುವ

ಕಾರ್ಮೆಲೆಟ್, ಕ್ರಿ.ಶ.1656ರಲ್ಲಿ ಕೆನರಾದಲ್ಲಿದ್ದ 6000 ಕ್ರೈಸ್ತರಿಗೆ ಫಾದರ್ ಸ್ಪಿನೊಲ ಎಸ್.ಜೆ. ಒಬ್ಬರೇ ಪಾದ್ರಿ ಎಂಬ ಮಾಹಿತಿ ನೀಡುತ್ತಾನೆ.[310] ಡಾ.ಜೋಸೆಫ್ ಸೆಬಾಸ್ಟಿಯನ್ ಮತ್ತು ಫಾದರ್ ವಿನ್ಸೆಂಟ್ ಮರಿಯ ಡಿ ಸಂತ ಕೆಥರಿನಾ, ರೋಮನ್ ಕೆಥೊಲಿಕ್‌ರ ಹಿನ್ನಡೆಯನ್ನು ಗಮನಿಸುತ್ತಾರೆ.[311] ಡಚ್ಚರ ನಿರ್ಗಮನದ ನಂತರ ಕ್ಯಾಥೋಲಿಕ್ ಧರ್ಮಪ್ರಚಾರಕರು ಹೆಚ್ಚು ಕ್ರಿಯಾಶೀಲರಾಗುತ್ತಾರೆ. ಕ್ರಿ.ಶ. 1674ರಲ್ಲಿ ಫ್ರೇಯರ್, ಹೊನ್ನಾವರದಲ್ಲಿ ಸ್ಥಳೀಯರು ಕ್ರೈಸ್ತ ಧರ್ಮವನ್ನು ಸ್ವೀಕರಿಸುತ್ತಿದ್ದುದನ್ನು ಗಮನಿಸುತ್ತಾನೆ.[312] ಕ್ರಿ.ಶ 1680ರಲ್ಲಿ ಫಾದರ್ ಪುಲ್ಸಿವಲೆನ್ಸ್ ಕೆನರಾದ ಕ್ರೈಸ್ತ ಚಟುವಟಿಕೆಗಳಿಗೆ ಸ್ಫೂರ್ತಿಯಾಗಿದ್ದರು. ಅವರು ಕೆಳದಿ ರಾಣಿ ಚೆನ್ನಮ್ಮನೊಂದಿಗೆ ಉತ್ತಮ ಬಾಂಧವ್ಯವನ್ನು ಹೊಂದಿದ್ದರು. ಮಂಗಳೂರಿನಲ್ಲಿ ತಮ್ಮ ಸ್ವಂತ ಖರ್ಚಿನಲ್ಲಿ ಕ್ರೈಸ್ತ ದೇವಾಲಯವನ್ನು ನಿರ್ಮಿಸಿದ್ದರು. ಹಲವು ಪಾದ್ರಿಗಳಿಗೆ ದೀಕ್ಷೆ ನೀಡಿದ್ದರು.[313] ಕೆನರಾದಲ್ಲಿ ರೋಮನ್ ಕ್ಯಾಥೋಲಿಕ್ ಪಂಥದ ಪುನರುಜ್ಜೀವನಕ್ಕೆ ಇವರು ಕಾರಣರಾದರು. ಕ್ರಿ.ಶ.1660ರ ಕಾಲಘಟ್ಟದಲ್ಲಿ ಅಂದರೆ ವಿನ್‌ಸೆನ್‌ಜೋ ತುಳುನಾಡಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಸುಮಾರು 6000 ಕ್ರೈಸ್ತ ಧರ್ಮದ ಅನುಯಾಯಿಗಳು ಈ ಪ್ರದೇಶದಲ್ಲಿ ಹರಡಿದ್ದರೆಂದು ಹೇಳಲಾಗಿದೆ.[314] ಮಂಗಳೂರಿನಲ್ಲಿ ಕ್ರೈಸ್ತ ಧರ್ಮದ ಪಾದ್ರಿಗಳ ನೈತಿಕ ಅಧಃಪತನದ ಕುರಿತು ಕ್ರಿ.ಶ. 1720ರಲ್ಲಿ ಇಂಗ್ಲೀಷ್ ಪ್ರವಾಸಿ ಹ್ಯಾಮಿಲ್ಟನ್ ಉಲ್ಲೇಖಿಸಿದ್ದಾನೆ.[315] ತುಳುನಾಡಿನಲ್ಲಿದ್ದ ಕ್ರೈಸ್ತರ ಸಂಖ್ಯೆ ತೃಪ್ತಿಕರವಾಗಿರಲಿಲ್ಲ ಎಂದು ರೋಮ್‌ಗೆ ಹಿಂತಿರುಗಿದ ವಿನ್ಸೆನ್ಜೋ ವರದಿ ನೀಡುತ್ತಾನೆ.[316]

ಕ್ರಿ.ಶ.17ನೇ ಶತಮಾನದ ಕೊನೆಯಲ್ಲಿ ಕೆನರಾ ಪ್ರದೇಶದ ರೋಮನ್ ಕ್ಯಾಥೋಲಿಕ್ ಪಂಥದ ಬೆಳವಣಿಗೆಯಲ್ಲಿ ಪಾದರ್ ಜೋಸೆಫ್ ವಾಸ್ ಪ್ರಮುಖ ಪಾತ್ರವಹಿಸಿದ್ದರು. ಜನರೊಂದಿಗೆ ಬೆರೆಯುತ್ತಾ ರೋಗಿಗಳಿಗೆ ಸಾಂತ್ವನ ಹೇಳುತ್ತಾ ಜನರಿಗೆ ಹತ್ತಿರವಾಗಿದ್ದರು. ಮಂಗಳೂರಿನಲ್ಲಿ ರೊಸಾರಿಯೋ ದೇವಾಲಯ, ಹಾಗೆಯೇ, ಬಸ್ರೂರು ಮತ್ತು ಗಂಗೊಳ್ಳಿಗಳಲ್ಲಿಯೂ ದೇವಾಲಯಗಳನ್ನು ನಿರ್ಮಾಣ ಮಾಡಿದ್ದರು. ಗುಲಾಮರ ನೆರವಿಗೆ ಧಾವಿಸಿ ಅವರನ್ನು ಬಂಧಮುಕ್ತಗೊಳಿಸಿದ್ದರು.[317] ಕ್ರಿ.ಶ. 1681ರ ಜೋಸ್ ವಾಸ್‌ರ ಪತ್ರವೊಂದರ ಪ್ರಕಾರ ಬಂಟ್ವಾಳ ಮತ್ತು ಅರ್ಕುಳದ ಕ್ರೈಸ್ತರು ಮಂಗಳೂರಿನ ದೇವಾಲಯವನ್ನು ಹಾಗೂ ಭಟ್ಕಳ, ಕಲ್ಯಾಣಪುರ, ಶೀರೂರು ಮತ್ತು ಕ್ಯಾಂಡಲಿಮ್‌ನ(ಗಂಗೊಳ್ಳಿ) ಕ್ರೈಸ್ತರು ಬಸ್ರೂರಿನ ದೇವಾಲಯವನ್ನು ಅವಲಂಬಿಸಿದ್ದರು.[318]

ಸಮಕಾಲೀನ ಆಧಾರಗಳು ತುಳುನಾಡಿನ ರಾಜರುಗಳು ಮತ್ತು ಜನರು ಕ್ರೈಸ್ತ ಧರ್ಮದ ಕುರಿತಾಗಿ ಸಹಿಷ್ಣುತೆಯ ಭಾವನೆ ಹೊಂದಿದ್ದರೆಂದು ತಿಳಿಸುತ್ತದೆ. ಬಾರ್ಬೋಸ ಹೇಳುವಂತೆ, ವಿಜಯನಗರದರಸರು ತಮ್ಮ ಪ್ರಜೆಗಳಿಗೆ ಎಷ್ಟು ಉದಾರವಾಗಿದ್ದರೆಂದರೆ ತಮ್ಮ ಪ್ರಜೆಗಳು ಕ್ರೈಸ್ತರೋ, ಯಹೂದಿಗಳೋ, ಮೂರರೋ ಎಂಬ ಪ್ರಶ್ನೆಗಳಿಲ್ಲದೇ ಅವರನ್ನು ಒಪ್ಪಿಕೊಂಡಿದ್ದರು.[319] ಹಾಗೆಯೇ ಸ್ಥಳೀಯ ರಾಜರಾದ ಬಂಗರು, ಚೌಟರು, ಮತ್ತು ಸ್ವಾದಿಯರಸರು ಕ್ರೈಸ್ತರಿಗೆ ಚರ್ಚುಗಳ ನಿರ್ಮಾಣಕ್ಕೆ ಮತ್ತು ವಾಸಿಸಲು ಅನುವು

ಮಾಡಿಕೊಟ್ಟರು.[320] ಕೆಳದಿಯರಸರೂ ಈ ಉದಾರ ನೀತಿಯನ್ನು ಮುಂದುವರೆಸಿದರು. ಇಮ್ಮಡಿ ಬಸವಪ್ಪ ವೈಸರಾಯಿಗೆ ಬರೆದ ಪತ್ರದಿಂದ ಇದು ಸ್ಪಷ್ಟವಾಗುತ್ತದೆ.[321] ವಿದೇಶೀ ಯಾತ್ರಿಕರ ಬರವಣಿಗೆಗಳು ಇದನ್ನು ದೃಢಪಡಿಸುತ್ತವೆ. ಕ್ರಿ.ಶ.1656ರಲ್ಲಿ ಗೆಸಪ್ಪೆ ಸಂತ ಮರಿಯ ಹೇಳುವಂತೆ ಕೆಳದಿ ಶಿವಪ್ಪನಾಯಕ ಕಾರ್ಮೆಲಿಟ್ ಮಿಶನರಿಗಳಿಗೆ ಕರಾವಳಿಯಲ್ಲಿ ಕ್ರೈಸ್ತ ದೇವಾಲಯಗಳ ನಿರ್ಮಾಣಕ್ಕೆ ಒಪ್ಪಿಗೆ ನೀಡಿದ. ಅದೇ ರೀತಿ ಶಿವಪ್ಪ ನಾಯಕ, ಕ್ರೈಸ್ತರ ಕುರಿತಾಗಿ ಉದಾರವಾಗಿ ನಡೆದುಕೊಂಡಿದ್ದನು.[322] ಕ್ರಿ.ಶ. 1687ರಲ್ಲಿ ಕಾರ್ಡಿನಲ್ ಕೆಸೆಂಟ್ಸ್ ದಾಖಲಿಸಿದಂತೆ ಕೆಳದಿ ಚೆನ್ನಾಮ್ಮಾಜಿ ಫಾದರ್ ಫುಲ್ವಿವಲೆನ್ಸ್‌ಗೆ ಸಹಾಯ ಮಾಡಿದ್ದಳು.[323] ಕ್ರಿ.ಶ.18ನೇ ಶತಮಾನದಲ್ಲಿ ಸ್ಥಳೀಯ ರಾಜರು ಕ್ರೈಸ್ತ ಧರ್ಮಕ್ಕೆ ಅನುಕೂಲಕರ ವಾತಾವರಣ ನಿರ್ಮಿಸಿದ್ದರು ಮತ್ತು ಚರ್ಚುಗಳ ನಿರ್ಮಾಣಕ್ಕೂ ಅವಕಾಶ ನೀಡಿದ್ದರು. ಕ್ರಿ.ಶ. 1730ರ ತಾಳೆ ಓಲೆಯೊಂದು ಮೂಲ್ಕಿಯ ಚೆನ್ನರಸ ಸಾಮಂತನು ಚರ್ಚು ಒಂದಕ್ಕೆ ಆಶ್ರಯ ನೀಡಿದ್ದನ್ನು ದಾಖಲಿಸಿದೆ. ಅದರ ಪ್ರಕಾರ ಚೆನ್ನರಾಯ ಸಾವಂತ ಮೂಲ್ಕಿಯ ಐಕಳದ ಸಮೀಪದ ಕಾಡುಕಂಬಳದಲ್ಲಿ ಸಂತ ಮರಿಯ ಚರ್ಚು ನಿರ್ಮಾಣಕ್ಕೆ ಕೊಡಮಾಡಿದ ಭೂಮಿಗೆ ಕ್ರಯಪತ್ರ ಮಾಡಿದ್ದ. ಕ್ರಯಪತ್ರದಲ್ಲಿ ಉಲ್ಲೇಖಿಸಿದಂತೆ ಚರ್ಚಿನಲ್ಲಿ ನಡೆಸುವ ಕೆಲವೊಂದು ಧಾರ್ಮಿಕ ವಿಧಿಗಳಿಗೆ ಸ್ವಲ್ಪ ಮಟ್ಟಿನ ತೆರಿಗೆ ರಿಯಾಯಿತಿಯನ್ನೂ ನೀಡಲಾಗಿತ್ತು.[324]

ಕ್ರಿ.ಶ.1530ರ ನಗರದ ಶಾಸನದಲ್ಲಿ, ಪ್ರಸಿದ್ಧ ಜೈನ ವಿದ್ವಾಂಸ ವಾದಿ ವಿದ್ಯಾನಂದರು ಕ್ರೈಸ್ತ ಧರ್ಮದ ತತ್ವಗಳಲ್ಲಿ ಪ್ರಭುತ್ವವನ್ನು ಹೊಂದಿದ್ದು ಶ್ರೀರಂಗಪಟ್ಟಣದಲ್ಲಿ (ಸೆರಿಂಗಪಟ್ಟಣ) ಆ ಧರ್ಮದ ಪ್ರತಿಪಾದಕರನ್ನು ಚರ್ಚೆಯಲ್ಲಿ ಸೋಲಿಸಿದ್ದನ್ನು ಉಲ್ಲೇಖಿಸಲಾಗಿದೆ.[325] ಚರ್ಚೆಯಲ್ಲಿ ಸೋತ ಕ್ರೈಸ್ತ ಮಿಷನರಿಯ ಕುರಿತು ಮಾಹಿತಿ ಇಲ್ಲದಿದ್ದರೂ ವಾದಿ ವಿದ್ಯಾನಂದರು ಕ್ರೈಸ್ತ ಧರ್ಮ ಪ್ರಚಾರಕರು ನೆಲೆಸಿದ್ದ ಕೆನರಾ ಪ್ರದೇಶದವರೆಂದು ತಿಳಿಯಲಾಗಿದೆ. ಈ ಘಟನೆ, ವಿದ್ವತ್ ಮಟ್ಟದಲ್ಲಿ ಸ್ಥಳೀಯ ಧರ್ಮವೊಂದು ವಲಸಿತ ಧರ್ಮದ ಅಬ್ಬರದ ಪ್ರಸರಣಕ್ಕೆ ಕಡಿವಾಣ ಹಾಕಲು ಮಾಡಿದ ಪ್ರಯತ್ನವಾಗಿದೆ. ವಿಜಯನಗರದ ದೊರೆಗಳು ಮತ್ತು ಕೆಳದಿಯ ನಾಯಕರು ಪೋರ್ಚುಗೀಸರ ಒತ್ತಾಯಪೂರ್ವಕ ಮತಾಂತರವನ್ನು ವಿರೋಧಿಸಿದ್ದರು. ಕ್ರಿ.ಶ.1631ರಲ್ಲಿ ಕೆಳದಿಯ ರಾಜನೊಂದಿಗೆ ಪೋರ್ಚುಗೀಸರು ಮಾಡಿಕೊಂಡ ಒಪ್ಪಂದದಲ್ಲಿ,[326] ಗಂಗೊಳ್ಳಿಯಲ್ಲಿ ಜನರಿಗೆ ಧಾರ್ಮಿಕ ಸ್ವಾತಂತ್ರ್ಯವನ್ನು ನೀಡಬೇಕೆಂದು ಪೋರ್ಚುಗೀಸರಿಗೆ ಸೂಚಿಸಲಾಗಿತ್ತು. ಕೆಳದಿ ಸಾಮ್ರಾಜ್ಯದ ನಾವಿಕರನ್ನು ಒತ್ತಾಯಪೂರ್ವಕವಾಗಿ ಮತಾಂತರ ಮಾಡಿದ್ದಕ್ಕಾಗಿ ಇಮ್ಮಡಿ ವೆಂಕಟಪ್ಪ ನಾಯಕ ಕ್ರಿ.ಶ.1660ರಲ್ಲಿ ಪೋರ್ಚುಗೀಸ್ ಬೋಧಕನನ್ನು ಬಂಧಿಸಿದ್ದ.[327] ಕ್ರಿ.ಶ.1671ರ ಒಪ್ಪಂದದಂತೆ ಇನ್ನು ಮುಂದೆ ರಾಜ್ಯದಲ್ಲಿ ಒತ್ತಾಯದ ಮತಾಂತರ, ಅನಾಥರ ಕೈವಶ ಅಥವಾ ಬ್ರಾಹ್ಮಣರ ಹತ್ಯೆಯಾಗಬಾರದು ಎಂದು ಸೂಚಿಸಲಾಗಿತ್ತು. ಕೆಳದಿ ರಾಜರು, ಕರಾವಳಿಯಲ್ಲಿ ಕ್ರೈಸ್ತರಿಗೆ ಎಲ್ಲಾ ರೀತಿಯಲ್ಲಿ ಪ್ರೋತ್ಸಾಹ ನೀಡಿದ್ದರೂ ಅವಿಧೇಯರಾದ ಕ್ರೈಸ್ತರ ವಿರುದ್ಧ ಮತ್ತು ಒತ್ತಾಯದ ಮತಾಂತರದ ಪ್ರಕ್ರಿಯೆಗಳಿಗೆ ಕಠಿಣ ಕ್ರಮಗಳನ್ನು ತೆಗೆದುಕೊಳ್ಳುತ್ತಿದ್ದರು.[328] ಕ್ರಿ.ಶ 1746ರಲ್ಲಿ ಅನುಮತಿಯಿಲ್ಲದೆ ಬಂಟ್ವಾಳದಲ್ಲಿ ಚರ್ಚು ನಿರ್ಮಿಸಿದಕ್ಕೆ

ಕೆಳದಿಯ ಇಮ್ಮಡಿ ಬಸವಪ್ಪ ನಾಯಕ ಕೆಲವು ಕ್ರೈಸ್ತ ಪಾದ್ರಿಗಳನ್ನು ಬಂಧಿಸಿದ್ದನು.[329]

ವೈಸ್‌ರಾಯನಿಗೆ ಹಾಗೂ ಕೆಳದಿ ಬಸವಪ್ಪನಿಗೆ ಕ್ರಿ.ಶ.1714ರಲ್ಲಿ ಆದ ಒಪ್ಪಂದದ ಷರತ್ತುಗಳು ತುಳುನಾಡಿನಲ್ಲಿ ಕ್ರೈಸ್ತರ ಸ್ಥಾನಮಾನ, ಅವರಿಗಿದ್ದ ಸ್ವಾತಂತ್ರ್ಯವನ್ನು ತಿಳಿಯಲು ಸಹಕಾರಿಯಾಗಿದೆ. ಅದರಂತೆ, ಕ್ರೈಸ್ತ ಸಮುದಾಯದವರ ನಡುವೆ ಅಥವಾ ಕ್ರೈಸ್ತರು ಮತ್ತು ಹಿಂದುಗಳ ನಡುವೆ ಏಳಬಹುದಾದ ವಿವಾದಗಳನ್ನು ಮಂಗಳೂರಿನ ಪೋರ್ಚುಗೀಸ್ ವರ್ತಕ–ರಾಯಭಾರಿ ಮತ್ತು ಪಾದ್ರಿಗಳು ಸೇರಿ ಬಗೆಹರಿಸಬೇಕು. ಈ ನ್ಯಾಯ ನಿರ್ಣಾಯಕರ ತೀರ್ಪು ಅಸಮಾಧಾನಕರವಾಗಿದ್ದಲ್ಲಿ, ವೈಸ್‌ರಾಯ್‌ಗೆ ಫಿರ್ಯಾದು ಮಾಡತಕ್ಕದ್ದು. ಕ್ರೈಸ್ತ ಮಕ್ಕಳನ್ನು ಕ್ರಯ ಕೊಟ್ಟು ತೆಗೆದುಕೊಳ್ಳುವುದು ಅಥವಾ ದಾಸರನ್ನಾಗಿ ಮಾಡುವುದಕ್ಕೆ ಅವಕಾಶವಿರಲಿಲ್ಲ. ಕ್ರೈಸ್ತ ಯೋಧರ ಪತ್ನಿಯರನ್ನಾಗಲೀ, ಮಕ್ಕಳನ್ನಾಗಲೀ ಕ್ರಯಕ್ಕೆ ಪಡೆಯುವುದು ಅಥವಾ ದಾಸರನ್ನಾಗಿ ಮಾಡುವಂತಿರಲಿಲ್ಲ. ಗೋವೆಯ ಕ್ರೈಸ್ತರು ಅಥವಾ ಇನ್ನಿತರ ಪೋರ್ಚುಗೀಸ್ ಕ್ರೈಸ್ತ ಪ್ರಜೆಗಳು ಹಿಂದೂ ಧರ್ಮವನ್ನು ಸೇರಿದಲ್ಲಿ ಅವರನ್ನು ಸೆರೆಹಿಡಿದು ಗೋವೆಗೆ ಕಳುಹಿಸಲು ಪಾದ್ರಿಗಳಿಗೆ ಬಿಡಬೇಕು. ಬಿದನೂರು ರಾಜ್ಯದಲ್ಲಿ ಕ್ರೈಸ್ತ ದೇವಾಲಯಗಳನ್ನು ಕಟ್ಟಲು ಬಿಡಬೇಕು. ಕ್ರೈಸ್ತ ಧರ್ಮ ಪ್ರಚಾರಕರಿಗೆ ಆ ರಾಜ್ಯದಲ್ಲಿ ಪ್ರವೇಶ ಇರಬೇಕು. ಎಂಬುದಾಗಿ ಒಪ್ಪಂದವಾಯಿತು.[330]

ಇಂತಹ ಒಪ್ಪಂದಗಳ ಪ್ರಕಾರ ಪೋರ್ಚುಗೀಸರು ಕೆಳದಿ ನಾಯಕರ ಸಾಮ್ರಾಜ್ಯದಲ್ಲಿ ಕ್ರೈಸ್ತರಿಗೆ ಎಲ್ಲಾ ಸಂದರ್ಭಗಳಲ್ಲಿ ಬೆನ್ನೆಲುಬಾಗಿ ನಿಂತರು. ಉದಾಹರಣೆಗೆ ಕ್ರಿ.ಶ.1702ರಲ್ಲಿ ಬಸವಪ್ಪ, ಅವಿಧೇಯನಾದ ಮಂಗಳೂರಿನ ವಿಕಾರ್‌ನನ್ನು ಬಂಧಿಸಿದ. ಪೋರ್ಚುಗೀಸರು ಇದನ್ನು ಪ್ರತಿಭಟಿಸಿದರಲ್ಲದೆ ವಿಕಾರ್‌ನನ್ನು ಬಿಡದಿದ್ದರೆ ಯುದ್ಧ ಹೂಡುವುದಾಗಿ ಬೆದರಿಸುತ್ತಾರೆ.[331] ಕ್ರಿ.ಶ.1746ರಲ್ಲಿ ಬಸವಪ್ಪ ನಾಯಕ, ಬಂಟ್ವಾಳದಲ್ಲಿ ನಾಯಕರ ಒಪ್ಪಿಗೆ ಇಲ್ಲದೆ ಚರ್ಚು ನಿರ್ಮಾಣ ಮಾಡಿದರೆಂದು ಕೆಲವು ಕ್ರೈಸ್ತ ಪುರೋಹಿತರನ್ನು ಬಂಧಿಸಿದ. ಆದರೆ ಪೋರ್ಚುಗೀಸ್ ವೈಸ್‌ರಾಯ್, ಕ್ರಿ.ಶ.1714ರ ಒಪ್ಪಂದದ ಪ್ರಕಾರ ಒಪ್ಪಿಗೆಯ ಅಗತ್ಯವಿಲ್ಲವೆಂದು ಪ್ರತಿಭಟಿಸಿದ.[332] ಕ್ರಿ.ಶ.1748ರಲ್ಲಿ ಕೆಳದಿ ಸಾಮ್ರಾಜ್ಯದಲ್ಲಿ ಹೊಸ ದೇವಾಲಯ ನಿರ್ಮಾಣಕ್ಕೆ ಅವಕಾಶ ನೀಡಲಿಲ್ಲ ಎಂಬ ಕಾರಣಕ್ಕೆ ಪೋರ್ಚುಗೀಸ್ ವೈಸ್‌ರಾಯಿ, ಬಸವಪ್ಪನ ವಿರುದ್ಧ ನೌಕಾಪಡೆಯೊಂದನ್ನು ಕಳುಹಿಸುವುದಾಗಿ ಬೆದರಿಸಿದ್ದ.[333]

ಮತಾಂತರದ ವಿಚಾರದಲ್ಲಿ ಪೋರ್ಚುಗೀಸರ ನಿಲುವುಗಳು ಕೆಲವೊಂದು ಉದಾಹರಣೆಗಳಿಂದ ಸ್ಪಷ್ಟವಾಗುತ್ತದೆ. ಕಲ್ಯಾಣಪುರದ ಶಂಕರಯ್ಯ ಮತ್ತು ಅವನ ಹೆಂಡತಿಯನ್ನು ಗೋವಾಕ್ಕೆ ಕರೆದುಕೊಂಡು ಹೋಗಿ ದೀಕ್ಷಾಸ್ನಾನ(ಬ್ಯಾಪ್ಟೈಸ್) ಮಾಡಲಾಯಿತು. ಇದಕ್ಕೆ ಪ್ರತಿಯಾಗಿ ಅವನ ಹಿಂದೂ ಸಂಬಂಧಿಕರು ಅವನ ಆಸ್ತಿಯನ್ನು ತಮ್ಮದಾಗಿಸಿಕೊಂಡರು. ಹಾಗಾಗಿ ವೈಸ್‌ರಾಯಿ ಮಂಗಳೂರಿನ ಫ್ಯಾಕ್ಟರ್‌ಗೆ ಸೂಚನೆ ನೀಡಿ ಆ ಆಸ್ತಿಯನ್ನು ಪಡೆಯಲು ಪ್ರಯತ್ನಿಸಬೇಕಾಗಿ ತಿಳಿಸಿದ. ಇದಕ್ಕೆ ಬಸವಪ್ಪ ನಾಯಕನ ಮಂತ್ರಿ ವಿರೋಧವನ್ನು ವ್ಯಕ್ತಪಡಿಸಿ ಶಂಕರಯ್ಯನನ್ನು ಒತ್ತಾಯಪೂರ್ವಕವಾಗಿ ಮತಾಂತರ ಮಾಡಲಾಗಿದೆಯೆಂದು

ದೂರುತ್ತಾನೆ.[334] ಧರ್ಮ ಪ್ರಚಾರಕರು ಮಂಗಳೂರಿನ ಸುತ್ತ ಮುತ್ತಲೂ ಮತಾಂತರ ಕಾರ್ಯದಲ್ಲಿ ನಿರತರಾಗಿದ್ದರು. ಗುರುಪುರ ಸಮೀಪದ ಮಲ್ಲಮ್ಮ ಎಂಬವಳನ್ನು ಗೋವಾದಲ್ಲಿ ಬ್ಯಾಪ್ಟೈಸ್ ಮಾಡಲಾಯಿತು. ಇಲ್ಲಿಯೂ ಅವಳ ಹಿಂದೂ ಸಂಬಂಧಿಕರು ಅವಳ ಆಸ್ತಿಯನ್ನು ತಮ್ಮದಾಗಿಸಿಕೊಂಡರು. ಇಲ್ಲಿಯೂ ವೈಸ್‌ರಾಯಿ ಆ ಆಸ್ತಿಯನ್ನು ಮರಳಿ ಪಡೆಯುವಂತೆ ಸೂಚಿಸಿದ.[335] ಕ್ರಿ.ಶ.1751ರ ಪೋರ್ಚುಗೀಸ್ ದಾಖಲೆಯೊಂದರ ಮಾಹಿತಿಯಂತೆ ಕ್ರೈಸ್ತ ಧರ್ಮ ಪ್ರಚಾರಕರು ಬಾರ್ಕೂರು, ಮತ್ತು ಕಲ್ಯಾಣಪುರ ಪರಿಸರದಲ್ಲಿ ಸಕ್ರಿಯರಾಗಿದ್ದರು ಮತ್ತು ಒಂದು ಬ್ರಾಹ್ಮಣ ದಂಪತಿಗಳನ್ನು ಮತಾಂತರ ಮಾಡಿದ್ದರು.[336] ಪೋರ್ಚುಗೀಸರು ಮತಾಂತರಕ್ಕೆ ಯಾವ ಮಾರ್ಗವನ್ನಾದರೂ ಅನುಸರಿಸುತ್ತಿದ್ದರು. ಕ್ರಿ.ಶ 1630ರಲ್ಲಿ ಕ್ರೈಸ್ತ ಧರ್ಮ ಪ್ರಚಾರಕರು ಗಂಗೊಳ್ಳಿಯ ಪರಿಸರದಲ್ಲಿ ಕ್ರೈಸ್ತ ಧರ್ಮವನ್ನು ಹರಡಿದ್ದರು. ಗಂಗೊಳ್ಳಿಯನ್ನು ಬಸ್ರೂರಿನ ಸ್ಥಳೀಯಾಡಳಿತದಿಂದ ಅಧಿಕೃತವಾಗಿ ಪಡೆದದ್ದು ಇದಕ್ಕೆ ಅನುಕೂಲಕರವಾಗಿತ್ತು. ಕ್ರಿ.ಶ. 1630ರಲ್ಲಿ ಅಲ್ಲಿ ಚರ್ಚೊಂದನ್ನು ನಿರ್ಮಿಸಲಾಯಿತು ಮತ್ತು ಅಲ್ಲಿರುವ ಶಿವ ದೇವಾಲಯವನ್ನು ನಾಶ ಮಾಡಿ ಅದನ್ನು ನಿರ್ಮಿಸಲಾಯ್ತು ಎನ್ನಲಾಗಿದೆ.[337] ಹಾಗೆಯೇ, ಮತಾಂತರಗೊಂಡವರಿಗೆ ಸೈನ್ಯದಲ್ಲಿ ಉದ್ಯೋಗ ಕೊಡುವ ಮೂಲಕ ತಮ್ಮ ಧರ್ಮಕ್ಕೆ ಆಕರ್ಷಿಸುತ್ತಿದ್ದರು.[338] ಮತಾಂತರ, ದೇವಾಲಯ ನಿರ್ಮಾಣ, ಹಿಂದೂ ದೇವಳಗಳ ನೆಲಸಮ, ಅದಕ್ಕೆ ಕೆಳದಿ ಅರಸರ ಪ್ರತಿರೋಧ ಮೊದಲಾದ ಪ್ರಕ್ರಿಯೆಗಳು ಈ ಕಾಲದಲ್ಲಿ ನಿರಂತರವಾಗಿ ನಡೆದಿತ್ತು.

ಕ್ರೈಸ್ತರ ಉಲ್ಲೇಖ ಪಾಡ್ದನದಲ್ಲಿಯೂ ಬರುತ್ತದೆ. ತೋಡಕುಕ್ಕಿನಾರ್ ಪಾಡ್ದನದಲ್ಲಿ 'ಕ್ರಿಸ್ತನ್ನಾಕುಳು' ಎನ್ನುವ ಮಾತು ಬರುತ್ತದೆ.[339] ತುಳುನಾಡಿನ ಸಮಾಜದಲ್ಲಿ ಕ್ರೈಸ್ತರೂ ಸೇರಿಹೋದ ಬಳಿಕದ ವಿಚಾರವನ್ನು ಇಂತಹ ಕಡೆಗಳಲ್ಲಿ ನೋಡಬಹುದು. ಕೋಟಿ ಚೆನ್ನಯ ಪಾಡ್ದನದಲ್ಲಿ "ಕುಡುಂಬ ಇಂಗ್ರೆಜಿಯೋ?" (ಕುಡುಂಬರ' ಇಗರ್ಜಿಯೋ) ಎನ್ನುವ ಮಾತು ಬರುತ್ತದೆ. ಇಲ್ಲಿ 'ಕುಡುಂಬ' ಎಂದರೆ "ಕೊಂಕಣಿ ಮಾತನಾಡುವ ರೋಮನ್ ಕೆಥೊಲಿಕ್" ಎಂದು ಅರ್ಥ. ಅಂದರೆ ಕ್ರೈಸ್ತರ ಇಗರ್ಜಿಗಳ ಸ್ಥಾಪನೆ ಕೋಟಿ ಚೆನ್ನಯ ಪಾಡ್ದನದ ಕಾಲಕ್ಕಾಗಲೇ ಆಗಿರಬೇಕು.[340] ಹಾಗೆಯೇ ತೋಡಕುಕಿನಾರ್ ದೈವದ ಪಾಡ್ದನದಲ್ಲಿ ಉಳ್ಳಾಲದ ಕ್ರೈಸ್ತರು ಈ ಭೂತಕ್ಕೆ ಸ್ಥಾನವನ್ನು ನಿರ್ಮಿಸಿ, ಆ ದೈವದ ಜಾತ್ರೆಯಲ್ಲಿ ಭಾಗವಹಿಸಿದ್ದರು.[341] ಈ ದಾಖಲೆಗಳು ಕ್ರೈಸ್ತ ಸಮುದಾಯ ತುಳುನಾಡಿನ ಪರಿಸರಕ್ಕೆ ಹೇಗೆ ಹೊಂದಿಕೊಂಡರೆಂದು ತೋರಿಸುತ್ತದೆ. ಈ ಕಾಲದ ತುಳುನಾಡಿನಲ್ಲಿ ಕ್ರೈಸ್ತರು ಪ್ರಧಾನವಾಗಿ ಕೃಷಿಕರಾಗಿ ಕಂಡುಬರುತ್ತಾರೆ. ಕ್ರಿ.ಶ.1587ರ ಬಂಟ್ವಾಳದ ತಾಮ್ರ ಶಾಸನವೊಂದು ಮೊಂಡಕಾಪು ಗ್ರಾಮದ (ಮೊಡಂಕಾಪು ಬಂಟ್ವಾಳ) ಕ್ರೈಸ್ತ ಸಮುದಾಯದ ಮಾಹಿತಿ ನೀಡುತ್ತದೆ. ಈ ಸಮುದಾಯದವರು ಬಂಗರ ಪ್ರಾಂತ್ಯದಲ್ಲಿ ಕೃಷಿಯನ್ನು ವೃತ್ತಿಯನ್ನಾಗಿ ಹೊಂದಿದ್ದರು.[342] ತುಳುನಾಡಿನಲ್ಲಿ ಸಂಚರಿಸಿದ ಬುಕಾನನ್ ಕ್ರೈಸ್ತರ ಕೃಷಿ ಭೂಮಿ, ಪ್ರಮುಖ ಬೆಳೆಗಳ ಮಾಹಿತಿ ನೀಡುತ್ತಾನೆ.[343]

ಒಟ್ಟಿನಲ್ಲಿ, ತುಳುನಾಡಿನಲ್ಲಿ ಪ್ರಾರಂಭದ ಹಂತದಲ್ಲಿ ಕ್ರೈಸ್ತ ಮತ ಪ್ರಚಾರದಲ್ಲಿ ಪೋರ್ಚುಗೀಸರು ಪ್ರಮುಖ ಪಾತ್ರ ವಹಿಸಿದ್ದರು. ಕೆಲವು ಸಂದರ್ಭಗಳಲ್ಲಿ ಸ್ಥಳೀಯ ಕ್ರೈಸ್ತರ ಹಿತಾಸಕ್ತಿಯನ್ನು ರಕ್ಷಿಸುವ ಕೆಲಸ ಕೈಗೊಂಡರು. ಇದರ ಪರಿಣಾಮವಾಗಿ ತುಳುನಾಡಿನಲ್ಲಿ ಕ್ರೈಸ್ತರ ಜನ ಸಂಖ್ಯೆ ಹೆಚ್ಚಿತು. ದೇಶೀಯ ರಾಜರುಗಳು ಇದಕ್ಕೆ ಸಾಕಷ್ಟು ಬೆಂಬಲ ನೀಡಿದರು. ಕೆಳದಿ ಆಳ್ವಿಕೆಯ ಕೊನೆಯ ಹಂತಕ್ಕಾಗುವಾಗ ತುಳುನಾಡು ಸೇರಿದಂತೆ ಕರಾವಳಿ ವ್ಯಾಪ್ತಿಯಲ್ಲಿ ಕ್ರೈಸ್ತ ಧರ್ಮ ವೇಗವಾಗಿ ಹರಡುತ್ತಿತ್ತು ಮತ್ತು ಹೈದರನ ಆಗಮನವಾಗುವಾಗ ಕರಾವಳಿಯಲ್ಲಿ 27 ಕ್ರೈಸ್ತ ದೇವಾಲಯಗಳಿದ್ದವು ಮತ್ತು ಅವು ಗೋವಾದ ಆರ್ಚ್‌ಬಿಷಪ್ಪರ ಅಧೀನದಲ್ಲಿದ್ದವೆಂದು ತಿಳಿದುಬರುತ್ತದೆ.[344]

**ಅಡಿಟಿಪ್ಪಣಿಗಳು**

1. ಗುಂಡಾ ಜೋಯಿಸ ಕೆಳದಿ, 1977, ಗದ್ಯಾನುವಾದ, ಲಿಂಗಣ್ಣ ಕವಿಯ ಕೆಳದಿ ನೃಪ ವಿಜಯ, ಕಸಾಪ ಬೆಂಗಳೂರು. ಪು. 158; KI, No,VI, No. 70
2. ARSIE, 1927-28 No.393; SII, VII No.228; EI XX, pp.97
3. Vasantha madhava K.G .1985, Religions in coastal Karnataka 150-1763,Delhi, p.31
4. Pissurlencer,P.S.S. 1953-57, Assentos Do Conselho Do Estado,III, p.537; Vasantha madhava K.G, Ibid, p.31,
5. Pissurlencer,P.S.S, Assentos, III p.478 ; ಶಾಸ್ತ್ರಿ ಬಿ.ಎಸ್. 1972, ಕೆಳದಿ ಅರಸರು ಹಾಗೂ ಪೋರ್ಚುಗೀಸರು, ಪು.83
6. SII, IX Pt.II, No.675: EC VIII, Ti 92: ARIE 1954-55 Ap, A No. 7 and 8.
7. SII IX. Pt.II, Nos. 407, 430, 435 : SII, VII, No.309.
8. ಗುಂಡಾ ಜೋಯಿಸ ಕೆಳದಿ, ಪೂರ್ವೋಕ್ತ, ಪು.70, 160, 168, 178
9. EC VIII, Ti, 83, 92
10. ARSIE, 1931-32 Nos. 328-330, 324, 326, 327, 329, 332, 333.
11. ARSIE 1927-28, No.394.
12. Vasantha Madhava K.G .Op.Cit, p.282
13. ಗಣಪತಿ ರಾವ್ ಐಗಳ್ ಎಂ, 1924, ಸ್ಥಳಪುರಾಣಗಳು ಮಂಜೇಶ್ವರ, ಬಂಟವಾಳ, ಅ.ಸಂ.18,19. Gururaja Bhat, op.cit.pp.132, 133
14. Gururaja Bhat. Op. cit. pp 310-313.
15. ARSIE 1927-28 App.A.No.3
16. ಗಣಪತಿ ರಾವ್ ಐಗಳ್ ಎಂ, 2004(ದ್ವಿತೀಯ ಮುದ್ರಣ) ದ.ಕ.ಜಿಲ್ಲೆಯ ಪ್ರಾಚೀನ ಇತಿಹಾಸ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ಪು.134
17. ಹಲಸನಾಡು ವಿಶ್ವೇಶ್ವರಯ್ಯನವರಲ್ಲಿದ್ದ ಕಡತ. Vasantha madhava K.G, Op.Cit, p.26
18. Vasanta Madhava, K.G, 1978, Kannada Papers In The Cochin Archives, The Indian Archives XXVII No.2 New Delhi, P.35.
19. ಗುಂಡಾ ಜೋಯಿಸ ಕೆಳದಿ, ಪೂರ್ವೋಕ್ತ, ಪು.78
20. ARSIE, 1930, Ap. No. 3 And 6
21. ನಾಗೇಗೌಡ ಎಚ್.ಎಲ್., 1972, ಪ್ರವಾಸಿ ಕಂಡ ಇಂಡಿಯಾ ಸಂಪುಟ–4, ಪ್ರಸರಾಂಗ ಮೈಸೂರು ವಿ.ವಿ.ಮೈಸೂರು, ಪು.256,257
22. Vasanta Madhava K.G, 1978, Kannada Papers In The Cochin Archives, The Indian Archives XXVII No.2 New Delhi, P.35.
23. MAR 1934, Ins No.28, 29, 31; SII IX Pt.II, Nos. 423, 430.
24. Shastry. A.K,2001, The Records Of The Sringeri Matha Relating To Keladi, Keladi Museum. Pp 3,8,15,16,20
25. ವಿವೇಕ ರೈ ಬಿ.ಎ. 1985, ತುಳು ಜಾನಪದ ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು.226, 234
26. SII VII No.295
27. ARSIE 1931-32 No. 310

28. SII VII No.366; Ibid IX Pt.II, No.620
29. ARSIE 1931 No. 336; Ibid 1921-22 AP,A, No. 4 & 5; ಗಣಪತಿ ರಾವ್ ಐಗಳ್,ಮಂಜೇಶ್ವರ, ಪೂರ್ವೋಕ್ತ, ಪು.288
30. ಗಣಪತಿ ರಾವ್ ಐಗಳ್,ಮಂಜೇಶ್ವರ, ಪೂರ್ವೋಕ್ತ, ಅ.ಸಂ.21, ಪು.336
31. I.A, Xxiii,Pp, 184-185
32 I.A, Xxiii,Pp, 186,187
33. I.A, Xxiii P. 184.
34. Vasantha Madhava K.G, Op.Cit, P.21,22
35. I.A, XIII P.47.
36. ವೇಣೂರಿನ ಬಾಹುಬಲಿಯ ಅರ್ಚಕರನ್ನು ಧೂಮಾವತಿ ದೈವ ಭಯ ಹುಟ್ಟಿಸಿ ನಂಬಿಕೆಗೆ ಒಳಪಡಿಸಿದ ಸಂಕಥನವಿದೆ.
37. I.A XXIII, p.15
38. Saletore.B.A,1936, Ancient Karnataka, Vol.I, History Of Tuluva, Poona, PP 465,539.
39. IA XXIII P. 21, 99.; K. Vadiraja Bhat Op.Cit. 165, 174.
40. ನಡ್ಕ. ಡಿ.ಜಿ, 2004, ಅರಸು ದೈವಗಳು ಮತ್ತು ಇಕ್ಕೇರಿ ಅರಸರು, ಜಾನಪದ ಕೂಡುಕಟ್ಟು ಸುಳ್ಯ.ಪು.15
41. ಉಳ್ಳಾಕುಲು ದೈವಗಳು ಚೊಕ್ಕಾಡಿಗೆ ಮಾಯಾ ರೂಪದಿಂದ ಬಂದು ನೆಲೆ ನಿಂತರೆಂದು ಪ್ರತೀತಿ. ಈ ಐತಿಹ್ಯ ಈ ಭಾಗದಲ್ಲಿ ಜನಪ್ರಿಯವಾಗಿರುವ ಉಳ್ಳಾಕುಲು ಆರಾಧನೆಯ ಪ್ರಸರಣದ ಕುರಿತೂ ಬೆಳಕು ಚೆಲ್ಲುತ್ತದೆ.
42. ನಾಗೇಗೌಡ ಎಚ್.ಎಲ್, ಪೂರ್ವೋಕ್ತ, ಪು 281, 282
43. ಚಿನ್ನಪ್ಪ ಗೌಡ, 1990, ಭೂತಾರಾಧನೆ ಜಾನಪದೀಯ ಅಧ್ಯಯನ, ಮದಿಪು ಪ್ರಕಾಶನ, ಮಂಗಳಗಂಗೋತ್ರಿ, ಪು.194
44. ವಿವೇಕ ರೈ ಬಿ.ಎ. ಪೂರ್ವೋಕ್ತ, ಪು.229
45. ಚಿನ್ನಪ್ಪ ಗೌಡ, ಪೂರ್ವೋಕ್ತ, ಪು.195
46. ಚಿನ್ನಪ್ಪ ಗೌಡ, ಪೂರ್ವೋಕ್ತ, ಪು.195
47. Vasantha Madhava K.G, Op.Cit, P.43
48. Vasantha Madhava K.G, Op.Cit, P.43
49. Vasantha Madhava K.G, Ibid, P.43
50. Panchamukhi, R.S, 1977, Sri Raghavendra Gurukathamritasara, Dharwar, pp 136-140.
51. Venkatraya narayana kudva, 1979, History of Dakshinatya Saraswathas, Madras, p.191
52. MAR, 1943, P.167.
53. Mackenzie Manuscript II (Madras) pp. 418, 421. 61. Vasantha Madhava K.G, Op.Cit,, P.43,44
54. Vasantha Madhava K.G, Op.Cit, P.47
55. EC VIII Ti 83.
56. SII IX, Pt. II, No. 476., 555.
57. ಗಣಪತಿ ರಾವ್ ಐಗಳ್, ಪೂರ್ವೋಕ್ತ, ಅ.ಸಂ.1,2,3,4,6,7,8,9,10
58. ARSIE 1928-29, No. 501; EC VIII Soraba, 55. ARSIE 1963.64 App. A 39,41; SII VII No. 297; ARIE 1963-64 App A 47.
59 ಗಂಗಾನಾಯಕ್ ಕೆ.ಎನ್, 2011(ಸಂ), ಕೆಳದಿ ವೆಂಕಟೇಶ್ ಜೋಯಿಸ್, ಕೆಳದಿ ಅರಸರ ಶಾಸನ ಸಂಪುಟ, ಮೈಸೂರು.ವಿ.ವಿ., ಪು.44, 80, 107
60. EC,VII,Ti.Nos.83,92
61. ARSIE,1930-31, No.348
62. ಪೂವಪ್ಪ ಕಣಿಯೂರು, 2009, ಮೌಖಿಕ ಸಂಕಥನ, ತರಂಗಿಣಿ ಪ್ರಕಾಶನ ಸುಳ್ಯ, ಪು.58
63. MAR 1943, No.51.
64. ARIE, 1953-54, No.316
65. Gururaj Bhatt, op.cit., p.343
66. ಗಂಗಾನಾಯಕ್ ಕೆ.ಎನ್, ಕೆಳದಿ ವೆಂಕಟೇಷ್ ಜೋಯಿಸ್, ಪೂರ್ವೋಕ್ತ, ಪು.17,
67. ಗಂಗಾನಾಯಕ್ ಕೆ.ಎನ್, ಕೆಳದಿ ವೆಂಕಟೇಷ್ ಜೋಯಿಸ್(ಸಂ) ಪೂರ್ವೋಕ್ತ, ಪು.33,17
68. Vasantha Madhava K.G, Op.Cit, p.47
69. EC VIII, Ti 88
70. EC VIII, Ti 34
71. ಗುರುರಾಜ ಭಟ್ ಸಂಶೋಧಿಸಿದ ಅಪ್ರಕಟಿತ ಶಾಸನ: Vasantha madhava K.G, Op.Cit, P.52
72. Vasantha Madhava K.G, Op.Cit, p. 55

73. Edward Grey,(translated)1892, The Travelle of Pietro Della valle in India, London, Vol.II, p.346-351
74. SII Vol.VII, No.134; ರಮೇಶ್ ಕೆ.ವಿ ಮತ್ತು ಎಮ್.ಜೆ.ಶರ್ಮ ತುಳುನಾಡಿನ ಕನ್ನಡ ಶಾಸನಗಳು(ಸಂ) ಸಂ.1, 1978, ಶಾಸನ ಸಂಖ್ಯೆ 40 ಪುಟ 81
75. ಪುಂಡಿಕಾಯಿ ಗಣಪಯ್ಯ ಭಟ್, 1997, ತೌಳವ, ಸಿಂಧೂರ ಪ್ರಕಾಶನ, ಮೂಡಬಿದಿರೆ
76. ಚನ್ನಬಸವ ಪುರಾಣದ ಆರನೇ ಸಂಧಿ–49ನೇ ಪದ್ಯ, ಗೋಪಾಲ್.ಆರ್, 2007(ಸಂ) ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು. ಲೇ.ಎಂ.ಜಿ.ನಾಗರಾಜ್. ಪು.131
77. ಗೋಸಲಾಚಾರ್ಯರು ಕ್ರಿ.ಶ. 14ನೇ ಶತಮಾನದಲ್ಲಿ ಜೀವಿಸಿದ್ದ ಪ್ರಸಿದ್ಧ ಜಂಗಮ ಗುರು ಯಡಿಯೂರು ಸಿದ್ದಲಿಂಗೇಶ್ವರರ ಶಿಷ್ಯ–ಹಾ.ಮಾ. ನಾಯಕ, ಕರ್ನಾಟಕ ಕನ್ನಡ ವಿಶ್ವಕೋಶ, ಪು–102
78. EC IV,Ch 292
79. SII Vol,IX, Pt II, No. 415
80. Vasantha Madhava K.G, Op.Cit, P.36.
81. SII. Vol VII No. 323; SII. Vol VII No. 339 ; S.I.I. Vol 7 – No. 473
82. ಗೋಪಾಲ್.ಆರ್, 2007(ಸಂ) ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು. ಲೇ. ಎಂ.ಜಿ.ನಾಗರಾಜ್. ಪು.131
83. ಗುಂಡಾ ಜೋಯಿಸ ಕೆಳದಿ, ಪೂರ್ವೋಕ್ತ, ಪು.38
84. SII. Vol IX Pt.II No – no. 674
85. ಗುಂಡಾ ಜೋಯಿಸ ಕೆಳದಿ, ಪೂರ್ವೋಕ್ತ, ಪು.77–78
86. Vasantha Madhava K.G, Op.Cit, P.36
87. Vasantha Madhava K.G, Op.Cit, P.36
88. Mac col No.235, Folio.134; EC,VIII,Ti.83
89. Vasantha madhava k.g, Op.Cit, p..36. Mac col No.230, p.75
90. Mac col No.236, p.75
91. EC.VIII,Ti.88
92 EC.VIII,Ti.88
93. EC.VIII,Ti.63
94. ಗುಂಡಾ ಜೋಯಿಸ ಕೆಳದಿ, ಪೂರ್ವೋಕ್ತ, ಪು.111
95. Vasantha Madhava K.G, Op.Cit, P.31
96. Vasantha Madhava K.G, Ibid, P. 64
97. Vasantha Madhava K.G, Ibid, P.37
98. Vasantha Madhava K.G, Ibid, P.37
99. Vasantha Madhava K.G, Ibid, P.38; ARSIE 1931-32, App No,4;Mac Col Record No. 236 P. 75
100. ARSIE, 1931-32, App, A No.6
101. ಶೆಟ್ಟಿ ಎಸ್.ಡಿ, 1999, ತುಳುನಾಡಿನ ಜೈನ ಧರ್ಮ ಒಂದು ಸಾಂಸ್ಕೃತಿಕ ಅಧ್ಯಯನ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ಪು.408, 409
102. Vasantha madhava K.G, Op.Cit, p.39;
103. Vasantha madhava k.g, Ibid, p.64
104. EC Vol VIII, Ti.47,P.48;Vasantha Madhava K.G, Ibid, P.39
105. ಗುಂಡಾ ಜೋಯಿಸ ಕೆಳದಿ, ಪೂರ್ವೋಕ್ತ, ಪು.38: Vasantha Madhava K.G, Ibid, P.39
106. EC Vol VI,Kp 60.;Chitnis, K.N 1974, Keladi Polity,Karnataka University Dharwar,p.20.
107. ಗೋಪಾಲ್ ಆರ್,(ಸಂ) ಪೂರ್ವೋಕ್ತ, ಪು.36
108. EC VII, No.SK 42,145 ; Vasantha Madhava K.G, Op.Cit, P.40
109. ಗುಂಡಾ ಜೋಯಿಸ ಕೆಳದಿ, ಪೂರ್ವೋಕ್ತ, ಪು.175–177
110. EC VIII Ti, p.508
111. ಗುಂಡಾ ಜೋಯಿಸ ಕೆಳದಿ, ಪೂರ್ವೋಕ್ತ, ಪು.161
112. Vasantha Madhava K.G, Op.Cit, P.119
113. ವಿಜಯಲಕ್ಷ್ಮಿ ಪಲ್ಲೋಟಿ, 2008, ಕರಾವಳಿ ಕರ್ನಾಟಕದ ಲಿಂಗವಂತ ಪರಂಪರೆ, ಧಾರವಾಡ ವಿಶ್ವವಿದ್ಯಾಲಯ ಪು.83.
114. ವೆಂಕಟೇಶ್ ಜೋಯಿಸ್, 1979, ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪೂರ್ವೋಕ್ತ, ಪು.103
115. ವಿಜಯಲಕ್ಷ್ಮಿ ಪಲ್ಲೋಟಿ, ಪೂರ್ವೋಕ್ತ, ಪು.83,84.
116. ಕ್ಷೇತ್ರಕಾರ್ಯ
117. ಗೋಪಾಲ್.ಆರ್, ಅದೇ, ಪು.127–164

118. ಗಣಪತಿರಾವ್ ಐಗಳ್, ಇತಿಹಾಸ ಮತ್ತು ಕಥೆಗಳು. ಪು.53–54, Vasantha madhava K.G, Ibid, p.65
119. ಗೋಪಾಲ್.ಆರ್. (ಸಂ) ಪೂರ್ವೋಕ್ತ, ಲೇ.ಎಂ.ಜಿ.ನಾಗರಾಜ್. ಪು.146
120. ಕ್ಷೇತ್ರಕಾರ್ಯದ ಮಾಹಿತಿ.
121. ಇತಿಹಾಸ ದರ್ಶನ, 1997, ಕರ್ನಾಟಕ ಇತಿಹಾಸ ಅಕಾಡೆಮಿ, ಸಂ.12, ಪು.55
122 ಸಂದರ್ಶನ, ನಿರಂಜನ್, ಜಂಗಮ ಮಠ ಉಡುಪಿ.
123. ಗೋಪಾಲ್.ಆರ್ ಪೂರ್ವೋಕ್ತ, ಲೇಖನ–ಎಂ.ಜಿ..ನಾಗರಾಜ್, ಪುಟ163,
124. ಕ್ಷೇತ್ರ ಕಾರ್ಯದ ಮಾಹಿತಿ
125. ಕ್ಷೇತ್ರ ಕಾರ್ಯದ ಮಾಹಿತಿ
126. ಗೋಪಾಲ್.ಆರ್ ಪೂರ್ವೋಕ್ತ, ಲೇಖನ–ಎಂ.ಜಿ..ನಾಗರಾಜ್, ಪು.150
127. ಇತಿಹಾಸ ದರ್ಶನಸಂಪುಟ 20, 2005, ಕೊಂಡಾಡಿ ಮಠ, ಲೇಖನ, ಕೆ. ನಾರಾಯಣನಾಯಕ, ಪುಟ.315
128. ಇತಿಹಾಸ ದರ್ಶನ, ಸಂಪುಟ 15, 2000 (ಸಂ): ಎಂ.ಜಿ, ನಾಗರಾಜ, ಪಿ.ವಿ.ಕೃಷ್ಣಮೂರ್ತಿ, ಲೇಖನ– ಉಡುಪಿ ಜಿಲ್ಲೆಯ ಕೊಡಿಬೆಟ್ಟು ಕೋಡಿಯಲ್ಲಿ ಜಂಗಮಮಠ ಸುಳಿವು, ಲೇಖಕ ಕೆ. ನಾರಾಯಣ ನಾಯಕ, ಪುಟ.214.
129. ARSIE, 1931-32 A.No.4.
130. ARSIE, 1931-32 A.No.6
131. ಹೇಳಿಕೆ–ಸುರೇಶ್, ಪೊನ್ನೆಚಾರಿ ಮಠ
132. ಶ್ರೀವರ್ಮ ಹೆಗ್ಗಡೆ, 2000, ಶ್ರೀ ನೀಲಕಂಠೇಶ್ವರ ವೈಭವ, ಶ್ರೀ ಜಂಗಮ ಮಠ, ಗುರುಪುರ, ಪು.22
133. ಶ್ರೀವರ್ಮ ಹೆಗ್ಗಡೆ, ಪೂರ್ವೋಕ್ತ, ಪು.22
134. ಚಂದ್ರಶೇಖರ ನಾರಾಯಣಪುರ : ಪೂರ್ವೋಕ್ತ, ಪು.492. ಸಂದರ್ಶನ :ದೇವರಾಯ ಚರಂತಿಪೇಟೆ
135. ಚಂದ್ರಶೇಖರ ನಾರಾಯಣಪುರ : ಪೂರ್ವೋಕ್ತ, ಪು.492. ಸಂದರ್ಶನ :ದೇವರಾಯ ಚರಂತಿಪೇಟೆ
136. ಕ್ಷೇತ್ರಕಾರ್ಯದ ಮಾಹಿತಿ.
137. ಕ್ಷೇತ್ರಕಾರ್ಯದ ಮಾಹಿತಿ.
138. ಕ್ಷೇತ್ರಕಾರ್ಯದ ಮಾಹಿತಿ.
139. ವಿಜಯಲಕ್ಷ್ಮಿ ಪಲ್ಲೋಟಿ, ಪೂರ್ವೋಕ್ತ, ಪು.83.
140. ಕ್ಷೇತ್ರಕಾರ್ಯದ ಮಾಹಿತಿ.
141. ಕ್ಷೇತ್ರಕಾರ್ಯದ ಮಾಹಿತಿ.
142. SII.VII, p.420, No.415.
143. SII. IX.No 673, p.664
144. ವಿಜಯಲಕ್ಷ್ಮಿ ಪಲ್ಲೋಟಿ, ಪೂರ್ವೋಕ್ತ, ಪು.85
145. ಗುಂಡಾ ಜೋಯಿಸ ಕೆಳದಿ, ಪೂರ್ವೋಕ್ತ, ಪು.174–176
146. ವಿಜಯಲಕ್ಷ್ಮಿ ಪಲ್ಲೋಟಿ, ಪೂರ್ವೋಕ್ತ, ಪು.86
147. ಕ್ಷೇತ್ರಕಾರ್ಯದ ಮಾಹಿತಿ
148. ಕ್ಷೇತ್ರಕಾರ್ಯದ ಮಾಹಿತಿ
149. SII. IX. No. 525. p.540
150. EC-VIII Ti.No 88
151. EC,VIII, Ti.52
152. ವಿಜಯಲಕ್ಷ್ಮಿ ಪಲ್ಲೋಟಿ, ಪೂರ್ವೋಕ್ತ, ಪು.83.
153. Shastry. A.K, 2001, The Records of The Sringeri Matha relating to Keladi, Keladi Museum, P.50
154. ಚಂದ್ರಶೇಖರ ನಾರಾಯಣಪುರ, 2003, ಕರ್ನಾಟಕ ವೀರಶೈವ ಮಠಗಳು, ಗೆಳೆಯ ಪ್ರಕಾಶನ ಚಿಕ್ಕಮಗಳೂರು, ಪು. 175
155. ರಾಜಮಣಿ ರಾಮಕುಂಜ, 2010, ಬಂಟ್ವಾಳ ತಾಲೂಕಿನ ದೇವಾಲಯಗಳು, ಬಂಟ್ವಾಳ, ಪು.130
156. ಸಂದರ್ಶನ: ಪ್ರಭಾದೇವಿ ಕಾಡುಮಠ.
157. ಕಾಡುಮಠದ ವೀರಶೈವ ಮಠದಲ್ಲಿತ್ತು ಎನ್ನಲಾದ ಕ್ರಿ.ಶ.1719ರ ಶಾಸನದ ಕುರಿತು ಹೇಳಿಕೆ: ಪ್ರಭಾದೇವಿ ಕಾಡುಮಠ.
158. ಚಂದ್ರಶೇಖರ ನಾರಾಯಣಪುರ, ಪೂರ್ವೋಕ್ತ, ಪು.492
159. ಎಸ್.ಡಿ.ಶೆಟ್ಟಿ, ಪು.408
160. ಚಂದ್ರಶೇಖರ ನಾರಾಯಣಪುರ, ಪೂರ್ವೋಕ್ತ, ಪು.492
161. ಚಂದ್ರಶೇಖರ ನಾರಾಯಣಪುರ: ಪೂರ್ವೋಕ್ತ, ಪು.492
162. Buchanan Francis, 1873, A journey from Madras through the countries of Mysore, Canara and Malabar Vol.II, Madras, p.253
163. ವೇಣೂರು ತಾಮ್ರ ಶಾಸನ ಪ್ರತಿ, Vasantha Madhava K.G, Op.Cit, P.165
164 Vasantha Madhava K.G, Op.Cit, P.63

